ಅಂತರ ಭಾರತೀಯ ಪುಸ್ತಕ ಮಾಲೆ

# ಮಾಸಿದ ಸೆರಗು

(ಹಿಂದಿ ಭಾಷೆಯ 'ಮೈಲಾ ಆಂಚಲ್' ಕಾದಂಬರಿಯ ಕನ್ನಡ ರೂಪಾಂತರ)

ಲೇಖಕ:
ಫಣೀಶ್ವರನಾಥ 'ರೇಣು'
ಅನುವಾದ:
ಹೆಚ್. ಎಸ್. ಪಾರ್ವತಿ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ISBN 81-237-0543-3

ಮೊದಲ ಮುದ್ರಣ : 1976 (*ಶಕ 1897*)
ಎರಡನೇ ಮುದ್ರಣ : 2000 (*ಶಕ 1922*)

ರೂ. **50.00**
Original Title : Maila Anchal *(Hindi)*
Kannada Translation : Masida Seragu
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್‌ಪಾರ್ಕ್, ಹೊಸ ದೆಹಲಿ - 110016
ಇವರಿಂದ ಪ್ರಕಟಿತ.

# ಭೂಮಿಕೆ

‘ಗೋದಾನ’ ಹಿಂದಿಯ ಪ್ರತಿಷ್ಠಿತ ಕಥೆಗಾರ ಪ್ರೇಮಚಂದರ ಕೊನೆಯ ಕಾದಂಬರಿ. ‘ಮಾಸಿದ ಸೆರಗು’ (ಮೈಲಾ ಆಂಚಲ್) ಸಮಕಾಲೀನ ಕಥೆಗಾರ ಶೀಶ್ವರನಾಥ ‘ರೇಣು’ ಅವರ ಮೊದಲ ಕಾದಂಬರಿ. 1954 ರಲ್ಲಿ ಪ್ರಕಟವಾದ ಹೊತಲೇ ಅನೇಕ ಜನ ವಿಮರ್ಶಕರು ‘ಮಾಸಿದ ಸೆರಗು’ ಕಾದಂಬರಿಯನ್ನು ಗೋದಾನ’ದೊಂದಿಗೆ ಹೋಲಿಸಿದರು. ವಿಮರ್ಶಕ ಸ್ವರ್ಗೀಯ ನಳಿನ ಲೋಚನ ಶರ್ಮರು ಅಧಿಕಾರಯುಕ್ತವಾಣಿಯಿಂದ ಹೇಳಿದರು: “‘ಗೋದಾನ’ ಕಾದಂಬರಿಯ ನಂತರ ಬಂದ ಮತ್ತೊಂದು ಅಂತಹದೇ ಮಹಾನ್ ಕಾದಂಬರಿ ‘ಮಾಸಿದ ಸೆರಗು’”. ಅನೇಕ ಜನ ವಿಮರ್ಶಕರು ‘ಗೋದಾನ’ ಕಾದಂಬರಿಯನ್ನು ಇಂದಿಗೂ ಹಿಂದಿಯ ಸರ್ವೋತ್ಕೃಷ್ಟ ಕಾದಂಬರಿಯೆಂದೇ ಒಪ್ಪುತ್ತಾರೆ. ‘ಮಾಸಿದ ಸೆರಗು’ ಅಥವಾ ಅನಂತರ ಬಂದ ಯಶಪಾಲರ ‘ಝೂಠಾ–ಸಚ್’ (ಸುಳ್ಳು ಸತ್ಯ)ವನ್ನು ಬಿಟ್ಟರೆ, ಬೇರೆ ಯಾವ ಕಾದಂಬರಿಗೂ ‘ಗೋದಾನ’ದ ನಂತರ ‘ಹಿಂದಿಯ ಶ್ರೇಷ್ಠ ಕಾದಂಬರಿ’ ಎನ್ನುವ ಪಟ್ಟ ಸಿಕ್ಕಿಲ್ಲ.

ಈ ಮಾತಿನಿಂದ ಅಸಾಧಾರಣವಾದೊಂದು ತಥ್ಯ ಸ್ಪಷ್ಟವಾಗುತ್ತದೆ: ‘ಗೋದಾನ’ದಂತಹ ಪ್ರೌಢ, ವಾಸ್ತವ ಚಿತ್ರಣವನ್ನೊಳಗೊಂಡ ಕೃತಿ ರಚಿಸುವುದಕ್ಕೆ ಪ್ರೇಮಚಂದರು ಮೂವತ್ತು ವರ್ಷಗಳಷ್ಟು ದೀರ್ಘಕಾಲ ಸಾಹಿತ್ಯಸಾಧನೆಯಲ್ಲಿ ನಿರತರಾಗಿರಬೇಕಾಯಿತು. ಅವರ ಮೊದಲ ಕಾದಂಬರಿ ಮತ್ತು ‘ಗೋದಾನ’ ಗಳಲ್ಲಿ, ಕಲಾತ್ಮಕ ಪ್ರೌಢಿಮೆ, ಅನುಭವಶೀಕ್ಷ್ಣತೆ ಮತ್ತು ಆಳಗಳ ವಿಚಾರದಲ್ಲಿ ಆಕಾಶ–ಪಾತಾಳಗಳ ಅಂತರ ಕಾಣುತ್ತದೆ. ವಾಸ್ತವವಾಗಿ ‘ಗೋದಾನ’ವನ್ನು, ಆಧಾರವಾಗಿಟ್ಟುಕೊಂಡೇ ‘ಸೇವಾಸದನ’, ‘ಪ್ರೇಮಾಶ್ರಮ’, ‘ಕಾಯಕಲ್ಪ’, ‘ರಂಗಭೂಮಿ’, ‘ಗಬನ್’ ಮುಂತಾದ ಪ್ರೇಮಚಂದರ ಇತರ ಕಾದಂಬರಿಗಳ ಮೂಲ್ಯ ನಿರ್ಣಯ ಮಾಡಲಾಗುತ್ತದೆ. ಅವುಗಳಲ್ಲಿ ಕಂಡುಬರುವ ಅನೇಕ ಕೊರತೆಗಳನ್ನು ಅದರಲ್ಲೂ ಸಾಮಾನ್ಯವಾಗಿ ಕಂಡುಬರುವ ಪಾತ್ರಚಿತ್ರಣಗಳಲ್ಲಿನ ಜೀವಂತತೆಯ ಕೊರತೆ, ಜೀವನದ ವಾಸ್ತವತೆಯೊಂದಿಗೆ ಯೂಟೋಪಿಯನ್ ಸರಳತೆಯನ್ನು ಆರೋಪಿಸುವ ಪ್ರವೃತ್ತಿಯಿಂದಾಗಿ, ವಾಸ್ತವತೆ, ಕಲಾತ್ಮಕತೆ ಗಳೆರಡಕ್ಕೂ ಧಕ್ಕೆಯೊದಗುವುದು. ಇದನ್ನೆಲ್ಲಾ ಗಮನಿಸಿದಾಗ ಈ ಕಾದಂಬರಿ ಗಳು ಪ್ರೇಮಚಂದರ ಪ್ರತಿಭೆ ಮತ್ತು ಸಾಮಾಜಿಕ ಪ್ರಜ್ಞೆಗಳ ನಿರಂತರ ವಿಕಾಸಕ್ಕೆ

ಸಾಕ್ಷಿಗಳಾಗಿವೆ, ಎನ್ನಬಹುದು. ಇಂತಹ ಸ್ಥಿತಿಯಲ್ಲಿ 'ಮಾಸಿದ ಸೆರಗು' ಕಾದಂಬರಿಯನ್ನು 'ಗೋದಾನ'ದಂತಹ ಮತ್ತೊಂದು ಮಹತ್ತರ ಕಾದಂಬರಿ ಎನ್ನುವುದಾದರೆ ಮೂವತ್ತು ವರ್ಷಗಳ ಸಾಹಿತ್ಯ ಸಾಧನೆಯಿಂದ ಪ್ರೇಮಚಂದ್ ಏರಿದ ಶಿಖರವನ್ನು, 'ರೇಣು' ತಮ್ಮ ಮೊದಲ ಕಾದಂಬರಿಯನ್ನು ರಚಿಸಿದಾಗಲೇ ತಲುಪಿದ್ದರು ಎಂದರ್ಥವಾಗುತ್ತದೆ. ಅಥವಾ ಬೇರೆ ಮಾತುಗಳಲ್ಲಿ ಹೇಳುವುದಾದರೆ, ವಿಶ್ವವ್ಯಾಪಕ ಪ್ರಜ್ಞೆ, ಪ್ರತಿಭೆಗಳನ್ನು ಪಡೆಯಲು ಪ್ರೇಮಚಂದ್ ಮೂವತ್ತು ವರ್ಷಗಳಕಾಲ ಅನೇಕ, ಇಕ್ಕಟ್ಟಾದ ವಕ್ರಮಾರ್ಗಗಳಲ್ಲಿ ಸಂಚರಿಸಬೇಕಾಯಿತು. ಆದರೆ ರೇಣು ಆ ರಚನಾಸಿದ್ಧಿಯನ್ನು ಪಡೆದೇ ಸಾಹಿತ್ಯ ಕ್ಷೇತ್ರದಲ್ಲಿ ಕಾಲಿಟ್ಟರು.

ಇಲ್ಲಿ ಕೇವಲ ತಥ್ಯವೊಂದರ ಕಡೆ ಸಂಕೇತ ಮಾಡಲಾಗಿದೆ, ಅಷ್ಟೆ. ಇದನ್ನೇ ಮೂಲ್ಯಮಾಪನ ಎಂದು ಯಾರೂ ಭಾವಿಸಬಾರದು. ವಿಶ್ವಸಾಹಿತ್ಯದ ಕಡೆ ದೃಷ್ಟಿ ಹರಿಸಿದರೂ ಇಂತಹ ಅನೇಕ ಉದಾಹರಣೆಗಳು ಸಿಗುತ್ತವೆ. ಟಾಲಸ್ಟಾಯ್ ಅಥವಾ ಡೋಸ್ಟವಸ್ಕೀ, ಡಿಕೆನ್ಸ್ ಅಥವಾ ಹಾರ್ಡಿ ಇವರೆಲ್ಲರ ಪ್ರಾರಂಭಿಕ ಕೃತಿಗಳೂ, ಇವರಿಗೆ ಸಾರ್ವಜನಿಕ ಮಹತ್ವ ದೊರಕಿಸಿಕೊಟ್ಟ ಪ್ರೌಢಕೃತಿಗಳೊಂದಿಗೆ ಹೋಲಿಸಿದಾಗ ತುಂಬಾ ದುರ್ಬಲವಾಗಿ ಕಾಣುತ್ತವೆ. ಕಲೆಯ ಶಿಥಿಲತೆ, ಯಥಾರ್ಥ ಚೈತನ್ಯದ ಕೊರತೆ, ನೀರಸವಾದ ಪ್ರಕೃತಿ ಚಿತ್ರಣಗಳು, ವ್ಯಕ್ತಿತ್ವಹೀನ ಪಾತ್ರಗಳ ಸಮೂಹ, ಭಾವನೆಗಳ ಮೇಲೆ ಆದರ್ಶಗಳನ್ನು ಬಲವಂತವಾಗಿ ಹೊರಿಸುವುದು ಮುಂತಾದ ದುರ್ಬಲತೆಗಳು ಅವುಗಳಲ್ಲಿ ಕಾಣುವುದಿಲ್ಲವೆಂಬುದು ನಿಜ. ಅಲ್ಲದೆ ಅವರ ಪ್ರಾರಂಭಿಕ ರಚನೆಗಳು ಸ್ವಸಂಪೂರ್ಣ ಕಲಾಕೃತಿಗಳಾಗಿ ಉಳಿದಿವೆ ಎಂಬುದೂ ನಿಜ. ಆದರೆ ಅವುಗಳ ಕ್ಯಾನವಾಸ್ ಚಿಕ್ಕದು. ಅನಂತರ ಬರೆದ ಮಹಾನ್ ಕೃತಿಗಳಲ್ಲಿರುವಷ್ಟು ವ್ಯಾಪಕವಾಗಿ, ಜೀವನ ಅವುಗಳಲ್ಲಿ ಚಿತ್ರಿತವಾಗಿಲ್ಲ.

ಆದರೆ ವಿಶ್ವಸಾಹಿತ್ಯದಲ್ಲಿ ಈ ಮಾತಿಗೆ ಕೆಲವೊಂದು ಅಪವಾದಗಳು ಇವೆ. ಉದಾಹರಣೆಗೆ 'ಡಾನ್ ಕ್ವಿಜೋಟ್' ಲೇಖಕ ಸರ್ ವಾಂತೆ ಅಥವಾ 'ಡೋನ್ ನದಿಯೇ ನಿಧಾನವಾಗಿ ಪ್ರವಹಿಸು' ಬರೆದ ರಷ್ಯನ್ ಲೇಖಕ 'ಶೋಲೋಖೋವ್' ಇವರ ಪ್ರಥಮ ಕೃತಿಗಳೇ ವಿಶ್ವಸಾಹಿತ್ಯದ ಮಕುಟಮಣಿಗಳಾಗಿ ಮೆರೆದವು. ಅಷ್ಟೇ ಅಲ್ಲ, ತಮ್ಮ ಪ್ರಥಮ ರಚನೆಗೆ ಸಮನಾದ ಮತ್ತೊಂದು ಕಾದಂಬರಿಯನ್ನು ಸರ್ ವಾಂತೆಯಾಗಲೀ, ಶೋಲೋಖೋವ್ ಆಗಲಿ ಮತ್ತೆ ಬರೆಯುವುದು ಸಾಧ್ಯವಾಗಲಿಲ್ಲ. ವಿಶ್ವಸಾಹಿತ್ಯದ ವಿಚಾರ ಹಾಗಿರಲಿ; ಹಿಂದೀ ಸಾಹಿತ್ಯವನ್ನಷ್ಟೇ

ನೋಡೋಣ. ಈ ಸಂದರ್ಭದಲ್ಲಿ 'ಅಜ್ಞೇಯ'ರ ಹೆಸರನ್ನು ತೆಗೆದುಕೊಳ್ಳಬಹುದು. 'ಶೇಖರ: ಏಕ್ ಜೀವನೀ' (ಶೇಖರನ ಜೀವನ ಚರಿತ್ರೆ) ಕಾದಂಬರಿ ಮಟ್ಟವನ್ನು ಅವರ ಮುಂದಿನ ಕಾದಂಬರಿಗಳು ಮುಟ್ಟಲಾರದೇ ಹೋದವು. ಇವರನ್ನು ಬಿಟ್ಟು ಯಶಪಾಲ ಅಥವಾ ಅಮೃತಲಾಲ ನಾಗರ್, ಉಪೇಂದ್ರನಾಥ 'ಅಶ್ಕ' ಅಥವಾ ನಾಗಾರ್ಜುನ ಯಾರನ್ನೇ ತೆಗೆದುಕೊಂಡರೂ ಇವರೆಲ್ಲರಲ್ಲಿ ರಚನಾತ್ಮಕ ಪ್ರತಿಭೆಯ ಕ್ರಮಬದ್ಧ ವಿಕಾಸವನ್ನು ನಾವು ಗುರುತಿಸಬಹುದು.

'ಮಾಸಿದ ಸೆರಗು' ಈ ಸಾಧಾರಣ ನಿಯಮವನ್ನು ಮೀರಿದ ಸಶಕ್ತ ಅಪವಾದವಾಗಿದೆ. ಈ ಕಾದಂಬರಿಯ ಮೂಲಕ 'ರೇಣು' ಅವರು ಎಂತಹ ಉನ್ನತ ಸ್ಥಾನ ಗಳಿಸಿಕೊಂಡಿದ್ದಾರೆಂದರೆ, ಮತ್ತೆ ಅದೇ ಸ್ಥಾನವನ್ನೇರಲು ಬಹುಶಃ ಅವರಿಗೇ ಸಾಧ್ಯವಾಗಲಾರದು, ಕಷ್ಟವಾಗುವುದಂತೂ ಖಂಡಿತ ಎಂದು ವಿಮರ್ಶಕರು ಸಂದೇಹಪಟ್ಟಿದ್ದರು. ಸರ್ ವಾಂತೆ ಅಥವಾ ಶೋಲೋಖೋವ್ ಅವರುಗಳಂತೆಯೇ ಇಷ್ಟು ಎತ್ತರದ ಮಟ್ಟದಲ್ಲಿ ತಮ್ಮ ರಚನೆಯನ್ನು ಆರಂಭಿಸಿರುವುದನ್ನು ನೋಡಿದರೆ, ಮುಂದೆ ಅಲ್ಲಿಂದ ಅವರು ಇಳಿಯಲೇ ಬೇಕಾಗುತ್ತದೆ ಎಂದು ಆಲೋಚಕರು ಊಹಿಸಿದ್ದರು. ಆದರೆ ಸೌಭಾಗ್ಯದಿಂದ, ಎರಡೇ ವರ್ಷಗಳಲ್ಲಿ ರೇಣು ಅವರ ಎರಡನೇ ಕಾದಂಬರಿ 'ಪರತೀ, ಪರಿಕಥಾ' (ಬಂಜರು ಭೂಮಿಯ ಕಥೆ) ಪ್ರಕಟವಾದಾಗ, ವಿಮರ್ಶಕರ ಈ ಊಹೆ ನಿರಾಧಾರವಾದುದೆಂದು ಸಿದ್ಧವಾಯಿತು.

'ಗೋದಾನ' ಮತ್ತು 'ಮಾಸಿದ ಸೆರಗು' ಎರಡೂ ಸಮಷ್ಟಿ ಮೂಲಕ ಕಾದಂಬರಿಗಳೆಂದು ಒಪ್ಪಿಕೊಂಡರೂ, ನಳಿನ ವಿಲೋಚನ ಶರ್ಮರು ಒಂದು ವಿಚಿತ್ರ ತರ್ಕವನ್ನು ಮುಂದಿಟ್ಟರು: 'ಸಮಗ್ರ ಭಾರತದ ಜೀವನ'ವೇ 'ಗೋದಾನ'ದ ಮುಖ್ಯಪಾತ್ರ. ಆದರೆ 'ಮಾಸಿದ ಸೆರಗು' ಕಾದಂಬರಿಯ ಮುಖ್ಯಪಾತ್ರ 'ಬಿಹಾರದ ಒಂದು ಸಣ್ಣ ಭೂಪ್ರದೇಶ' ಮಾತ್ರ ಎಂಬುದು ಮೊದಲ ವಾದ. ಅವರ ಎರಡನೆಯ ವಾದ: 'ಗೋದಾನ'ದ ಶಿಲ್ಪ ಮಹಾಕಾವ್ಯೋಚಿತ ಶೈಲಿಯಲ್ಲಿದೆ; ಆದರೆ 'ಮಾಸಿದ ಸೆರಗು' ಕಾದಂಬರಿ ಸುಸಂಬದ್ಧ ಶಿಲ್ಪದಂತಿದೆ. 'ಮಾಸಿದ ಸೆರಗು' ಕಾದಂಬರಿಯ ಮೌಲ್ಯವನ್ನು ಕೆಳಗಿಳಿಸಲೆಂದೇ ಈ ತರ್ಕಗಳನ್ನು ಹೂಡಿದಂತಿದೆ. ಈ ವಾದಕ್ಕೆ ಸರಿಯಾದ ತಥ್ಯಗಳ ಅಸ್ತಿಭಾರವೇ ಇಲ್ಲ. ಸಿಗುವ ಕೆಲವು ಅಂಶಗಳನ್ನು ಮೂಲ್ಯಮಾಪನದ ಒರೆಗಲ್ಲೆಂದು ನಿರ್ಧರಿಸುವುದು ಸರಿಯಲ್ಲ. 'ಹೋರೀ' ಮತ್ತು ಜಮೀಂದಾರ 'ಅಮರಸಿಂಹ

ಪಾಲ'ರನ್ನು ಹೊಂದಿರುವ ಅಯೋಧ್ಯೆಯ 'ಬೇಲಾರೀ' ಅಥವಾ 'ಸೇಮರೀ' ಹಳ್ಳಿಗಳ ಕಥಾವಸ್ತುವನ್ನುಳ್ಳ 'ಗೋದಾನ', 'ಸಮಗ್ರ ಭಾರತೀಯ ಜೀವನ'ದ ಕಥೆಯಾಗುವುದು ಸಾಧ್ಯವಾಗುವುದಾದರೆ, ಮಿಥಿಲೆಯ 'ಮೇರಿಗಂಜಿ'ನ ಕಥೆ 'ಸಮಗ್ರ ಭಾರತೀಯ ಜೀವನದ ಕಥೆ' ಯಾಕಾಗಬಾರದು? ಸಂಶೋಧಕ ವಿಮರ್ಶಕ ಡಾಕ್ಟರ್ ಗಣೇಶನ್ ಅವರ ಮಾತುಗಳಲ್ಲಿ ಹೇಳುವುದಾದರೆ, ಈ ಕಾದಂಬರಿಯಲ್ಲಿ ಸಮಾಜ ಜೀವನವನ್ನು ಅದರ ಪೂರ್ಣರೂಪದಲ್ಲಿ ಚಿತ್ರಿಸಲಾಗಿದೆ. ಅಷ್ಟೇ ಅಲ್ಲ, 'ರೇಣು' ಅವರ ಈ ಕಾದಂಬರಿಗಳು ('ಮಾಸಿದ ಸೆರಗು' ಮತ್ತು 'ಬಂಜರು ಭೂಮಿಯ ಕಥೆ') ಕಾದಂಬರಿಗಳಲ್ಲ, ಜೀವನವೇ ಆಗಿದೆ. ಅಲ್ಲದೆ 'ಸಮಗ್ರ ಭಾರತೀಯ ಜೀವನ'ವನ್ನು ಪ್ರತಿಬಿಂಬಿಸಲು ಯಾವುದಾದರೊಂದು ಸಣ್ಣ ಪ್ರದೇಶವನ್ನೇ ಕಾರ್ಯಕ್ಷೇತ್ರವನ್ನಾಗಿ ಆರಿಸಿಕೊಳ್ಳಬೇಕಾಗುತ್ತದೆ. ಆ ಸ್ಥಳ ಕಲ್ಕತ್ತಾ, ಬೊಂಬಾಯಿಗಳಂತಹ ದೊಡ್ಡ ನಗರಗಳ ಒಂದು ಬಡಾವಣೆ ಆಗಿರಬಹುದು ಅಥವಾ ಪಂಜಾಬ್ ಅಥವಾ ಕೇರಳದ ಒಂದು ಹಳ್ಳಿಯಾದರೂ ಆಗಿರಬಹುದು.

ಈ ಕಾದಂಬರಿಯ ಹೆಸರೇ 'ಮಾಸಿದ ಸೆರಗು'. ಪುಸ್ತಕದ ಸಂಕ್ಷಿಪ್ತ ಭೂಮಿಕೆಯಲ್ಲಿ ಸ್ವತಃ 'ರೇಣು' ಅವರೇ ಹೇಳಿಕೊಂಡಿದ್ದಾರೆ, 'ಇದೊಂದು ಪ್ರಾದೇಶಿಕ ಕಾದಂಬರಿ' ಎಂದು. ಇದರಲ್ಲಿನ 'ಪ್ರಾದೇಶಿಕ ಕಾದಂಬರಿ' ಎನ್ನುವ ಪದವನ್ನು ವಿಮರ್ಶಕರು ಚೆನ್ನಾಗಿ ಜಗ್ಗಾಡಿಸಿದ್ದಾರೆ. ಹೊಸ ಪೀಳಿಗೆಯ ಕಥೆಗಾರರಿಗಂತೂ ತಮ್ಮ ಸಂಕೀರ್ಣ ಸೀಮಿತ ಮಧ್ಯವರ್ಗೀಯ ಅನುಭವಗಳು ಹಾಗೂ ಅಸಾಮರ್ಥ್ಯದ ಮೇಲೆ ಆಧುನಿಕತೆಯ ಲೇಬಲ್ ಅಂಟಿಸಲು ಒಳ್ಳೆಯ ಅವಕಾಶ ಸಿಕ್ಕಿದಂತಾಗಿದೆ. 'ಪ್ರಾದೇಶಿಕ ಕಾದಂಬರಿ' ಎಂದು ಹೇಳಿ ಸ್ವತಃ 'ರೇಣು' ಅವರೇ 'ಮಾಸಿದ ಸೆರಗು' ಕಾದಂಬರಿಯ ಶಕ್ತಿಯನ್ನು ಸೀಮಿತಗೊಳಿಸಿದ್ದಾರೇನೋ ಎನ್ನುವಂತೆ, ಈ ಒಂದೇ ಶಬ್ದವನ್ನು ಎತ್ತಿಕೊಂಡು ಹೊಸ ಬರಹಗಾರರು ಗ್ರಾಮಕಥೆ, ಮತ್ತು ನಗರ ಕಥೆಗಳ ಮಧ್ಯೆ ದೊಡ್ಡ ವಿವಾದವನ್ನೇ ಎಬ್ಬಿಸಿದ್ದಾರೆ. ಈಗ ನಗರೀಕರಣ ಶೀಘ್ರಗತಿಯಲ್ಲಿ ನಡೆಯುತ್ತಿದೆ. ಅದರಿಂದಾಗಿ ಆಧುನಿಕ ಮಾನವನ ಜೀವನ, ಅವನ ವಿರಹ ವ್ಯಥೆ, ಭಯ, ಕಷ್ಟ–ಸಂಕಷ್ಟಗಳ ಚಿತ್ರಣ ನಗರ ಕಥೆಯಲ್ಲಿ ಮಾತ್ರ ಪ್ರತಿಬಿಂಬಿತವಾಗುವುದು ಸಾಧ್ಯ, ಅಂದರೆ ನಗರದ ಮಧ್ಯವರ್ಗದ ಅನುಭವ ಮತ್ತು ಜೀವನವೇ ಚಿತ್ರಿತವಾಗಬೇಕು. ಯಾಕೆಂದರೆ, ಹಳ್ಳಿಯ ಜೀವನ ಪ್ರಾದೇಶಿಕವಾದುದು, ಕೂಪಮಂಡೂಕ ಪ್ರವೃತ್ತಿಯದು, ಪರಿವರ್ತನ ಹೀನವಾದುದು, ಕಾಲದಿಂದ ಹಿಂದೆ ಬಿದ್ದಿರುವುದು,

ಆದ್ದರಿಂದ ಯುಗ ಚೈತನ್ಯವನ್ನು ಪ್ರತಿಬಿಂಬಿಸಲಾರದು, ಇತ್ಯಾದಿ. ಈ ತರ್ಕ, ವಾದಗಳಿಂದ ಹೊರಡುವ ಧ್ವನಿ ಸ್ಪಷ್ಟವಾಗಿದೆ—ಪ್ರಾದೇಶಿಕ ಕಾದಂಬರಿ ನಿಜವಾದ ಅರ್ಥದಲ್ಲಿ 'ಆಧುನಿಕ' ಎನ್ನಿಸಿಕೊಳ್ಳಲಾರದು ಅಥವಾ ಅವರ ಕಥಾವಸ್ತು 'ಆಧುನಿಕ ಜೀವನ'ವನ್ನು ಪ್ರತಿಬಿಂಬಿಸಲಾರದು. ಪ್ರಾದೇಶಿಕ ಅಂದರೆ ಗ್ರಾಮದ ಕಥೆಯನ್ನೊಳಗೊಂಡ ಕಥೆ ವಿಕಾಸದ ಹೆಜ್ಜೆ ಅಲ್ಲ, ಬದಲಿಗೆ ಅದು ಹಿಂದಕ್ಕೊಯ್ಯುವ ಹೆಜ್ಜೆ. ವಾಸ್ತವವಾಗಿ 'ರೇಣು' ಅವರು, 'ಮಾಸಿದ ಸೆರಗು' (ಮೈಲಾ ಆಂಚಲ್) ಎನ್ನುವ ಶೀರ್ಷಿಕೆಯನ್ನು ಸುಮಿತ್ರಾನಂದನ್ ಪಂತರ 'ಭಾರತಮಾತಾ' ಎನ್ನುವ ಕವಿತೆಯಿಂದ ಎತ್ತಿಕೊಂಡಿದ್ದಾರೆ. ಅದರಲ್ಲಿ ಕವಿ ಭಾರತಮಾತೆಯನ್ನು ಗ್ರಾಮವಾಸಿನಿ ಎಂದು ಕರೆದಿದ್ದಾರೆ. ಅವಳ ಶ್ಯಾಮಲ ವರ್ಣದ 'ಮಾಸಿದ ಸೆರಗು' ಗದ್ದೆಗಳಲ್ಲಿ ಹರಡಿದೆ. (ಖೇತೋಂ ಮೆ ಫೈಲಾ ಹೈ ಶ್ಯಾಮಲ, ಧೂಲ್ ಭರಾ ಮೈಲಾ—ಸಾ ಆಂಚಲ್) ಈ 'ಆಂಚಲ್' (ಸೆರಗು) ಇಡೀ ದೇಶದ ಪ್ರತೀಕ, ಯಾವುದೋ ಒಂದು ಸಣ್ಣ ಪ್ರದೇಶದ್ದಲ್ಲ. 'ರೇಣು' ಅವರು ತಮ್ಮ ಕಾದಂಬರಿಯ ಭೂಮಿಕೆಯಲ್ಲಿ ತಾವೇ ಹೇಳಿಕೊಂಡಿದ್ದಾರೆ: 'ಭಾರತದ ಹಿಂದುಳಿದ ಹಳ್ಳಿಗಳ ಪ್ರತೀಕವಾಗಿ—ಈ ಕಾದಂಬರಿಯ ಕಥಾಕ್ಷೇತ್ರ ವನ್ನು ಆರಿಸಿಕೊಂಡಿದ್ದೇನೆ' ಎಂದು. ಭಾರತದ ಎಲ್ಲಾ ಗ್ರಾಮಗಳೂ ಈಗಲೂ ಹಿಂದೆಯೇ ಉಳಿದಿರುವುದರಿಂದ, ಸಮಗ್ರ ರೂಪದಲ್ಲಿ ಇಡೀ ಭಾರತವೇ ಹಿಂದುಳಿದ ದೇಶವಾದ್ದರಿಂದ 'ಗೋದಾನ'ದಂತೆಯೇ 'ಮಾಸಿದ ಸೆರಗು' ಕಾದಂಬರಿಯ ಮುಖ್ಯ ಪಾತ್ರ, ಸಮಗ್ರ ಭಾರತೀಯ ಜೀವನ.

ವಿಮರ್ಶಕರು 'ಮಾಸಿದ ಸೆರಗು' ಮತ್ತು 'ಬಂಜರು ಭೂಮಿಯ ಕಥೆ'ಗಳ ಭಾಷೆಯ ವಿಚಾರದಲ್ಲೂ ದೋಷವನ್ನು ಆರೋಪಿಸಿದ್ದಾರೆ. ನವೀನ ವಿಲೋಚನ ಶರ್ಮರ ದೃಷ್ಟಿಯಲ್ಲಿ 'ಮಾಸಿದ ಸೆರಗು' ಕಾದಂಬರಿಯ ಭಾಷೆಯಿಂದ ಹಿಂದೀ ಸಮೃದ್ಧವಾಯಿತು. 'ರೇಣು' ಅವರು ಕುಶಲತೆಯಿಂದ 'ಪ್ರಾದೇಶಿಕ ಭಾಷಾತತ್ವ' ಮತ್ತು 'ಪರಿನಿಷ್ಠಿತ ಭಾಷೆ'ಗಳ ಮಿಶ್ರ ಶೈಲಿಯನ್ನು ಪ್ರಯೋಗಿಸಿದ್ದಾರೆ. ಈ ವಿಶಿಷ್ಟ ಪದಪ್ರಯೋಗಗಳು ಅವೈಜ್ಞಾನಿಕವಾಗಿಯೇ ಇರಬಹುದು. ಆದರೂ 'ರೇಣು' ಅವರ ಭಾಷೆಯನ್ನು ನವೀನ ವಿಲೋಚನ ಶರ್ಮರು ಸ್ವಾಗತಿಸಿದ್ದಾರೆ ಎನ್ನುವುದರಲ್ಲಿ ಸಂದೇಹವಿಲ್ಲ. 'ರೇಣು' ಅವರ ಭಾಷೆಯಲ್ಲಿ ಮೈಥಿಲೀ ಭಾಷೆಯ ಶಬ್ದ ಮತ್ತು ಧ್ವನಿಯ ಸಮೂಹ ತುಂಬಿದೆ. ಆದರೆ ಕಥೆಯನ್ನು ಅರ್ಥಮಾಡಿ ಕೊಳ್ಳುವಲ್ಲಿ ಇವು ತೊಡಕೇನೂ ಆಗುವುದಿಲ್ಲ. ಬದಲು ಇನ್ನಷ್ಟು ಸ್ಪಷ್ಟವಾಗುತ್ತದೆ, ಕಾರಣ ಆ ಭಾಷೆಯ ಸಹಾಯವಿಲ್ಲದೆ 'ರೇಣು' ಅವರ ಪ್ರಾದೇಶಿಕ ಚಿತ್ರ

ಪೂರ್ಣವಾಗುವುದಿಲ್ಲ. ಭಾಷಾಂತರ ಮಾಡುವಾಗ ಈ ಶೈಲಿಯನ್ನು ಹಾಗೆಯೇ ಉಳಿಸಿಕೊಳ್ಳುವುದು ಕಷ್ಟಸಾಧ್ಯವಾದರೂ ಅಸಂಭವವೇನಲ್ಲ. ಉಪೇಂದ್ರನಾಥ 'ಅಶ್ಕ'ರಿಗೆ ಈ ಕಾದಂಬರಿಯ ರಸಾಸ್ವಾದನೆ ಮಾಡಲು ಕಷ್ಟವಾಯಿತಂತೆ. ಕಾರಣ, ಮೊದಲನೆಯದಾಗಿ ಕಾದಂಬರಿಯ ಶೈಲಿ ತುಂಬಾ ನವೀನವಾದುದು, ಎರಡನೆಯದಾಗಿ ಇದರಲ್ಲಿ ಪ್ರಾದೇಶಿಕ ಶಬ್ದಗಳು ಅತಿಯಾಗಿವೆ. ವಾಸ್ತವವಾಗಿ, 'ಪ್ರಾದೇಶಿಕ ಶಬ್ದಗಳು ಅತಿಯಾಗಿರುತ್ತವೆ' ಎನ್ನುವುದೇ 'ರೇಣು' ಅವರ ಕಾದಂಬರಿಗಳ ವಿಚಾರದಲ್ಲಿ 'ಅಶ್ಕ'ರ ದೂರು. 'ಅಶ್ಕ'ರು ಈ ಶಬ್ದಗಳನ್ನು 'ಗ್ರಾಮ್ಯ' ಎಂದೇ ಕರೆದಿದ್ದಾರೆ. ಅಂದರೆ ಗ್ರಾಮದಲ್ಲಿ ಪ್ರಯೋಗಿಸಲ್ಪಟ್ಟು ಕೆಟ್ಟು ಹೋದ ಶಬ್ದಗಳು ಎಂದರ್ಥ. ಇತರ ಕಾದಂಬರಿಕಾರರು ಮತ್ತು ಸಂಶೋಧಕರು ಈ ಶಬ್ದಗಳನ್ನು 'ಪ್ರಾದೇಶಿಕ' ಎಂದಷ್ಟೇ ಕರೆದಿದ್ದಾರೆ. 'ಸ್ಟಾಯಿಸ್ಟರ್'ನ ಕಾದಂಬರಿ 'ಗ್ರೇಂಪ್ಸ್ ಆಫ್ ಗ್ರಾಥ್'ನಲ್ಲಿ ಗ್ರಾಮ್ಯ ಶಬ್ದಗಳು ಅಧಿಕವಾಗಿದ್ದರೂ, ಅದರ ರಸಾಸ್ವಾದನೆ ಮಾಡಲು ಜನರಿಗೆ ಕಷ್ಟವಾಗಲಿಲ್ಲ ಎಂದ ಮೇಲೆ 'ಮಾಸಿದ ಸೆರಗು' ಕಾದಂಬರಿಯಲ್ಲಿ ಮೈಥಿಲೀ ಶಬ್ದಗಳು ಹೆಚ್ಚಾಗಿವೆ ಎನ್ನುವ ಕಾರಣದಿಂದ ಅದರ ಬೆಲೆ ಇಳಿಸುವುದು ಸರಿಯಲ್ಲ. 'ಜೈಲಿ'ಗೆ 'ಜೆಹಲ್', 'ನೌಜವಾನ್'ಗೆ 'ತಾಜವಾನ್', 'ವಾಲೆಂಟಿಯರಿ'ಗೆ 'ಮೋಲಾಟಿಯರಿ', 'ಜ್ಯೋತಿಷಿ'ಗೆ ಬದಲು 'ಜೋತಖೀ', 'ಡಿಸ್ಟ್ರಿಕ್ಟ್ ಬೋರ್ಡ್' ಎನ್ನುವಲ್ಲಿ 'ಡಿಸ್ಟೋಬೋಟ್' ಮುಂತಾದ ಇಂಗ್ಲೀಷ್, ಸಂಸ್ಕೃತ, ಮತ್ತು ಪಾರ್ಸಿ ಭಾಷೆಯ ಅಸಂಖ್ಯಾತ ಶಬ್ದಗಳನ್ನು 'ರೇಣು' ಪ್ರಯೋಗಿಸಿದ್ದಾರೆ. ಇವೆಲ್ಲಾ ಗ್ರಾಮ್ಯ ಶಬ್ದಗಳೇನೂ ಅಲ್ಲ. ಇವು ಬೇರೆ ಭಾಷೆಗಳಿಂದ ಬಂದವು. ಆದರೀಗ ಮೈಥಿಲೀ ಸೋದರರ ನಾಲಿಗೆಗೆ ಸಿಕ್ಕು ಮೈಥಿಲೀ ಶಬ್ದಗಳೇ ಆಗಿಹೋಗಿವೆ—ಲ್ಯಾಟಿನ್ನಿನ 'ಕಾರ್ಪೊರಿಯರ್' ಅಥವಾ ಗ್ರೀಕನ 'ಕುಪ್ರೋಕೋಸ್' ಇಂಗ್ಲೀಷಿನವರ ಕಂಠದಲ್ಲಿ 'ಕಾರ್ಪೊರಿಟ್' ಮತ್ತು 'ಕ್ರಿಪ್ಪಿರ್' ಆದ ಹಾಗೆ. ಈ ಭಾಷಾ ವಿವಾದದಿಂದ 'ಮಾಸಿದ ಸೆರಗು' ಕಾದಂಬರಿಯ ಸಾರ್ವಭೌಮಿಕ ಮಹತ್ವಕ್ಕೇನೂ ಧಕ್ಕೆ ಒದಗುವುದಿಲ್ಲ. ಉದಾಹರಣೆಗೆ ರಷ್ಯನ್ ಭಾಷೆಯಲ್ಲಿ ಅನುವಾದಿತವಾದ 'ಮಾಸಿದ ಸೆರಗು' ಕಾದಂಬರಿಯ ಮೊದಲ ಮುದ್ರಣದ ಎಪ್ಪತ್ತು ಸಾವಿರ ಪ್ರತಿಗಳು ಒಂದು ವಾರದೊಳಗೆ ಖರ್ಚಾಗಿ ಹೋದವು. ಅನೇಕ ಜನ ವಿಮರ್ಶಕರು ಆ ಕಾದಂಬರಿಯನ್ನು ಬಹಳವಾಗಿ ಪ್ರಶಂಸಿಸಿದರು. ವಾಸ್ತವವಾಗಿ 'ಮಾಸಿದ ಸೆರಗು,' ಸ್ವಾತಂತ್ರ್ಯೋತ್ತರ ಭಾರತೀಯ ಜೀವನದ ಕಲಾಪೂರ್ಣ ಯಥಾರ್ಥವಾದಿ ಮಹಾಕಾವ್ಯ!

ಕೊನೆಯದಾಗಿ 'ಮಾಸಿದ ಸೆರಗು' ಕಾದಂಬರಿಯ ಬಗ್ಗೆ ನನ್ನೆರಡು ಮಾತುಗಳು. ಭಾರತೀಯ ಭಾಷೆಗಳ ಪ್ರಬುದ್ಧ ಓದುಗರು ತಾವೇ ಓದಿ, ಇದರ ಕಥೆ, ಅಸ್ಥಿ–ಮಾಂಸಗಳು ತುಂಬಿದ ಇಲ್ಲಿನ ಸಜೀವ ಪಾತ್ರಗಳು, ಅವುಗಳ ನೋವು ನಲಿವುಗಳಿಂದ ಧ್ವನಿತವಾಗುವ ಭಾರತೀಯ ಜನರ ವ್ಯಥೆ ಈ ಕಾದಂಬರಿಯ ಸೂಕ್ಷ್ಮ ಸಂವೇದನಾಶೀಲ ಭಾಷೆ ಮತ್ತು ಕಲೆಗಳನ್ನು ಅರ್ಥಮಾಡಿಕೊಳ್ಳಬಲ್ಲರು, ಅದನ್ನು ಮೆಚ್ಚಬಲ್ಲರು. ಆದ್ದರಿಂದ ಇದನ್ನು ವರ್ಣಿಸಿ, ವಿವೇಚಿಸಿ ಓದುಗರಿಗೆ ಅಡ್ಡವಾಗಿ ನಿಲ್ಲಲು ನನಗಿಷ್ಟವಿಲ್ಲ. ಒಂದೆರಡು ಸಾಮಾನ್ಯ ತಥ್ಯಗಳ ಕಡೆ ಓದುಗರ ಗಮನ ಸೆಳೆದರೆ ಸಾಕೆಂದು ಭಾವಿಸುತ್ತೇನೆ.

1936 ರಲ್ಲಿ ಪ್ರಕಟವಾದ 'ಗೋದಾನ' ದಲ್ಲಿ ಸ್ವಾತಂತ್ರ್ಯಕ್ಕೆ ಮುಂಚಿನ ಭಾರತದ ಮತ್ತು ಬಡವ, ಶ್ರೀಮಂತ ರೈತರ ಮತ್ತು ಜಮೀಂದಾರರ ಪರಸ್ಪರ ಸಂಬಂಧಗಳ ವಾಸ್ತವ ಚಿತ್ರಣವಿದ್ದರೆ, 1954 ರಲ್ಲಿ ಪ್ರಕಟವಾದ 'ಮಾಸಿದ ಸೆಗಗು' ಕಾದಂಬರಿಯಲ್ಲಿ ಸ್ವಾತಂತ್ರ್ಯಾನಂತರದ ಭಾರತ ಚಿತ್ರವಿದೆ. ಈ ಎರಡೂ ಚಿತ್ರಣಗಳಲ್ಲಿ ಸಾಕಷ್ಟು ಅಂತರವಿದೆ. 'ಗೋದಾನ' ದಲ್ಲಿ ಒಂದು ಸ್ಥಿರ ಸಮಾಜದ ಚಿತ್ರಣವಿದೆ. ಇದರಲ್ಲಿ ವರ್ಣವ್ಯವಸ್ಥೆಯಂತೆಯೇ ಪ್ರತಿ ವರ್ಗದ ಸ್ಥಿತಿಯೂ ಮುಂಚಿತವಾಗಿಯೇ ನಿಶ್ಚಿತವಾಗಿರುತ್ತದೆ. ಆ ಸ್ಥಿತಿಯ ಅತಿಕ್ರಮಣ ಸಾಧ್ಯವಿಲ್ಲ. 'ಮಾಸಿದ ಸೆರಗು' ಕಾದಂಬರಿಯಲ್ಲಿ ಕೇವಲ ರೈತರು ಮಾತ್ರವಲ್ಲ, ಹಿಂದುಳಿದ ಜಾತಿಯವರೆಂದು ಕರೆಯಲ್ಪಡುವ ಪಂಗಡದವರ ಮತ್ತು ಆದಿವಾಸಿಗಳಲ್ಲೂ, ವರ್ಗ ಮತ್ತು ಜಾತಿ ಎಲ್ಲ ದೃಷ್ಟಿಗಳಿಂದಲೂ ಮೇಲೇರಬೇಕೆನ್ನುವ ಒಂದು ಕಾತರವನ್ನು ಕಾಣುತ್ತೇವೆ. ಆದರೆ ಹಳೆಯ ವರ್ಗ ವ್ಯವಸ್ಥೆ ಮತ್ತು ಜಾತಿ ಪಂಥಗಳ ಬೇಡಿ ಎಷ್ಟು ಬಲವಾಗಿವೆಯೆಂದರೆ, ಪ್ರತಿಬಾರಿ ತಲೆ ಎತ್ತಿದಾಗಲೂ ಶೋಷಕ ವರ್ಗದವರ ಮತ್ತು ಜಾತಿಯವರ ಸುಳ್ಳು–ಮೋಸ, ಹಣ ಮತ್ತು ಪಕ್ಷಪಾತಗಳ ಮುಂದೆ ಅವರು ತಲೆಬಾಗಿಸಲೇಬೇಕಾಗುತ್ತದೆ. ಸ್ವಾತಂತ್ರ್ಯಾನಂತರ ಇನ್ನೊಂದು ರೀತಿಯ ಪ್ರಕ್ರಿಯೆ ಕಂಡುಬರುತ್ತಿದೆ. ಓಟು ಮುಂತಾದ ಪ್ರಜಾತಂತ್ರಾತ್ಮಕ ಅಧಿಕಾರ, ಸಾಮ್ಯವಾದ ಮತ್ತು ಜನವಾದದ ಪರವಾಗಿ ಘೋಷಿತವಾಗುವ ಹಕ್ಕುಗಳು, ವಿಕಾಸಪರ ಯೋಜನೆಗಳು ಮತ್ತು ಔದ್ಯೋಗೀಕರಣ ಎಲ್ಲಾ ಇದ್ದೂ ಶೋಷಣೆ ಮೊದಲಿಗಿಂತ ಹೆಚ್ಚಾಗಿ ನಡೆಯುತ್ತಲೇ ಇದೆ. ಇದರ ಪರಿಣಾಮವಾಗಿ ಸ್ವಾತಂತ್ರ್ಯದ ನಂತರ ಭಾರತದ ಬಡಜನ ಮತ್ತಷ್ಟು ಬಡವರಾಗುತ್ತಿದ್ದಾರೆ. ಶ್ರೀಮಂತರು ಮತ್ತಷ್ಟು ಶ್ರೀಮಂತರಾಗುತ್ತಿದ್ದಾರೆ. ಈ ಪ್ರಕ್ರಿಯೆ ಅತ್ಯಂತ ಸಂಶ್ಲಿಷ್ಟವಾದುದು. ಸಾಮಾನ್ಯ ಜೀವನದಲ್ಲಿ

ಇಂದು ಹರಡುತ್ತಿರುವ ವೇದನೆ, ದುಃಖ, ಕ್ಷೋಭೆಗಳ ಯಥಾರ್ಥಚಿತ್ರಣ 'ಮಾಸಿದ ಸೆರಗು' ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಇಲ್ಲಿನ ಪ್ರತಿಶಬ್ದವೂ ಸಾರ್ಥಕವಾಗಿದೆ ಎನ್ನುವಷ್ಟು ಸೂಕ್ಷ್ಮ ವ್ಯಂಜನ ಶೈಲಿಯಲ್ಲಿ ಚಿತ್ರಿತವಾಗಿದೆ. 'ಮಾಸಿದ ಸೆರಗು'ವಿನ ಚಿಕ್ಕ ಪಾತ್ರವೂ ಸ್ವಾತಂತ್ರ್ಯಾನಂತರದ ಪ್ರಪಂಚದ ವಿಚಾರದಲ್ಲಿ ಸದಾ ಜಾಗರೂಕವಾಗಿರುತ್ತದೆ. ಜೀವನದ ಸಮಸ್ಯೆಗಳ ಬಗ್ಗೆ ಅವರಿಗೆ ಸ್ವಲ್ಪವೂ ಉದಾಸೀನವಿಲ್ಲ. ಅವರ ಪ್ರತಿಕ್ರಿಯೆಗಳು ಮಧ್ಯಮ ವರ್ಗದ ನಗರದ ಜನರಿಗೆ ಒರಟಾಗಿ, ಗ್ರಾಮ್ಯವಾಗಿ ಕಾಣಬಹುದು, ಆದರೆ ಅವರದಲ್ಲಿ ಕ್ಷುದ್ರತೆ ಅಥವಾ ಉಚ್ಛೃಂಖಲತೆಗೆ ಅವಕಾಶವಿಲ್ಲ. ಅವರ ವ್ಯಂಗ್ಯ ವಿನೋದಗಳೂ ಹಗುರವಾದುವುಗಳಲ್ಲ, ಅವೂ ಜೀವನದ ಯಾವುದಾದರೊಂದು ಗಂಭೀರ ಮುಖ ವನ್ನು ಎತ್ತಿ ತೋರಿಸುತ್ತವೆ. ಪ್ರತಿಯೊಂದು ಪಾತ್ರವೂ ಎಷ್ಟು ಜೀವಂತ ವಾಗಿದೆಯೆಂದರೆ 'ರೇಣು' ಅವರು ಕಾದಂಬರಿ ಬರೆಯುವುದರ ಬದಲು ನಾಲ್ಕೂ ದಿಕ್ಕುಗಳಿಂದ 'ಸಿನೇರಮಾ'ದ ಹತ್ತಾರು ಕ್ಯಾಮರಾಗಳನ್ನು 'ಮೇರಿಗಂಜಿ'ನ ಇದಿರಾಗಿ ನಿಲ್ಲಿಸಿ, ಒಂದೇ ಕಾಲದಲ್ಲಿ ಇಡೀ ಹಳ್ಳಿಯ ದೃಶ್ಯವನ್ನು ತೋರಿಸುತ್ತಿದ್ದಾ ರೇನೋ ಎನ್ನಿಸುತ್ತದೆ. ಪಾತ್ರಗಳು ಜೀವಂತವಾಗಿರುವುದರಿಂದ, ಚಿರಸ್ಮರಣೀಯ ವಾಗಿ ನಿಲ್ಲುವಂತಹದಾಗಿದೆ. ಹೆಚ್ಚುತ್ತಿರುವ ಅನ್ಯಾಯ, ಭ್ರಷ್ಟಾಚಾರ ಮತ್ತು ಜನ ದ್ರೋಹಗಳ ವಿರುದ್ಧ ವಾಮನದಾಸನ ಒಳ್ಳೆಯತನ ಮತ್ತು ಕಾಳೀಚರಣನ ಜಾಗರೂಕ ಸಂಘರ್ಷಗಳು ಸ್ವಾತಂತ್ರ್ಯೋತ್ತರ ರಾಜನೀತಿಯ ಮೂರ್ತ ಚಿತ್ರ ಗಳಾಗಿ ಭಾಸವಾಗುತ್ತವೆ. 'ಮಾಸಿದ ಸೆರಗು' ಕಾದಂಬರಿಯಲ್ಲಿ ಅಪೂರ್ವ ಶಬ್ದ ಚಿತ್ರದಂತೆ ಅಂಕಿತವಾಗಿರುವ ಸಮಗ್ರ ಭಾರತದ ಕಥೆಯಿದೆ. ಇದರಲ್ಲಿ ಅಡಗಿರುವ ಸತ್ಯ, ಓದುಗರ ಮನಸ್ಸಿನಲ್ಲಿ ನಿರಂತರವಾಗಿ ಪ್ರತಿಬಿಂಬಿತವಾಗುತ್ತಲೇ ಇರುತ್ತದೆ. ಇದು 'ಮಾಸಿದ ಸೆರಗು' ಕಾದಂಬರಿಯ ಕಾಲಾತೀತ ಜೀವಂತತೆ ಮತ್ತು ಸಾಮರ್ಥ್ಯಗಳಿಗೆ ಸಾಕ್ಷಿಯಾಗಿದೆ.

ಶಿವದಾನ್‌ಸಿಂಗ್ ಚೌಹಾನ್

# 1

ಸಿಪಾಯಿಗಳು ಕೆವುಡ ಚೇಥರೂವನ್ನು ಸೆರೆಹಿಡಿದು ಲೋಬಿನಲಾಲನ ಬಾವಿಯಿಂದ ಬಕೀಟು ಬಿಚ್ಚಿಕೊಂಡು ಹೋಗಿದ್ದಾರೆಂಬ ವಿಷಯ ಹಳ್ಳಿಯ ಲ್ಲೆಲ್ಲಾ ಮಿಂಚಿನಂತೆ ಕ್ಷಣಮಾತ್ರದಲ್ಲಿ ಹರಡಿತು.

1942ನೆಯ ವರ್ಷದ ಆಂದೋಳನದ ಸಮಯದಲ್ಲಿ ಈ ಹಳ್ಳಿಯಲ್ಲಿ ಮಿಲಿಟರಿಯವರಿಂದ ಯಾವ ತೊಂದರೆಯೂ ಆಗಿರಲಿಲ್ಲ. ಅಲ್ಲದೆ ಆಂದೋಳನದ ಬಿಸಿ ಈ ಹಳ್ಳಿಗೆ ತಟ್ಟಿರಲೂ ಇಲ್ಲ. ಆದರೆ ಜಿಲ್ಲೆಯ ಬೇರೆ ಬೇರೆ ಭಾಗಗಳಲ್ಲಿ ನಡೆದ ಘಟನೆಗಳು ಕಥೆಗಳಾಗಿ ಜನರ ಕಿವಿಯನ್ನು ಮುಟ್ಟಿದ್ದವು....ಮೊಗ ಲಾಯಿ ಸ್ಟೇಷನ್ನಿನಲ್ಲಿ ಬಿಳಿಯ ಸಿಪಾಯಿಯೊಬ್ಬ ವ್ಯಾಪಾರಿಯ ಮಗಳನ್ನು ಎತ್ತಿಕೊಂಡು ಹೋದ....ಇದೇ ಕಾರಣಕ್ಕಾಗಿ ಸಿಖ್ ಮತ್ತು ಇಂಗ್ಲೀಷ್ ಸಿಪಾಯಿಗಳ ನಡುವೆ ಜಗಳವಾಯಿತು. ಗುಂಡುಗಳು ಹಾರಾಡಿದವು.... ಢೋಲ್‌ಬಾಜಾದಲ್ಲಿ ಇಡೀ ಹಳ್ಳಿಯನ್ನು ಸುತ್ತುಗಟ್ಟಿ ಬೆಂಕಿ ಹಚ್ಚಿಬಿಟ್ಟರು. ಒಂದು ಮಗು ಸಹ ತಪ್ಪಿಸಿಕೊಳ್ಳಲಾಗಲಿಲ್ಲ. ಮುಸಹರುವಿನ ಮಾವ ಕಣ್ಣಾರೆ ಕಂಡನಂತೆ....ಬೆಂಕಿಯಲ್ಲಿ ಬೆಂದ ಮೀನುಗಳಂತೆಯೋ, ಜನರ ಹೆಣಗಳೂ ಸುಟ್ಟು ತಿಂಗಳುಗಟ್ಟಲೆ ಬಿದ್ದಿದ್ದವು. ಅದನ್ನು ಕಾಗೆಯೂ ಸಹ ಮುಟ್ಟು ವಂತಿರಲಿಲ್ಲ. ಅಂಥ ಬಲವಾದ ಸಿಪಾಯಿ ಕಾವಲಿತ್ತು. ಮುಸಹರುವಿನ ಮಾವನ ಅಣ್ಣನ ಮಗ, ಫಾರಬಿಸ್ ಸಾಹೇಬನ ಅಡಿಗೆಯವನೇ ಇದನ್ನು ಹೇಳಿದ ಅಂದಮೇಲೆ ಅವನ ಮಾತಿನಲ್ಲಿ ಸುಳ್ಳಿನ ಅಂಶ ಸಾಧ್ಯವೇ? ಇತ್ಯಾದಿ.... ನಾಲ್ಕು ವರ್ಷಗಳ ನಂತರ ಈಗ ಈ ಹಳ್ಳಿಯ ಸರದಿ ಬಂದಿದೆ. ಕಾಳೀ ಮಾತೆಯೇ ರಕ್ಷಿಸಬೇಕು. ಬಾಬಲಾರಸಿಂಹನೇ ಕಾಪಾಡಬೇಕು.

ಇದಕ್ಕೆಲ್ಲಾ ಕಾರಣ ಗುವರ್ ಪಂಗೆಡದ ಬಲಿಯ, ಅಥವಾ ಬಾಲದೇವ.

ಬಿರಂಚಿದಾಸ ಧೈರ್ಯದಿಂದ ಕಾರ್ಯಪ್ರವೃತ್ತನಾದ. ಅಂಗಳದಿಂದ ಹೊರಬಂದು ಒಮ್ಮೆ ಸುತ್ತಲೂ ನೋಡಿದ. ಅನಂತರ ಮೊಹಲ್ಲಾದ ಕಡೆ ಓಡಿದ. ತಹಸೀಲ್ದಾರ ವಿಶ್ವನಾಥಪ್ರಸಾದರೂ ವಿಚಾರವನ್ನು ಕೇಳಿ ಗಾಬರಿ ಯಾದರು.

ಲೋಬಿನ್ ಬಕೀಟನ್ನು ಎಲ್ಲಿಂದ ತಂದಿದ್ದ? ಖಂಡಿತ ಎಲ್ಲಿಂದಲೋ ಕದ್ದೇ ತಂದಿರಬೇಕು. ನಾಚಿಕೆಗೆಟ್ಟವರು ಕಳ್ಳತನ ಮಾಡಿ, ಹಳ್ಳಿಗೇ ಕೆಟ್ಟ ಹೆಸರು ತರುತ್ತಾರೆ.

ಕಾಯಸ್ಥ ಗುಂಪಿನ ವಿಶ್ವನಾಥಪ್ರಸಾದ ಮತ್ತು ತತಮಾ ಪಂಗಡದ ವಿರಂಚಿಯರನ್ನು ಸಿಪಾಯಿಗಳು ಹಿಡಿದುಕೊಂಡು ಹೋದರೆಂಬ ಸುದ್ದಿ, ಮಾಲಿಕ ಪಂಗಡದವರಿಗೂ ರಾಜಪೂತ ಪಂಗಡದವರಿಗೂ ತಲುಪಿತು. ಠಾಕುರ ರಾಮಕೃಪಾಲಸಿಂಗ್ ಹೇಳಿದರು :

"ತಹಸೀಲ್ದಾರಿಯ ಅಮಲೆಲ್ಲಾ ಈಗ ಇಳಿಯುತ್ತೆ. ಜಮೀನ್ದಾರರ ಕಂದಾಯ ವಸೂಲಿ ಮಾಡಿ ಹಣ ತಾನೇ ನುಂಗಿದ್ದಾನೆ ಅಂತ ಕಾಣುತ್ತೆ. ದೊಡ್ಡಮನೆ ಗಾಳಿ ಕುಡಿಯೋ ಸಂದರ್ಭ ಬಂದಿದೆ ರಾಯನಿಗೆ!"

ಯಾದವ್ ಪಂಗಡದವರು ಸಮಾಚಾರವನ್ನು ಕೇಳಿದ ತಕ್ಷಣ ಬಲದೇವನನ್ನು ಸೆರೆಹಿಡಿದರು.

"ಓಡೋದಕ್ಕೆ ಬಿಡಬೇಡಿ. ಹಗ್ಗದಿಂದ ಕಟ್ಟಿಹಾಕಿ. ಒಂದಲ್ಲ ಒಂದು ದಿನ ಇವನು ಇಡೀ ಹಳ್ಳಿಯವರನ್ನು ಹಿಡಿದು ಕೊಡ್ತಾನೇ ಅಂತ ಗೊತ್ತೇಇತ್ತು."

ತಹಸೀಲ್ದಾರ ವಿಶ್ವನಾಥಪ್ರಸಾದರು ಒಂದು ಸೇರು ತುಪ್ಪ, ಐದು ಸೇರು ಬಾಸುಮತಿ ಅಕ್ಕಿ, ಒಂದು ಆಡನ್ನು ತೆಗೆದುಕೊಂಡು ಹೆದರುತ್ತಲೇ ಮಿಲಿಟರಿಯವರನ್ನು ಭೇಟಿ ಮಾಡಲು ಹೊರಟರು. ವಿರಂಚಿಯೂ ಜೊತೆಯಲ್ಲೇ ಇದ್ದ. ಅವನಿಗೆ ಹೇಳಿದರು.

"ಲೆಕ್ಕಮಾಡಿ ನೋಡಿಬಿಡು. ಪೂರ್ತಿ ಐವತ್ತು ರೂಪಾಯಿಗಳ ಸಾಮಾನಿದೆ. ಒಂದು ವಾರದೊಳಗೆ ನಿನ್ನ ಪಂಗಡದವರಿಂದ ಮತ್ತು ಲೋಬಿನನ ಪಂಗಡದವರಿಂದ ಹಣ ವಸೂಲಿ ಮಾಡಿಕೊಡಬೇಕು, ಗೊತ್ತಾಯ್ತೇನು? . . . ."

ಮಿಲಿಟರಿಯವರಿದ್ದುದ್ದು ಕೋಟೆಯ ತೋಟದಲ್ಲಿ. ತೋಟದ ಹತ್ತಿರ ಬಂದ ಕೂಡಲೇ ವಿಶ್ವನಾಥಪ್ರಸಾದರು ಜೇಬಿನಿಂದ ಟೋಪಿ ತೆಗೆದು ತಲೆಗಿಟ್ಟರು. ಕಾಳೀಮಂದಿರದ ಕಡೆ ತಿರುಗಿ ಕಾಳಿಗೆ ಪ್ರಣಾಮ ಮಾಡುತ್ತಾ ಹೇಳಿದರು : "ತಾಯಿ ಕಾಳಿ, ನೀನೇ ಗತೀ."

ತೋಟದೊಳಗೆ ಬಂದು ತಹಸೀಲ್ದಾರರು ನೋಡಿದರು. ಅಲ್ಲಿ ಎರಡು ಎತ್ತಿನ ಗಾಡಿಗಳು ನಿಂತಿದ್ದವು. ಎತ್ತುಗಳು ಹುಲ್ಲು ಮೇಯುತ್ತಿದ್ದವು. ಮಿಲಿಟರಿ

ಯವರು ನೆಲದ ಮೇಲೆ ಕಂಬಳಿ ಹಾಸಿ ಅದರ ಮೇಲೆ ಕುಳಿತಿದ್ದರು...... ಅರೇ, ಅವರು ಏನನ್ನೋ ಚೊಕ್ಕಟ ಮಾಡುತ್ತಿದ್ದರು. ಕಿವುಡ ಚೇಥರೂವೂ ಅವರೊಡನೆ ಕಂಬಳಿಯ ಮೇಲೆ ಕುಳಿತಿದ್ದ.

"ಸಲಾಂ ಹುಜೂರ್."

ವಿರಂಚಿ ತಲೆಯ ಮೇಲಿದ್ದ ಸಾಮಾನೆಲ್ಲಾ ಕೆಳಗಿಳಿಸಿ ತಲೆ ತಗ್ಗಿಸಿ ಸಲಾಮು ಮಾಡಿದ.....ಮೇಕೆಯೂ "ಮೇ ಮೇ" ಎಂದು ಸ್ವರ ಎತ್ತಿತು.

"ಇದೇನು? ನೀವು ಯಾರು?" ದಪ್ಪನೆಯ ಮನುಷ್ಯನೊಬ್ಬ ಪ್ರಶ್ನಿಸಿದ. "ಹುಜೂರ್, ಸೇವಕ, ಪಾರ್‌ಬಗಾದ ತಹಸೀಲ್ದಾರ್." "ಓಹೋ, ನೀವು ತಹಸೀಲ್ದಾರರೇನು? ಒಳ್ಳೇದು ನಾವು ಡಿಸ್ಟ್ರಿಕ್ಟ್ ಬೋರ್ಡಿನ ಜನ. ಇಲ್ಲೊಂದು ಮಲೇರಿಯಾ ಕೇಂದ್ರ ಶುರುವಾಗುತ್ತೆ. ಮೇಲಿಂದ ಹುಕುಂ ಬಂದಿದೆ. ಈ ತೋಟದಲ್ಲೇ ಕೇಂದ್ರವನ್ನು ತೆರೆಯುತ್ತೇವೆ. ಮಾರ್ಟಿನ್ ಸಾಹೇಬರು ಬಹಳ ಹಿಂದೆಯೇ ಈ ಜಮೀನನ್ನು ಡಿಸ್ಟ್ರಿಕ್ಟ್ ಬೋರ್ಡಿಗೆ ಕೊಟ್ಟುಬಿಟ್ಟಿದ್ದಾರೆ."

ತಹಸೀಲ್ದಾರರು ಮತ್ತೊಮ್ಮೆ ಸಲಾಮು ಮಾಡಿ ಕುಳಿತುಕೊಂಡರು. ವಿರಂಚಿ ಕೈಜೋಡಿಸಿ ನಿಂತಿದ್ದ.

ರಾಜಪೂತ ಪಂಗಡದ ರಾಮಕೃಪಾಲ್‌ಸಿಂಗ್ ಕೋಟೆಯ ತೋಟಕ್ಕೆ ಬಂದಾಗ ತೋಟದ ಪಶ್ಚಿಮ ಭಾಗದ ಜಮೀನನ್ನು ಅಳೆಯುವ ಕೆಲಸ ನಡೆಯುತ್ತಿದ್ದಿತು. ಕೆಲವರು ಅಳತೆಯ ಸಲಕರಣೆಯನ್ನು ಹಿಡಿದು ಅಳತೆ ಮಾಡುತ್ತಿದ್ದರು. ಹತ್ತಿರದಲ್ಲೇ ಟೋಪಿ ಹಾಕಿಕೊಂಡಿದ್ದ ಒಬ್ಬ ಸಾಹೇಬನ ಜೊತೆ ತಹಸೀಲ್ದಾರರು ನಗುನಗುತ್ತಾ ಮಾತನಾಡುತ್ತಿದ್ದರು.

ಆ ವೇಳೆಗೆ ಯಾದವ ಪಂಗಡದರು ಬಾಲದೇವನ ಕೈಗಳಿಗೆ, ಸೊಂಟಕ್ಕೆ ಹಗ್ಗ ಬಿಗಿದು ಅವನನ್ನು ಎಳೆದುಕೊಂಡು ಕೂಗಾಡುತ್ತಾ ಬಂದರು. ಅವನ ಸೊಂಟಕ್ಕೆ ಬಿಗಿದಿದ್ದ ಹಗ್ಗವನ್ನು ಎಲ್ಲರೂ ಹಿಡಿದುಕೊಂಡಿದ್ದರು. ತಪ್ಪಿಸಿ ಕೊಂಡ ಚಳವಳಿಕಾರನನ್ನು ಹಿಡಿದುಕೊಟ್ಟವರಿಗೆ ಸರ್ಕಾರದಿಂದ ಸಾವಿರ, ಎರಡು ಸಾವಿರ, ಐದು ಸಾವಿರ ರೂಪಾಯಿಗಳ ಬಹುಮಾನ ಸಿಗುತ್ತಲ್ಲವೇ? ಆದರೆ ಇಲ್ಲಿ? ಸಾಹೇಬ ಇವರನ್ನು ನೋಡಿದ ಕೂಡಲೇ ಗದರಿಸಿಕೊಂಡ.

"ವಿಷಯ ಏನು? ಇವನನ್ನು ಹೀಗೆ ಕಟ್ಟಿ ಎಳ್ಕೊಂಡು ಬರ್‍ತಿರೋದು ಯಾಕೆ? ಇವನೇನು ಮಾಡಿದ?"

"ಹುಜೂರ್, ಇವನು ಚಳವಳಿಗಾರ ಬಾಲದೇವ್. ಎರಡು ವರ್ಷ ಜೈಲಿನಲ್ಲೂ ಇದ್ದು ಬಂದಿದ್ದಾನೆ. ಈ ಹಳ್ಳಿಯವನೂ ಅಲ್ಲ, ಚನ್ನಿಪಟ್ಟಿ ಯವನು. ಇಲ್ಲಿ ತನ್ನ ಚಿಕ್ಕಮ್ಮನ ಮನೆಯಲ್ಲಿದ್ದಾನೆ. ಖದ್ದರ ಬಟ್ಟೆ ಹಾಕ್ಕೊಳ್ತಾನೆ. ಮಾತೆತ್ತಿದರೆ 'ಜೈಹಿಂದ್' ಅಂದ್ಕೊಂಡು ತಿರುಗ್ತಿರ್ತಾನೆ."

"ಸರಿ, ಆದರೆ ಇವನನ್ನು ನೀವು ಕಟ್ಟಿರೋದು ಯಾಕೇ, ಅಂತ?"

"ಅರೆ ಬಾಲದೇವ್" ಸಾಹೇಬನ ಚಟ್ಟಿಗಾರ ಬಾಲದೇವನನ್ನು ಗುರುತಿಸಿ ಹೇಳಿದ:

"ಇವನು ಬಾಲದೇವ್ ಸಾರ್. ರಾಮಕೃಷ್ಣ ಕಾಂಗ್ರೆಸ್ ಆಶ್ರಮದ ಕಾರ್ಯಕರ್ತ. ತುಂಬಾ ಬಲಶಾಲಿ."

ಯಾದವ ಪಂಗಡದವರಿಂದ ಬಂಧನದಿಂದ ಬಿಡುಗಡೆ ಪಡೆದ ಕೂಡಲೇ ಬಾಲದೇವ, ಸಾಹೇಬ ಮತ್ತು ಚಟ್ಟಿಗಾರ ಇಬ್ಬರಿಗೂ ಪದೇ ಪದೇ ಜೈಹಿಂದ್ ಹೇಳಿದ. ಸಾಹೇಬ ನಗುತ್ತಾ ನುಡಿದ:

"ನಿಮ್ಮ ಹಳ್ಳಿಯಲ್ಲಿ ಮಲೇರಿಯಾ ಕೇಂದ್ರ ಆರಂಭವಾಗ್ತಿದೆ. ಒಬ್ಬ ದೊಡ್ಡ ಡಾಕ್ಟರು ಬರುತ್ತಾರೆ. ಡಿಸ್ಟ್ರಿಕ್ಟ್ ಬೋರ್ಡಿನ ಮುಖಾಂತರ ಕಟ್ಟಡ ಆಗುತ್ತೆ. ಆದರೆ ಮಿಕ್ಕ ಕೆಲಸವೆಲ್ಲಾ ನಿಮ್ಮ ಸಹಾಯದಿಂದಾನೇ ನಡೀಬೇಕು."

ತಹಸೀಲ್ದಾರರು ಜಮೀನ್ದಾರಿ ಲೆಕ್ಕ, ನಕ್ಷೆಗಳ ಆಧಾರದಿಂದ ಆಲೋಚಿಸಿ ತಮ್ಮ ಅಭಿಪ್ರಾಯ ಕೊಟ್ಟರು:

"ಹುಜೂರ್, ಒಂದು ಎಕರೆ ಹತ್ತು ಡಿಸಮಿಲ್ ಭೂಮಿ ಇದೆ."

ಠಾಕುರ ರಾಮಕೃಪಾಲಸಿಂಗರಿಗೆ ಇದುವರೆಗೂ ಸಾಹೇಬರಿಗೆ ಸಲಾಮು ಮಾಡುವುದಕ್ಕೂ ಅವಕಾಶ ಸಿಕ್ಕಿರಲಿಲ್ಲ. ವಿಶ್ವನಾಥಪ್ರಸಾದರು ತುಂಬಾ ಮುಂದುವರಿದುಬಿಟ್ಟಿದ್ದರು. ಜೀವನದಲ್ಲಿ ಮೊದಲಬಾರಿಗೆ ಸಿಂಗರಿಗೆ ತಮ್ಮ ಅಶಿಕ್ಷತೆಯ ಬಗ್ಗೆ ಪಶ್ಚಾತ್ತಾಪ ಉಂಟಾಯಿತು. ನಿಜವಾಗಲೂ ವಿದ್ಯೆಯ ಮಹಿಮೆ ದೊಡ್ಡದು. ಆದರೆ ಭಗವಂತ ಒಳ್ಳೆಯ ಶರೀರ ಅನುಗ್ರಹಿಸಿದ್ದಾನೆ, ಉಚ್ಚ ಜಾತಿಯಲ್ಲಿ ಜನ್ಮ ಕೊಟ್ಟಿದ್ದಾನೆ. ಈ ಬಲದಿಂದಲೇ ಅನೇಕ ಬಾಬು ಜನರ, ಅಧಿಕಾರಿ ವರ್ಗದವರ, ಪರಿಚಯ ಸ್ನೇಹ ಬೆಳೆದಿದೆ.... ಅವಕಾಶ ಸಿಕ್ಕಿದ ಕೂಡಲೇ ಸಾಹೇಬರಿಗೆ ಸಲಾಮು ಮಾಡಿ ಗಟ್ಟಿಯಾಗಿ ಹೇಳಿದರು:

"ಸಾಹೇಬರಿಗೆ ಜಯವಾಗಲಿ. ಹುಜೂರ್ ಪಬ್ಲಿಕ್‌ನ ಹಿತಕ್ಕೋಸ್ಕರ ಇಷ್ಟು ಕಷ್ಟಪಟ್ಟು ಇಷ್ಟು ದೂರ ದಯಮಾಡಿಸಿದ್ದೀರಿ. ಅಂದಮೇಲೆ ನಾವು ಸಾಹೇಬರಿಗೆ ಏನೂ ಸೇವೆ ಮಾಡದಿರುವುದು ಸಾಧ್ಯವೇ? ಗೋಸಾಯಿ ತುಲಸಿ ಸಾಸರು ತಮ್ಮ ಹಾಡಿನಲ್ಲಿ ಹೇಳೇ ಇದ್ದಾರೆ.

'ಪ್ರಭು ದರ್ಶನ ಕೊಟ್ಟ'....ನಾನು ಧನ್ಯನಾದೇ. ಹುಜೂರ್, ಈ ಸೇವಕನ ಹೆಸರು ರಾಮಕೃಪಾಲಸಿಂಗ್. ಗರೀಬ ನಿವಾಜಸಿಂಗನ ಮಗ. ಜಾತಿ ಯಲ್ಲಿ ರಾಜಪೂತ. ಊರು ರಾಜಸ್ಥಾನದ ಗಢಬುಂದೇಲ. ಈಗಿರುವುದು ಮೇರಿಗಂಜ್‌ನಲ್ಲಿ."

ಸಾಹೇಬ ನಗುತ್ತಾ ಹೇಳಿದ: "ಸಿಂಹಜೀ ನಮಗೆ ಯಾವ ಸೇವೆಯೂ ಬೇಕಿಲ್ಲ. ಮಲೇರಿಯಾ ಕೇಂದ್ರ ಆರಂಭವಾಗ್ತಿರೋದೇ ಜನರ ಸೇವೆಗೋಸ್ಕರ. ಆದ್ದರಿಂದ ಎಲ್ಲರೂ ಸೇರಿ ಆ ಕೆಲಸಕ್ಕೆ ಸಹಾಯ ಮಾಡಿ. ಅದೇ ದೊಡ್ಡ ಸೇವೆ."

ಯಾದವ ಸಂಗಡದವರು ಒಬ್ಬರ ನಂತರ ಒಬ್ಬರು ಎಲ್ಲರ ಕಣ್ಣು ತಪ್ಪಿಸಿ ಅಲ್ಲಿಂದ ಜಾರಿಕೊಂಡರು. ಬಾಲದೇವನನ್ನು ಕಟ್ಟಿ ಹಿಡಿದುಕೊಂಡು ಬಂದಿದ್ದ ರಿಂದ ಸಾಹೇಬರು ತಮಗೆಲ್ಲಿ ಶಿಕ್ಷೆ ವಿಧಿಸುತ್ತಾರೋ ಎನ್ನುವ ಭಯ ಅವರಿಗೆ.

ಹೊರಡುವಾಗ ಸಾಹೇಬ ಹೇಳಿದ: "ಇನ್ನೊಂದು ವಾರದೊಳಗೆ ಡಿಸ್ಟ್ರಿಕ್ಟ್ ಬೋರ್ಡಿನ ಮೇಸ್ತ್ರಿ ಬರ್ತಾನೆ. ಅಷ್ಟರಲ್ಲಿ ನೀವು ಬೊಂಬು, ಹಗ್ಗ ಇನ್ನೂ ಏನೇನು ಸಾಮಾನುಗಳು ಬೇಕಾಗುತ್ತೋ ಅವನ್ನೆಲ್ಲಾ ಸಿದ್ಧಮಾಡಿ ಇಟ್ಟಿರಿ; ತಹಸೀಲ್ದಾರ ಸಾಹೇಬರೇ ನೀವಿದ್ದೀರಿ. ಬಲದೇವಪ್ರಸಾದ ದೇಶಸೇವಕ. ಜೊತೆಗೆ ಸಿಂಹಜೀ ಇದ್ದಾರೆ. ನೀವೆಲ್ಲಾ ಒಟ್ಟಾಗಿ ಸೇರಿ ಈ ಕೆಲಸಕ್ಕೆ ಸಹಾಯಮಾಡಿ."

ಎಲ್ಲರೂ ಕೈ ಜೋಡಿಸಿ ಕಲೆಬಾಗಿ ನಮಸ್ಕಾರ ಮಾಡಿದರು. ಸಾಹೇಬ ತನ್ನ ಪರಿವಾರದೊಂದಿಗೆ ಹೊರಟ. ಮೋಟಾರ್ ಓಡುತ್ತಿತ್ತು. ಬಾಲದೇವ ಗಾಡಿಯ ಹಿಂದೆಯೇ ಹಳ್ಳಿಯ ಹೊರ ಪ್ರದೇಶದವರೆಗೆ ಹೋದ.

ಹಿಂದಿರುಗಿ ಬಂದಮೇಲೆ ಬಾಲದೇವ ಜನರೊಂದಿಗೆ ಹೇಳಿದ:

"ಬಂದಿದ್ದ ಬಂಗಾಳಿ ಆಫೀಸರ್ ಪ್ರಫುಲ್ಲ ಬ್ಯಾನರ್ಜಿ. ಅವನೊಂದಿಗಿದ್ದ ಚಟ್ಟಿಕಾರ ಜೇತನಬಾಬು. ಮೊದಲು ಕಾಂಗ್ರೆಸ್ ಆಫೀಸಿನಲ್ಲಿದ್ದ.

# 2

ಪೂರ್ಣಿಯಾ ಜಿಲ್ಲೆಯ ಅನೇಕ ಹಳ್ಳಿಗಳು ಮತ್ತು ಗ್ರಾಮಗಳು ಇಂದಿಗೂ ವಜ್ರವ್ಯಾಪಾರಿ ಸಾಹೇಬರ ಹೆಸರಿಗೆ ಋಣಿಗಳಾಗಿವೆ. ನಿರ್ಜನ ಕಾಡುಗಳಲ್ಲಿ, ಮೈದಾನ ಪ್ರದೇಶಗಳಲ್ಲಿ ಇರುವ ಸಾಹೇಬರ ಬಂಗಲೆಯ ಅವಶೇಷಗಳು ಈಗಲೂ ಹಿಂದಿನ ಕಾಲದ ಮರೆತ ಕಥೆಗಳನ್ನು ಪ್ರಯಾಣಕರಿಗೆ ನೆನಪು ಮಾಡಿಕೊಡುತ್ತವೆ. ವಿವಾಹವಾಗಿ ಹೊಸ ವಧುವಿನೊಂದಿಗೆ ಊರಿಗೆ ಹಿಂತಿರುಗುತ್ತಿರುವ ತರುಣ, ಇಲ್ಲಿಗೆ ಬಂದ ಕೂಡಲೇ ತನ್ನ ಗಾಡಿಯವನಿಗೆ ಹೇಳುತ್ತಾನೆ:

"ಇಲ್ಲಿ ಗಾಡಿ ಸ್ವಲ್ಪ ನಿಧಾನವಾಗಿ ಬಿಡಯ್ಯ. ಹುಡುಗಿ ಸಾಹೇಬನ ಬಂಗಲೆ ನೋಡಲಿ...ಇದೇ ಮೆಕ್ಕೆ ಸಾಹೇಬನ ಬಂಗಲೆ...ಅಲ್ಲಿರೋದು...ನೀರಿನ ಚಿಲುಮೆ."

ಹೊಸ ವಧು ಗಾಡಿಯ ಪರದೆಯನ್ನು ಸರಿಸಿ, ಮುಖದ ಮೇಲಿನ ಸೆರಗನ್ನು ಕೊಂಚ ಓರೆ ಮಾಡಿ ಬಗ್ಗಿ ನೋಡುತ್ತಾಳೆ—ನಿಬಿಡವಾದ ಕಾಡಿನ ಮಧ್ಯೆ ಕಲ್ಲು ಇಟ್ಟಿಗೆಗಳ ರಾಶಿ ಬಿದ್ದಿದೆ. ಆದರೆ ಬಂಗಲೆ ಎಲ್ಲಿ?

ವರನ ಮುಖ ಅಭಿಮಾನದಿಂದ ಹಿಗ್ಗುತ್ತದೆ. ಕಾರಣ: ನಮ್ಮ ಹಳ್ಳಿಯ ಹತ್ತಿರವೇ ಸಾಹೇಬನ ಬಂಗಲೆ ಇತ್ತು. ಅಲ್ಲೇ ಸಾಹೇಬ್ ಮೇಮ್ ಸಾಹೇಬರು ವಾಸವಾಗಿದ್ದರು

ಗಂಗಾಸ್ನಾನ ಮಾಡಿ ಹಿಂತಿರುಗಿ ಬರುವ ಯಾತ್ರಿಕರ ಎತ್ತಿನ ಗಾಡಿಗಳೂ ಇಲ್ಲಿ ಸ್ವಲ್ಪ ಹೊತ್ತು ನಿಲ್ಲುತ್ತವೆ. ಗಾಡಿಗಳಿಂದ ಯುವತಿಯರೂ ಮತ್ತು ಮಕ್ಕಳೂ ಇಳಿದು, ಹೆದ ಹೆದರುತ್ತಲೇ ಅವಶೇಷಗಳ ಬಳಿ ಹೋಗುತ್ತಾರೆ. ಮುದುಕಿಯರು ಕಾಡಿನಲ್ಲಿ ಬೇರು ಸೊಪ್ಪುಗಳನ್ನು ಹುಡುಕುತ್ತಾರೆ. . . .

ಮೇರೀಗಂಜ್ ಇಂಥದೇ ಒಂದು ಹಳ್ಳಿ. ರೌತಹಟ್ ಸ್ಟೇಷನ್ನಿನಿಂದ ಏಳು ಹರಿದಾರಿ ಪೂರ್ವಕ್ಕೆ, ಕೋಸಿ ನದಿಯನ್ನು ದಾಟಿ ಹೋಗಬೇಕು. ಕೋಸಿ ನದಿಯ ತೀರದುದ್ದಕ್ಕೂ ಬಹಳ ದೂರದವರೆಗೆ ತಾಳೆ ಮತ್ತು ಖರ್ಜೂರದ ಮರಗಳಿಂದ ತುಂಬಿದ್ದ ಕಾಡಿತ್ತು. ಈ ಪ್ರದೇಶದ ಜನ ಇದನ್ನು "ನವಾಬೀ ತಾಳೆವನ" ಎಂದು ಕರೆಯುತ್ತಾರೆ. ಯಾವ ನವಾಬ ಈ ತಾಳೆವನವನ್ನು ಬೆಳೆಸಿದನೋ ಹೇಳುವುದು ಕಷ್ಟ. ಆದರೆ ವೈಶಾಖದಿಂದ ಆಷಾಢ ಮಾಸದವರೆಗೂ ದನಗಾಹಿಗಳಂತೂ ಇಲ್ಲಿ

ನವಾಬಗಿರಿ ನಡೆಸುತ್ತಲೇ ಇರುತ್ತಾರೆ. 'ತೀನ್ ಆನೆ ಲಬನೀ ತಾಡೀ, ರೋಕ್ ಸಾಲಾ ಮೋಟರ್ ಗಾಡೀ' ಅಂದರೆ ಹೆಂಡದ ಅಮಲಿನಲ್ಲಿ ಮನುಷ್ಯ ಮೋಟಾರನ್ನೂ ಅಗ್ಗವೆಂದೇ ಭಾವಿಸುತ್ತಾನೆ. ತಾಳೆವನ ದಾಟದ ನಂತರ ವಿಶಾಲ ಮೈದಾನ ಪ್ರದೇಶ ಸಿಗುತ್ತದೆ. ಅದು ನೇಪಾಳದ ಇಳಿಜಾರಿನಲ್ಲಿ ಆರಂಭ ವಾಗಿ ಗಂಗಾನದಿ ಬಯಲಿನಲ್ಲಿ ಕೊನೆಗೊಳ್ಳುತ್ತದೆ. ಲಕ್ಷಾಂತರ ಎಕರೆ ಬರಡು ಭೂಮಿಯ ವಿಶಾಲ ಅಂಚು. ಇದರಲ್ಲಿ ಹುಲ್ಲುಕಡ್ಡಿಯೂ ಬೆಳೆಯುವುದಿಲ್ಲ. ಮಧ್ಯೆ ಮಧ್ಯೆ ಜಟಾಮೂಲಸಿ ಗಿಡಗಳು, ಅಲ್ಲಲ್ಲಿ ಎಲಚಿಯ ಪೊದೆಗಳು. ಹರಿದಾರಿ ಮೈದಾನ ದಾಟಿದರೆ ಪೂರ್ವದ ಕಡೆ ಗಾಢವಾದ ಕಾಡು ಕಾಣಿಸುತ್ತದೆ. ಮೇರೀ ಗಂಜ್ ಇರುವುದು ಅಲ್ಲೇ.

ಸುಮಾರು ಮೂವತ್ತೈದು ವರ್ಷಗಳ ಹಿಂದೆ ಡಬ್ಲ್ಯು. ಜಿ. ಮಾರ್ಟಿನ್ ಈ ಹಳ್ಳಿಯಲ್ಲಿ ಬಂಗಲೆ ಕಟ್ಟಲು ಅಸ್ತಿಭಾರ ಹಾಕಿದಾಗ ಸುತ್ತಮುತ್ತಲ ಹಳ್ಳಿಯಲ್ಲೆಲ್ಲಾ 'ಇಂದಿನಿಂದ ಈ ಹಳ್ಳಿಯ ಹೆಸರು ಮೇರೀಗಂಜ್' ಎಂದು ಡಂಗುರ ಸಾರಿಸಿದ. ಮೇರೀ ಮಾರ್ಟಿನ್ನನ ನವವಧು. ಅವಳು ಇದ್ದುದು ಕಲಕತ್ತೆಯಲ್ಲಿ. ಒಮ್ಮೆ ಯಾವನೋ ಒಬ್ಬ ರೈತ ಮರವಿನಿಂದ ಹಳ್ಳಿಯ ಹಳೆಯ ಹೆಸರನ್ನು ಹೇಳಿಬಿಟ್ಟನಂತೆ. ಸರಿ, ಸಾಹೇಬ ಸಿಟ್ಟಿನಿಂದ ಅವನಿಗೆ ಸರಿಯಾಗಿ ಐವತ್ತು ಚಾಟಿ ಏಟುಗಳನ್ನು ಎಣಿಸಿ ಬಿಗಿದನಂತೆ. ಈ ಹಳ್ಳಿಯ ಹಳೆಯ ಹೆಸರು ಈಗ ಯಾರ ನೆನಪಿನಲ್ಲೂ ಉಳಿದೇ ಇಲ್ಲ. ಅಥವಾ ಈಗಲೂ ಆ ಹಳೆಯ ಹೆಸರನ್ನು ಹೇಳಲು ಯಾವುದೋ ಅಜ್ಞಾತ ಭಯ ಅವರನ್ನು ಕಾಡುತ್ತಿರಬಹುದು. ಹಳ್ಳಿಯ ಹೆಸರನ್ನು ಬದಲಾಯಿಸಿ, ರೌತಹಟ್ ಸ್ಟೇಷನ್ನಿನಿಂದ ಮೇರೀಗಂಜಿನ ವರೆಗೆ ಡಿಸ್ಟ್ರಿಕ್ಟ್ ಬೋರ್ಡಿನಿಂದ ರಸ್ತೆ ಮಾಡಿಸಿ, ಹಳ್ಳಿಯಲ್ಲಿ ಪೋಸ್ಟ್ ಆಫೀಸ್ ತೆರೆದು ನಂತರ ಮಾರ್ಟಿನ್ ತನ್ನ ನವವಿವಾಹಿತೆ ಮೇರಿಯನ್ನು ಕರೆತರಲು ಕಲಕತ್ತೆಗೆ ಹೋದ. ಹಳ್ಳಿಯಲ್ಲಿ ತುಂಬಾ ವಯಸ್ಸಾದ ಮುದುಕಿ ಯಾರಾದರೂ ಇದ್ದರೆ ಅವಳು ಈಗಲೂ ಹೇಳುತ್ತಾಳೆ: "ಓಹ್ ಸಾಹೇಬನ ಮೇಮ್ ಒಳ್ಳೆ ಅಪ್ಸರೆ ಹಾಗೆ ಇದ್ದಳು. ದೇವೇಂದ್ರನ ಆಸ್ಥಾನದ ಅಪ್ಸರೆಯ ಹಾಗೆ!"

ಆದರೆ ಮಾರ್ಟಿನ್ ಸಾಹೇಬನ ಯೋಜನೆಯೆಲ್ಲಾ ತಲೆಕೆಳಗಾಯಿತು. ಮೇರೀಗಂಜ್‌ಗೆ ಬಂದು ಒಂದು ವಾರವಾಗುವಷ್ಟರಲ್ಲಿ ಮೇರಿಗೆ ಚಳಿ ಜ್ವರ ಆರಂಭ ವಾದಾಗ, ಈ ಊರಿನಲ್ಲಿ ಪೋಸ್ಟಾಫೀಸಿಗಿಂತ ಮುಂಚೆ ಡಿಸ್ಪೆನ್ಸರಿ ತೆರೆಯ ಬೇಕಾಗಿತ್ತೆಂದು ಮಾರ್ಟಿನ್ನನಿಗನ್ನಿಸಿತು. ಕ್ವಿನೈನ್ ಮಾತ್ರೆಗಳಿಂದ ಮೂರನೆಯ ದಿನವೂ ಮೇರಿಯ ಜ್ವರ ಇಳಿಯದಿದ್ದಾಗ, ಮಾರ್ಟಿನ್ ಕುದುರೆಯೇರಿ ರೌತಹಟ್

ಕಡೆ ದೌಡಾಯಿಸಿದ. ರೌತಹಟ್‌ಗೆ ಹೋದ ನಂತರ ತಿಳಿಯಿತು, ಪೂರ್ಣಿಯಾಗೆ ಹೋಗುವ ರೈಲು ಹತ್ತು ನಿಮಿಷಕ್ಕೆ ಮುಂಚೆ ಹೊರಟುಹೋಯಿತೆಂದು! ರೌತಹಟ್‌ನಿಂದ ಪೂರ್ಣಿಯಾಗೆ ಹನ್ನೆರಡು ಹರಿದಾರಿ ದೂರ. ಮೇರಿಗಂಜಿನಲ್ಲಿ ಯಾರನ್ನು ಕೇಳಿದರೂ, ಹಕ್ಕಿಯಂತೆ ಹಾರಿಹೋಗುತ್ತಿದ್ದ ಮಾರ್ಟಿನ್ನನ ಕುದುರೆಯ ಈ ಕಥೆಯನ್ನು ವಿಸ್ತಾರಪೂರ್ವಕವಾಗಿ ಹೇಳುತ್ತಾರೆ...ಮಾರ್ಟಿನ್ ಪೂರ್ಣಿಯಾ ದಲ್ಲಿ ಸಿವಿಲ್ ಸರ್ಜನ್ನನ ಬಂಗಲೆಯನ್ನು ತಲುಪಿದರೂ ರೈಲು ಪೂರ್ಣಿಯಾ ಸ್ಟೇಷನ್ನಿಗೆ ಬಂದೇ ಇರಲಿಲ್ಲವಂತೆ.

ಆದರೆ ಮಾರ್ಟಿನ್ನನ ಪಕ್ಷಿಯಂತಹ ಕುದುರೆ ಮತ್ತು ಸಿವಿಲ್ ಸರ್ಜನ್ನನ ವಾಯುವೇಗದ ಗಾಡಿ ಮೇರೀಗಂಜ್ ತಲುಪುವ ಹೊತ್ತಿಗೆ, ಮಲೇರಿಯಾ ರೋಗ ಮೇರಿಯನ್ನು ಕಬಳಿಸಿಬಿಟ್ಟಿತ್ತು....ಟ್ಯೂಬ್‌ವೆಲ್‌ನ ಹತ್ತಿರ ಹಳ್ಳದಲ್ಲಿ ನುಗ್ಗಿ ತನ್ನ ಗುಂಗುರು ಗುಂಗುರು ರೇಷ್ಮೆ ಕೂದಲಿಗೆ ಕೊಚ್ಚೆಯನ್ನು ತಟ್ಟಿಕೊಂಡು ಮೇರಿ ಸತ್ತುಹೋಗಿದ್ದಳು.

ಮೇರಿಯ ಹೆಣವನ್ನು ಹೂಳಿದ ಕೂಡಲೇ ಮಾರ್ಟಿನ್ ಪೂರ್ಣಿಯಾಗೆ ಹೋದ. ಸಿವಿಲ್ ಸರ್ಜನ್, ಮ್ಯಾಜಿಸ್ಟ್ರೇಟ್, ಡಿಸ್ಟ್ರಿಕ್ ಬೋರ್ಡ್ ಚೇರಮನ್, ಹೆಲ್ತ್ ಆಫೀಸರ್ ಪ್ರತಿಯೊಬ್ಬರನ್ನೂ ಭೇಟಿಯಾದ. ಒಂದು ಚಿಕ್ಕ ಡಿಸ್ಪೆನ್ಸರಿ ತೆರೆಯುವುದಕ್ಕೆ ವಿಶ್ವ ಪ್ರಯತ್ನ ಮಾಡಿದ. ಕೊನೆಗೂ ಡಿಸ್ಪೆನ್ಸರಿಗೆಂದು ಭೂಮಿ ರಿಜಿಸ್ಟರ್ ಮಾಡಿಸಿದ. ಮುಂದಿನ ವರ್ಷ ಖಂಡಿತ ಡಿಸ್ಪೆನ್ಸರಿ ತೆಗೆಯುತ್ತೇವೆಂದು ಅಧಿಕಾರಿಗಳು ಆಶ್ವಾಸನೆ ನೀಡಿದರು. ಇದೇ ಸಮಯಕ್ಕೆ ಸರಿಯಾಗಿ, ಜರ್ಮನಿಯ ವೈಜ್ಞಾನಿಕರು ಚಿಟಕಿ ಹಾರಿಸುವಷ್ಟರಲ್ಲಿ ವಜ್ರ ಯುಗವನ್ನು ಕೊನೆ ಮಾಡಿ ಬಿಟ್ಟರು. ಇದ್ದಿಲಿನಿಂದ ವಜ್ರ ತಯಾರಿಸುವ ವೈಜ್ಞಾನಿಕ ವಿಧಿಯನ್ನು ಪ್ರಯೋಗಿಸಿ ಅವರು ಸಫಲರಾಗಿದ್ದರು. ವಜ್ರ ವ್ಯಾಪಾರಿಗಳ ಮಳಿಗೆಗಳ ಗೋಡೆ ಗಳು ಮುರಿದುಬಿದ್ದವು. ಸಾಹೇಬರು ಮಳಿಗೆಗಳನ್ನು ಮಾರಿ ಜಮಾನುಗಳನ್ನು ಕೊಳ್ಳಲಾರಂಭಿಸಿದ್ದರು. ಅನೇಕ ಜನ ವ್ಯಾಪಾರ ಆರಂಭಿಸಿದರು. ಮಾರ್ಟಿನ್ನನ ಪ್ರಪಂಚ ಮೊದಲೇ ಭಗ್ನವಾಗಿತ್ತು. ಈಗ ಬುದ್ಧಿಯೂ ಕೆಟ್ಟುಹೋಯಿತು. ಕಂಕುಳಲ್ಲಿ ಕೆಲಸಕ್ಕೆ ಬಾರದ ಕಾಗದಗಳ ಕಂತೆ ಹಿಡಿದುಕೊಂಡು ಹುಚ್ಚ ಮಾರ್ಟಿನ್ ದಿನವೆಲ್ಲಾ ಪೂರ್ಣಿಯಾದ ಆಫೀಸುಗಳನ್ನು ಸುತ್ತುತ್ತಿದ್ದ. ಸಿಕ್ಕವರಿಗೆಲ್ಲಾ ಹೇಳುತ್ತಿದ್ದ: "ಗವರ್ನಮೆಂಟ್ ಆಸ್ಪತ್ರೆ ತೆಗೆಯೋದಕ್ಕೆ ಆರ್ಡರ್ ಕೊಟ್ಟಿದೆ. ಮುಂದಿನ ವರ್ಷ ಆರಂಭವಾಗುತ್ತೆ." ಪಾಟ್ನಾ ಮತ್ತು ಡೆಲ್ಲಿಯ ಮಧ್ಯೆ ಅನೇಕ ಬಾರಿ ಹೀಗೆ ಸುತ್ತಾಡಿದ ಮೇಲೆ ಒಂದು ದಿನ ಅವನು ತುಂಬಾ ಬೇಸರ

ಗೊಂಡು ಮೇರೀಗಂಜಿಗೆ ಹಿಂತಿರುಗಿದನಂತೆ. ಮೇರಿಯ ಗೋರಿಯ ಮೇಲೆ ತಲೆಯಿಟ್ಟು, 'ಡಾರ್ಲಿಂಗ್, ಡಾಕ್ಟರು ಬರಲಿಲ್ಲ' ಎನ್ನುತ್ತಾ ದಿನವೆಲ್ಲಾ ಅಳುತ್ತಿದ್ದನಂತೆ. ಆ ದಿನದಿಂದ ಅವನ ಹುಚ್ಚು ಮತ್ತಷ್ಟು ಹೆಚ್ಚಿತು. ಅಧಿಕಾರಿಗಳು ಅವನನ್ನು ಕಾಂಕೆ ಎಂಬಲ್ಲಿಗೆ ವರ್ಗಮಾಡಿದರು. ಅಲ್ಲೇ ಹುಚ್ಚಾಸ್ಪತ್ರೆಯಲ್ಲಿ ಅವನು ಮರಣಹೊಂದಿದ.

ಮಳಿಗೆಯಿದ್ದ ತೋಟದಲ್ಲಿ, ಅಂಗ್ರೇಜೀ ಹೂವುಗಳ ವನದ ಮಧ್ಯೆ ಇಂದಿಗೂ ಮೇರಿಯ ಗೋರಿ ಇದೆ. ಬಂಗಲೆ ಕುಸಿದುಹೋಗಿದೆ. ನೀರಿನ ತೊಟ್ಟಿ ಮುರಿದಿದೆ. ಅರಳೀ, ಜಾಲಿ ಮುಂತಾದ ಕಾಡಿನ ಮರಗಳಿಂದ ಒಂದು ಕಾಡೇ ಬೆಳೆಯುತ್ತಿದೆ. ಜನ ಹಗಲು ಹೊತ್ತಿನಲ್ಲೂ ಅಲ್ಲಿ ಸಂಚರಿಸುವುದಿಲ್ಲ. ಮಾವಿನ ತೋಪನ್ನು ತಹಸೀಲ್ದಾರರೇ ವಶಕ್ಕೆ ತೆಗೆದುಕೊಂಡಿದ್ದರಿಂದ ಅದು ಮಾತ್ರ ಚೊಕ್ಕಟವಾಗಿದೆ. ಆದರೆ ಬಂಗಲೆಯಿದ್ದ ಹೊಸ ಕಾಡಿನಲ್ಲಿ ಹಗಲಿನಲ್ಲೂ ನರಿಗಳು ಊಳಿಡುತ್ತಿರುತ್ತವೆ. ಜನ ಅದನ್ನು ಭೂತಬಂಗಲೆಯೆಂದೇ ಕರೆಯುತ್ತಾರೆ. ತತಮಾ ಪಂಗಡದ ನಂದಲಾಲ ಒಂದುಬಾರಿ ಇಟ್ಟಿಗೆ ತರಲೆಂದು ಹೋದ. ಇಟ್ಟಿಗೆಗೆ ಕೈ ಹಾಕಿದ ಕೂಡಲೇ ಕೊನೆಯುಸಿರೆಳೆದ. ಕಾಡಿನಿಂದ ಹೆಣ್ಣು ಭೂತವೊಂದು ಹೊರಬಂದು ನಂದಲಾಲನನ್ನು ಬೆತ್ತದಿಂದ—ಹಾವಿನಂತಿದ್ದ ಬೆತ್ತದಿಂದ—ಹೊಡೆಯಲಾರಂಭಿಸಿತಂತೆ; ನಂದಲಾಲ ಅಲ್ಲೇ ಸತ್ತುಬಿದ್ದ. ಭೂತ ಬೆಳ್ಳಗಿದ್ದಿತಂತೆ!

ಮೇರೀಗಂಜ್ ದೊಡ್ಡ ಹಳ್ಳಿ. ಅಲ್ಲಿ ವಿವಿಧ ವರ್ಣದ ಜನ ವಾಸಿಸುತ್ತಿದ್ದರು. ಹಳ್ಳಿಯ ಪೂರ್ವದಲ್ಲಿ ಕಮಲಾ ನದಿ ಹರಿಯುತ್ತಿತ್ತು. ಮಳೆಗಾಲದಲ್ಲೇನೋ ನದಿ ತುಂಬಿ ಹರಿಯುತ್ತಿತ್ತು. ಮಿಕ್ಕ ಸಮಯದಲ್ಲಿ ಅಲ್ಲಲ್ಲಿ ದೊಡ್ಡ ದೊಡ್ಡ ಹಳ್ಳಗಳಾಗಿ ನೀರು ತುಂಬಿರುತ್ತಿತ್ತು. ಮೀನುಗಳು ಮತ್ತು ಕಮಲದ ಹೂವುಗಳಿಂದ ತುಂಬಿದ ಹಳ್ಳಗಳು. ಪುಷ್ಯಮಾಸದ ಪೂರ್ಣಿಮೆಯಂದು ಈ ಹಳ್ಳಗಳಲ್ಲೇ ಸ್ನಾನ ಮಾಡಲು ಬೆಳಗ್ಗೆಯಿಂದ ಸಂಜೆಯವರೆಗೆ ಜನ ಕಾದಿರುತ್ತಿದ್ದರು. ಆಗ ರೌತಹಟ್ ಸ್ಟೇಷನ್ನಿನಿಂದ ಹಲ್ವಾ, ತಿಂಡಿಗಳ ಅಂಗಡಿಗಳವರು ಇಲ್ಲಿ ಅಂಗಡಿ ಹೂಡುತ್ತಿದ್ದರು. ಕಮಲಾ ನದಿಯ ಮಹಾತ್ಮೆಯ ಬಗ್ಗೆ ಜನ ವಿಧ ವಿಧವಾಗಿ ಕಥೆಗಳನ್ನು ಹೇಳುತ್ತಿದ್ದರು...ಹಳ್ಳಿಯಲ್ಲಿ ಯಾರ ಮನೆಯಲ್ಲಾದರೂ ಮದುವೆ, ಮುಂಜಿ, ಅಥವಾ ಶ್ರಾದ್ಧವೇ ಆಗಲಿ ಮನೆಯ ಯಜಮಾನ ನದಿಯಲ್ಲಿ ಸ್ನಾನ ಮಾಡಿ, ಕೊರಳಿಗೆ ಬಟ್ಟೆಯನ್ನು ಕಟ್ಟಿ ವೀಳ್ಯ ಕೊಟ್ಟು ಕಮಲಾ ತಾಯಿಯನ್ನು ಊಟಕ್ಕೆ ಆಹ್ವಾನಿಸುತ್ತಿದ್ದ. ಆಗ ನೀರಿನಲ್ಲಿ ಅಲೆಗಳು ಮೇಲೆ

ಏರಲಾರಂಭಿಸುತ್ತಿದ್ದವು! ವಜ್ರದ ಹೊಂಡದಲ್ಲಿ ವಜ್ರವನ್ನು ಮಥಿಸಿದಂತೆ ಕಾಣುತ್ತಿತ್ತು. ಅನಂತರ ದಡದಲ್ಲಿ ಬೆಳ್ಳಿಯ ತಟ್ಟೆ, ಬಟ್ಟಲು, ಲೋಟಗಳ ರಾಶಿ ಬೀಳುತ್ತಿತ್ತು! ಯಜಮಾನ ಎಲ್ಲ ಪಾತ್ರೆಗಳನ್ನೂ ಲೆಕ್ಕ ಹಾಕಿಕೊಂಡು ತೆಗೆದುಕೊಂಡು ಹೋಗುತ್ತಿದ್ದ. ಊಟ ಮುಗಿದ ಕೂಡಲೇ ಅದನ್ನು ಕಮಲಾ ತಾಯಿಗೇ ಮತ್ತೆ ಒಪ್ಪಿಸಿ ಬರುತ್ತಿದ್ದ. ಆದರೆ ಎಲ್ಲರೂ ಒಂದೇ ರೀತಿ ನಿಷ್ಠೆಯಿಂದಿರುವುದಿಲ್ಲವಲ್ಲ! ಒಮ್ಮೆ ಒಬ್ಬ ಗೃಹಸ್ಥ ತಟ್ಟೆ ಬಟ್ಟಲುಗಳನ್ನು ಮುಚ್ಚಿಟ್ಟುಕೊಂಡನಂತೆ. ಅದೇ ದಿನದಿಂದ ತಾಯಿ ವರದಾನ ನೀಡುವುದನ್ನು ನಿಲ್ಲಿಸಿಬಿಟ್ಟಳಂತೆ. ಕಡೆಗೆ ಆ ಗೃಹಸ್ಥನ ವಂಶವೇ ನಿರ್ನಾಮವಾಗಿ ಹೋಯಿತು. ಆ ಕೃತಘ್ನ ಗೃಹಸ್ಥನ ಜಾತಿಯ ಬಗ್ಗೆ ಹಳ್ಳಿಯಲ್ಲಿ ಎರಡು ಅಭಿಪ್ರಾಯಗಳಿವೆ. ರಾಜಪೂತ ಪಂಗಡದವರು ಅವನನ್ನು ಕಾಯಸ್ಥ ಜಾತಿಯ ಗೃಹಸ್ಥ ಎನ್ನುತ್ತಾರೆ. ಕಾಯಸ್ಥ ಪಂಗಡದವರು ಅವನು ರಾಜಪೂತರವನು ಎನ್ನುತ್ತಾರೆ.

ರಾಜಪೂತರು ಮತ್ತು ಕಾಯಸ್ಥರಲ್ಲಿ ವಂಶಪಾರಂಪರ್ಯವಾಗಿ ಮನಸ್ತಾಪ, ಜಗಳ ಬೆಳೆದು ಬಂದಿದೆ. ಬ್ರಾಹ್ಮಣರ ಸಂಖ್ಯೆ ಕಡಿಮೆ ಆದ್ದರಿಂದ ಅವರು ಸದಾ ಮೂರನೆಯ ಶಕ್ತಿಯಾಗಿ ಉಳಿದಿದ್ದಾರೆ. ಜನಿವಾರ ಹಾಕಿಕೊಂಡ ಮೇಲೂ ರಾಜಪೂತರು ಯದುವಂಶಿ ಕ್ಷತ್ರಿಯರಿಗೆ ಮಾನ್ಯತೆ ಕೊಡಲಿಲ್ಲ. ಅದಕ್ಕೆ ಬದಲು ಸಮಯ ಸಿಕ್ಕಾಗಲೆಲ್ಲಾ ಅವರನ್ನು ವ್ಯಂಗ್ಯ ಬಾಣಗಳಿಂದ ಚುಚ್ಚುತ್ತಿದ್ದರು. ಒಮ್ಮೆ ಯದುವಂಶೀಯರು ನೇರವಾಗಿ ಸ್ಪರ್ಧೆಗೇ ಇಳಿದರು. ಮಾತು ವಿಕೋಪಕ್ಕೆ ಹೋಗುವುದರಲ್ಲಿತ್ತು. ಎರಡೂ ಕಡೆಯ ಜನ ಉದ್ವಿಗ್ನರಾಗಿದ್ದರು. ಕಾಯಸ್ಥ ಪಂಗಡದ ಮುಖಂಡ ತಹಸೀಲ್ದಾರ ವಿಶ್ವನಾಥಪ್ರಸಾದರು ಮೊಕದ್ದಮೆ ಹೂಡುವುದಾಗಿ ಯದುವಂಶೀಯರಿಗೆ ಸ್ಪಷ್ಟಪಡಿಸಿದ್ದರು. ಜಮೀನ್ದಾರಿ ಕಛೇರಿಯ ವಕೀಲ ವಸಂತಬಾಬು, ಯಾದವರನ್ನು ಸರ್ಕಾರವು ರಾಜಪೂತರೆಂದೇ ಪರಿಗಣಿಸಿದೆ ಎಂದು ಹೇಳುತ್ತಿದ್ದ. ಸ್ವಯಂ ವಕೀಲನೇ ಹೇಳಿಕೆ ಕೊಟ್ಟಿದ್ದಾನೆಂದ ಮೇಲೆ ಮೊಕದ್ದಮೆ ಜೋರಿನಿಂದ ನಡೆಯುತ್ತದೆ.

ಈ ಕಡೆ ರಾಜಪೂತರಿಗೆ ಬ್ರಾಹ್ಮಣ ಪಂಗಡದ ಪಂಡಿತರು ಸಮಾಧಾನ ಹೇಳುತ್ತಿದ್ದರು.

"ಧರ್ಮಕ್ಕೆ ಹಾನಿಯಾದಾಗಲೆಲ್ಲಾ ಅದನ್ನು ರಕ್ಷಿಸಿದವರು ರಾಜಪೂತರು. ಈಗ ಘೋರ ಕಲಿಕಾಲ ಬಂದಿದೆ. ರಾಜಪೂತರು ಧೈರ್ಯದಿಂದ ಧರ್ಮವನ್ನು ರಕ್ಷಿಸಬೇಕು."

ಆದರೆ ವಿಚಾರ ಮುಂದುವರಿಯಲಿಲ್ಲ. ಅದು ಹೇಗೋ ಈ ಧರ್ಮಯುದ್ಧ ಅಲ್ಲಿಗೇ ನಿಂತಿತು. ಬ್ರಾಹ್ಮಣ ಗುಂಪಿನ ಮುದುಕ ಜೋಯಿಸರು ಈಗಲೂ ಹೇಳುತ್ತಿರುತ್ತಾರೆ:

" ಇದು ರಾಜಪೂತರು ಸುಮ್ಮನಿದ್ದುದರ ಫಲ. ಈಗ ಯಾರು ಬೇಕಾದರೂ ಕೊರಳಿಗೆ ಜನಿವಾರ ಹಾಕಿಕೊಂಡು ತಿರುಗುತ್ತಾರೆ····ಈ ರೀತಿಯ ಕ್ಷತ್ರಿಯರ ವಿಚಾರ ನಾನೆಂದೂ ಕೇಳೇ ಇರಲಿಲ್ಲ. ಶಿವ···ಶಿವಾ····"

ಆ ಊರಿನಲ್ಲಿದ್ದ ಮೂರು ಪ್ರಮುಖ ಜಾತಿಗಳು ಕಾಯಸ್ಥ, ರಾಜಪೂತ, ಮತ್ತು ಯಾದವ. ಬ್ರಾಹ್ಮಣರು ಈಗಲೂ ಮೂರನೆಯ ಶಕ್ತಿಯಾಗೇ ಉಳಿದಿದ್ದಾರೆ. ಹಳ್ಳಿಯ ಇತರ ಜಾತಿಯವರು ಸಂದರ್ಭಾನುಸಾರ ಮೇಲಿನ ಮೂರು ಪಂಗಡದವರಿಗೆ ನೆರವಾಗುತ್ತಿರುತ್ತಾರೆ.

ಕಾಯಸ್ಥ ಪಂಗಡದ ಮುಖ್ಯಸ್ಥ ವಿಶ್ವನಾಥಪ್ರಸಾದರು ರಾಜ್ ಪಾರಬಂಗಾದ ತಹಸೀಲ್ದಾರರು. ತಹಸೀಲ್ದಾರಿ ಅವರ ವಂಶದಲ್ಲಿ ಮೂರು ತಲೆಮಾರುಗಳಿಂದ ನಡೆದುಕೊಂಡು ಬಂದಿದೆ. ಆದ್ದರಿಂದಲೇ ಅವರಿಂದು ಒಂದೂ ಸಾವಿರ ಬೀಘದಷ್ಟು ವಿಸ್ತಾರವಾದ ಜಮೀನಿನ ಮಾಲೀಕರಾಗಿದ್ದಾರೆ. ಕಾಯಸ್ಥ ಪಂಗಡದವರನ್ನು ಹಳ್ಳಿಯ ಬೇರೆ ಜಾತಿಯವರು ಮಾಲೀಕ ಪಂಗಡದವರೆಂದೇ ಕರೆಯುತ್ತಾರೆ. ರಾಜಪೂತರು ಮಾತ್ರ ಅವರನ್ನು ಕಾಯಸ್ಥ ಪಂಗಡದವರೆಂದು ಕರೆಯುತ್ತಾರೆ.

ಠಾಕುರ ರಾಮಕೃಪಾಲಸಿಂಗ್ ರಾಜಪೂತ ಪಂಗಡದ ಮುಖಂಡ. ಇವರ ಅಜ್ಜ ಮಹಾರಾಣಿ ಚಂಪಾವತಿಯ ರಾಜ್ಯದಲ್ಲಿ ಸಿಪಾಯಿಯಾಗಿದ್ದರಂತೆ. ಮಹಾರಾಣಿ ಚಂಪಾವತಿ ಮತ್ತು ಪಾರಬಂಗಾ ರಾಜ್ಯದ ನಡುವೆ ಸಿವಿಲ್ ಮೊಕದ್ದಮೆ ನಡೆಯುತ್ತಿದ್ದಾಗ ವಿಶ್ವನಾಥಪ್ರಸಾದರ ಅಜ್ಜ ಪಾರಬಂಗಾ ರಾಜ್ಯದ ಕಡೆ ಸೇರಿಬಿಟ್ಟರಂತೆ. ಅದರಿಂದಾಗಿ ಮಹಾರಾಣಿಯ ಎಲ್ಲ ರಹಸ್ಯ ಕಾಗದ ಪತ್ರಗಳೂ ಪಾರಬಂಗಾದವರಿಗೆ ಸಿಕ್ಕಿಬಿಟ್ಟವು. ಮಹಾರಾಣಿ ಮೊಕದ್ದಮೆಯಲ್ಲಿ ಸೋತಳು. ಕಾಶಿಗೆ ಹೋಗುವುದಕ್ಕೆ ಮುಂಚೆ ತನ್ನಲ್ಲಿ ಉಳಿದಿದ್ದ ಮುನ್ನೂರು ಬೀಘಾ ಜಮೀನನ್ನು ರಾಮಕೃಪಾಲಸಿಂಗರ ಹೆಸರಿನಲ್ಲಿ ಬರೆದುಬಿಟ್ಟಳು. ರಾಮಕೃಪಾಲಸಿಂಗರ ಹೇಳಿಕೆಯಂತೆ ಅವರ ಅಜ ಒಂದು ಬಾರಿ ಮಹಾರಾಣಿಯನ್ನು ಡಕಾಯಿತರ ಮುತ್ತಿಗೆಯಿಂದ ಕಾಪಾಡಿದ್ದನಂತೆ. ಅದಕ್ಕೆ ಬಹುಮಾನವಾಗಿ ಮಹಾರಾಣಿ ಅವರಿಗೆ ದಾನಪತ್ರ ಬರೆದುಕೊಟ್ಟಳು····ಕಾಯಸ್ಥ ಪಂಗಡದವರು ರಾಜಪೂತರನ್ನು ಸಿಪಾಹಿ ಪಂಗಡದವರೆಂದೇ ಕರೆಯುತ್ತಾರೆ.

ಯಾದವರ ಸಂಗಡ ಇತ್ತೀಚಿನದು. ಇವರ ಮುಖಂಡ ಶೀಲಾವನ್ ಯಾದವ ಈಗ್ಗೆ ಕೇವಲ ಹತ್ತು ವರ್ಷಗಳ ಹಿಂದೆ ಎಮ್ಮೆ ಮೇಯಿಸುತ್ತಿದ್ದುದನ್ನು ಜನ ನೋಡಿದ್ದಾರೆ. ಹಾಲು ತುಪ್ಪ ಮಾರಿದ ಹಣ ಅವನ ಹತ್ತಿರ ಸಂಗ್ರಹವಾಗುತ್ತಿದ್ದುದರ ವಿಚಾರ ನಾಲ್ಕು ಕಡೆ ಹರಡಲಾರಂಭಿಸಿದಾಗ ಶೀಲಾವನ್ನನಿಗೆ ತುಂಬಾ ಚಿಂತೆಯಾಯಿತು. ತಿಂಗಳುಗಟ್ಟಲೆ ತಹಸೀಲ್ದಾರರ ಹತ್ತಿರ ಓಡಾಡಿದ. ಸರ್ಕಲ್ ಮ್ಯಾನೇಜರರಿಗೆ ಕಾಣಿಕೆ ಸಲ್ಲಿಸಿದ. ಸಿಪಾಯಿಗಳಿಗೆ ಹಾಲು ತುಪ್ಪ ತಿನ್ನಿಸಿದ. ಕೊನೆಗೊಮ್ಮೆ ಕಮಲಾ ನದಿಯ ತೀರದಲ್ಲಿ ನೂರೈವತ್ತು ಬೀಘಾ ಜಮೀನನ್ನು ಕೊಳ್ಳುವ ವ್ಯವಸ್ಥೆ ಮಾಡಿಕೊಂಡ. ಈಗವನು ನೂರೈವತ್ತು ಬೀಘಾ ಜಮೀನಿನಲ್ಲಿ ವ್ಯವಸಾಯ ಮಾಡುತ್ತಿದ್ದಾನೆ. ಹಿರಿಯ ಮಗ ಸಕಲದೀಪ ಬೈರಗಾವಿಯಲ್ಲಿ ತನ್ನ ತಾತನ ಮನೆಯಲ್ಲಿದ್ದು ಕೊಂಡು ಹೈಸ್ಕೂಲಿನಲ್ಲಿ ಓದುತ್ತಿದ್ದಾನೆ. ಶೀಲಾವನಸಿಂಹ ಯಾದವನನ್ನು ಜನ ನಂಬಿಕೆಗೆ ಅರ್ಹನೆಂದೇ ಭಾವಿಸುತ್ತಾರೆ. ಯಾದವ ಕ್ಷತ್ರಿಯ ಸಂಗಡದವರನ್ನು ಗೊಲ್ಲ ಸಂಗಡದವರೆಂದು ಕರೆಯುವ ಸಾಹಸ ಈಗ ಯಾರಿಗೂ ಇಲ್ಲ. ಯಾದವ ಸಂಗಡದಲ್ಲಿ ಹನ್ನೆರಡು ತಿಂಗಳೂ ಸಂಜೆ ಹೊತ್ತು ಕುಸ್ತಿ ಸಾಧನೆ ನಡೆಯುತ್ತಲೇ ಇರುತ್ತದೆ. ಸಂಜೆ ನಾಲ್ಕು ಗಂಟೆಯ ಹೊತ್ತಿಗೇ ಶೋಭನ ಮೋಚಿ ಡೋಲು ಬಡಿಯಲಾರಂಭಿಸುತ್ತಾನೆ—'ಧಾಕ್ ಧಿನ್ನಾ, ಧಾಕ್ ಧಿನ್ನಾ.' ಡೋಲಿನ ಒಂದೊಂದು ಬಡಿತಕ್ಕೆ ಅನುಸಾರವಾಗಿ ಯಾದವ ಸಂಗಡದ ಮುದುಕರು, ಯುವಕರು, ಹುಡುಗರು ದಂಡೆ, ಬೈಠಕ್, ಕುಸ್ತಿಗಳನ್ನು ಅಭ್ಯಾಸ ಮಾಡುತ್ತಿರುತ್ತಾರೆ.

ಇಡೀ ಮೇರೀಗಂಜಿನಲ್ಲಿ ವಿದ್ಯಾವಂತರು ಹತ್ತು ಜನ ಮಾತ್ರ. ವಿದ್ಯಾವಂತರು ಎಂದರೆ ಹಸ್ತಾಕ್ಷರ ಮಾಡುವುದರಿಂದ ಹಿಡಿದು ತಹಸೀಲ್ದಾರಿ ನಡೆಸುವವರೆಗಿನ ವಿದ್ಯಾಭ್ಯಾಸ. ಹೊಸ ಶಿಕ್ಷಣವನ್ನು ಪಡೆದವರ ಸಂಖ್ಯೆ ಹದಿನೈದು.

ಹಳ್ಳಿಯ ಮುಖ್ಯ ಬೆಳೆ ಬತ್ತ, ಸೆಣಬು ಮತ್ತು ಬಟಾಣಿ. ಹಿಂಗಾರು ಬೆಳೆಯೂ ಕೆಲವೊಮ್ಮೆ ಚೆನ್ನಾಗಿ ಆಗುತ್ತದೆ.

# 3

ಡಿಸ್ಟ್ರಿಕ್ಟ್ ಬೋರ್ಡಿನಿಂದ ಕೆಲಸಗಾರರೆಲ್ಲಾ ಬಂದರು. ಬಾಲದೇವನ ಉತ್ಸಾಹಕ್ಕಂತೂ ಮಿತಿಯೇ ಇರಲಿಲ್ಲ. ತಹಸೀಲ್ದಾರರ ಮತ್ತು ರಾಮಕೃಪಾಲ ಸಿಂಗರ ಮುಂದೆಯೇ ಸಾಹೇಬರು ಅವನನ್ನು ದೇಶಭಕ್ತ ಎಂದಿದ್ದರು. ಅದನ್ನು ಎಲ್ಲರೂ ಕೇಳಿದ್ದರು. ಪ್ರಪಂಚದಲ್ಲಿ ಐಶ್ವರ್ಯ ಏನು ಮಹಾ! ತಹಸೀಲ್ದಾರರ ಹತ್ತಿರ, ಸಿಂಹಜಿಯವರ ಹತ್ತಿರ ಹಣವೇನೋ ಇದೆ. ಆದರೆ ಬಾಲದೇವನಿಗೆ ಸಿಕ್ಕಿದ ಗೌರವ ಬೇರೆಯವರಿಗೆ ಸಿಗುವುದು ಸಾಧ್ಯವೇ! ಯಾದವ ಪಂಗಡದವರು ಅದೇ ದಿನ ಬಾಲದೇವನಲ್ಲಿ ಕ್ಷಮೆ ಕೇಳಿಕೊಂಡಿದ್ದರು.

"ಅಣ್ಣಾ ಬಾಲದೇವ್, ಎಷ್ಟಾವರೂ ನಾವು ಮೂರ್ಖರು. ನೀನು ಜ್ಞಾನಿ. ನಾವು ಕೂಪಮಂಡೂಕಗಳು. ನೀನಾದರೋ ದೇಶ ವಿದೇಶಗಳನ್ನು ಸುತ್ತಿ ಬಂದಿದ್ದೀಯೆ. ದೊಡ್ಡ ದೊಡ್ಡ ಮನುಷ್ಯರ ಪರಿಚಯವಿದೆ. ನಮ್ಮ ತಪ್ಪನ್ನು ಕ್ಷಮಿಸಿಬಿಡು."

ಆದಿನದಿಂದಲೇ ಖೇಲಾವನಸಿಂಹ ಯಾದವ ತಮ್ಮ ಮನೆಯಲ್ಲೇ ಇರುವಂತೆ ಬಾಲದೇವನನ್ನು ಒತ್ತಾಯ ಮಾಡುತ್ತಿದ್ದ.

"ಜಾತಿಯ ಹೆಸರು, ಜಾತಿಯ ಗೌರವ ಇರುವುದೇ ನಿಮ್ಮಂತಹವರ ಕೈಯಲ್ಲಿ. ಇಷ್ಟಕ್ಕೂ ನೀನೇನು ಬೇರೆಯವನೇ?

ನಿಮ್ಮ ಚಿಕ್ಕಮ್ಮ ನಮ್ಮ ಚಿಕ್ಕಪ್ಪನ ಹೆಂಡತೀ ತಾನೇ. ಆದ್ದರಿಂದ ನಾವಿಬ್ಬರೂ ಅಣ್ಣತಮ್ಮಂದಿರೇ ಆದೆವು!"

ಖೇಲಾವನನ ಮನೆಯಾಕೆ ಸ್ವತಃ ತಾನೇ ಹೋಗಿ ಬಾಲದೇವನ ಮುದುಕಿ ಚಿಕ್ಕಮ್ಮನ ಹತ್ತಿರ ಹೇಳಿ ಬಂದಳು:

"ಮನೆ ಭೂಮಿ ಎಲ್ಲಾ ನಿಮ್ಮದೇ. ಒಬ್ಬ ಹಿರಿಯ ಮುದುಕಿ ಮನೆಯಲ್ಲಿಲ್ಲದ ಮೇಲೆ ಅದೂ ಒಂದು ಮನೆಯೇ? ನಾನೊಬ್ಬಳೇ ಏನೇನೂ ಅಂತ ನೋಡ್ಕೊಳ್ಳಲಿ? ಹಾಲು ಕರೀಲೋ, ಅಡಿಗೆ ಮಾಡಲೋ?"

ಬಾಲದೇವನ ಚಿಕ್ಕಮ್ಮನ ಅದೃಷ್ಟವೇ ಬದಲಾಗಿ ಹೋಯಿತು. ನಿನ್ನೆ ಮೊನ್ನೆಯವರೆಗೆ ಮನೆ ಮನೆಗೆ ಹೋಗಿ ಬೀಸಿ ಕುಟ್ಟಿ ಜೀವನ ಮಾಡು

ತ್ತಿದ್ದವಳನ್ನು ಇಂದು ಹಳ್ಳಿಗೇ ಯಜಮಾನಿಯಾದವಳು ಬಂದು ಕರೆದುಕೊಂಡು ಹೋಗಿ ತನ್ನ ಮನೆಗೆ ಯಜಮಾನಿಯನ್ನಾಗಿ ಮಾಡಿದಳು.

ಸರ್ಕಾರಿ ಕೆಲಸಗಾರರು ಬಂದರು. ಬಾಲದೇವ ಹಳ್ಳಿಯಲ್ಲೆಲ್ಲಾ ಸುತ್ತಾಡಿದ. ಡಿಸ್ಟ್ರಿಕ್ ಬೋರ್ಡಿನಿಂದ ಕೆಲಸಗಾರರು ಬಂದಿದ್ದಾರೆ. ನಾಳೆಯಿಂದ ಕೆಲಸ ಆರಂಭವಾಗಬೇಕು····ಮಲೇರಿಯಾ ಜ್ವರ ಬರುವುದು, ಸೊಳ್ಳೆ ಕಚ್ಚು ವುದರಿಂದ. ಆದರೆ ಕ್ವಿನೈನ್ ತಿಂದರೆ ಎಷ್ಟೇ ಸೊಳ್ಳೆ ಕಚ್ಚಿದರೂ ಏನೂ ಆಗುವುದಿಲ್ಲ.

ತತಮಾ ಸಂಗಡದ (ತಂತ್ರಿಮಾ ಕ್ಷತ್ರಿಯ ಸಂಗಡ) ಮಹಂಗೂದಾಸನ ಮನೆಯ ಹತ್ತಿರ ಬಾಲದೇವ್ ಈ ಮಾತುಗಳನ್ನು ಹೇಳುತ್ತಿದ್ದಾಗ ಜನ ಆಶ್ಚರ್ಯದಿಂದ ಕೇಳುತ್ತಿದ್ದರು. ಅಂಗಳದಲ್ಲಿ ಹೆಂಗಸರೂ ಮುಖದ ಮೇಲೆ ಸೆರಗು ಹಾಕಿಕೊಂಡು ಬಾಗಿಲಿನ ಮರೆಯಲ್ಲಿ ನಿಂತು ಕೇಳಿಸಿಕೊಂಡರು.

ಆಗ ರಾತ್ರಿಯೆಲ್ಲಾ ಬೆರಣಿ ಸುಟ್ಟು ಹೊಗೆ ಮಾಡಬೇಕಾದ ಕಾಟವಿಲ್ಲ. ಎಷ್ಟು ಸೊಳ್ಳೆ ಬೇಕಾದರೂ ಕಡಿಯಲಿ, ಏನೂ ಆಗುವುದಿಲ್ಲ.

ಪೋಲಿಯಾ ತಂತ್ರಿಮಾ ಕ್ಷತ್ರಿ, ಯದುವಂಶಿ ಕ್ಷತ್ರಿ, ಗಹಲೋತ್ ಕ್ಷತ್ರಿ, ಕೂರ್ಮ ಕ್ಷತ್ರಿ, ಧನುಷ್‌ಧಾರಿ ಕ್ಷತ್ರಿ, ಕುಶವಾಹಾ ಕ್ಷತ್ರಿ ಮತ್ತು ರೈದಾಸ ಸಂಗಡದ ಜನರೆಲ್ಲಾ ವಚನ ಕೊಟ್ಟರು.

"ಇನ್ನು ಏಳು ದಿನಗಳು ಯಾವ ಕೆಲಸವನ್ನೂ ಮಾಡುವುದಿಲ್ಲ. ಮಾಲೀಕರ ಹತ್ತಿರ ಹೇಳಿಬಿಡೋಣ. ನೇಗಿಲು, ಆ ಗುದ್ದಲಿ ಎಲ್ಲಾ ಒಳಗಡೆ ಇಟ್ಟುಬಿಡಲಿ. ಏನು ಮಾಡೋದಕ್ಕಾಗುತ್ತೆ....ಡಾಕ್ಟರಿಗೋಸ್ಕರ ಒಂದು ಕೊಠಡಿ, ಒಂದು ಆಸ್ಪತ್ರೆಗೆ, ಇನ್ನೊಂದು ಅಡಿಗೆ ಮನೆ, ಇನ್ನೊಂದು ರೂಮು ಹೆಚ್ಚಿಗೆ ಇರಲಿ. ಏಳು ದಿನದಲ್ಲಿ ಎಲ್ಲಾ ಸಿದ್ಧವಾಗಿಹೋಗುತ್ತೆ.

ಧನುಷ್‌ಧಾರಿ ಸಂಗಡದ ತನುಕಲಾಲ ಒಂದು ಪ್ರಶ್ನೆಯನ್ನೆತ್ತಿದ.

"ಆದರೆ ಉಳುವ ಬಿತ್ತುವ ಕೆಲಸವನ್ನೆಲ್ಲಾ ನಿಲ್ಲಿಸಿಬಿಟ್ಟರೆ ಮಾಲೀಕರು ಕೂಲಿ ಹ್ಯಾಗೆ ಕೊಡ್ತಾರೆ?"

ಒಂದೆರಡು ದಿನದ ವಿಚಾರ ಆದ್ರೆ ಪರವಾಗಿರಲಿಲ್ಲ. ಏಳು ದಿನ ಕೂಲಿ ಇಲ್ಲದೆ ಏನು ಮಾಡೋದು ? ಇದು ಸ್ವಲ್ಪ ಕಷ್ಟವೇ····ತತಮಾ ಸಂಗಡ, ದುಸಾಥ್ ಸಂಗಡದವರ ವಿಚಾರ ಬೇರೆ. ಅವರ ಹೆಂಗಸರೇ ಏನಾದರೂ

ಮಾಡ್ತಾರೆ. ಬೆಳಗ್ಗಿನಿಂದ ಮಧ್ಯಾಹ್ನದವರೆಗೆ ಕಮಲಾ ನದಿಯಲ್ಲಿ ಕೂತು ಒಂದೆರಡು ಸೇರಿನಷ್ಟು ಮೀನು ಹಿಡಿದುಕೊಂಡು ಬರ್ತಾರೆ. ಅದು ನಾಲ್ಕು ಸೇರು ಅಕ್ಕಿಗೆ ಸಮನಾಗುತ್ತೆ. ಮಾಲೀಕರ ಹುಲ್ಲು ಮೆದೆಗಳ ಹತ್ತಿರ ನೆಲ ಕೊರೆದು ಹೆಗ್ಗಣಗಳ ಬಿಲಗಳನ್ನು ಕೊರೆದು ಹಾಕಿ, ಅಲ್ಲೂ ಒಂದಿಷ್ಟು ಅಕ್ಕಿ ಸಂಗ್ರಹ ಮಾಡಿಬಿಡ್ತಾರೆ. ಅದೂ ಇಲ್ಲ ಅಂದರೆ, ಕಾಡಿಗೆ ಹೋಗಿ ಆಲೂಗೆಡ್ಡೆ ಕಿತ್ತು ತಂದರೂ ಆಯಿತು. ಕೌತಹಟ್ ಸಂತೆಯಲ್ಲಿ ಚೂರು ಉಪ್ಪು ಕಾರ ಹಾಕಿಕೊಟ್ಟರೆ ಕೂಲಿ ಜನ ನಾಲ್ಕಾಣೆ ಕೊಟ್ಟು ಕೊಂಡು ತಿನ್ನುತ್ತಾರೆ. ಆದರೆ ಬೇರೆಯವರಿಗೆ ತುಂಬಾ ಕಷ್ಟ..

ಬಾಲದೇವ ನಿರಾಶೆಯಿಂದ ಪ್ರಶ್ನಿಸಿದ, "ಹಾಗಾದರೆ ಏನು ಮಾಡೋದು?" ತನುಕಲಾಲ ಸಮಸ್ಯೆಗೆ ಪರಿಹಾರವನ್ನೂ ಮೊದಲೇ ಸಿದ್ಧ ಮಾಡಿಟ್ಟುಕೊಂಡಿದ್ದ. ಅವನೆಂದ;

"ಇದಕ್ಕೆ ಒಂದು ಉಪಾಯ ಇದೆ. ಮಾಲೀಕರು ಅರ್ಧ ದಿನದ ಕೂಲಿ ಯನ್ನಾದರೂ ಕೊಟ್ಟರೆ ಸಮಸ್ಯೆ ಬಗೆಹರಿಯುತ್ತದೆ."

ತನುಕಲಾಲನ ಪ್ರಸ್ತಾಪದ ಬಗ್ಗೆ ಆಲೋಚನೆ ಮಾಡುತ್ತಾ ಬಾಲದೇವ, ಮಾಲೀಕ ಪಂಗಡದ ಕಡೆ ನಡೆದ····ವಿಶ್ವನಾಥ ಬಾಬುಗಳೇನೋ ಒಪ್ಪುತ್ತಾರೆ ····ಆದರೆ ಸಿಂಹಜೀಯವರ ವಿಚಾರ ಹೇಳುವುದು ಕಷ್ಟ. ಸಿಪಾಯಿ ಪಂಗಡದ ಬಿರಜೂಸಿಂಗ್ ನಿನ್ನೆಯೇ ಹೇಳುತ್ತಿದ್ದ:

"ಸಿಂಹಜೀ ಆಸ್ಪತ್ರೆಗೆ ಯಾವ ಸಹಾಯವನ್ನೂ ಮಾಡೋದಿಲ್ವಂತೆ. ಆಸ್ಪತ್ರೆಯ ಯಜಮಾನರು ವಿಶ್ವನಾಥ ಮತ್ತು ಬಾಲದೇವ ಅಂತ ಹೇಳ್ತಿದ್ರು."

ಬ್ರಾಹ್ಮಣ ಪಂಗಡದವರಿಂದ ಯಾವುದೇ ಸಹಾಯವನ್ನು ಅಪೇಕ್ಷಿಸುವುದೂ ವ್ಯರ್ಥ. ಆಸ್ಪತ್ರೆ ಆರಂಭವಾಗುವ ವಿಚಾರ ಕೇಳಿದಾಗಿನಿಂದ, ಅವರು ಡಾಕ್ಟರು ಮತ್ತು ಇಂಗ್ಲೀಷ್ ವೈದ್ಯದ ಬಗ್ಗೆ ವಿಧವಿಧವಾದ ಕಥೆಗಳನ್ನು ಹೇಳುತ್ತಾ ತಿರುಗುತ್ತಿದ್ದರು. "ರೋಗವನ್ನು ಹರಡುವವರೇ ಡಾಕ್ಟರು. ಸೂಜಿ ಚುಚ್ಚಿ ದೇಹದಲ್ಲಿ ವಿಷ ತುಂಬಿಬಿಡ್ತಾರೆ. ಮುಂದೆ ಮನುಷ್ಯ ದುರ್ಬಲನಾಗಿಬಿಡ್ತಾನೆ. ಕಾಲರಾ ಬಂದಾಗ ಬಾವಿಗಳಲ್ಲೆಲ್ಲಾ ಔಷಧಿ ಹಾಕಿಬಿಡ್ತಾರೆ. ಹಳ್ಳಿಗೆ ಹಳ್ಳೀನೇ ಕಾಲರಾದಿಂದ ಸ[illegible] ನಾಶವಾಗಿ ಹೋಗುತ್ತೆ. ಕಪ್ಪುಜ್ವರದ ಹೆಸರನ್ನಾದರೂ ಹಿಂದೆ ಜನ ಕೇಳಿ[illegible]ೇನು? ಪೂರ್ವ ದೇಶಗಳಿಂದ ಕಪ್ಪುಜ್ವರ ಬಂದವರ ರಕ್ತವನ್ನು ಶೀಷೆಗಳಲ್ಲಿ ತುಂಬಿಕೊಂಡು ಇಲ್ಲಿಗೆ ತಂದವರು ಇವರೇ! ಈಗ ಯಾರ ಮನೇಲಿ

ನೋಡಿದರೂ ಕಪ್ಪುಜ್ವರ ಹರಡಿಬಿಟ್ಟಿದೆ····ಇಷ್ಟೇ ಅಲ್ಲ. ವಿಲಾಯತೀ ಔಷಧಿಗಳಲ್ಲಿ ಹಸುವಿನ ರಕ್ತ ಬೆರಸಿರ್ತಾರೆ····"

ಭಗವಾನ್ ಭಗತ್‌ನ ಅಂಗಡಿಯ ಹತ್ತಿರವೇ ವಿಶ್ವನಾಥಬಾಬು ಭೇಟಿಯಾದರು. ತನುಕಲಾಲನ ಸಲಹೆಯನ್ನು ಕೇಳಿದ ಕೂಡಲೇ ಅವರು ರೇಗಿದರು····"ಆ ಧಾನುಕ ಪಂಗಡದ ತನುಕಲಾಲ ತಾನೇ? ತಾನೊಬ್ಬ ದೊಡ್ಡ ಬುದ್ಧಿವಂತ ಅಂದ್ಕೊಂಡುಬಿಟ್ಟಿದ್ದಾನೆ!

ಪ್ರತಿ ಮಾತಿಗೂ ಒಂದಲ್ಲ ಒಂದು "ಆದರೆ" ಸೇರಿಸದೇ ಇರೋದೇ ಇಲ್ಲ. ಬಾಲದೇವ ಸೀನೊಬ್ಬ ಭೋಳೆ ಮನುಷ್ಯ. ಅವನನ್ನೇ ಕೇಳಬೇಕಾಗಿತ್ತು. ಆಸ್ಪತ್ರೆಯಿಂದ ಉಪಯೋಗ ಆಗೋದು ಬರೀ ದೊಡ್ಡ ಮನುಷ್ಯರಿಗೆ ಮಾತ್ರ ಏನು?"

ಭಗವಾನ್ ಭಗತ್ ಯಾವಾಗಲೂ ಅಡಿಕೆ ಬಾಯಲ್ಲಿಟ್ಕೊಂಡೇ ಇರುತ್ತಾನೆ. ಆದ್ದರಿಂದ ಅವನು ಮಾತನಾಡಿದರೆ ಅಕ್ಷರಗಳನ್ನು ಅಗಿಯುತ್ತಿದ್ದಾನೇನೋ ಅನ್ನಿಸುತ್ತದೆ. ಅವನೆಂದ:

"ಅರೆ, ಇದು ಹತ್ತು ಜನರ ಕೆಲಸ. ಎಲ್ಲರೂ ಸೇರಿದರೆ ಈ ಕೆಲಸ ಆಗೋದು."

ಭಗತ್‌ನ ಅಂಗಡಿಯ ಮುಂದೆ ಸಾಮಾನ್ಯವಾಗಿ ನಾಲ್ಕಾರು ಜನ ಇದ್ದೇ ಇರುತ್ತಾರೆ.

ವಿಶ್ವನಾಥಪ್ರಸಾದರ ಧ್ವನಿ ಕೇಳಿದ ಮೇಲೆ ಇನ್ನೂ ನಾಲ್ಕಾರು ಜನ ಬಂದು ಸೇರಿದರು. ಮುದುಕ ಸುಮರಿತದಾಸನನ್ನು ಜನ ಸುಳ್ಳನೆಂದೇ ನಂಬಿದ್ದಾರೆ. ಆದರೆ ಒಂದೊಂದು ಸಮಯ ಅವನು ಒಳ್ಳೆ ಉಪಯುಕ್ತ ವಿಚಾರವನ್ನು ತಿಳಿಸುತ್ತಾನೆ. ಅವನು ಬಂದ ಕೂಡಲೇ ಹೇಳಿದ:

"ತಹಸೀಲ್ದಾರ್ ಸಾಹೆಬ್ ನಿಮಗೆ ಗೊತ್ತಿಲ್ಲ. ತನುಕಲಾಲ ಹೇಳಿರೋದು ಅವನ ಸ್ವಂತ ಮಾತನ್ನಲ್ಲ. ಅದು ಬೇರೆಯವರ ಮಾತು. ಸ್ವಲ್ಪ ಈ ಕಡೆ ಬನ್ನಿ, ಗುಟ್ಟಾಗಿ ಹೇಳ್ತೀನಿ."

ತಹಸೀಲ್ದಾರರು ಸುಮರಿತದಾಸರಿಬ್ಬರೂ ಅಂಗಡಿಯಿಂದ ಸ್ವಲ್ಪ ದೂರ ಹೋಗಿ ಮಾತನಾಡಲಾರಂಭಿಸಿದರು. ಅಂಗಡಿಯಲ್ಲಿ ಕೂತಿದ್ದವನೊಬ್ಬ ಸಿಟ್ಟಿನಿಂದ ಹೇಳಿದ: "ಇವನೊಬ್ಬ ಹಲ್ಕಾ ಮನುಷ್ಯ. ಎಲ್ಲಾ ಮಾತಿಗೂ ಗುಟ್ಟು."

ಭಗತ್ ಕಣ್ಣು ಮಿಟುಕಿಸಿ ಪಿಸುಗುಟ್ಟಿದ. "ಹುಶ್, ಹಾಗೆಲ್ಲಾ ಮಾತಾಡ ಬೇಡ, ಬಾಲದೇವ ಇದ್ದಾನೆ."

ಸುಮರಿತದಾಸನೊಂದಿಗೆ ಏಕಾಂತವಾಗಿ ಮಾತನಾಡಿದ ಮೇಲೆ ತಹ ಸೀಲ್ದಾದರ ಸ್ವಭಾವವೇ ಬದಲಾಗಿ ಹೋಯಿತು. ಅವರು ಹೇಳಿದರು:

"ಒಳ್ಳೇದು, ಬಾಲದೇವ, ತತಮಾ ಪಂಗಡ ಮತ್ತು ಪೋಲಿಯಾ ಪಂಗಡದವರಿಗೆ ಹೋಗಿ ಹೇಳು, ನಾನು ಐವತ್ತು ರೂಪಾಯಿಗಳನ್ನು ಬಿಟ್ಟಿದ್ದೇನೆ ಎಂದು. ಆವತ್ತು ಆಫೀಸರಿಗೆ ಕೊಟ್ಟ ಸಾಮಾನುಗಳನ್ನು ನೀನೂ ನೋಡಿದೆ. ವಿರಂಚಿಯೂ ಇದ್ದ.... ಇನ್ನು ನೀನು ಸಿಪಾಯಿ ಪಂಗಡಕ್ಕೆ ಹೋಗು. ಅವರೇನು ಹೇಳ್ತಾರೋ ನೋಡೋಣ. ನಮಗಾದಷ್ಟು ಧರ್ಮ ನಾವು ಮಾಡ್ತೀವಿ."

ಬಾಲದೇವ ಸಿಂಗಜೀಯವರ ಮನೆಗೆ ಹೋದಾಗ ಅವರು ಕುದುರೆಯೇರಿ ಹೊರಟಿದ್ದರು. ಎಲ್ಲಿಗೋ ಹೊರಟವರನ್ನು ತಡೆಯುವುದು ಸೂಕ್ತವಲ್ಲ. ಆದ್ದರಿಂದ ಬಾಲದೇವ ಸುಮ್ಮನಾದ. ಸಿಂಗಜೀಯವರ ಮನೆಯ ಮುಂದೆ ಆರೇಳು ಜನ ಕುಳಿತಿದ್ದರು.

ಯಾರೂ ಬಾಲದೇವನಿಗೆ ಕುಳಿತುಕೊಳ್ಳುವಂತೆಯೂ ಹೇಳಲಿಲ್ಲ. ಬಾಲದೇವ ಎಲ್ಲರಿಗೂ ಒಟ್ಟಾಗಿ ಜೈಹಿಂದ್ ಹೇಳಿದ. ಶಿವಶಂಕರಸಿಂಗನ ಮಗ ಹರಗೌರಿ ಬಾಲದೇವನನ್ನು ಕೇಳಿದ:

"ಲೀಡರ್ ಬಾಲದೇವ್ ಅವರೇ, ಏನು ಸಮಾಚಾರ?"

"ನಿಮ್ಮ ದಯದಿಂದ ಎಲ್ಲಾ ಚೆನ್ನಾಗಿದೆ....ಬಾಬೂಜೀ, ನೀವು ಸ್ಕೂಲಿನಿಂದ ಯಾವಾಗ ಬಂದಿರಿ?" ಹತ್ತಿರದಲ್ಲಿದ್ದ ಮೋಡಾದ ಮೇಲೆ ಕುಳಿತುಕೊಳ್ಳುತ್ತಾ ಬಾಲದೇವ ಕೇಳಿದ:

"ನಿಮ್ಮ ಲೀಡರ್‌ಶಿಪ್ ತುಂಬಾ ಜೋರಾಗಿ ನಡೀತಿದೆ ಅಂತ ಕೇಳಿದೆ."

"ಬಾಬೂ, ನಾನೊಬ್ಬ ಬಡ ಮನುಷ್ಯ. ನಾನೆಂಥ ಲೀಡರಾಗ್ತೀನಿ? ಎಷ್ಟಾದರೂ ನಾನು ನಿಮ್ಮ ಸೇವಕ."

"ನೀನೂ ಲೀಡರ್ ಆಗಿಬಿಟ್ರೆ ಕಾಂಗ್ರೆಸ್ ಆಫೀಸಿನಲ್ಲಿ ಕಸ-ಮುಸುರಿ ಮಾಡೋರ್‍ಯಾರು?" ಹರಗೌರಿ ಇದ್ದಕ್ಕಿದ್ದಂತೆ ಸಿಟ್ಟಿನಿಂದ ಒದರಿದ.

"ಎಲ್ಲರೂ ಕಾಶೀಗೆ ಹೊರಟುಹೋಗ್ತೀರೇನು? ಎಲೆ ಎತ್ತೋದಕ್ಕೂ ಕೆಲವರು ಬೇಕಲ್ಲ. ಜೈಲಿಗೆ ಹೋಗಿಬಂದ ಮಾತ್ರಕ್ಕೆ ಜವಹರಲಾಲ್ ನೆಹರೂ ಆಗಿಬಿಟ್ಟೆ ಅಂದುಕೊಂಡ್ಯೇನು? ಕಾಂಗ್ರೆಸ್ ಆಫೀಸಿನಲ್ಲಿ ಮಾಡ್ತಿದ್ದದು

ಜವಾನನ ಕೆಲಸ. ಕುರುಡರಲ್ಲಿ ಒಕ್ಕಣ್ಣ ವಾಸಿ ಅಂದ್ಕೊಂಡು ಇಲ್ಲಿ ಬಂದು ಲೀಡರಾಗಿ ಮೆರೆಯೋಣ ಅಂದ್ಕೊಂಡಿದೀಯೇನು? ಸ್ವಯಂಸೇವಕನಂತೆ!—ಕುದುರೇ ಬಾಲ."

"ಬಾಬೂಜಿ, ಸುಮ್ಮನೆ ಬಾಯಾಕೆ ನೋಯಿಸಿಕೊಳ್ತೀರಿ. ಎಷ್ಟಾದರೂ ನೀವು ವಿದ್ಯಾವಂತರು. ನಾವು ದಡ್ಡರು. ನನ್ನಿಂದ ಏನಾದರೂ ತಪ್ಪಾಗಿದ್ರೆ ತಿಳಿಸಿ."

"ಎದ್ದು ಹೋಗಯ್ಯ ಸಾಕು. ಮೋಸಗಾರ, ಡಿಸ್ಟ್ರಿಕ್ಟ್ ಬೋರ್ಡಿನಿಂದ ಮಂಜೂರಾಗಿ ರೂಪಾಯಿ ಸಿಕ್ಕಿದೆ. ಗಲಾಟೆಯಿಲ್ಲದೆ ಎಲ್ಲ ಜೇಬಿಗೆ ಬಿಟ್ಟು ಈಗ ಬಿಟ್ಟಿ ಕೆಲಸ ಮಾಡೋರನ್ನ ಹುಡಕ್ಕೊಂಡು ಹೊರಟಿದ್ದಾನೆ! ಎದ್ದು ಆಚೆ ಹೋಗಯ್ಯ."

ಸಿಟ್ಟಿನಿಂದ ಕುದಿಯುತ್ತಾ ಹರಗೌರಿ ಬಾಲದೇವನನ್ನು ತಳ್ಳುವುದಕ್ಕೆ ಮುಂದೆ ನುಗ್ಗಿದ. ಸುತ್ತಲಿದ್ದವರೆಲ್ಲಾ "ಹೋ ಹೋ" ಎನ್ನುತ್ತಾ ಹರಗೌರಿಯನ್ನು ತಡೆದರು. ಬಾಲದೇವ ಸುಮ್ಮನೆ ಕುಳಿತೇ ಹೇಳಿದ.

"ಹೊಡೀರಿ. ನನ್ನ ಹೊಡೆಯೋದ್ರಿಂದ ನಿಮ್ಮ ಕೋಪ ತಣ್ಣಗಾಗೋದಾದ್ರೆ ಹೊಡೀರಿ."

ಗಲಾಟೆಯನ್ನು ಕೇಳಿ ಗುಂಪು ಸೇರಿತು. ಹರಗೌರಿಯ ದುಡುಕು ಯಾರಿಗೂ ಇಷ್ಟವಾಗಲಿಲ್ಲ. ಆಗ ಅಲ್ಲಿಗೆ ಬಂದ ಶಿವಶಂಕರಸಿಂಗನೂ ಇದನ್ನು ಕೇಳಿ ಮಗನಲ್ಲಿ ಅಸಮಾಧಾನಗೊಂಡ.

"ಲೀಡರೀಯಾದರೂ ಮಾಡಲಿ, ಜವಾನನ ಕೆಲಸವಾದರೂ ಮಾಡಲಿ, ಅದರಿಂದ ನಿನಗ್ಯಾಕೆ ಸಿಟ್ಟು ಬರಬೇಕು? ನಿನಗಾದ ನಷ್ಟವೇನು?—ಬಾಲದೇವ, ನೀನು ತಪ್ಪುತಿಳ್ಕೋಬೇಡ....ಅವನು ನಿನ್ನ ತಮ್ಮನ ಹಾಗೆ...."

"ಶಿವಶಂಕರಚಿಕ್ಕಪ್ಪ, ಬಾಬೂಜಿ ಚೆನ್ನಾಗಿ ಬೈದರು, ಹೊಡೆಯೋದಕ್ಕೂ ಬಂದರು. ಆದರೆ ನನ್ನ ಬಾಯಿಂದ ಒಂದು ಅಪಶಬ್ದವೂ ಬರಲಿಲ್ಲವಲ್ಲ. ಬೇಕಾದರೆ ಎಲ್ಲರನ್ನೂ ನೀವೇ ಕೇಳಿ. ಮಹಾತ್ಮಾಜೀ ಹೇಳ್ತಿದ್ರು...."

ಬೇವಿನ ಮರದ ಮೇಲೆ ಕೂತಿದ್ದ ಕಾಗೆ 'ಕಾ—ಕಾ' ಎಂದಿತು.

ಹರಗೌರಿ ಸಿಟ್ಟಿನಿಂದ ಥರ-ಥರ ಕಂಪಿಸುತ್ತಿದ್ದ. ಈ ಜನ ತುಂಬಾ ವಿಚಿತ್ರದವರು. ಒಂದು ಗಂಟೆಗೆ ಮುಂಚೆ ಬಾಲದೇವನ ಮೇಲೆ ಒಂದು ಹೊರೆ ಆರೋಪಣೆಗಳನ್ನು ಹೊರಿಸ್ತಾ ಕೂತಿಸ್ತಾ ಲೀಡರ್ ಆಗಿ ಮೆರೀತಿದಾನೇ

ಅಂತ ಆಕ್ಷೇಪಣೆ ಮಾಡ್ತಿದ್ರು. ಈಗ ನೋಡಿದ್ರೆ ತನ್ನ ತಂದೆಯೂ ಬಾಲದೇವನ ಪಕ್ಷವನ್ನೇ ವಹಿಸಿ ಮಾತನಾಡುತ್ತಿದ್ದಾನೆ....ಹೂಂ....ಗೊಲ್ಲ....ಇವನಿಗೆ ಲೀಡರೀ ಬೇರೆ ಕೇಡು...

"ಯಾದವ ಪಂಗಡದವರು ಹೊಡೆದಾಟಕ್ಕೆ ಸಿದ್ಧವಾಗಿ ಬರುತ್ತಿದ್ದಾರೆ" ಒಬ್ಬ ಹುಡುಗ ಓಡುತ್ತಾ ಬಂದು ಏದುಬ್ಬಸದಿಂದ ಹೇಳಿದ....ಹಳ್ಳಿಯ ಉತ್ತರದಲ್ಲಿ ಗಲಾಟೆಯಾಗುತ್ತಿದೆ. ಕಟ್ಟಿರುವ ಎತ್ತುಗಳು ಕಿವಿ ನಿಮಿರಿಸಿ ನಿಂತುಕೊಂಡಿವೆ. ಹಳ್ಳಿಯ ಹೊರಗಡೆ ಮೇಯುತ್ತಿದ್ದ ಕುರಿಗಳು ಬೆದರಿ ಬ್ಯಾ ಬ್ಯಾ ಎನ್ನುತ್ತಾ ಹಳ್ಳಿಯ ಕಡೆ ಓಡಿ ಬರುತ್ತಿವೆ. ನಾಯಿಗಳು ಬೊಗಳುತ್ತಿವೆ....ವಿಚಾರ ವಿಸಿರಬಹುದು?

"ಮಗೂ ಗೌರೀ....ಒಳಗೆ ಬಂದುಬಿಡು ಮಗೂ. ಯಾದವ ಪಂಗಡದ ಕಲಿಯ ಹುಚ್ಚನ ಹಾಗೆ ಬರ್‍ತಿದಾನೆ."—ಹರಗೌರಿಯ ತಾಯಿ ಎದೆ ಒಡಿದು ಕೊಂಡು ಅಳುತ್ತಾ ಬಂದಳು. ಹರಗೌರಿಯನ್ನು ಎಳೆದುಕೊಂಡೇ ಒಳಗೆ ಹೋದಳು. ಮಕ್ಕಳೆಲ್ಲಾ ಅಳಲಾರಂಭಿಸಿದರು.

"ಏನ್ಸಮಾಚಾರ?

"ಕತ್ತಿ ಹಿಡಿದುಕೊಂಡಿದ್ದಾನೆ."

"ನನ್ನ ಲಾಠಿ ಎಲ್ಲಿ?"

"ಬಾಣ ತೆಗೆಯಪ್ಪಾ."

"ಏನ್ಸಮಾಚಾರ? ಈ ಗಲಾಟೆ ಎಲ್ಲಾ ಯಾಕೆ?"

ಯಾರು ಯಾರಿಗೆ ಉತ್ತರ ಹೇಳಬೇಕು? ಯಾರಿಗೆ ಬಿಡುವಿದೆ? ಇಡೀ ಹಳ್ಳಿಯಲ್ಲೇ ಗಲಾಟೆ ಹಬ್ಬಿತು. ಹರಗೌರಿಯ ತಾಯಿ ಶಿವಶಂಕರ ಸಿಂಗನನ್ನೂ ಒಳಗಡೆ ಕರೆಯುತ್ತಾ ಕಿರುಚಾಡುತ್ತಿದ್ದಳು.

"ಆ ಪಂಗಡದ ಹಿರಿಯ ಕಾವಿಯೂ ಬಂದಿದ್ದಾನೆ....ಆ ಪಂಗಡದ ಮುದುಕರೂ ಮಕ್ಕಳೂ ಸಿಟ್ಟಿನಿಂದ ಕೂಗಾಡ್ತಿದಾರೆ....ನಮ್ಮ ಹರಗೌರಿ ಚಪ್ಪಲಿಯಿಂದ ಬಾಲದೇವನನ್ನ ಹೊಡೆದನಂತೆ....ಕುಕುರೂವಿನ ಮಗ ಕಲಚರಣ, ಹರಗೌರಿಯ ರಕ್ತವನ್ನೇ ಕೋಡಿ ಹರಿಸ್ತೇನಿ ಅಂತ ಕಾಳೀ ಮಾತೆಯ ಹೆಸರಿನಲ್ಲಿ ಪ್ರತಿಜ್ಞೆ ಮಾಡಿದ್ದಾನಂತೆ. ನೀವೂ!....ಒಳಗಡೆ ಬಂದುಬಿಡಿ....

ಬಾಲದೇವ ಓಡಿ ಬಂದ—

"ಓ, ನೀವು ಹೆದರಬೇಡಿ ಅಮ್ಮ, ನಾನಿದೀನಿ. ತಿಳುವಳಿಕೆ ಇಲ್ಲದ ಜನ. ಬುದ್ಧಿ ಹೇಳಿದ್ರಾಯ್ತು."

"ಒಂದು ಸಾರಿ ಪ್ರೀತಿಯಿಂದ ಎಲ್ಲರೂ ಹೇಳಿ····ಮಹಾತ್ಮಾಜೀಗೆ ಜಯವಾಗಲಿ" "ಜಯವಾಗಲಿ ಜಯವಾಗಲಿ."

ಬಾಲದೇವನನ್ನು ನೋಡಿದ ಕೂಡಲೇ ಯಾದವ ಸಂಗಡದವರು ಸಂತೋಷ ದಿಂದ ಜಯಜಯಕಾರ ಮಾಡಿದರು.

ಬಾಲದೇವ ಹೇಳಿದ:

"ಎಲ್ಲಿ ಎಲ್ಲರೂ ಒಂದು ಸಾರಿ ಪ್ರೀತಿಯಿಂದ ಹೇಳಿ: ಗಾಂಧೀ ಮಹಾತ್ಮ ರಿಗೆ ಜಯವಾಗಲಿ" "ಜಯವಾಗಲಿ ಜಯವಾಗಲಿ" "ಶಾಂತಿ, ಶಾಂತಿ, ಬಾಲದೇವ ಏನೋ ಹೇಳ್ತಿದಾನೆ, ಕೇಳಿ."

"ಪ್ರೀತಿಯ ಸೋದರರೇ, ನೀವು ಮಾಡುವುದಕ್ಕೆ ಹೊರಟಿರುವ ಈ ಅಂದೋಳನ ಸರಿಯಾಗಿಲ್ಲ. ತಮ್ಮ ಕಿವಿಯನ್ನು ನೋಡಿಕೊಳ್ಳದೆ ಕಾಗೆಯ ಹಿಂದೆ ಓಡುವುದು ಸರಿಯಲ್ಲ. ನೀವೇ ಯೋಚಿಸಿ. ಇದು ಬುದ್ಧಿವಂತರ ಕೆಲಸವೇನು? ····ನೀವು ಹಿಂಸೆ ಮಾಡಲು ಹೊರಟಿದ್ದೀರಿ····ಅದಕ್ಕಾಗಿ ನಾನೀಗ ಅನಶನ ಮಾಡಬೇಕಾಗಿದೆ. ಭಾರತಮಾತೆಯ, ಗಾಂಧೀ ಮಹಾತ್ಮರ ಮಾರ್ಗ ಇದಲ್ಲ····"

ಬಾಲದೇವ ನಿಜವಾಗಲೂ ಜ್ಞಾನಿ. ಅಂದೋಳನ, ಅನಶನ····ಇನ್ನೂ ಏನೇನೋ····ಅಹಿಂಸೆಯ ವಿಚಾರ····ಒಟ್ಟಿನಲ್ಲಿ ಯಾರಿಗೂ ಏನೂ ಅರ್ಥ ವಾಗಲಿಲ್ಲ.····ಜ್ಞಾನದ ಮಾತುಗಳನ್ನು ಅರ್ಥಮಾಡಿಕೊಳ್ಳುವುದು ಎಲ್ಲರಿಗೂ ಸಾಧ್ಯವೇನು!

"ಅನಶನ ಅಂದರೆ ಏನು ಮಾಡ್ತೀರಿ?"

"ಅರ್ಥವಿಲ್ಲದ ಮಾತು."

ಕಲಿಯ ಹೇಳಿದ

"ಬಾಲದೇವ್ ಉಪವಾಸ ಮಾಡ್ತಾರ." ಅವನನ್ನು ಕರೆದು ಬಾಲದೇವ ಬುದ್ಧಿ ಹೇಳಿದ: "ಕಾಳೀಚರಣ್, ನೀನು ವೀರ ಯುವಕ. ಆದರೆ ಉತ್ಸಾಹದ ಜೊತೆಗೆ ವಿವೇಕವೂ ಇರಬೇಕು. ನಾನು ಕ್ಷೇಮವಾಗಿದೀನಿ. ಆದರೆ ಉಪವಾಸ ಮಾಡ್ತೀನಿ····"

"ಬಾಲದೇವ ಸಮಯಕ್ಕೆ ಸರಿಯಾಗಿ ಬರದೇ ಇದ್ದಿದ್ರೆ ಕಾಳೀಚರಣ ಏನಾದರೂ ಅನರ್ಥ ಮಾಡಿಬಿಡ್ತಿದ್ದ····ಆ ಹರಗೌರಿ,····ನಿನ್ನೆ ಮೊನ್ನೆ ಹುಡುಗ, ಸ್ಕೂಲಿಗೆ ಹೋಗಿ ನಾಲ್ಕು ಅಕ್ಷರ ಕಲಿತ ಮಾತ್ರಕ್ಕೆ ತಾನೇ ವೈಸ್‌ರಾಯ್ ಅಂದ್ಕೊಂಡುಬಿಟ್ಟಿದ್ದಾನೆ."

"ಓದೋದೇನು ಬಂತು? ಗಡ್ಡ ಮೀಸೆ ಬೆಳೆದಿದೆ ಅಷ್ಟೆ. ನನ್ನ ಮಗ ಸಕಲದೀಪನಿಗಿಂತ ಎರಡು ಕ್ಲಾಸು ಕಡಿಮೇನೇ ಓದ್ತಿರೋದು. ಸದಾ ಫೇಲಾಗ್ತಿರ್ತಾನಂತೆ. ಈ ವರ್ಷವೂ ಫೇಲಾಗಿದ್ದಾನೆ. ಅವನಪ್ಪ ಮಾಸ್ಟರಿಗೆ ಲಂಚ ಕೊಡೋದಕ್ಕೆ ಹೋಗಿದ್ದನಂತೆ. ಮಾಸ್ಟರ್ ಸಿಟ್ಟಿನಿಂದ, 'ಇಲ್ಲಿಂದ ಓಡಿಹೋಗು ಇಲ್ಲದಿದ್ರೆ ನಿನ್ನೂ ಫೇಲ್ ಮಾಡಿಬಿಡ್ತೀನಿ' ಅಂದರಂತೆ!"

"ಅಯ್ಯೋ ಏನು ಓದ್ತಾನೆ. ಲಾಲಾಬಾಗ್ ಸಂತೆಯಲ್ಲಿ 'ಕೆಂಪು' ಏರೋದರಲ್ಲಿ ಪಾಸ್ ಆಗಿದ್ದಾನೆ, ಅಷ್ಟೆ."

"ಕೆಂಪು ಏರೋದೂ?"

ಮಾತು ಜೋಡಿಸುವುದರಲ್ಲಿ ಮಲರಿಯಾನ ಸಮನಿಲ್ಲ. ಅವನು ಕೇಳಿದ "ಕೆಂಪು ಏರೋದೂ ಅಂದ್ರೆ ಅರ್ಥವಾಗಲಿಲ್ಲವೇನು?....ಹ....ಹ.... ಹ····ಕೆಂಪು ಏರೋದು!"

ಧಾಕ್—ಧಿನ್ನಾ: ಧಾಕ್—ಧಿನ್ನಾ:

"ನಡಿಯಪ್ಪಾ ಕುಸ್ತೀಮನೆಯ ಡೋಲಿನ ಶಬ್ದ ಕೇಳಿಸ್ತಿದೆ."

## 4

ಸದ್ಗುರು! ಸದ್ಗುರು!

ಮಹಂತರು ಪ್ರತಿದಿನ ಬ್ರಾಹ್ಮೀ ಮುಹೂರ್ತಕ್ಕೇ ಎದ್ದುಬಿಡುತ್ತಾರೆ.

"····ಏ ರಾಮದಾಸ್, ಹಾಸಿಗೆ ಬಿಟ್ಟು ಏಳಯ್ಯ. ಲಕ್ಷ್ಮೀನೂ ಎಬ್ಬಿಸು ····ಸದ್ಗುರು....ಬೇರೆಯವರು ಎಬ್ಬಿಸಿದ ಹೊರತು ಇವರ್‍ಯಾರೂ ಏಳೋದೇ ಇಲ್ಲ. ರಾಮದಾಸ್, ಓ ರಾಮದಾಸ್...."

ರಾಮದಾಸ್ ಕಣ್ಣು ಹೊಸಕಿಕೊಳ್ಳುತ್ತಾ ಎದ್ದ. ಹೊರಗಡೆ ಬಂದು ಆಕಾಶದಲ್ಲಿ ಶುಕ್ರ ನಕ್ಷತ್ರವನ್ನು ನೋಡಿದ····ಇನ್ನೂ ರಾತ್ರಿ ಬಹಳ ಹೊತ್ತು ಉಳಿದಿದೆ····ಮಹಂತರು ಈವತ್ತು ಬಹಳ ಮುಂಚೆಯೇ ಎದ್ದುಬಿಟ್ಟಿದ್ದಾರೆ. ಮಾಘ ಮಾಸದ ಚಳಿ ಹುಲಿಯನ್ನೂ ತಣ್ಣಗೆ ಮಾಡಿಬಿಡುತ್ತದೆ. ಅಂತಹುದರಲ್ಲಿ····

"ಗುರುಗಳೇ, ರಾತ್ರಿ ಕಳೆಯೋದಕ್ಕೆ ಇನ್ನೂ ತುಂಬಾ ಸಮಯವಿದೆ."

"ಇದ್ದರೆ ಏನು? ಒಂದಿನ ಸ್ವಲ್ಪ ಮುಂಚೆ ಎದ್ದರೆ ನಷ್ಟವೇನು? ಮತ್ತೆ ಮಲಗಬೇಡ. ಒಲೆಗೆ ಇನ್ನೊಂದಿಷ್ಟು ಸೌದೆ ಹಾಕು····ಲಕ್ಷ್ಮಿಯನ್ನೂ ಎಬ್ಬಿಸು····ಸದ್ಗುರು ಈವತ್ತು ಒಂದು ಸ್ವಪ್ನ ತೋರಿಸಿದ····"

ಲಕ್ಷ್ಮಿ ಎದ್ದು ಮಹಂತರ ಆಸನದ ಹತ್ತಿರ ಬಂದು ನಿಂತಳು. ಕೈ ಜೋಡಿಸಿ ನಮಸ್ಕಾರ ಮಾಡಿದಳು. ನಂತರ ಕಣ್ಣು ಹೊಸಕಿಕೊಳ್ಳುತ್ತಾ ಬಾವಿಯ ಕಡೆ ಹೊರಟುಹೋದಳು.

····ಲಕ್ಷ್ಮಿಯ ನರನರದಲ್ಲೂ ಈಗ ಸಾಧು ಸ್ವಭಾವ. ಆಚಾರ-ವಿಚಾರಗಳು, ನಿಯಮಪಾಲನೆ, ಧರ್ಮಶ್ರದ್ಧೆ ಸೇರಿಹೋಗಿದೆ. ಸದ್ಗುರುವಿನ ದಯೆ! ಆದರೆ ಈ ರಾಮದಾಸ್! ಇವನ ಬುದ್ಧಿ ಯಾವಾಗ ಬದಲಾಗುತ್ತೋ ಗುರುವಿಗೇ ಗೊತ್ತು: ಚಿಕ್ಕಂದಿನಿಂದ ಸಾಧುಗಳ ಜೊತೆಯಲ್ಲಿದ್ದರೂ ಬದಲಾವಣೆ ಆಗದಿದ್ದವನು ಇನ್ಯಾವಾಗ ಬದಲಾಗ್ತಾನೋ?....ಹೊಟ್ಟೆ ತುಂಬಿಸಿಕೊಳ್ಳುವುದರಲ್ಲೇ ಇರುವವನಿಗೆ ಭಕ್ತಿಭಾವ ಎಲ್ಲಿಂದ ಬರಬೇಕು? ಅವನಲ್ಲಿ ಮೆಚ್ಚುವಂತಹುದು ಎರಡೇ ಗುಣಗಳು. ಒಂದು, ಸೇವೆ ಚೆನ್ನಾಗಿ ಮಾಡ್ತಾನೆ. ಮತ್ತೊಂದು ಖಂಜರ ನುಡಿಸೋದರಲ್ಲಂತೂ ಅವನ ಸಮವೇ ಇಲ್ಲ.

"ಓ ರಾಮದಾಸ್, ರಾಮದಾಸ್, ಓ····

ಮತ್ತೆ ಮಲಗಿಬಿಟ್ಯಾ?····ಕೊಡದಲ್ಲಿ ಗಂಗೆ ತುಂಬಿಡು.

ಜಾಗಹು ಸತಗುರು ಸಾಹೇಬ,
ಸೇವಕ ತುಹ್ಮಾರೆ ದರಸ್ ಕೋ ಆಯಾ ಜೀ
ಜಾಗಹು ಸತಗುರು ಸಾಹೇಬ····
ಭೋರ್ ಭಯೋ ಭವಭರಮ್ ಭಯಾನಕ್
ಭಾನು ದೇಖಕರ ಭಾಗಾಜೀ,

**ಜ್ಞಾನ ನೈನ ಸಾಹೇಬ ಕೆ ಖುಲಿ ಗಯೋ,**
**ಥರ್ ಥರ್ ಕಾಂಪತ ಮಾಯಾ ಜೀ.**
**ಜಾಗಹು ಸತಗುರು ಸಾಹೇಬ....**

"ಸದ್ಗುರುವೇ ಎಚ್ಚರಗೊಳ್ಳು. ನಿನ್ನ ಸೇವಕ ದರ್ಶನಕ್ಕಾಗಿ ಬಂದಿದ್ದಾನೆ. ಬೆಳಗಾಯ್ತು. ಭಯಂಕರವಾದ ಭವದ ಭ್ರಮೆ ಸೂರ್ಯನನ್ನು ನೋಡಿ ಓಡಿ ಹೋಯ್ತು. ಗುರು ಮಹಾರಾಜರ ಜ್ಞಾನನೇತ್ರ ತೆರೆದುಕೊಂಡೊಡನೆಯೇ ಮಾಯೆ ಥರ ಥರ ನಡುಗಲಾರಂಭಿಸಿತು. ಸದ್ಗುರುವೇ ಎಚ್ಚರಗೊಳ್ಳು."

ಮಾಘ ಮಾಸದ ಕೊರೆಯುವ ಮುಂಜಾವಿನ ಚಳಿಯಲ್ಲಿ, ಪ್ರಭಾತದ ನಿರ್ಗುಣವಾಣಿ ಮಠದಿಂದ ಹೊರಟು ಶೂನ್ಯದಲ್ಲಿ ಪ್ರತಿಧ್ವನಿಸುತ್ತಿದೆ. ವೃದ್ಧ ಮಹಂತರು ಮೊದಲ ನುಡಿಯನ್ನು ಹೇಳುತ್ತಾರೆ. ದಂತಹೀನ ಬಾಯಿಯಿಂದ ಹೊರಡುವ ಪ್ರಾರ್ಥನೆಯ ಶಬ್ದಗಳು ಸ್ಪಷ್ಟವಾಗಿರುವುದಿಲ್ಲ. ಗಂಟಲಿನ ಕಂಪನವೂ ಸ್ವರಕ್ಕೆ ಆಘಾತವನ್ನುಂಟುಮಾಡುತ್ತದೆ. ಅಪಸ್ವರ ಹೊರಡುತ್ತದೆ. ಉಬ್ಬಸ ದಿಂದ ಜರ್ಝರಿತವಾದ ಶರೀರದಲ್ಲಿ ಉಸಿರೇ ಇಲ್ಲ....ಆದರೆ ಲಕ್ಷ್ಮಿ ಆ ಲೋಪ ವನ್ನೆಲ್ಲಾ ತುಂಬಿಬಿಡುತ್ತಾಳೆ.

ಈಗ ಐದು ವರ್ಷಗಳ ಹಿಂದೆ ಪ್ರಭಾತದ ಪ್ರಾರ್ಥನೆಯ ಸಮಯದಲ್ಲಿ ಅವಳ ಕಣ್ಣುಗಳ ರೆಪ್ಪೆಗಳು ನಿದ್ದೆಯಿಂದ ಭಾರವಾಗೇ ಇರುತ್ತಿದ್ದವು.

ಮಹಂತರು ಭಜನೆಯ ಎರಡನೆಯ ಸಾಲು, "ಘೋರ ಭಯೋ ಭವ ಭರಮ್...." ಹೇಳಿದಾಗ ಅವಳಿಗೆ ನಗು ತಡೆಯುವುದು ತುಂಬಾ ಕಷ್ಟವಾಗು ತ್ತಿತ್ತು. ಆದರೆ ಈಗ ಹಾಗೇನೂ ಇಲ್ಲ. ಅವಳ ಧ್ವನಿ ಮಧುರವಾಗಿದೆ; ಉಚ್ಚಾರಣೆ ಸ್ಪಷ್ಟವಾಗಿದೆ. ಅವಳು ತನ್ಮಯಳಾಗಿ ಹಾಡುತ್ತಾಳೆ. ಅವಳ ಮಂಜುಳ ಸ್ವರದೊಂದಿಗೆ ಮಹಂತರ ಶೃತಿಹೀನವಾದ ದಪ್ಪ ಧ್ವನಿ ಸ್ವಲ್ಪವೂ ಕೂಡುವುದಿಲ್ಲ. ಆದರೂ ಸಂಗೀತದ ನಿರ್ಮಲ ಪ್ರವಾಹಕ್ಕೆ ಧಕ್ಕೆ ಬರುವುದಿಲ್ಲ.

ಮಹಂತರ ದಪ್ಪಧ್ವನಿ ಲಕ್ಷ್ಮಿಯ ಕೋಮಲ ಸ್ವರಕ್ಕೆ ಆಧಾರ ಕೊಡುತ್ತದೆ. ಶಹನಾಯಿಯೊಂದಿಗೆ ಶೃತಿ ನೀಡುವ ಮತ್ತೊಂದು ಶಹನಾಯಿ ಯಂತೆ.

ರಾಮದಾಸನ ಖಂಜರದ ಗಮಕ ನಿಶ್ಶಬ್ದ ವಾತಾವರಣದಲ್ಲಿ ಶಬ್ದತರಂಗ ಗಳನ್ನೆಬ್ಬಿಸುತ್ತವೆ. ಜೊತೆಗೆ ಖಂಜರಕ್ಕೆ ತಗುಲಿಸಿರುವ ಚಿಕ್ಕ ಚಿಕ್ಕ ಗೆಜ್ಜೆಗಳ

ಝುಣ ಝುಣ ನಾದ ಸಾಕಿದ ಜಿಂಕೆ ಕುಣಿಯುತ್ತಿರುವಂತೆ, ತಾಳಬದ್ಧವಾಗಿ ಓಡುತ್ತಿರುವಂತೆ ಭಾಸವಾಗುತ್ತದೆ. ಡಿಮ್ ಡಿಮಿಕ್: ಝುನ್ ಝುನಕ್: ಝುನಕ್.

ಪ್ರಭಾತದ ಪ್ರಾರ್ಥನೆ (ಪ್ರಾತಕೀ) ಯ ನಂತರ 'ಬೀಜಕ' ಅಂದರೆ ಶಬ್ದ ಆರಂಭವಾಗುತ್ತವೆ, 'ರಾಮುರಾ ಝೀಂ ಝೀಂ ಜಂತರ ಬಾಜೆ ಕರಣಚರ್ಣ ಬಹುನಾನಾಚೆ'.

ಕರಣಚರಣಗಳಿಂದ ರಾಮನಾಮ ಪ್ರತಿಧ್ವನಿಸುತ್ತದೆ.

ಅನಂತರ 'ಸತ್ಸಂಗ'. ಪ್ರತಿದಿನ ಇದೇ ಸಮಯದಲ್ಲಿ ಸತ್ಸಂಗ ದೊರೆಯುತ್ತದೆ. ಪ್ರಭಾತದ ಪ್ರಾರ್ಥನೆ ಕಿವಿಗೆ ಬಿದ್ದೊಡನೆಯೇ ಮಠದ ಇತರ ಸಾಧು ಸನ್ಯಾಸಿಗಳು, ಅತಿಥಿ ಅಭ್ಯಾಗತರು, ಅಧಿಕಾರಿಗಳು, ಕೆಲಸಗಾರರು ಏಳುತ್ತಾರೆ. 'ಪ್ರಾತಕೀ' ಮತ್ತು ಬೀಜಕಗಳಲ್ಲಿ ಭಾಗವಹಿಸದಿದ್ದವರೂ 'ಸತ್ಸಂಗ' ದಲ್ಲಿ ಸಮ್ಮಿಳಿತರಾಗಲೇಬೇಕೆಂಬ ನಿಯಮ ಇದೆ. ಮಠದ ಭಂಡಾರಿ ಇದೇ ಸಮಯದಲ್ಲಿ ಪ್ರತಿದಿನ ಹಾಜರಿ ತೆಗೆದುಕೊಳ್ಳುತ್ತಾನೆ. ಈ ಸಮಯದಲ್ಲಿ ಹಾಜರಿಲ್ಲದವರಿಗೆ ಆ ದಿನದ ಊಟ ಸಿಗುವುದಿಲ್ಲ. ಈ ಸಮಯದಲ್ಲೇ ಮಹಂತರು, ಸಾಧುಗಳಿಗೆ ಶಿಷ್ಯರಿಗೆ ಉಪದೇಶ ಕೊಡುತ್ತಾರೆ. ಅವರ ಪ್ರಶ್ನೆಗಳಿಗೆ ಉತ್ತರ ನೀಡುತ್ತಾರೆ. ಅವರನ್ನು ಮುಸುಕಿರುವ ಅಜ್ಞಾನಾಂಧಕಾರವನ್ನು ತಮ್ಮ ವಾಣಿಯಿಂದ ದೂರ ಮಾಡುತ್ತಾರೆ.

ಸತಗುರು ಸೇವಾ ಸತ್ಯ ಕರಿಮಾನೆ ಸತ್ಯ ವಿಚಾರ್
ಸೇವಕ ಚೇಲಾ ಸತ್ಯ ಸೋ ಜೋ ಗುರು ವಚನ್ ನಿಹಾರ್....

ಸದ್ಗುರುವಿನ ಸೇವೆಯನ್ನು ಸತ್ಯವೆಂದು ನಂಬುವವನೂ, ಗುರು ವಚನವನ್ನು ಅನುಸರಿಸುವವನೂ ಯಾರೋ ಅವನೇ ನಿಜವಾದ ಶಿಷ್ಯ, ಸೇವಕ.

ಅನಂತರ ಏಳು ಚಕ್ರಗಳ ಪರಿಚಯ:

ಪ್ರಥಮ ಚಕ್ರ ಆಧಾರ ಕಹಾವೆ ಗುದಸ್ಥಲ್ ಕೆ ಮಾಂಹೀ
ದ್ವಿತೀಯ ಚಕ್ರ ಅಧಿಷ್ಠಾನ ಕಹಿಯೆ, ಲಿಂಗಸ್ಥಲ್ ಕೆ ಮಾಹೀ
ತೃತೀಯ ಚಕ್ರ ಮಣಿಪೂರಣ ಜಾನೋ ನಾಭೀಸ್ಥಲ....

ಗುದಸ್ಥಳದಲ್ಲಿರುವ ಪ್ರಥಮ ಚಕ್ರ ಆಧಾರವಾದುದು. ಲಿಂಗಸ್ಥಳದಲ್ಲಿರುವ ದ್ವಿತೀಯ ಚಕ್ರ ಅಧಿಷ್ಠಾನ. ನಾಭೀಸ್ಥಳದಲ್ಲಿರುವ ತೃತೀಯ ಚಕ್ರವನ್ನು ಮಣಿಪೂರಣವೆಂದು ತಿಳಿ....

ಸತ್ಸಂಗ ಮುಗಿಯುತ್ತಲೇ ಭಂಡಾರಿ ಹೊರಗಿನಿಂದ ಬಂದು ಸೇರುವ ಸಾಧುಗಳ ಲೆಕ್ಕ ಆರಂಭಿಸುತ್ತಾನೆ.

"ರಾಣೀಗಂಜಿನ ಮೂರು ಜನ ಸಾಧುಗಳು ಏಳು ದಿನಗಳಿಂದ ಇಲ್ಲೇ ಇದ್ದಾರೆ. ಹೋಗುವುದಕ್ಕೆ ಹೇಳಿದರೆ, ಸರ್ಕಾರದಿಂದ ಅನುಮತಿ ಪಡೆದಿದ್ದೇವೆ ಎನ್ನುತ್ತಾರೆ. ಚೇಲಾ ಮಠದ ಒಬ್ಬ ಸಾಧುವಿಗೆ ಜ್ವರ ಬಂದುಬಿಟ್ಟಿದೆ, ಇತ್ಯಾದಿ...."

ಲಕ್ಷ್ಮೀದಾಸಿಗೆ ಪ್ರತಿದಿನ ಈ ಸಮಯದಲ್ಲಿ ಭಂಡಾರಿಯ ಈ ವಿವರಣೆ ತುಂಬಾ ಬೇಸರವನ್ನುಂಟುಮಾಡುತ್ತದೆ. 'ಸತ್ಸಂಗ' ದಿಂದ ಮನಸ್ಸಿಗೆ ದೊರೆತ ಪವಿತ್ರ ಭಾವನೆಯೆಲ್ಲಾ ಈ ಗಲಾಟೆಯಿಂದ ನಷ್ಟವಾಗಿಹೋಗುತ್ತದೆ. ಆದರೆ ಮಾಡುವುದೇನು? ಮಠದ ನಿಯಮವನ್ನು ಸ್ವಲ್ಪ ಸಡಿಲಗೊಳಿಸಿದರೂ ಸಾಧು ಬೈರಾಗಿಗಳು ಒಂದೇ ತಿಂಗಳಲ್ಲಿ ಮಠವನ್ನೇ ಹಾಳುಮಾಡಿಬಿಡುತ್ತಾರೆ. ಹೊರಗಿನಿಂದ ಬಂದ ಸಾಧುಗಳು ನಾಲ್ಕು ದಿನಕ್ಕಿಂತ ಹೆಚ್ಚು ನಿಲ್ಲಬಾರದೆಂಬ ನಿಯಮವೇನೋ ಇದೆ. ಆದರೆ...."

"ರಾಣೀಗಂಜಿನ ಸಾಧುಗಳು ತಾವೇ ಯೋಚಿಸಬೇಕು. ಇಲ್ಲಿ ಕುಬೇರನ ಭಂಡಾರವೇನೂ ಇಲ್ಲ...."

"ಲಕ್ಷ್ಮೀ" ಮಹಂತರು ಹೇಳಿದರು:

"ಈವತ್ತೊಂದು ದಿನ ಎಲ್ಲರೂ ಇರಲಿ ಬಿಡು. ಭಂಡಾರಿಯವರೇ, ಈವತ್ತು ಇಲ್ಲಿರುವ ಸಾಧುಗಳಿಗೆಲ್ಲಾ ತಿಂಡಿ, ಪ್ರಸಾದ ಕೊಟ್ಟುಬಿಡಿ. ಈಗ ಎಲ್ಲರೂ ಕುಳಿತುಕೊಳ್ಳಿ. ಈವತ್ತು ಸದ್ಗುರು ಒಂದು ಸ್ವಪ್ನವನ್ನು ಕಾಣಿಸಿದ್ದಾನೆ...."

ಕುಂಡಗಳಿಗೆ ಮತ್ತಷ್ಟು ಒಣಗಿದ ಸಣ್ಣ ಸಣ್ಣ ಸೌದೆ ತುಂಡುಗಳನ್ನು ಹಾಕಿದರು. ಎಲ್ಲಾ ಸಾಧುಗಳೂ ಮತ್ತೆ ಕುಂಡದ ಸುತ್ತ ಅರ್ಧವೃತ್ತಾಕಾರವಾಗಿ ಕುಳಿತುಕೊಂಡರು. ಲಕ್ಷ್ಮಿಯ ಆಸನ ಮಹಂತರ ಆಸನದ ಹತ್ತಿರವೇ ಇತ್ತು. ....ಎಲ್ಲರೂ ಮಹಂತರ ಕಡೆಗೇ ಉತ್ಸುಕತೆಯಿಂದ ನೋಡಲಾರಂಭಿಸಿದರು.

"ಈವತ್ತು ಮಧ್ಯರಾತ್ರಿ, ಸದ್ಗುರು ನಮ್ಮ ಆಸನದ ಹತ್ತಿರ ಬಂದರು. ನಾನು ತಕ್ಷಣ ಎದ್ದು ಪ್ರಣಾಮ ಮಾಡಿದೆ. ನಮ್ಮ ಕಡೆ ದಯಾದೃಷ್ಟಿ ಬೀರಿ ಸದ್ಗುರು ಅಪ್ಪಣೆ ಕೊಡಿಸಿದರು: 'ಸೇವಾದಾಸ್, ನಿನಗೆ ಕಣ್ಣಿಲ್ಲ. ಆದರೆ ನಿನ್ನ

ಒಳಗಿನ ಕಣ್ಣುಗಳ ಪ್ರಕಾಶ ತುಂಬಾ ಪ್ರಖರವಾಗಿದೆ. ನಾನು ವೇಷ ಬದಲಾಯಿಸಿಕೊಂಡು ಬಂದೆ. ಆದರೂ ನೀನು ನನ್ನನ್ನು ಗುರುತಿಸಿಬಿಟ್ಟೆ! ನಿನ್ನ ಜ್ಞಾನನೇತ್ರದಲ್ಲಿ ದಿವ್ಯ ಜ್ಯೋತಿಯಿದೆ. ನಿನ್ನ ಹಳ್ಳಿಯಲ್ಲಿ ಪರಮಾರ್ಥದ ಕೆಲಸ ನಡೆಯುತ್ತಿದೆ. ಆದರೂ ನಿನಗೆ ಗೊತ್ತಾಗಲಿಲ್ಲವೇ? ಗಾಂಧಿಯೂ ನನ್ನ ಭಕ್ತನೇ. ಗಾಂಧಿ ಈ ಹಳ್ಳಿಯಲ್ಲಿ ಆಸ್ಪತ್ರೆಯನ್ನು ತೆರೆಯುವುದರ ಮೂಲಕ ಪರಮಾರ್ಥದ ಕೆಲಸ ಮಾಡುತ್ತಿದ್ದಾನೆ. ನೀನು ಇಡೀ ಹಳ್ಳಿಗೆ ಸಮಾರಾಧನೆ ಮಾಡಿಸು.' ಇಷ್ಟು ಹೇಳಿ ಸದ್ಗುರು ಅಂತರ್ಧಾನ ಹೊಂದಿದರು. ನನಗೆ ಎಚ್ಚರವಾಯಿತು. ಸದ್ಗುರುವಿನ ವಿರಹದಿಂದ ಚಿತ್ತ ಚಂಚಲವಾಯಿತು. ವಿರಹಾಗ್ನಿಯನ್ನು ಆರಿಸುವುದು ಹೇಗೆ? ಮನೆಯೆಲ್ಲಾ ಅಂಧಕಾರಮಯವಾಯಿತು. ಕೊನೆಗೆ ಸದ್ಗುರುವಿನ ಆಜ್ಞೆ ನೆನಪಿಗೆ ಬಂದು ಚಿತ್ತಶಾಂತಿ ತಂದುಕೊಂಡೆ.''

ಮಹಂತರ ಸ್ವಪ್ನ ವಿಚಾರ ಕ್ಷಣಮಾತ್ರದಲ್ಲಿ ಹಳ್ಳಿಯಲ್ಲೆಲ್ಲಾ ಹರಡಿತು. ಬಾಲದೇವ-ಹರಗೌರಿಯರ ವಾಗ್ವಾದ, ಯಾದವ ಸಂಗಡದವರ ಆಕಸ್ಮಿಕ ಆಕ್ರಮಣ, ಹಳ್ಳಿಯ ಗುಂಪು ಮನೋಭಾವಕ್ಕೆ ಹೊಸ ಜೀವನ ಕೊಟ್ಟಿತ್ತು. ಜೋಯಿಸರ ಅಭಿಪ್ರಾಯದಂತೆ, ''ಯಾದವ ಸಂಗಡದವರು ಮಾತೆತ್ತಿದರೆ ಲಾಠೀ-ಕತ್ತಿ ತೋರಿಸುತ್ತಾರೆ. ರಾಜಪೂತ ಸಂಗಡದವರಿಗೆ ಇದು ಅಪಮಾನದ ವಿಚಾರ. ಪೋಲೀಸಿನವರಿಗೆ ಸೂಚನೆ ಕೊಟ್ಟು ಇವರಿಗೆ ತಕ್ಷಣ ಶಿಕ್ಷೆ ಮಾಡಿಸಬೇಕು. ಆದರೆ ಸಿಂಗಜಿಯವರಿಗೆ ಸ್ಟೇಷನ್ನು-ಪೋಲೀಸ್ ಅಂದರೆ ಗಾಬರಿ. ಮಾತು ಮಾತಿಗೆ ಬೈಗಳು, ಹೆಜ್ಜೆ ಹೆಜ್ಜೆಗೆ ಅಡೆತಡೆ. ಕಾನೂನು-ಕಛೇರಿಯ ಆಶ್ರಯ ತೆಗೆದುಕೊಳ್ಳುವುದೆಂದರೆ ತನ್ನ ದುರ್ಬಲತೆಯನ್ನು ತೋರಿಸಿಕೊಂಡ ಹಾಗೆ. ಸಮಯ ಬಂದಾಗ ಸೇಡು ತೀರಿಸಿಕೊಳ್ಳೋದಕ್ಕೆ ಸಿದ್ಧವಾಗಿರಬೇಕು.... ಯಾದವ ಸಂಗಡದವರು ಮಾತ್ರ ಇದ್ದಿದ್ದರೆ ಅದೊಂದು ರೀತಿಯಾಗಿರುತ್ತಿತ್ತು. ಆದರೆ ಅವರೊಡನೆ ಕಾಯಸ್ಥ ಸಂಗಡದವರು ಸೇರಿಕೊಂಡಿದ್ದಾರೆ. ಅವರೋ ವ್ಯಾಪಾರಿಗಳು.... ಇನ್ನು ಈ ಹರಗೌರಿಯೂ ದೊಡ್ಡ ಮೂರ್ಖನೇ. ಬಾಗಿಲಿಗೆ ಬಂದವರನ್ನು ಎದ್ದು ಹೋಗುವಂತೆ ಹೇಳುವುದೂ, ಅವರನ್ನು ಹೊಡೆಯಲು ಹೋಗುವುದೂ ಸರಿಯಲ್ಲ.''

ಯಾದವ ಸಂಗಡದಲ್ಲಿ ಈಚೆಗೆ ಮಧ್ಯಾಹ್ನದ ಹೊತ್ತಿಗೆ ಡೋಲಿನ ಶಬ್ದ ಆರಂಭವಾಗುತ್ತದೆ—ಧಾಕ್ ಡಿನ್ನಾ, ಧಾಕ್ ಡಿನ್ನಾ.

ಶೋಭನ ಮೋಚಿಗೆ ಹೊಸ ಬನೀನು, ಟವಲು ದೊರೆತಿದೆ. ಕಾಳೀ ಮಂದಿರದ ಆಲದ ಮರದ ಕೆಳಗೆ ಹಸು ಎಮ್ಮೆಗಳನ್ನು ಮೇಯಲು ಬಿಟ್ಟು,

ಮಧ್ಯಾಹ್ನದಿಂದಲೇ ಕುಸ್ತಿ ಅಭ್ಯಾಸ ಮಾಡತೊಡಗುತ್ತಾರೆ ಯಾದವ ಪಂಗಡ ದವರು. ಬಾಲದೇವ ಉಪವಾಸ ಮಾಡಿದ ದಿನದಂದು ಸಂಜೆ ಖೆಲಾವನ್ ಯಾದ ವನ ಮನೆಯ ಮುಂದೆ ಕೀರ್ತನೆ ನಡೆಯಿತು. ಬಾಲದೇವನೇ ಹೇಳಿಕೊಟ್ಟಿದ್ದ ಆ ಸ್ವರಾಜ್ಯ ಕೀರ್ತನೆ: 'ಧನ್ಯ ಧನ್ಯ ಗಾಂಧೀ ಮಹಾರಾಜ್, ಚರಖಾ ತಿರುಗಿಸುವ ನಾಯಕ' ಈ ಕೀರ್ತನೆ ಆದ ನಂತರ, ಬಾಲದೇವ ಎಮ್ಮೆಯ ಹಸಿ ಹಾಲನ್ನು ಕುಡಿದು ವ್ರತ ಮುಗಿಸಿದ್ದ. "ಹಿಂಸೆಯ ವಿಚಾರ ಯಾರಾದರೂ ಎತ್ತಿದರೆ ಮತ್ತೆ ಉಪವಾಸ ಮಾಡುತ್ತೇನೆ. ಈ ಬಾರಿ ಎರಡು ದಿನ" ಎಂದೂ ಹೇಳಿದ್ದ. ಸ್ವರಾಜ್ಯ ಕೀರ್ತನೆಯನ್ನು ಲಹಸನ್ನನ ಮಗ ಸುನರಾ ಚೆನ್ನಾಗಿ ಹಾಡುತ್ತಿದ್ದ. ಬಾಲದೇವ ಮತ್ತೆ ಮತ್ತೆ ಉಪವಾಸ ಮಾಡಿದರೆ ಅವನ ಹತ್ತಿರವೇ ಹೇಳಿಸಬೇಕು. ಇನ್ನೂ ಕೆಲವು ಗೀತೆಗಳನ್ನು ಕಲಿಯುತ್ತಿದ್ದಾನೆ. . . .

ಸಿಪಾಯಿ ಪಂಗಡದಲ್ಲಿ ಈಗ ಹಗಲು ಹೊತ್ತಿನಲ್ಲೇ ಗೂಬೆ ಕೂಗುತ್ತಿದೆ. ತಹಸೀಲ್ದಾರರು ಹೇಳುತ್ತಿದ್ದರು—" ರಾಜಪೂತರ ಗರ್ವ ಮಾಯವಾಗಿದೆ. ತೆಪ್ಪ ಗಾಗಿ ಬಿಟ್ಟಿದ್ದಾರೆ. ಕಾಳೀಚರಣ ಸಾಹಸಿ."

ಆಸ್ಪತ್ರೆಯ ಕೋಣೆಗಳೆಲ್ಲಾ ಸಿದ್ಧವಾದವು. ಮಣ್ಣು ಮೆತ್ತುವುದೊಂದೇ ಬಾಕಿ. ಬಿರಸಾ ಮಾಂಝೀ ಹೇಳಿದ, "ಸಂಥಾಲ ಪಂಗಡದ ಎಲ್ಲ ಹೆಂಗಸರೂ ಬಂದು ಮಣ್ಣು ಮೆತ್ತಿಬಿಡುತ್ತಾರೆ."

ಸಾಮಾನ್ಯವಾಗಿ ಮಣ್ಣು ಸವರುವವರು ಸಂಥಾಲ ಸ್ತ್ರೀಯರೇ. ಮುಂದಿನ ಶನಿವಾರ ಡಾಕ್ಟರ್ ಬಾಬು ಬರುತ್ತಾರೆ. ಬಾಲದೇವ್ ಡಿಸ್ಟ್ರಿಕ್ಟ್‌ನಿಂದ ಸಾಮಾನು ಗಳನ್ನೆಲ್ಲಾ ತಂದುಬಿಟ್ಟಿದ್ದಾನೆ. ಪ್ರೈಸ್ ಥೇರ್ಮನ್ ಬಾಲದೇವನ ಹತ್ತಿರ ಸಹಿ ಹಾಕಿಸಿಕೊಂಡಿದ್ದಾನೆ. ಪ್ರೈಸ್ ಥೇರ್ಮನ್ನರೂ ಯಾದವ ಪಂಗಡದವರೇ ಇರಬೇಕು. ಬೇರೆಯವರಿಗೆ ಈ ರೀತಿಯ ಹೆಸರು ಇರುವುದಿಲ್ಲ. ತಹಸೀಲ್ದಾರರ ಮನೆಯಲ್ಲಿ ಎಲ್ಲಾ ಸಾಮಾನುಗಳು ಇವೆ—ಕುರ್ಚಿ, ಬೆಂಚು, ದೊಡ್ಡ ದೊಡ್ಡ ಪೆಟ್ಟಿಗೆಗಳಲ್ಲಿ ಔಷಧ. ಶೀಷೆಗಳು, ಬಟ್ಟಲು, ಲೋಟ. ನೀರಿನ ಯಂತ್ರವನ್ನು ನಾಳೆ ಆರಂಭಿಸುತ್ತಾರೆ. ರೌತಹಟ್ ಸಂತೆಯಲ್ಲಿ ಇರುವಂತಹ ಯಂತ್ರ.

ಶನಿವಾರದ ದಿನವೇ ಮಹಂತರು ಏರ್ಪಡಿಸಿದ್ದ ಸಂತರ್ಪಣೆ—ಪೂರಿ, ಜಿಲೇಬಿಯ ಊಟ. ಹಳ್ಳಿಯ ಹೆಂಗಸರು, ಗಂಡಸರು, ಮುದುಕರು, ಮಕ್ಕಳು, ಶ್ರೀಮಂತರು, ಬಡವರು ಎಲ್ಲರಿಗೂ ಮಹಂತರು ಊಟ ಹಾಕುತ್ತಾರೆ. ಅವರಿಗೆ ಹಾಗೆಯೇ ಸ್ವಪ್ನವಾಗಿದೆ.

ಯಾದವ ಪಂಗಡದ ಕಿಸನ್ ಹೇಳಿದ: "ಕುರುಡ ಮಹಂತ ತನ್ನ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಿದ್ದಾನೆ. ಬಾಬಾ ಅನ್ನಿಸಿಕೊಂಡು ಹೆಂಗಸನ್ನು ಇಟ್ಟುಕೊಂಡವನು ಬಾಬಾ ಆಗಲಾರ. ಮೇಲೆ ಬಾಬಾಜಿ ಒಳಗಡೆ ದಗಾಬಾಜಿ! ಏನಂದಿರಿ? ಇಟ್ಟುಕೊಂಡವಳಲ್ಲ, ದಾಸಿಯೇ. ಬಿಡಯ್ಯ ಬೇರೆ ಯಾರಿಗಾದರೂ ಹೋಗಿ ಹೇಳು. ಐದು ವರ್ಷ ಮಠದಲ್ಲಿ ನೌಕರಿ ಮಾಡಿದೀನಿ. ಮಠದ ವಿಚಾರ ನಮಗಿಂತ ಹೆಚ್ಚಾಗಿ ಬೇರೆ ಯಾರಿಗೆ ಗೊತ್ತಿದೆ? ಬೇರೆ ಯಾರು ನೋಡಲಿ ಬಿಡಲಿ, ಮೇಲೆ ಪರಮಾತ್ಮ ಇದ್ದಾನೆ. ಮಹಂತರು ಲಕ್ಷ್ಮಿಯನ್ನು ಮಠಕ್ಕೆ ತಂದಾಗ ಅವಳು ತುಂಬಾ ಮುಗ್ಧಳಾಗಿದ್ದಳು. ಏನೂ ಅರಿಯದವಳಾಗಿದ್ದಳು. ಒಂದೇ ಒಂದು ಸೀರೆ ಉಡುತ್ತಿದ್ದಳು. ಆ ಹಸುಗೂಸೆಲ್ಲಿ, ಈ ಐವತ್ತು ವರ್ಷದ ಮುದಿ ಹದ್ದು ಎಲ್ಲಿ! ಪ್ರತಿದಿನ ರಾತ್ರಿ ಲಕ್ಷ್ಮಿ ಅಳುತ್ತಿದ್ದಳು. ಅವಳ ಅಳು ಕೇಳಿದರೆ ಕಲ್ಲೂ ಕರಗಿಹೋಗ್ತಿತ್ತು. ನಮಗಂತೂ ನಿದ್ದೆಯೇ ಬರ್ತಿರಲಿಲ್ಲ. ಬೆಳಿಗ್ಗೆ ಎಮ್ಮೆಗಳನ್ನು ಬಿಚ್ಚಿಕೊಂಡು ಮೇಯಿಸೋದಕ್ಕೆ ಹೊರಟುಹೋಗ್ತಿದ್ದೆವು. ದಿನಾ ಬೆಳಿಗ್ಗೆ ಹಾಲು ತೆಗೆದುಕೊಳ್ಳೋದಕ್ಕೆ ಲಕ್ಷ್ಮಿ ಹೊರಗಡೆ ಬರ್ತಿದ್ದಳು. ಅವಳ ಕಣ್ಣುಗಳು ಕದಂಬದ ಹೂವುಗಳ ಹಾಗೆ ಊದಿರುತ್ತಿದ್ದವು. ರಾತ್ರಿ ಅಳುತ್ತಿದ್ದುದರ ಕಾರಣ ಕೇಳಿದರೆ ಪೆದ್ದು ಪೆದ್ದಾಗಿ ಕಣ್ಣರಳಿಸಿ ನೋಡ್ತಾ ನಿಂತು ಬಿಡ್ತಿದ್ದಳು.

ತಾಯಿ ಸತ್ತ ಹಸುವಿನ ಕರುವಿನ ಹಾಗೇ ಕಾಣ್ತಿದ್ದಳು. ಆ ರಾಮದಾಸ ಒಬ್ಬ ಚಂಡಾಲ. ಅವನೂ ಕುರುಡನಾಗ್ತಾನೆ ನೋಡ್ತಿರು. ಮಹಂತ ಒಂದು ಬಾರಿ ನಾಲ್ಕು ದಿನ ಪೂರ್ಣಿಯಾಗೆ ಹೋಗಿದ್ದ. ಆ ನಾಲ್ಕು ದಿನವಾದ್ರೂ ಲಕ್ಷ್ಮಿ ಶಾಂತಿಯಿಂದ ನಿದ್ದೆ ಮಾಡ್ತಾಳೇ ಅಂತ ನಾವು ಅಂದುಕೊಂಡಿದ್ದೆವು. ಹಣೇ ಬರಹ! ಹುಲಿಯ ಬಾಯಿಂದ ತಪ್ಪಿಸಿಕೊಂಡು ಕಾಡುಬೆಕ್ಕಿನ ಬಾಯಿಗೆ ಬಿದ್ದ ಹಾಗಾಯ್ತು! ಪಾಪ, ಅನಂತರ ಲಕ್ಷ್ಮಿಗೆ ವಿಪರೀತ ಖಾಯಿಲೆ ಆಯ್ತು. ಬದುಕಿ ಉಳಿದಿದ್ದೇ ಹೆಚ್ಚು. ಪಾಪ ಮುಚ್ಚಿಡೋದು ಸಾಧ್ಯವೇನು? ರಾಮದಾಸನಿಗೆ ಅಪಸ್ಮಾರ ರೋಗ ಬಡಿಯಿತು. ಮಹಂತ ಸೇವಾದಾಸರಂತೂ ಸೂರದಾಸರೇ ಆಗಿಹೋದರು! (ಕುರುಡರಾದರು). ಎಲ್ಲಾ ಹಾಳಾಯ್ತು···· ನನಗೇ ಮೂರು ತಿಂಗಳ ಸಂಬಳ ಬಾಕಿಯಿದೆ. ಊರಿಗೆಲ್ಲಾ ಸಂತರ್ಪಣೆ ಮಾಡಿಸ್ತಾನಂತೆ. ನಾನಂತೂ ಇಂಥ ಜನರನ್ನು ಸಾಧುಗಳು ಅಂತ ಒಪ್ಪೋದಿಲ್ಲ."

ಮಹಂತ ಸೇವಾದಾಸ್ ಈ ಜಿಲ್ಲೆಯ ದೊಡ್ಡ ಜ್ಞಾನಿ, ಎಲ್ಲ ಶಾಸ್ತ್ರ ಪುರಾಣಗಳ ಪಂಡಿತರು ಎಂದು ಹೆಸರುವಾಸಿಯಾಗಿದ್ದರು. ಮಠಕ್ಕೆ ಬಂದ ಜನ

ಹಸಿವು ಬಾಯಾರಿಕೆಯನ್ನು ಮರೆತುಬಿಡುತ್ತಿದ್ದರು. ಮಠವನ್ನು ತುಂಬಾ ಪವಿತ್ರ ಸ್ಥಳವೆಂದು ಜನ ನಂಬಿದ್ದರು. ಆದರೆ ಮಹಂತರು ಲಕ್ಷ್ಮೀದಾಸಿಯನ್ನು ಮಠಕ್ಕೆ ಕರೆತಂದಾಗಿನಿಂದ ಜನರ ಅಭಿಪ್ರಾಯವೇ ಬದಲಾಗಿಹೋಯಿತು. ಬಸುಮತಿ ಮಠದ ಮಹಂತನೊಡನೆ ಇದೇ ದಾಸಿಯ ಕಾರಣದಿಂದಾಗಿ ಅನೇಕ ಜಗಳ, ಮೊಕದ್ದಮೆಗಳು ನಡೆದವು. ಬಸುಮತಿಯ ಮಹಂತ ಹೇಳುತ್ತಿದ್ದ, "ಲಕ್ಷ್ಮೀದಾಸಿಯ ತಂದೆ ನಮ್ಮ ಗುರು ಸೋದರ. ಆದ್ದರಿಂದ ತಂದೆ ಸತ್ತ ಮೇಲೆ ಅಧಿಕಾರವಿರುವುದು ನಮಗೆ." ಸೇವಾದಾಸನ ವಾದ: "ಲಕ್ಷ್ಮಿಯ ತಂದೆ ಸೇವಕನಾಗಿದ್ದ ಮಠ ಮೇರೀಗಂಜ್ ಮಠದ ಅಧೀನದಲ್ಲಿತ್ತು. ಆದ್ದರಿಂದ ಲಕ್ಷ್ಮಿಯ ಮೇಲೆ ಅಧಿಕಾರವಿರುವುದು ನಮಗೆ." ಕೊನೆಗೆ ಕಾನೂನಿನ ಪ್ರಕಾರ ಲಕ್ಷ್ಮಿ ಸೇವಾದಾಸನಿಗೆ ಸೇರಿದಳು.

ಸೇವಾದಾಸನ ವಕೀಲ ಅವನಿಗೆ ತಿಳುವಳಿಕೆ ಹೇಳಿದ್ದರು. "ಮಹಂತರೇ, ಈ ಹುಡುಗಿಗೆ ವಿದ್ಯಾಭ್ಯಾಸ ಮಾಡಿಸಿ, ಇವಳಿಗೆ ಮದುವೆ ಮಾಡಿಬಿಡಿ." ಮಹಂತರೂ ಅವರಿಗೆ ಭರವಸೆ ಕೊಟ್ಟಿದ್ದರು, "ವಕೀಲರೇ, ಲಕ್ಷ್ಮಿ ನನ್ನ ಮಗಳ ಹಾಗೆ ಇರುತ್ತಾಳೆ" ಎಂದು. ಆದರೆ ಮನುಷ್ಯನ ಮನಸ್ಸಿನ ವಿಚಾರ ಯಾರು ಹೇಳಬಲ್ಲರು ? ಮಠಕ್ಕೆ ಬಂದ ಕೂಡಲೇ ಕಿಶೋರಿ ಲಕ್ಷ್ಮಿಯನ್ನು ಅವರು ತಮ್ಮ ದಾಸಿಯನ್ನಾಗಿ ಮಾಡಿಕೊಂಡುಬಿಟ್ಟರು. ಲಕ್ಷ್ಮಿ ಯುವತಿಯಾದಳು. ಆದರೆ ಅವಳು ಯುವತಿಯಾಗುವುದಕ್ಕೆ ಮುಂಚೆಯೇ ಸೇವಾದಾಸರ ಕಣ್ಣುಗಳು ತಮ್ಮ ಪ್ರಕಾಶವನ್ನು ಕಳೆದುಕೊಂಡುಬಿಟ್ಟವು. ಲಕ್ಷ್ಮಿಯ ಯೌವನವನ್ನು ಕಂಡಿದ್ದರೆ ಅವರ ಸ್ಥಿತಿ ಏನಾಗುತ್ತಿತ್ತೊ....ಈಗಂತೂ ಮಹಂತ ಸೇವಾ ದಾಸನಿಗೆ ಅನೇಕ ಜನ ಪ್ರಣಾಮವನ್ನೂ ಮಾಡುವುದಿಲ್ಲ. ಧರ್ಮಭ್ರಷ್ಟನೆಂದೇ ನಂಬಿದ್ದಾರೆ. ಅವನೀಗ ಬಕಪಕ್ಷಿಯಂತಹ ಭಕ್ತ. ಬ್ರಹ್ಮಚಾರಿಯಲ್ಲ, ವ್ಯಭಿಚಾರಿ !

ಪೂರಿ, ಜಿಲೇಬಿ, ಮೊಸರು, ಸಕ್ಕರೆಯ ಸಮಾರಾಧನೆಯ ಘೋಷಣೆ ಕೇಳಿದ ಮೇಲೆ ಜನಾಭಿಪ್ರಾಯ ಬದಲಾಗುತ್ತಿದೆ....ಏನಾದರಾಗಲಿ, ಸಾಧುವೇ ಅಲ್ಲವೇ....ಇದುವರೆಗೆ ಇಷ್ಟು ದೊಡ್ಡ ಸಂತರ್ಪಣೆ ಮಾಡಿಸಿದವರು ಯಾರು? ತಹಸೀಲ್ದಾರರು ತಮ್ಮ ತಂದೆಯ ಶ್ರಾದ್ಧದ ದಿನ ತಮ್ಮ ಜಾತಿಯವರಿಗೆ ಪೂರಿ–ಮಿಠಾಯಿ, ಅನ್ಯಜಾತಿಯವರಿಗೆ ಮೊಸರು–ಅವಲಕ್ಕಿ ಕೊಟ್ಟಿದ್ದುಂಟು. ಸಿಂಗಜೀ ತಮ್ಮ ಅತ್ತೆಯ ಶ್ರಾದ್ಧದ ಸಂದರ್ಭದಲ್ಲೂ ಹೀಗೆ ಮಾಡಿದ್ದರು.

ಖೇಲಾವನ್ನನ ಮನೆಯಲ್ಲಿ ಕಳೆದ ವರ್ಷ ಶ್ರಾದ್ಧದಲ್ಲಿ ಇಷ್ಟು ಊಟವನ್ನು ಎಲ್ಲರೂ ಕಂಡೇ ಇದ್ದಾರೆ. ಇಡೀ ಹಳ್ಳಿಗೇ, ಹೆಂಗಸರು, ಮಕ್ಕಳು, ಗಂಡಸರೂ

ಎಲ್ಲರಿಗೂ ಸೇರಿ ಸಮಾರಾಧನೆ ಬೇರೆ ಯಾರು ಮಾಡಿಸಿದ್ದಾರೆ?····ಸಕ್ಕರೆ ಸಿಗುವುದಿಲ್ಲ. ಭಗವಾನ ಭಗತ್ ಹೇಳುತ್ತಿದ್ದ, 'ಬ್ಲಾಕಿನಲ್ಲಿ ಒಂದು ಮೂಟೆ ಸಕ್ಕರೆಗೆ ಒಂದು ನೂರು ರೂಪಾಯಿ' ಎಂದು. ನಾಲ್ಕು ಮಣ ಸಕ್ಕರೆಗೆ—ಇನ್ನೂರು ರೂಪಾಯಿ!

ತಂತ್ರಿಮಾ, ಗಹಲೋತ್ ಮತ್ತು ಪೋಲಿಯ ಪಂಗಡದ ಅನೇಕ ಜನ ಪೂರಿ–ಜಿಲೇಬಿಯ ರುಚಿಯನ್ನೇ ಕಂಡಿಲ್ಲ. ವಿರಂಚಿ ಒಂದು ಬಾರಿ ಸಾಕ್ಷಿ ಹೇಳಲು ಕಛೇರಿಗೆ ಹೋಗಿದ್ದಾಗ ತಹಸೀಲ್ದಾರರು ಅವನಿಗೆ ಪೂರಿ–ಜಿಲೇಬಿ ಕೊಡಿಸಿದ್ದರು. ಅನಂತರ ಹಳ್ಳಿಯಲ್ಲಿ ಅದು ಹೇಗೋ 'ವಿರಂಚಿ ತಹಸೀಲ್ದಾರರ ಎಂಜಲು ತಿಂದಿದ್ದಾನೆ' ಎನ್ನುವ ಸುದ್ದಿ ಹಬ್ಬಿಬಿಟ್ಟಿತು····

ಜನಿವಾರ ಕೊಡುವುದಕ್ಕೆಂದು ಕುಲದ ಪಂಡಿತರು ಬಂದಿದ್ದರು. ಏಳು ಗಂಟೆಗಳವರೆಗೆ ತಲೆಯ ಮೇಲೆ ಐದು ಅಡಿಕೆಗಳನ್ನಿಟ್ಟುಕೊಂಡು ಅದರ ಮೇಲೆ ನೀರು ತುಂಬಿದ ಕೊಡವನ್ನಿಟ್ಟುಕೊಂಡು ನಿಂತಿರಬೇಕೆಂದು ವಿರಂಚಿಗೆ ಶಿಕ್ಷೆ ವಿಧಿಸಿದರು. ಕೊಡ ಸ್ವಲ್ಪವಾದರೂ ಅಲುಗಿ, ಒಂದು ತೊಟ್ಟು ನೀರು ಹೊರಗಡೆ ತುಳುಕಿದರೂ, ಪರಕೆಯಿಂದ ಹೊಡೆಸಿಕೊಳ್ಳಬೇಕು. ತಹಸೀಲ್ದಾರರು ತಾನೇ ಏನು ಮಾಡಬಲ್ಲರು? ಜಾತಿ ಸಮಾಜದ ವಿಚಾರ. ಅದರಲ್ಲಿ ಅವರು ಮಾತ ನಾಡುವ ಹಾಗೇ ಇಲ್ಲ. ಕೊನೆಗೆ ಐದು ರೂಪಾಯಿ ಜುಲ್ಮಾನೆ, ಜಾತಿಯ ಪಂಡಿತ ರಿಗೆ ಒಂದು ಜೊತೆ ಪಂಚೆ ಕೊಟ್ಟು ವಿರಂಚಿ ಪ್ರಾಯಶ್ಚಿತ್ತ ಮಾಡಿಕೊಳ್ಳ ಬೇಕಾಯಿತು····ಈ ಗಲಾಟೆಯಲ್ಲಿ ಪೂರಿ–ಜಿಲೇಬಿಯ ರುಚಿಯೂ ನೆನಪಿನಲ್ಲಿ ಉಳಿಯಲಿಲ್ಲ.

"ಜೀವನದಾಸ"

"ಓ ಬಾಲದೇವ, ನಮಸ್ಕಾರ ಬಾಲದೇವ ಬಾಬು."

"ನಮಸ್ಕಾರ ಬೇಡ, ಜೈಹಿಂದ್ ಅನ್ನು, ಜೈಹಿಂದ್."

"····ಈ ಪಂಗಡದಲ್ಲಿ ಎಷ್ಟು ಜನ ಇದಾರೇಂತ ಸ್ವಲ್ಪ ಲೆಕ್ಕಮಾಡಿ ಹೇಳಪ್ಪಾ. ಹೆಂಗಸರು, ಗಂಡಸರು, ಮಕ್ಕಳು ಎಲ್ಲರನ್ನೂ ಸೇರಿಸಬೇಕು. ಓ····ಲೆಕ್ಕ ಮಾಡೋದಕ್ಕೆ ಬರೋದಿಲ್ವೇನು? ವಿರಂಚಿ ಎಲ್ಲಿ?····"

ಬಾಲದೇವ ಮನೆ ಮನೆ ಸುತ್ತಿ ಜನಗಣತಿ ಮಾಡುತ್ತಿದ್ದ. ತುಂಬಾ ಕಷ್ಟದ ಕೆಲಸ. ಪೋಲಿಯಾ ಪಂಗಡ ಒಂದರಲ್ಲೇ ಏಳು ಇಪ್ಪತ್ತು ಮೇಲೆ

ನಾಲ್ಕು ಅಲ್ಲ ಅಲ್ಲ····ನಾಲ್ಕು ಇಪ್ಪತ್ತು, ಮೇಲೆ ಏಳು, ತತಮಾ ಪಂಗಡದಲ್ಲಿ ಪೂರಾ ಐದಿಪ್ಪತ್ತು!····ದುಸಾಧ ಪಂಗಡದಲ್ಲಿ ಎರಡಿಪ್ಪತ್ತು ಮಾತ್ರ···· ಕೋಯರೀ ಪಂಗಡದಲ್ಲಿ ಆರಿಪ್ಪತ್ತು ಮೇಲೆ ಮೂರು····ಯಾದವ ಪಂಗಡದ ಲೆಕ್ಕವನ್ನು ಕಾಳೀಚರಣ ಮಾಡುತ್ತಿದ್ದಾನೆ····ಸಿಪಾಯಿ ಪಂಗಡದ ಜನ ಮೀನ ಮೇಷ ನೋಡಿದರು. ಇದರಲ್ಲೂ ಯಾವ ಗಲಾಟೆ ಎಬ್ಬಿಸ್ತಾರೋ ದೇವರಿಗೇ ಗೊತ್ತು. ಬ್ರಾಹ್ಮಣರಂತೂ ಲೆಕ್ಕ ಕೊಡುವುದಿಲ್ಲವೆಂದೇ ಹೇಳಿಬಿಟ್ಟರು. ಬ್ರಾಹ್ಮಣರಿಗೆಂದೇ ಬೇರೆ ಏರ್ಪಾಡು ಆಗದಿದ್ದರೆ ಅವರು ಸರ್ವ ಸಂತರ್ಪಣೆಯಲ್ಲಿ ಊಟ ಮಾಡುವುದಿಲ್ಲವಂತೆ. ಬ್ರಾಹ್ಮಣ ಭೋಜನವೇ ಆಗದಿದ್ದ ಮೇಲೆ ಅದೆಂತಹ ಸಂತರ್ಪಣೆ?····

ಮಹಂತರೇ ಹೇಳಬೇಕು····

ಬ್ರಾಹ್ಮಣರ ಸಂಖ್ಯೆಯೂ ಹೆಚ್ಚೇನೂ ಇಲ್ಲ. ಎಲ್ಲರೂ ಸೇರಿ ಹತ್ತು ಮನೆಗಳಾದರೆ ಹೆಚ್ಚು.

ಎಲ್ಲವನ್ನೂ ಕೇಳಿ ಮಹಂತರು ಹೇಳಿದರು:

"ಸದ್ಗುರು! ಸದ್ಗುರು! ಬ್ರಾಹ್ಮಣರಿಗೆ ಬೇರೆ ಏರ್ಪಾಡು ಮಾಡಿಬಿಡು ಬಾಲದೇವ. ಅದರಲ್ಲೇನು ತೊಂದರೆ? ಇಲ್ಲದಿದ್ದರೆ ಅವರಿಗೆಲ್ಲಾ ಮಠದಲ್ಲೇ ವ್ಯವಸ್ಥೆ ಮಾಡಿಬಿಡು."

ಇದೇ ಸಮಯದಲ್ಲಿ ಲಕ್ಷ್ಮಿ ಅಲ್ಲಿಗೆ ಬಂದು ತಿಳಿಸಿದಳು. "ಸಿಪಾಯಿ ಪಂಗಡದವರೂ ಊಟ ಮಾಡುವುದಿಲ್ಲವಂತೆ. ಹರಬನ್ಸ್ ಸಿಂಗನ ಮಗ ಈಗ ತಾನೇ ಬಂದು ಹೇಳಿಹೋದ. ಗೊಲ್ಲರ ಪಂಕ್ತಿಯಲ್ಲಿ ಕೂತು ಅವರು ಊಟ ಮಾಡುವುದಿಲ್ಲವಂತೆ. ಅವರಿಗೇ ಹಿಟ್ಟು ತುಪ್ಪ-ಸಕ್ಕರೆ ಬೇರೆಯಾಗಿ ಕೊಟ್ಟುಬಿಟ್ಟರೆ, ಅವರೇ ಅಡಿಗೆ ಮಾಡಿಸಿಕೊಳ್ತಾರಂತೆ."

"ಸದ್ಗುರು, ಇದೊಳ್ಳೆ ಪಂಚಾಯ್ತಿ ಆಯ್ತಲ್ಲ. ಇನ್ನು ತಾವು ಧಾನುಕರ ಪಂಕ್ತಿಯಲ್ಲಿ ಊಟ ಮಾಡುವುದಿಲ್ಲವೆಂದು ಯಾದವರು ಆರಂಭಿಸುತ್ತಾರೆ."

"ಹರಬನ್ಸ್‌ಸಿಂಗನ ಮಗ ಇನ್ನೊಂದು ಮಾತು ಹೇಳಿದ. "ಬಾಲದೇವ ವ್ಯವಸ್ಥಾಪಕನಾಗಿರುವುದಾದರೆ ಮಹಂತರು ಕೊಡುವ ಸಮಾರಾಧನೆಯೇ ಹಾಳಾಗಿಹೋಗುತ್ತದಂತೆ."

'ಸದ್ಗುರು! ಸದ್ಗುರು!"

“ನಾನಿರುವುದನ್ನು ಜನರು ವಿರೋಧ ಮಾಡುವುದಾದರೆ ನಾನು ಸಂತೋಷವಾಗಿ ದೂರ....”

“ಇದೊಳ್ಳೇ ಮಾತು. ಮಹಂತರೇ, ನಾನೀಗಲೇ ಹೇಳ್ತೀನಿ ಕೇಳಿ. ಬಾಲದೇವನನ್ನು ಬಿಟ್ಟು ಬೇರೆ ಯಾರಿಗಾದರೂ ವ್ಯವಸ್ಥೆಯ ಜವಾಬ್ದಾರಿಯನ್ನು ವಹಿಸಿದರೆ ಸಮಾರಾಧನೆ ನಾಶವಾದ ಹಾಗೇ. ಈ ಹಳ್ಳಿಯ ಒಬ್ಬೊಬ್ಬರ ಬುದ್ಧೀನೂ ನನಗೆ ಗೊತ್ತು....”

ಬಾಲದೇವ ಮೊದಲಬಾರಿಗೆ ತಲೆಯೆತ್ತಿ ಲಕ್ಷ್ಮಿಯ ಕಡೆ ನೋಡುವ ಸಾಹಸ ಮಾಡಿದ. ದೃಷ್ಟಿ ಮೇಲೆದ್ದಿತು. ಲಕ್ಷ್ಮಿಯ ದೊಡ್ಡ ದೊಡ್ಡ ಕಣ್ಣುಗಳಲ್ಲಿ ಅನಸು ಮೈಮರೆತ. ಬಹುಶಃ ಅವಳ ಕಣ್ಣುಗಳಲ್ಲೇ ಸೇರಿಹೋದ.

## 5

ಮಠದಲ್ಲಿ ಹಳ್ಳಿಯ ಎಲ್ಲ ಮುಖಂಡರ ಪಂಚಾಯಿತಿ ಸೇರಿತ್ತು. ಬಾಲದೇವನಿಗೆ ಈ ದಿನ ಮತ್ತೊಮ್ಮೆ ಭಾಷಣ ಮಾಡುವ ಅವಕಾಶ ಸಿಕ್ಕಿದೆ. ಹಳ್ಳಿಯ ಪಂಚಾಯಿತಿ ಎಂದರೆ ಪೂರ್ಣಿಯಾ ಕಛೇರಿಯ ರಾಮೂಮೋದಿಯ ಅಂಗಡಿಯ ಹಾಗೆ. ಎಲ್ಲರೂ ತಮ್ಮ ತಮ್ಮ ಮಾತನ್ನು ಮೊದಲು ಹೇಳಲು ಆತುರಪಡುತ್ತಾರೆ. ಮಾತಿಗೆ ಮಾತು ಬೆಳೆಯುತ್ತದೆ. ನಿಜವಾದ ಸಮಸ್ಯೆ ಈ ಸುಳಿಯಲ್ಲಿ ಮುಳುಗಿ ಹೋಗುತ್ತದೆ! ಸಿಂಗಜೀ ಗಟ್ಟಿಯಾಗಿ ಕೂಗುತ್ತಾ ಹೇಳುತ್ತಾರೆ. “ಆ ದಿನ ನಾನೇನಾದರೂ ಮನೆಯಲ್ಲಿದ್ದಿದ್ದರೆ ರಕ್ತದ ನದಿಯೇ ಹರಿದು ಹೋಗುತ್ತಿತ್ತು.”

ಕಾಳೀಚರಣನೂ ಸುಮ್ಮನಿರುವವನಲ್ಲ.

“ಬಿಡಿ ಸ್ವಾಮಿ, ಮನೆ ಬಾಗಿಲಿಗೆ ಬಂದ ಒಬ್ಬ ಸಭ್ಯ ಮನುಷ್ಯನನ್ನು ಅವಮಾನ ಮಾಡೋದು ದೊಡ್ಡ ಮನುಷ್ಯರ ಲಕ್ಷಣವಲ್ಲ.”

ತಹಸೀಲ್ದಾರರನ್ನುತ್ತಾರೆ.

“ಆಸ್ಪತ್ರೆ ಆಗ್ತಿರೋದು ಎಲ್ಲರ ಹಿತಕ್ಕೋಸ್ಕರ. ಇದರಿಂದ ನಮಗೆ ಮಾತ್ರ ಲಾಭವೇನೂ ಇಲ್ಲ. ಸಾಹೇಬರು ಬಂದಿದ್ದಾಗ ತಹಸೀಲ್ದಾರರೇ ಸ್ವಲ್ಪ

ಸಹಾಯ ಮಾಡಿ ಎಂದಿದ್ದರು. ನಾನಾಗಿ ನಾನೇ ಮುಂದಾಳಾಗೇನೂ ಹೋಗಲಿಲ್ಲ. ಹೌದೋ ಅಲ್ಲವೋ ನೀನೇ ಹೇಳು ಪೇಲಾವನ್.''

ವೃದ್ಧ ಜೋಯಿಸರು ಭವಿಷ್ಯವಾಣಿ ನುಡಿಯುತ್ತಾರೆ:

''ಯಾರು ಬೇಕಾದರೂ ಒಪ್ಪಲಿ ಬಿಡಲಿ, ನಾನು ಹೇಳ್ತೀನಿ. ಒಂದು ದಿನ ಈ ಹಳ್ಳಿಯಲ್ಲಿ ಬರೀ ಕಾಗೆ ಹದ್ದುಗಳೇ ಉಳಿಯೋ ಹಾಗೆ ಆಗುತ್ತೆ ನೋಡ್ತಿರಿ. ಹಳ್ಳಿಯ ಗ್ರಹಗತಿಯೇ ಕೆಟ್ಟುಹೋಗಿದೆ. ಒಂದಲ್ಲ ಒಂದು ದಿನ ಈ ಹಳ್ಳಿಯಲ್ಲಿ ಕೊಲೆಯೇ ನಡೆಯುತ್ತೆ. ಪೋಲೀಸ್ ಸಿಪಾಯಿಗಳು ಹಳ್ಳಿ ಹಳ್ಳಿ ಸುತ್ತಾಡ್ತಾರೆ. ಇನ್ನು ಈ ಆಸ್ಪತ್ರೆ? ಈಗಲೇ ನಿಮಗೆ ಅರ್ಥವಾಗೋದಿಲ್ಲ. ಬಾವಿಯಲ್ಲೆಲ್ಲಾ ಔಷಧ ಹಾಕಿ, ಕಾಲರಾ ರೋಗ ಹರಡಲಿ ಆಗ ಗೊತ್ತಾಗುತ್ತೆ. ಶಿವ ಶಿವಾ! ಶಿವ ಶಿವಾ!''

ಬಾಲದೇವ ಭಾಷಣ ಕೊಡಲೆಂದು ಏಳಬೇಕೆನ್ನುವಷ್ಟರಲ್ಲಿ ಲಕ್ಷ್ಮಿ ಕೈ ಜೋಡಿಸಿಕೊಂಡು ಎದ್ದು ನಿಂತಳು. ''ಪಂಚಪರಮೇಶ್ವರರೇ....''

ಸಭೆಯಲ್ಲಿ ವಿದ್ಯುತ್ ದೀಪ ಹತ್ತಿಸಿದಂತಾಯಿತು. ನಿಶ್ಶಬ್ದ ಹರಡಿತು. ಬಿಳಿಯ ಮಲ್ಲಿನ ಸೀರೆಯ ಸೆರಗನ್ನು ಕುತ್ತಿಗೆಗೆ ಸುತ್ತಿಕೊಂಡು ಲಕ್ಷ್ಮಿ ಕೈ ಜೋಡಿಸಿ ನಿಂತಿದ್ದಾಳೆ!

''ಪಂಚ ಪರಮೇಶ್ವರರೇ!....''

''ಲಕ್ಷ್ಮಿ'' ಮಹಂತರು ಶೂನ್ಯದಲ್ಲಿ ಕೈ ಅಲ್ಲಾಡಿಸುತ್ತಾ ಹೇಳಿದರು:

''ಲಕ್ಷ್ಮಿ, ನೀನು ಸುಮ್ಮನಿರು.''

ಲಕ್ಷ್ಮಿ ಸುಮ್ಮನಾಗಲಿಲ್ಲ. ಮಾತನ್ನು ಮುಂದುವರಿಸಿದಳು.

''ಜೋಯಿಸರು ಹೇಳಿದ್ದೂ ಸರಿಯೇ. ಹಳ್ಳಿಯ ಗ್ರಹಗತಿ ಚೆನ್ನಾಗಿಲ್ಲ. ಅದಕ್ಕೇ ಸಣ್ಣ ಸಣ್ಣ ವಿಚಾರಗಳಿಗೂ ಇಲ್ಲಿ ಈರೀತಿ ಜಗಳವಾಗುತ್ತದೆ. ಒಗ್ಗಟ್ಟು ಇಲ್ಲದ ಕಡೆಯಲ್ಲಿ ಯಾವ ಕೆಲಸವೂ ಸುಸೂತ್ರವಾಗಿ ನಡೆಯುವುದಿಲ್ಲ. ಹಳ್ಳಿಯ ಮುಖಂಡರು ಈ ವಿಚಾರದಲ್ಲಿ ದೋಷಿಗಳಾಗಿದ್ದಾರೆ. **''ಜಹಾಂ ಮೇಲ್ ತಹಾಂ ಸರಗ್''** ಅಂದರೆ, 'ಒಗ್ಗಟ್ಟಿನಲ್ಲಿ ಸ್ವರ್ಗವಿದೆ' ಎಂದು ಸದ್ಗುರುವೇ ಅಪ್ಪಣೆ ಕೊಡಿಸಿದ್ದಾನೆ. ಮನುಷ್ಯ ಜನ್ಮ ಪದೆ ಪದೆ ದೊರೆಯುವುದಿಲ್ಲ. ಇಂಥ ಮನುಷ್ಯ ಜನ್ಮವನ್ನು ಪಡೆದೂ ನಾವು ಪರಮಾರ್ಥವನ್ನು ಬಿಟ್ಟು ಸ್ವಾರ್ಥಕ್ಕಾಗಿಯೇ ಹೋರಾಡುತ್ತಿದ್ದರೆ, ಅದಕ್ಕಿಂತ ದೊಡ್ಡ ಪಾಪ ಬೇರೆ ಯಾವುದಿದೆ? ಪರಮಾರ್ಥದ

ಕೆಲಸದಲ್ಲಿ ವಿಘ್ನ ಒಡ್ಡುವವನು ಮನುಷ್ಯನೇ ಅಲ್ಲ. ನೀವುಗಳು ಶಾಸ್ತ್ರ ಪುರಾಣ ಗಳನ್ನು ಓದಿದವರು. ಯಜ್ಞಭಂಗ ಮಾಡುವವರನ್ನು ಪುರಾಣಗಳಲ್ಲಿ ಏನು ಕರೆದಿದ್ದಾರೆಂಬುದು ನಿಮಗೆ ಗೊತ್ತೇ ಇದೆ. ನಾನು ಹೇಳುವುದಿಷ್ಟೇ. ಎಲ್ಲರೂ ಭೇದಭಾವವನ್ನು ಬಿಟ್ಟು ಒಂದಾಗಿ ಪರಮಾರ್ಥದ ಕೆಲಸಕ್ಕೆ ಸಹಕಾರ ನೀಡಬೇಕು. ನಿಮಗೆ ಗೊತ್ತೇ ಇದೆ—"ಪರಮಾರತ್ ಕಾರಣ ದೇಹ ಧರೋ ಯಹ ಮಾನಸ್ ಜನ್ಮ ಅಕಾರಥ ಜಾಯ್", (ಪರಮಾರ್ಥಕ್ಕಾಗಿ ಈ ದೇಹ, ಇಲ್ಲದಿದ್ದರೆ ಈ ಮನುಷ್ಯ ಜನ್ಮವೇ ವ್ಯರ್ಥ). ಕೈ ಜೋಡಿಸಿ ಪಂಚಪರಮೇಶ್ವರರಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ. ಜಗಳ ಬಿಟ್ಟು ಒಗ್ಗಟ್ಟನ್ನು ಬೆಳೆಸಿಕೊಳ್ಳಿ. ಸದ್ಗುರು ಹಳ್ಳಿಗೆ ಮಂಗಳವನ್ನು ಮಾಡುತ್ತಾನೆ. ಇಷ್ಟರ ಮೇಲೆ ನಿಮ್ಮ ಇಷ್ಟ."

ಲಕ್ಷ್ಮಿ ಕುಳಿತುಕೊಂಡಳು. ಅವಳ ಮುಖ ಬಿಸಿಯೇರಿತ್ತು. ಕೆನ್ನೆಗಳು ಕೆಂಪಗಾಗಿದ್ದವು. ಹಣೆಯ ಮೇಲೆ ಬೆವರಿನ ಹನಿಗಳು ಹೊಳೆಯುತ್ತಿದ್ದವು.

ಪಂಚಾಯಿತಿಯವರಲ್ಲಿ ಮಾಟ ಮಾಡಿದಂತೆ ಮೌನ ಆವರಿಸಿತು. ಬಾಲದೇವನಿಗೆ ಭಾಷಣ ಮಾಡುವ ಉತ್ಸಾಹವೇ ಕುಗ್ಗಿಹೋಯಿತು. ಅವನಿಗೆ ಕವಿತ್ವ ಬರುವುದಿಲ್ಲ; ಶಾಸ್ತ್ರ ಪುರಾಣಗಳನ್ನು ಓದಿದವನೂ ಅಲ್ಲ. ಜೈಲಿನಲ್ಲಿ ಚೌಧರೀ ಅವನಿಗೆ ಪಾಠ ಹೇಳಿಕೊಡುತ್ತಿದ್ದರು. ಮೂರನೆಯ ಭಾಗದಲ್ಲಿ, "ಉಪ್ಪಿನ ಭಾರವಾಗಿದ್ದ ಮೂಟೆಯನ್ನು ಹೊತ್ತು ಹೊತ್ತು ಒಂದು ಕತ್ತೆ ತುಂಬಾ ಬೇಸರ ಪಡುತ್ತಿತ್ತು" ಎನ್ನುವ ಪಾಠವನ್ನು ಅವನು ಓದುತ್ತಿದ್ದಾಗಲೇ ಚೌಧರಿಯವರಿಗೆ ಬೇರೆ ಕಡೆ ವರ್ಗವಾಗಿ ಹೋಯಿತು. ಆವತ್ತಿನಿಂದಲೇ ಅವನ ಪಾಠವೂ ನಿಂತುಹೋಯಿತು! ಆದರೆ····ಅವನು ಖಂಡಿತ ಭಾಷಣ ಮಾಡಲೇ ಬೇಕು. ಅವನು ಲಕ್ಷ್ಮಿಯ ಕಡೆ ನೋಡಿ ಅಮಲೇರಿದವನಂತೆ ಎದ್ದು ನಿಂತ: "ಪ್ರೀತಿಯ ಸೋದರರೇ ಒಂದು ಬಾರಿ ಪ್ರೀತಿಯಿಂದ ಹೇಳಿ, ಗಾಂಧೀ ಮಹಾತ್ಮರಿಗೇ ಜಯವಾಗಲಿ." ಯಾದವ ಪಂಗಡದ ಯುವಕರು ಜಯ ಜಯಕಾರ ಮಾಡಿದರು.

"ಪ್ರೀತಿಯ ಸೋದರರೇ, ಲಕ್ಷ್ಮಿ ಹೇಳಿದ ಮಾತುಗಳೆಲ್ಲಾ ನಿಜವೇ. ಆದರೆ ಎಲ್ಲರಿಗಿಂತ ದೊಡ್ಡ ತಪ್ಪಿತಸ್ಥ ನಾನು. ನನ್ನಿಂದಾಗಿಯೇ ಹಳ್ಳಿಯಲ್ಲಿ ಜಗಳ–ಕದನ ನಡೆಯುತ್ತಿದೆ. ನಾನು ಎಲ್ಲರಿಗೂ ಸೇವಕ. ನಾನೇನೂ ವಿದ್ವಾಂಸನಲ್ಲ. ಶಾಸ್ತ್ರ ಪುರಾಣಗಳನ್ನು ಓದಿದವನೂ ಅಲ್ಲ. ಬಡವ, ಮೂರ್ಖ ಆದರೆ ಮಹಾತ್ಮಾ ಗಾಂಧೀಜಿಯ ಪ್ರಭಾವದಿಂದ, ಭಾರತಮಾತೆಯ ಪ್ರಭಾವ

ದಿಂದ ನನ್ನ ಮನಸ್ಸಿನಲ್ಲಿ ಸೇವಾಭಾವನೆ ಮೂಡಿತು. ನಿಮಗೂ ಗೊತ್ತಿರಬಹುದು, ಮಿನಿಸ್ಟರ್ ಆಗಿರುವ ಜಯಮಂಗಳಬಾಬು ಅವರಿಗೆ ಸಹಿ ಹಾಕುವುದಕ್ಕೂ ಬರುವುದಿಲ್ಲ. ಅದೊಂದು ಸಣ್ಣ ವಿಚಾರ. ಅವರೂ ಬಡವರಾಗಿದ್ದರು, ಅಶಿಕ್ಷಿತರಾಗಿದ್ದರು ಆದರೆ ಅವರ ಮನಸ್ಸಿನಲ್ಲಿ ಸೇವಾಭಾವ ತುಂಬಿತ್ತು. ಅದಕ್ಕೇ ಮಹಾತ್ಮಾಜಿಯವರು ಅವರನ್ನು ಮಂತ್ರಿಗಳನ್ನಾಗಿ ಮಾಡಿದರು. ಮಹಾತ್ಮಾಜಿ ಹೇಳುತ್ತಾರೆ: "ವೈಷ್ಣವ ಜನತೋ ತೇನೇ ಕಹಿಯೆ ಜೋ ಪೀಡ ಪರಾಯಿ ಜಾನೀರೇ. ಚಳವಳಿಯಲ್ಲಿ ಬಿಳಿ ಸಿಪಾಯಿಗಳು ನಮ್ಮನ್ನು ಸೆರೆಹಿಡಿದಿದ್ದಾಗ, ಹೊಡೆದೂ ಹೊಡೆದೂ ಪ್ರಜ್ಞೆ ತಪ್ಪುವಂತೆ ಮಾಡುತ್ತಿದ್ದರು. ನೀರು ಬೇಡಿದರೆ ಬಾಯೊಳಗೆ ಮೂತ್ರ ಸುರಿಯುತ್ತಿದ್ದರು."

ಬಾಲದೇವನ ಭಾಷಣ ಷುರುವಾದ ಕೂಡಲೇ ಪಂಚಾಯಿತಿಯಲ್ಲಿ ಮತ್ತೆ ಪಿಸುಮಾತು ಆರಂಭವಾಯಿತು. ರಾಜಪುತ ಪಂಗಡದವರು ಇನ್ನಷ್ಟು ಜೋರಾಗಿ ಮಾತನಾಡತೊಡಗಿದರು. ಬಾಲದೇವನ ಭಾಷಣದ ಈ ರೋಮಾಂಚಕ ಅಂಶ ಅವರ ಮೇಲೆ ಕೊಂಚ ಪ್ರಭಾವ ಬೀರಿತು. 'ಬಾಯಲ್ಲಿ ಮೂತ್ರ ಸುರಿಯುತ್ತಿದ್ದ' ವಿಚಾರ ಕೇಳಿದ ಕೂಡಲೇ ಸಭೆಯಲ್ಲಿ ಮತ್ತೆ ನೀರವತೆ ಹರಡಿತು. ಬಾಲದೇವ ತಟಕ್ಕನೆ ತನ್ನ ಅಂಗಿಯನ್ನು ಬಿಚ್ಚಿದ. ಸುತ್ತಲೂ ತಿರುಗಿ ಎಲ್ಲರಿಗೂ ಬೆನ್ನು ತೋರಿಸುತ್ತಾ ಭಾಷಣ ಮುಂದುವರಿಸಿದ:

"ನಂಬಿಕೆ ಬರದಿದ್ದರೆ ನೀವೇ ನೋಡಿ." "ಬಾಪ್‌ರೇ ಹುಲಿ ಚಿರತೆಗಳ ಹಾಗೆ ಪಟ್ಟೆ ಬಂದುಬಿಟ್ಟಿದೆ."...."ಶಾಭಾಷ್ ಬಾಲದೇವ್ ಧನ್ಯ."

"ನೀವೇ ನೋಡಿ"—ಯಾದವ ಪಂಗಡದ ಒಬ್ಬ ಯುವಕ ಹೇಳಿದ.

"ನಾವು ಗಾಂಧೀಜಿಗೆ ಜಯವಾಗಲಿ ಎಂದರೆ ನಿಮ್ಮ ಕಿವಿಗೆ ಮೆಣಸಿನ ಕಾಯಿನ ಪುಡಿ ಹಾಕಿದ ಹಾಗೆ ಆಗುತ್ತಲ್ಲಾ, ನೀವೇ ನೋಡಿ."

"ಇದೆಲ್ಲಾ ಮಹಾತ್ಮಾಜಿಯವರ ಪ್ರಭಾವ. ಇಲ್ಲದಿದ್ದರೆ ಇದನ್ನೆಲ್ಲಾ ಯಾರಿಗೆ ಸಹಿಸೋದಕ್ಕೆ ಆಗ್ತಿತ್ತು. ಜನರ ತಿರಸ್ಕಾರವನ್ನು ಸಹಿಸಿದ ನಂತರವೇ ಬೆಲ್ಲ, ಸಕ್ಕರೆ ಅಂತ ಅನ್ನಿಸಿಕೊಳ್ಳುತ್ತೆ."

"ಆದರೆ ಪ್ರೀತಿಯ ಸೋದರರೇ, ನಾವು ಮಹಾತ್ಮಾ ಗಾಂಧಿಯ, ಭಾರತ ಮಾತೆಯ ಜಯಕಾರ ಮಾಡುವುದನ್ನು ಬಿಡಲಿಲ್ಲ. ಆಗ ಸಿಪಾಯಿಗಳು ನಮ್ಮ ಉಗುರುಗಳಲ್ಲಿ ಸೂಜಿ ಚುಚ್ಚಿದರು. ಆದರೂ ನಾವು ಉಸಿರೆತ್ತಲಿಲ್ಲ. ಕಡೆಗೆ ಸೋತು ಜೈಲಿಗೆ ಕಳುಹಿಸಿಬಿಟ್ಟರು. ಸ್ವರಾಜ್ಯವಾದಿಗಳು ಸೆರೆಮನೆಯನ್ನು

ಏನನ್ನುತ್ತಾರೆಂದು ನಿಮಗೆ ತಿಳಿದಿದೆಯೋ ಇಲ್ಲವೋ····'ಜೆಹಲ್ ನಹೀಂ ಸಸುರಾಲ್ ಯಾರ್ ಹಮ್ ಬಿಹಾ ಕರನ್ ಕೋ ಜಾಯೆಂಗೆ' (ಅದು ಜೈಲಲ್ಲ, ಮಾವನ ಮನೆ. ಅಲ್ಲಿಗೆ ನಾವು ಮದುವೆಯಾಗಲು ಹೋಗುತ್ತಿದ್ದೇವೆ). ಆದರೆ ಜೈಲಿನಲ್ಲೂ ಸರ್ಕಾರ ನಮಗೆ ವಿಧವಿಧವಾದ ಕಷ್ಟಗಳನ್ನು ಕೊಟ್ಟಿತು. ಅನ್ನದಲ್ಲಿ ಹುಳು ಬೆರೆಸುತ್ತಿದ್ದರು. ಹುಲ್ಲುಕಡ್ಡಿ ಬೆರೆತಿರೋ ತರಕಾರಿ ಕೊಡುತ್ತಿದ್ದರು. ಸರಿ, ನಾವು ಅನಶನ ಷುರು ಮಾಡಿದೆವು. ಪ್ರೀತಿಯ ಬಂಧುಗಳೇ, ಐದು ದಿನಗಳವರೆಗೆ ಒಂದೇ ಸಮನೆ ನಿರ್ಜಲ ಉಪವಾಸ ಮಾಡಿದೆವು. ಆಗ ಕಲೆಕ್ಟರ್, ಇನ್ಸ್‌ಪೆಕ್ಟರ್, ಜಡ್ಜ್ ಎಲ್ಲರೂ ಬಂದರು. ನಮ್ಮ ಬೇಡಿಕೆಗಳನ್ನು ಪೂರೈಸಿದರು. ಊಟಕ್ಕೆ ಹಾಲು–ಹಲ್ವ ಕೊಟ್ಟರು. ನಾವು ಹೇಳಿದೆವು: 'ಹಾಲು–ಹಲ್ವ ನಿಮ್ಮ ಮಕ್ಕಳು ಮರಿಗೆ ಕೊಡಿ. ನಮಗೆ ಒಳ್ಳೆ ಅಕ್ಕಿಯ ಅನ್ನ ಕೊಟ್ಟರೆ ಸಾಕು.' ಬಂಧುಗಳೇ, ನಾವು ಸೇವಾವ್ರತವನ್ನು ಒಂದು ಸಲ ಸ್ವೀಕರಿಸಿದ ನಂತರ ಅದನ್ನು ಬಿಡಲಾರೆವು. ಬಿರುಗಾಳಿಯ ಹಾಗೆ ಪೋಲೀಸಿನವರು ಲಾಠಿ ಪ್ರಯೋಗಿಸಿದರೂ ನಾವು ಲಕ್ಷ್ಯ ಕೊಡಲಿಲ್ಲ. ನಿಮ್ಮ ಊರಿನಲ್ಲಿ ನಮಗೆ ಸೇವೆ ಮಾಡಲು ಅವಕಾಶ ಕೊಡದಿದ್ದರೆ ನಾನು ಚನ್ನಪಟ್ಟಿಗೇ ಹೊರಟುಹೋಗುತ್ತೇನೆ. ಅಲ್ಲಿ ಆಶ್ರಮ ಇದೆ. ಮನೆ ಮನೆಯಲ್ಲೂ ಚರಖಾ ತಿರುಗುತ್ತಿರುತ್ತದೆ. ಪ್ರತಿ ಮನೆಯಲ್ಲೂ ಗಂಡಸರೂ ಹೆಂಗಸರೂ ಓದುತ್ತಿರುತ್ತಾರೆ. ಮಹಾತ್ಮಾಜಿ, ಜವಹರಲಾಲ್ ನೆಹರೂ, ರಾಜೇಂದ್ರಬಾಬು ಇನ್ನೂ ಅನೇಕ ಜನ ದೊಡ್ಡ ದೊಡ್ಡ ನಾಯಕರು ವರ್ಷಕ್ಕೆ ಒಂದು ಸಾರಿಯಾದರೂ ಬಂದು ಹೋಗುತ್ತಿರುತ್ತಾರೆ. ಚೌಧರಿ ನನಗೆ ಅನೇಕ ಸಲ ಕಾಗದ ಬರೀತಾನೇ ಇರ್ತಾರೆ: 'ಬಾಲದೇವ, ನಿನ್ನ ಹಳ್ಳಿಯಿಂದ ಬಂದುಬಿಡೂ' ಅಂತ. ಆದರೆ ನಾನು ಅವರಿಗೆ ಯಾವಾಗಲೂ ಹೇಳ್ಳೋದಿಷ್ಟೆ. 'ಚೌಧರೀ, ನೀವೇ ನನ್ನ ಗುರುಗಳು. ನಿಮ್ಮ ವಚನವನ್ನು ನಾನು ಮೀರಲಾರೆ. ಆದರೆ ನಿಮ್ಮ ಹಳ್ಳಿ ಮುಂದುವರಿದಿದೆ. ಯಾವ ಹಳ್ಳಿ ಮುಂದುವರಿದಿಲ್ಲವೋ, ಅಲ್ಲೇ ನಾನು ಸೇವೆ ಮಾಡಬೇಕು.'

"ಮೇರೀಗಂಜನ್ನು ಚನ್ನಪಟ್ಟಿಯ ಹಾಗೆ ಮಾಡಬೇಕೆನ್ನುವುದೇ ನನ್ನ ಇಷ್ಟ. ನಾನು ನಿಮ್ಮ ಹಳ್ಳಿಯಲ್ಲಿ ಕಸ ಗುಡಿಸುತ್ತೇನೆ. ಕೊಳಕನ್ನು ತೆಗೆದು ಚೊಕ್ಕಟ ಮಾಡುತ್ತೇನೆ. ನಾವು ಎಲ್ಲ ಕೆಲಸಗಳನ್ನು ಮಾಡಿದ್ದೇವೆ. ಸ್ವತಃ ಮಹಾತ್ಮಾಜಿಯವರೇ ಕೊಳಕು ತೆಗೆದು ಚೊಕ್ಕಟ ಮಾಡಿದ್ದಾರೆ. ಶುದ್ಧವಾಗಿರುವ ಜಾಗದಲ್ಲಿ ವಾಸಿಸುವ ಮನುಷ್ಯರೂ ಶುದ್ಧವಾಗಿರುತ್ತಾರೆ. ಅವರ ಮನಸ್ಸೂ ಶುದ್ಧವಾಗಿರುತ್ತೆ. ಬಾಬು ಜನರನ್ನು ನೋಡಿ. ಅವರ ದೇಶದಲ್ಲಿ

ಗಿಡಮರಗಳೂ ಚೊಕ್ಕಟವಾಗಿರುತ್ತವೆ. ಕೋಟೆಯ ತೋಟದಲ್ಲಿರುವ ಕಲೆಕ್ಟರ್ ಮನೆಯನ್ನೇ ನೋಡಿರಿ. ಹಂಸದಂತೆ ಬೆಳ್ಳಗಿರುತ್ತದೆ. ಆದರೆ ನಿಮಗೆ ನನ್ನನ್ನು ಕಂಡರೆ ಇಷ್ಟವಿಲ್ಲದಿದ್ದರೆ ನಾನು ಹೊರಟುಹೋಗುತ್ತೇನೆ. ನಿಮಗೆ ನಂಬಿಕೆ ಇಲ್ಲದಿದ್ದರೆ, ಓದುವುದನ್ನು ಬಲ್ಲವರು ಈ ಕಾಗದವನ್ನು ಓದಿ ನೋಡಿ. ಇದರಲ್ಲಿ ಏನು ಬರೆದಿದೆ ಅಂತ ನಿಮಗೇ ಗೊತ್ತಾಗುತ್ತೆ. ಟೈಪು ಮಾಡಿರೋ ಕಾಗದ. ಎರಡು ವರ್ಷದ ಹಿಂದೆ ಬಂದಿರೋದು.''

ಯಾರು ಓದುತ್ತಾರೆ? ಒಳ್ಳೆ ಸಮಯದಲ್ಲಿ ಇಂಗ್ಲೀಷ್ ಕಲಿತವರೆಲ್ಲಾ ಮನೆಯಲ್ಲೇ ಇದ್ದಾರೆ····ಯಾರಾದರೂ ಓದಿ. ಖೇಲಾವನ್ ತನ್ನ ಮಗ ಸಕಲದೀಪನಿಗೆ ಹೇಳಿದ: ''ಓದು ಹೋಗು.'' ಅವನಾದರೋ ತುಂಬಾ ನಾಚಿಕೆಯ ಸ್ವಭಾವದವನು.

''ಹರಗೌರೀ, ನೀನು ಓದಪ್ಪ.''

ಪಾಸವಾನ ಪಂಗಡದ ರಾಮಚಂದರನ ಅಣ್ಣನ ಮಗ ಸೇವಾಲಾಲ್ ಎದ್ದು ನಿಂತ. ಬಾಲದೇವನ ಕೈಯಿಂದ ಕಾಗದ ತೆಗೆದುಕೊಂಡು ಓದಲಾರಂಭಿಸಿದ.

''ಸ್ವಲ್ಪ ಗಟ್ಟಿಯಾಗಿ ಓದು. ಗಂಟಲು ಸರಿ ಮಾಡ್ಕೋ. ಥರ····ಥರ ನಡುಗ್ತಿದೀಯಲ್ಲಾ.''

''ಬಾಲದೇವ ಸಿಂಹಜಿಯವರಿಗೆ, ಮಹಾಶಯ ನಿಮಗೂ ಗೊತ್ತಿರ ಬಹುದು, ಕಸ್ತೂರಿಬಾ ಸ್ಮಾರಕ ನಿಧಿಯ ಒಂದು ಅಸ್ಥಾಯಿ ಕಮಿಟಿಯನ್ನು ನೇಮಕಮಾಡಲು ಕಾಂಗ್ರೆಸ್ಸಿನ ಒಂದು ವಿಶೇಷ ಸಭೆ 8-12-1945 ರಂದು ಪೂರ್ಣಿಯಾ ಧರ್ಮಶಾಲೆಯಲ್ಲಿ ನಡೆಯಲಿದೆ. ಈ ಸಭೆಗೆ ಬಿಹಾರದ ಭೂತಪೂರ್ವ ಮುಖ್ಯ ಮಂತ್ರಿ ಬರುವವರಿದ್ದಾರೆ. ಈ ಮಹತ್ವಪೂರ್ಣ ಸಭೆಗೆ ನೀವು ಉಪಸ್ಥಿತರಾಗುವುದು ತುಂಬಾ ಅವಶ್ಯಕವಾಗಿದೆ.—ನಿಮ್ಮ, ವಿಶ್ವನಾಥ ಚೌಧರಿ.''

''ಹಾಗೇ ಅರ್ಥವನ್ನು ತಿಳಿಸಿಬಿಡು ಸೇವಾಲಾಲ್····ಹೋಗಲಿ ಬಿಡು. ಟೈಪು ಮಾಡಿರುವ ಕಾಗದದ ಅರ್ಥ ಏನು ಹೇಳು?''

ಚೌಧರಿಯವರೂ ಬಾಲದೇವನ ಸಲಹೆಯನ್ನು ತೆಗೆದುಕೊಳ್ಳದೆ ಏನೂ ಮಾಡುವುದಿಲ್ಲ. ಇದು ನಮ್ಮ ಹಳ್ಳಿಯ ಭಾಗ್ಯ. ಬಾಲದೇವನಂತಹ ವಜ್ರ ಇಲ್ಲಿ ಬಂದಿದ್ದಾನೆ. ಅಂದಮೇಲೆ ನಮ್ಮ ಹಳ್ಳಿಯೂ ಇನ್ನು ಖಂಡಿತ ಸುಧಾರಿಸುತ್ತೆ····ಸಿಂಗಜೀ, ಏನೋ ಹೇಳ್ತಿದ್ದಾರೆ ಕೇಳು.

"ಬಾಲದೇವ, ನೀನು ಇಲ್ಲಿಂದ ಹೊರಟುಹೋದರೆ ಅದು ಮೇರೀಗಂಜದ ದುರದೃಷ್ಟವೆಂದೇ ಹೇಳಬೇಕಾಗುತ್ತದೆ. ಹಳ್ಳಿ ಎಂದಮೇಲೆ ಜಗಳ ಕದನ ನಡೀತಾನೇ ಇರುತ್ತೆ. ಎರಡು ಹಂಡೆಗಳನ್ನು ಪಕ್ಕ ಪಕ್ಕದಲ್ಲಿಟ್ಟರೆ ಢಣ ಢಣ ಶಬ್ದ ಆಗೇ ಆಗುತ್ತದೆ. ಹಳ್ಳಿಯಲ್ಲಿ ಒಗ್ಗಟ್ಟನ್ನು ಹೆಚ್ಚಿಸುವುದು, ಹಳ್ಳಿಯ ಉದ್ಧಾರ ಮಾಡುವುದು ನಿಮ್ಮಂತಹವರ ಕೆಲಸ. ಈ ಕೆಲಸದಲ್ಲಿ ಅಡ್ಡಿ ಮಾಡುವವರು ಅಧರ್ಮಿಗಳು. ನೀವು ದೇಶಸೇವಕರು. ಖಳರನ್ನೂ, ದುರ್ಮಾರ್ಗಿಗಳನ್ನೂ ಒಳ್ಳೆಯ ಮಾರ್ಗಕ್ಕೆ ತರುವುದು ನಿಮ್ಮ ಕರ್ತವ್ಯ. ತುಲಸೀದಾಸರು ತಮ್ಮ ಕಾವ್ಯದಲ್ಲಿ ಮೊಟ್ಟಮೊದಲು ಖಳ ಕುಟಿಲರಿಗೆ ವಂದನೆ ಸಲ್ಲಿಸಿದ್ದಾರೆ. ನೀನು ಹಳ್ಳಿ ಬಿಟ್ಟು ಹೋಗಬೇಡ. ತಹಸೀಲ್ದಾರರೂ, ನಾನೂ ಅಣ್ಣತಮ್ಮಂದಿರಂತೆ. ಬಾಲ್ಯದಲ್ಲಿ ಒಟ್ಟಿಗೆ ಆಡಿದೆವು, ಜಗಳ ಆಡಿದೆವು, ಅನಂತರ ಒಂದಾದೆವು. ತಹಸೀಲ್ದಾರಬಾಬೂ, ಹತ್ತಿರ ಬನ್ನಿ. ಕಾಯಸ್ಥರೂ, ರಾಜಪೂತರೂ ಸೇರಿ ಮಹಾರಾಣಿ ಚಂಪಾವತಿಯ ರಾಜ್ಯವನ್ನೇ ಹಾಳುಮಾಡಿದರೂ ಅಂಥ ಜನ ನಮ್ಮಿಬ್ಬರ ವಂಶದ ಹೆಸರಿಗೂ ಕಪ್ಪು ಮಸಿ ಬಳಿದಿದ್ದಾರೆ. ಈಗ ಮತ್ತೊಮ್ಮೆ ನಾವಿಬ್ಬರೂ ಒಂದಾಗೋಣ."

ಸಿಂಗಜೀ ತಮ್ಮ ದೀರ್ಘ ಭಾಷಣವನ್ನು ಮುಗಿಸಿ ಪಂಚಾಯಿತಿಯಲ್ಲಿ ಕುಳಿತ ಜನರ ಕಡೆ ನೋಡಿದರು.

ಪಂಚಾಯಿತಿಯ ಜನ ಗಹಗಹಿಸಿ ನಕ್ಕರು. ಜನ ಬಿದ್ದು ಬಿದ್ದು ನಕ್ಕರು. ...."ತೀರಾ ಭೋಳೆ ಮನುಷ್ಯ ಈ ಸಿಂಗ್. ಮನಸ್ಸಿನಲ್ಲಿ ಯಾವ ಮರೆ ಮೋಸವನ್ನೂ ಇಟ್ಕೊಳ್ಳೋದಿಲ್ಲ. ಸರಳ ಸ್ವಭಾವದ ಮನುಷ್ಯ....."

ಸಿಂಗಜೀ ತಹಸೀಲ್ದಾರರ ಕೈ ಹಿಡಿದು ಎಬ್ಬಿಸಿದರು. ಇಬ್ಬರೂ ಆಲಂಗಿಸಿ ಕೊಂಡರು.

"ಒಂದು ಬಾರಿ ಪ್ರೀತಿಯಿಂದ ಹೇಳಿ"

"ಗಾಂಧೀ ಮಹಾತ್ಮರಿಗೆ ಜಯವಾಗಲಿ."

"ಜಯವಾಗಲಿ: ಜಯವಾಗಲಿ"

ಇನ್ನು ಸಮಾರಾಧನೆ ನಡೆಯುತ್ತದೆ. ಎರಡು ದಿನದಿಂದ ತಮ್ಮ ಎಲೆಗೆ ಬಿದ್ದ ಪೂರಿ ಜಿಲೇಬಿಯು ಮಾಯವಾಗುತ್ತದೇನೋ ಎಂದು ಜನರಿಗೆ ಅನ್ನಿಸು ತ್ತಿತ್ತು....ಆದಿನ ಕೀರ್ತನೆ, ನೃತ್ಯಗಳು ನಡೆಯುತ್ತವೆ....

ಆಗಮೂ ಚೌಕೀದಾರ ಹೇಳುತ್ತಿದ್ದ : "ಮಹಾತ್ಮಾ ಗಾಂಧಿಯವರ ಬಾವುಟ ಹಾರಿಸಬಾರದು, ಏಟು ಬೀಳುತ್ತದೆ" ಎಂದು. ಅನಶನ ಮಾಡಿಬಿಟ್ಟರೆ ವೈಸ್‌ರಾಯ್, ಆಫೀಸರ್, ಕಲೆಕ್ಟರ್ ಎಲ್ಲಾ ಹೆದರಿಬಿಡುತ್ತಾರೆ!.... ಇಡೀ ಸಭೆಯಲ್ಲಿ ಈ ಸ್ನೇಹ ಬಾಂಧವ್ಯದಿಂದ ವಿರುದ್ಧ ಪರಿಣಾಮ ಉಂಟಾಗಿದ್ದು ಇಬ್ಬರು ವ್ಯಕ್ತಿಗಳ ಮೇಲೆ ಮಾತ್ರ. ಸಿಂಗಜಿ ಎಷ್ಟು ಜಾಣತನದಿಂದ ಫೇಲಾವನ ಸಿಂಹ ಯಾದವನನ್ನು ಉದಾಸೀನ ಮಾಡಿದರು ಎನ್ನುವುದು ಬೇರೆ ಯಾರಿಗೂ ತಿಳಿಯಲಿಲ್ಲ. ಆದರೆ ಫೇಲಾವನನಿಗೆ ಎಲ್ಲಾ ಅರ್ಥವಾಯಿತು.

ಸಿಂಗಜೀ ಫೇಲಾವನನ ಹೆಸರೂ ಎತ್ತಲಿಲ್ಲ. ಈ ತಹಸೀಲ್ದಾರರನ್ನು ನೋಡು. ಗೋಸುಂಬಿ ಹಾಗೆ ಎಷ್ಟು ಬೇಗ ಬಣ್ಣ ಬದಲಾಯಿಸಿಬಿಟ್ಟರು. ಜಗಳ ಕದನ ಇದ್ದದ್ದು ಯಾದವರೊಂದಿಗೆ; ಆಲಿಂಗನ ಮಾಡಿಕೊಂಡದ್ದು ತಹಸೀಲ್ದಾರರು. ಫೇಲಾವನನನ್ನು ಅಪಕ್ವ ಬುದ್ಧಿಯವನು ಎಂದುಕೊಂಡರೇನೋ. ಎಲ್ಲಾ ಜಾಣತನವೂ ಅರ್ಥವಾಗುತ್ತದೆ. ಬಾಲದೇವ, ಪ್ರಪಂಚದ ಜ್ಞಾನಭಂಡಾರವನ್ನೆಲ್ಲಾ ತಿಳಿದವನಂತೆ ಮಾತನಾಡುತ್ತಾನೆ. ಆದರೆ ಇಷ್ಟೂ ಅರ್ಥವಾಗುವುದಿಲ್ಲ. ಸಿಂಗಜೀ ತಹಸೀಲ್ದಾರರೊಂದಿಗೆ ಸೇರುತ್ತಿರುವುದೇಕೆ? ಒಗ್ಗಟ್ಟು ಸ್ನೇಹ ಆಗಬೇಕಾಗಿದ್ದುದು ಯಾದವ ಮುಖಂಡನೊಂದಿಗೆ. ಸ್ವರಾಜ್ಯವಾದಿ ಆದರೇನು ಜಾತಿ ಬುದ್ಧಿ ಹೋಗುವುದಿಲ್ಲ. ಎಷ್ಟು ಮರ್ಯಾದೆಯಿಂದ ಮನೇಲಿ ಇಟ್ಟುಕೊಂಡಿದೀನಿ. ಊಟ ಹಾಕ್ತಿದೀನಿ. ಸಮಯದಲ್ಲಿ ತಲೆಗೆಲ್ಲಾ ಒಂದೇ ಮಂತ್ರ ಅಂತ ಮಾಡಿಬಿಟ್ಟ....

ಜೋಯಿಸರಿಗೆ ಫೇಲಾವನಸಿಂಹನ ಮುಖ ನೋಡಿದ ಕೂಡಲೇ ಎಲ್ಲ ಅರ್ಥವಾಗಿಹೋಯಿತು. ದಪ್ಪ ಚರ್ಮದ ಮೇಲೂ ಪ್ರಭಾವ ಬಿದ್ದಿದೆ! ಅವರೆಂದರು :

"ಫೇಲಾವನ್‌ಬಾಬು, ಸಕಲದೀಪನ ಜಾತಕ ಕಾಶಿಯಿಂದ ಬಂತೇನು? ನಾನೊಂದು ಸಲ ನೋಡಬೇಕಾಗಿತ್ತು. ಇದುವರೆಗೆ ನಾನು ಮಾಡಿದ ಲೆಕ್ಕವನ್ನು ಕಾಶಿಯ ಪಂಡಿತರು ತಪ್ಪು ಅಂತೇನೂ ಹೇಳಿಲ್ಲವಲ್ಲ?"

"ನಾಳೆ ಬೆಳಗ್ಗೆ ಬನ್ನಿ ಜೋಯಿಸರೇ ಎಷ್ಟೋ ದಿನಗಳಿಂದ ನೀವು ನಮ್ಮನೇ ಕಡೆ ಬಂದೇ ಇಲ್ಲ. ಸಕಲದೀಪ ಹೈಸ್ಕೂಲಿನಲ್ಲಿ ಸಂಸ್ಕೃತಾನೂ ಓದ್ತಿದ್ದಾನೆ. ಸಂಸ್ಕೃತದಲ್ಲಿ ಅವನ ಬುದ್ಧಿ ಹೇಗಿದೆ ಸ್ವಲ್ಪ ಪರೀಕ್ಷೆ ಮಾಡಿ ನೋಡಿ."

ಮಧ್ಯಾಹ್ನ ಪಂಚಾಯಿತಿಯ ಸಭೆ ಸೇರಿತು. ಸಂಜೆಯ ಹೊತ್ತಿಗೆ ಮುಗಿಯಿತು. ಅನೇಕ ದಿನಗಳ ನಂತರ ಜನ ಪಂಚಾಯಿತಿಯಲ್ಲಿ ಕುಳಿತಿದ್ದಾರೆ. ಮತ್ತೆ ಜನರಲ್ಲಿ ಸೌಹಾರ್ದಭಾವ ಮೂಡಿದೆ.

ನಾಳೆಯೇ ಸಮಾರಾಧನೆ. ಬೆಳಗ್ಗೆಯಿಂದಲೇ ಆಸ್ಪತ್ರೆಯ ಎದುರಿನ ಭೂಮಿಯನ್ನು ಶುದ್ಧ ಮಾಡಿ ಕುಂಕುಮ ಹೂವುಗಳಿಂದ ಅಲಂಕರಿಸಬೇಕು. ಶಾಮಿಯಾನಾ ಹಾಕಬೇಕು. ಭಕ್ಷ್ಯಗಳನ್ನು ಮಾಡುವವರು ಮುಂಜಾವಿನಿಂದಲೇ ಬಂದುಬಿಡುತ್ತಾರೆ. ಈಗ ಹಗಲು ಚಿಕ್ಕದು. ಇನ್ನೂ ಮಧ್ಯಾಹ್ನ ಇರುವಂತೆಯೇ ಸಂಜೆ ಆಗೇಬಿಡುತ್ತದೆ. ವೈಸ್ ಛೇರಮನ್ ಬಾಲದೇವಜೀಗೆ ಹೇಳಿಕಳುಹಿಸಿದ್ದಾರೆ. ಡಾಕ್ಟರನ್ನು ಕರ್ಕೊಂಡು ಬರೋದಕ್ಕೆ ನಾಲ್ಕು ಎತ್ತಿನ ಗಾಡಿಗಳು ಸ್ಟೇಷನ್ನಿಗೆ ಹೋಗಬೇಕಂತೆ. ನಾಳೆ ಬೆಳಗ್ಗೆಯೇ ಆಸ್ಪತ್ರೆಯಲ್ಲಿ ಎಲ್ಲರೂ ಸೇರಬೇಕು. ಕೆಲಸ ಹಂಚಿಕೊಳ್ಳಬೇಕು. ಇಷ್ಟು ದೊಡ್ಡ ಸಂತರ್ಪಣೆ ನಡೆಸೋದು ಅಂದರೆ ಹುಡುಗಾಟವೇ !

ಎಲ್ಲರೂ ಒಬ್ಬರಾಗುತ್ತಲೊಬ್ಬರು ಮಹಂತರಿಗೆ ನಮಸ್ಕಾರ ಮಾಡಿ ಬೀಳ್ಕೊಂಡರು.

ಬಾಲದೇವನನ್ನು ಮಾತ್ರ ಮಹಂತರು ತಡೆದರು. "ಬಾಲದೇವ, ನೀನು ಸ್ವಲ್ಪ ನಿಲ್ಲು. ನಾಳೆ ಸಮಯ ಸಿಗಲಾರದು. ಈಗಲೇ ಸ್ವಲ್ಪ ಲೆಕ್ಕಾಚಾರ ಮುಗಿಸಿಬಿಟ್ಟರೆ ಒಳ್ಳೆಯದು. ಸ್ವಲ್ಪ ಹೊತ್ತು ಕುಳಿತುಕೊಂಡು 'ಬೀಜಕ' ಓದುತ್ತಿರು. ನಾನು ನಿತ್ಯಕ್ರಿಯೆ ಮುಗಿಸಿ ಬರುತ್ತೇನೆ. ರಾಮದಾಸ ಎಲ್ಲಿ? ಕೊಡದಲ್ಲಿ ನೀರು ತುಂಬು."

ಬಾಲದೇವ ಬೆಂಕಿಯ ಹತ್ತಿರ ಕುಳಿತು ಬೀಜಕದ ಪುಟ ತಿರುಗಿಸಲಾರಂಭಿಸಿದ :

ಬೀಜಕ ಬತಾವೆ ವಿತ್ತ ಕೋ
ಜೋ ವಿತ್ತ ಗುಪ್ತ ಹೋಯ್,
ಶಬ್ದ ಬತಾವೆ ಬೀಜಕೋ
ಬೂಝು ಬಿರಲಾ ಕೋಯ್ :

[ಗುಪ್ತವಾಗಿ ಒಳಗೆ ಅಡಗಿರುವ ಶಕ್ತಿಯನ್ನು ಬೀಜಕ ತಿಳಿಸುತ್ತದೆ. 'ಬೀಜ'ದ ವಿಚಾರವನ್ನು ಶಬ್ದ ತಿಳಿಸುತ್ತದೆ. ಆದರೆ ಅದನ್ನು ಅರ್ಥಮಾಡಿಕೊಂಡಿರುವವರು ಕೆಲವರು ಮಾತ್ರ.]

ಲಕ್ಷ್ಮಿ ಲಾಟೀನು ಹಚ್ಚಿಸಿಕೊಂಡು ಬಂದು ಮುಂದೆ ತಂದಿಟ್ಟಳು. ಅಕ್ಷರ ಸ್ಪಷ್ಟವಾಯಿತು 'ಸಂತೋ, ಸಾರೆ ಜಗ ಚಾರಾನೆ' ಸಂತರೇ! ಇಡೀ ಜಗತ್ತೇ ಹುಚ್ಚಿನದು....ಲಕ್ಷ್ಮಿಯ ಶರೀರದಿಂದ ಒಂದು ವಿಶೇಷ ರೀತಿಯ ಸುಗಂಧ ಬರುತ್ತದೆ. ಪಂಚಾಯಿತಿಯಲ್ಲಿ, ಲಕ್ಷ್ಮಿ ಬಾಲದೇವನಿಗೆ ಸಮೀಪದಲ್ಲೇ ಕುಳಿತಿದ್ದಳು. ಬಾಲದೇವನಿಗೆ ರಾಮನಗರ ಜಾತ್ರೆಯಲ್ಲಿ ದುರ್ಗಾ ಮಂದಿರದಿಂದ ಬಂದ ಸುಗಂಧವೇ ಈಗಲೂ ಬಂತು—ಮನೋಹರವಾದ ಸುಗಂಧ! ಪವಿತ್ರವಾದ ಗಂಧ....ಸಾಮಾನ್ಯವಾಗಿ ಹೆಂಗಸರ ಮೈಯಿಂದ ಅರಶಿನ, ಈರುಳ್ಳಿ, ಬೆಳ್ಳುಳ್ಳಿ, ಮತ್ತು ಬೆವರಿನ ವಾಸನೆ ಬರುತ್ತದೆ....ಆದರೆ....ಲಕ್ಷ್ಮಿಯ....!

## 6

ಬಾಲದೇವನಿಗೆ ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ.

ಮಠದಿಂದ ಹಿಂತಿರುಗಿದಾಗಲೇ ಹೊತ್ತಾಗಿತ್ತು. ಹಿಂತಿರುಗಿ ಬಂದ ಮೇಲೆ ತಿಳಿಯಿತು: ಖೇಲಾವನನ ಆರೋಗ್ಯ ಸರಿಯಾಗಿಲ್ಲ. ಅಂಗಳದಲ್ಲಿ ಮಲಗಿದ್ದರೆ ಅದರ ಅರ್ಥ ಅವರಿಗೆ ಆರೋಗ್ಯ ಸರಿಯಾಗಿಲ್ಲ ಜ್ವರ ಬಂದಿದೆ, ತಲೆನೋವು ಬಂದಿದೆ ಅಥವಾ ಚಳಿಯಾಗಿದೆ ಎಂದು. ಆದರೆ ಗೃಹಿಣಿಯೇ ಇಲ್ಲದವನು ಅಂಗಳದಲ್ಲಿ ಮಲಗಿಯಾದರೂ ಏನು ಪ್ರಯೋಜನ! ಅಂಗಳದಲ್ಲಿ ಮಲಗಿಕೊಳ್ಳುವು ದರ ಕಾರಣ, ಮನೆಯಾಕೆಯಿಂದ ಸೇವೆ ಮಾಡಿಸಿಕೊಳ್ಳುವುದು. ಊಟ ಮಾಡು ವಾಗ ಅತ್ತಿಗೆ ಹೇಳಿದಳು: "ಖೇಲಾವನನಿಗೆ ಹೊಟ್ಟೆ ಉಬ್ಬರಿಸಿಕೊಂಡಿದೆ" ಎಂದು. ಕಹಿ ಎಣ್ಣೆ ಹಾಕಿ ಹೊಟ್ಟೆ ಸವರಿದಾಗ ತುಂಬಾ ನರಳುತ್ತಿದ್ದನಂತೆ.

ಅತ್ತಿಗೆಯೂ ಅನ್ಯಮನಸ್ಕಳಾಗಿದ್ದಳು. ಮಿಕ್ಕ ದಿನಗಳಂತೆ ಎದುರಿಗೆ ಕೂತು ಮಾತನಾಡಲಿಲ್ಲ. ಪ್ರತಿದಿನ ಅತ್ತಿಗೆ ಅಗ್ಗಿಷ್ಟಿಕೆಯ ಹತ್ತಿರ ಕುಳಿತು ಹುಕ್ಕಾ ಸೇದುತ್ತಿದ್ದಳು. ಬಾಲದೇವ ಜೈಲಿನ ವಿಚಾರ ಹರಟೆ ಕೊಚ್ಚುತ್ತಿದ್ದ. ಇಂದು ಪಂಚಾಯಿತಿಯಲ್ಲಿ ನಡೆದ ವಿಚಾರವಾಗಿ ಅತ್ತಿಗೆಯೊಡನೆ ಹರಟೆ ಕೊಚ್ಚ ಬೇಕೆಂದುಕೊಂಡಿದ್ದ. ಆದರೆ ಅವಳಿಗೆ ಮಾತನಾಡುವ ಇಚ್ಛೆಯೇ ಇದ್ದಂತಿರ ಲಿಲ್ಲ. ಊಟ ಮುಗಿಸಿ ಬಾಲದೇವನೂ ಮಲಗಲು ಎದ್ದು ಹೋದ.

....ನಿದ್ದೆ ಬಂದಿರಲಿಲ್ಲ. ಖದ್ದರಿನ ಪಂಚೆ ಕೊಳೆಯಾದಾಗ ತುಂಬಾ ಚಳಿಯಾಗುತ್ತದೆ....ಪದೇ ಪದೇ ಲಕ್ಷ್ಮಿ ದಾಸಿಯ ನೆನಪು ಬರುತ್ತಿದೆ.... ಬರುವಾಗ ಅವಳು ಹೇಳಿದ್ದಳು "ಇಂದು ಇಲ್ಲೇ ಪ್ರಸಾದ ಸ್ವೀಕರಿಸಿ ಬಾಲದೇವಜೀ" ಎಂದು....ಪ್ರಸಾದ?....ಲಕ್ಷ್ಮಿಯ ಶರೀರದಿಂದ ಬರುತ್ತಿದ್ದ ಸುಗಂಧ....! ಈವತ್ತು ತಾಯಿಯ ನೆನಪು ಬಹಳ ಬರುತ್ತಿದೆ. ಹಳ್ಳಿಯ ಜನ ಬಾಲದೇವನನ್ನು ಅನಾಥ ಎನ್ನುತ್ತಿದ್ದರು. ಅದನ್ನು ಕೇಳಿದಾಗ ಲೆಲ್ಲಾ ತಾಯಿಗೆ ತುಂಬಾ ಸಿಟ್ಟು ಬರುತ್ತಿತ್ತು. 'ತಂದೆ ಸತ್ತರೇನು? ತಾಯಿ ಯಿಲ್ಲವೇ? ನನ್ನ ಬಾಲದೇವ ಅನಾಥನಲ್ಲ'....ತಾಯಿ ಈಗಲೂ ತನ್ನ ಬೆನ್ನು ಸವರುತ್ತಿರುವಂತೆ ಅವನಿಗೆ ಭಾಸವಾಗುತ್ತಿದೆ.

ತಾಯಿ ಸತ್ತು ಹೋದ ಮೇಲೆ ಅನೇಕ ದಿನಗಳವರೆಗೆ ಬಾಲದೇವ ಅಜೋಫೀ ಭಗತನ ಎಮ್ಮೆ ಮೇಯಿಸುತ್ತಿದ್ದ. ಅಜೋಫೀ ಭಗತನ ನೆನಪು ಬಂದ ಕೂಡಲೇ ಬಾಲದೇವನ ದೇಹವೆಲ್ಲಾ ಕಂಪಿಸಿತು. ಅಬ್ಬಾ, ಆ ಮುದುಕ ಎಂಥ ಪಿಶಾಚಿ! ಮುದುಕಿಯಂತೂ ಪಕ್ಕಾ ಕಾಡುಬೆಕ್ಕು! ಗುಳ್ಳೆನರಿಯ ಹಾಗೆ ಯಾವಾಗಲೂ ಲೊಟಗುಟ್ಟುತ್ತಾ ಇರುತ್ತಿದ್ದಳು. ದಿನವೆಲ್ಲಾ ಎಮ್ಮೆ ಮೇಯಿಸಿ ಬಂದ ಮೇಲೆ ಭಗತನ ಪ್ಯೆಯನ್ನು ಒತ್ತಿ ಒತ್ತಿ ಬಾಲದೇವನ ಬೆರಳೆಲ್ಲಾ ನೋಯತೊಡಗು ತ್ತಿದ್ದವು. ನಿದ್ದೆಯಿಂದ ರೆಪ್ಪೆಗಳು ಭಾರವಾಗುತ್ತಿದ್ದವು. ಆದರೆ ಸ್ವಲ್ಪವಾದರೂ ತೂಕಡಿಸಿದರೆ ಮುಗಿಯಿತು. ಮುದುಕನ ಬೆರಳಿನ ಪೆಟ್ಟು ಚುರುಕಾಗಿಯೇ ಬೀಳುತ್ತಿತ್ತು! ಬಾಲದೇವ ಚಿಕ್ಕಂದಿನಿಂದಲೂ ಏಟು ತಿಂದೇ ಬೆಳೆದಿದ್ದಾನೆ— ಗುದ್ದು, ಬೆತ್ತದ ಏಟು, ಲಾಠಿಯ ಪೆಟ್ಟು....ಆದರೆ, ಬಹುಶಃ ಒಣಗಿದ ಚರ್ಮದ ಪೆಟ್ಟು ಹೆಚ್ಚು ತಗಲುತ್ತದೇನೋ!....ಆದರೆ ರೂಪವಂತಿಯ ಹೃದಯ ಮಾತ್ರ ಮೇಣದಂತೆ. ಅಂತಹ ದಯಾಹೀನ ತಂದೆತಾಯಿಗಳಿಗೆ ಅಂತಹ ದಯಾಳು ಮಗಳು ಹೇಗೆ ಹುಟ್ಟಿದಳೋ ಅರ್ಥವಾಗುವುದಿಲ್ಲ. ವೃದ್ಧರಿಗೆ ರಾತ್ರಿಯೆಲ್ಲಾ ನಿದ್ದೆ ಬರುತ್ತಿರಲಿಲ್ಲ. ಅರ್ಧ ರಾತ್ರಿ ಕಳೆಯುವ ಹೊತ್ತಿಗೆ ಎಮ್ಮೆ ಮೇಯಿಸಲು ಎಬ್ಬಿಸಿಬಿಡುತ್ತಿದ್ದರು. ಅರ್ಧರಾತ್ರಿಯಲ್ಲಿ ಹಿಪ್ಪಲಿ ಮರದ ಮೇಲೆ ಕೂತ ಗೂಬೆ ತನ್ನ ಅವಲಕ್ಷಣ ಸ್ವರದಲ್ಲಿ ಕೂಗಲಾರಂಭಿಸುತ್ತಿತ್ತು. ಈ ಕಡೆ ಮುದುಕನೂ ಅದೇ ಧ್ವನಿಯಲ್ಲಿ ಕಿರುಚುತ್ತಿದ್ದ. "ಏ ಗತಿಗೆಟ್ಟೋನೆ, ಬೆಳಗಾಯಿತು ಏಳು. ಎಮ್ಮೆ ಬಿಚ್ಚು...." ರೂಪವಂತಿ ಮಾತ್ರ ಎಂದೂ ಹಾಗೆ ಕರೆಯುತ್ತಿರಲಿಲ್ಲ. ಚಿಕ್ಕದಾಗಿ 'ಬಲ್ಲೀ' ಎನ್ನುತ್ತಿದ್ದಳು. ಬೆಳಿಗ್ಗೆ ನಾಲ್ಕು ಸೇರು, ಸಂಜೆ ಮೂರು ಸೇರು ಹಾಲು ಸಿಗುತ್ತಿತ್ತು ಆದರೆ ಮುದುಕಿ ಅವನಿಗೆ

ಎಂದೂ ಒಂದು ಕಪ್ಪೆಚಿಪ್ಪಿನಷ್ಟು ಮೊಸರನ್ನೂ ಸಹ ಕೊಟ್ಟಿರಲಿಲ್ಲ. ರೂಪಮತಿ ದಿನಾಗಲೂ ತಾಯಿಗೆ ಕಾಣದಂತೆ ಅನ್ನದ ಕೆಳಗೆ ಹಾಲಿನ ಕೆನೆ ಇಟ್ಟಿರುತ್ತಿದ್ದಳು. ಮುದುಕ–ಮುದುಕಿ ಕೂಡಿಸಿಟ್ಟ ಹಣವನ್ನೆಲ್ಲಾ ಕೊನೆಗೆ ದರೋಡೆಗಾರರು ದೋಚಿಕೊಂಡು ಹೋದರು····ಈಚಿಗೆ ರೂಪಮತಿಯನ್ನು ನೋಡಿದ್ದೆ.... ಬಹಳ ದಿನಗಳ ನಂತರ ಅತ್ತೆಯ ಮನೆಯಿಂದ ಬಂದಿದ್ದಳು. ಅವಳಿಗೆ ಈಗ ಮೂರು ಜನ ಮಕ್ಕಳಿದ್ದಾರೆ. ದೊಡ್ಡ ಮಗಳಂತೂ ರೂಪಮತಿಯ ಹಾಗೇ ಇದ್ದಾಳೆ. ಅದೇ ನಗು····

····ಮಾಯಾಜಿಯ ನೆನಪು ಬರುತ್ತಿದೆ. ಮಾಯಾಜೀ ರಾಮಕಿಸನ ಬಾಬುವಿನ ಹೆಂಡತಿ. ಮೊಟ್ಟಮೊದಲು ಸಭೆ ನಡೆದದ್ದು 'ಚನ್ನಪಟ್ಟಿ' ಯಲ್ಲಿ. ಸಭೆಗೆ ರಾಮಕಿಸನಬಾಬು, ಅವನ ಹೆಂಡತಿ, ಚೌಧರಿಯವರು, ತಿವಾರಿಜೀ ಬಂದಿದ್ದರು····ರಾಮಕಿಸನರು ರೂಪವಂತರು. ದೊಡ್ಡ ದೊಡ್ಡ ಕಣ್ಣುಗಳು. ಭಾಷಣ ಮಾಡಿದರೆ ಹುಲಿ ಗರ್ಜಿಸಿದಂತಾಗುತ್ತಿತ್ತು. ವಕಾಲತ್ತು ಮಾಡುತ್ತಿದ್ದಾಗ ಅವರು ಚರ್ಚೆ ಮಾಡುವಾಗ ಹಳೆಯ ಕಛೇರಿಯ ಮೇಲ್ಛಾವಣಿಯ ಗಾರೆಯೆಲ್ಲಾ ಉದುರುತ್ತಿತ್ತಂತೆ! ಅವರ ವಿರುದ್ಧವಾಗಿ ತೀರ್ಪು ಕೊಡುವುದು ಯಾವ ಮ್ಯಾಜಿಸ್ಟ್ರೇಟರಿಗೂ ಸಾಧ್ಯವಿರಲಿಲ್ಲವಂತೆ! ಆದರೆ ಮಹಾತ್ಮಾಜಿಯವರ ಉಪದೇಶ ಕೇಳಿದ ಮೇಲೆ ಎಲ್ಲವನ್ನೂ ಬಿಟ್ಟುಬಿಟ್ಟರು. ಹೆಂಡತಿಯ ಜೊತೆಗೆ ಹಳ್ಳಿ ಹಳ್ಳಿ ಸುತ್ತಲಾರಂಭಿಸಿದರು. ಮಾಯಾಜಿಯವರ ಕಾಲಿನ ಚರ್ಮ ಸುಲಿದು ಪಾದಗಳು ರಕ್ತದಿಂದ ತೊಯ್ದಿರುತ್ತಿದ್ದವು. ಮಾಯಾಜಿಯ ನೋವನ್ನು ನೋಡಿ, ರಾಮಕಿಸನಬಾಬುವಿನ ಭಾಷಣ ಕೇಳಿ, ತಿವಾರಿಜಿಯ ಹಾಡನ್ನು ಕೇಳಿದ ಮೇಲೆ ಬಾಲದೇವನಿಗೆ ಸುಮ್ಮನಿರಲಾಗಲಿಲ್ಲ. ಯಾರು ತಾನೇ ಆ ಸೆಳೆತದಿಂದ ತಪ್ಪಿಸಿಕೊಳ್ಳಬಲ್ಲರು? ಯಾರೋ ಎಳೆಯುತ್ತಿದ್ದಂತೆ ಭಾಸವಾಗುತ್ತಿತ್ತು····"ಗಂಗಾರೆ ಜಮುನವಾಂ ಕೀ ಧಾರ್ ನಯನವಾಂಸೆ ನೀರ ಬಹೀ: ಫೂಟಲ್ ಭಾರತಿಯಾಕೆ ಭಾಗ್ ಭಾರತಮಾತಾ ರೋಯಿರಹೀ" (ಗಂಗಾ ಯಮುನಾ ನದಿಗಳ ನೀರೇ ಕಣ್ಣೀರಾಗಿ ಹರಿಯಿತು. ಭಾರತೀಯರ ಕೆಟ್ಟ ಅದೃಷ್ಟವನ್ನು ನೋಡಿ ಭಾರತಮಾತೆ ಅಳುತ್ತಿದ್ದಾಳೆ).

····ಮಾಯಾಜಿಯ ಪಾದದ ಚರ್ಮ ಕಿತ್ತುಹೋಗಿತ್ತು. ಭಾರತಮಾತೆ ಅಳುತ್ತಿದ್ದಳು. ಅವನು ತಕ್ಷಣ ರಾಮಕಿಸನ ಬಾಬುಗಳ ಹತ್ತಿರ ಹೋಗಿ ಹೇಳಿದ್ದ: "ನನ್ನ ಹೆಸರನ್ನೂ ಚಳವಳಿಗಾರರ ಪಟ್ಟಿಯಲ್ಲಿ ಸೇರಿಸಿಕೊಳ್ಳಿ." ಆದಿನದ ಸಭೆಯಲ್ಲಿ ಮೂರು ಜನರ ಹೆಸರನ್ನು ಬರೆದುಕೊಂಡರು—ಬಾಲದೇವ, ಬಾವನ

ದಾಸ ಮತ್ತು ಚುನ್ನೀಗುಸಾಯಿ. ಚೌಧರಿ ಅವನನ್ನು ಅದೇ ಜಿಲ್ಲೆಯ ಆಫೀಸಿಗೆ ಕರೆದುಕೊಂಡು ಹೋಗಿದ್ದರು. ಮಾಯಾಜಿಯವರು ಯಾವಾಗಲೂ ಆಫೀಸಿಗೆ ಬರುತ್ತಿದ್ದರು. ಅವರು ಸಿಟ್ಟಾಗಿದ್ದುದನ್ನು ಅವನು ಒಂದು ದಿನವೂ ನೋಡಿರಲಿಲ್ಲ. ಯಾವಾಗಲೂ ನಗುತ್ತಲೇ ಮಾತನಾಡುತ್ತಿದ್ದರು. ಒಂದು ಹಳ್ಳಿಯಿಂದ ಹಿಂತಿರುಗಿ ಬಂದ ಮೇಲೆ ಅವನಿಗೆ ಜ್ವರ ಬಂದಿತು. ದೇಹ ಸುಡುತ್ತಿತ್ತು. ತಲೆ ಸಿಡಿಯುತ್ತಿತ್ತು. ಎಚ್ಚರಿಕೆಯೇ ಇರಲಿಲ್ಲ. ರಾತ್ರಿ ಕಣ್ಣುಬಿಟ್ಟು ನೋಡಿದಾಗ ಹೃದಯ ಹಗುರವಾದಂತಾಯ್ತು. "ಹೇಗಿದ್ದೀ ಬಾಲದೇವ?" ಕತ್ತೆತ್ತಿ ನೋಡಿದರೆ ಮಾಯಾಜಿಯವರು ಹತ್ತಿರದಲ್ಲೇ ಕುರ್ಚಿಯಲ್ಲಿ ಕುಳಿತ್ತಿದ್ದರು. "ಹೇಗಿದೀಯ? ಜ್ವರ ಇದ್ದಾಗ ಹಳ್ಳಿಗೆ ಯಾಕೆ ಹೋಗಬೇಕಾಗಿತ್ತು?····ಮಲಕ್ಕೋ"....ಹಣೆಯ ಮೇಲೆ ಕೈಯಿಟ್ಟು ಮಾಯಾಜಿ ಹೇಳಿದ್ದರು: "ಜ್ವರ ಇಳಿದಿದೆ." ಮಾಯಾಜಿ ಕೈಯಿಟ್ಟ ಕೂಡಲೇ ನಿದ್ದೆ ಬಂದಿತ್ತು. ಮಾರನೆಯ ದಿನ ಬಾವನದಾಸ ಹೇಳಿದ: "ನನಗೆ ಜ್ವರ ಬಂದಿದೆ ಅಂತ ಮಾಯಾಜಿಗೆ ತಿಳಿದ ಕೂಡಲೆ, ನನ್ನನ್ನೂ ಕರೆದುಕೊಂಡು ಆಫೀಸಿಗೆ ಬಂದುಬಿಟ್ಟರು. ಥರ್ಮಾಮೀಟರಿನಿಂದ ಜ್ವರ ನೋಡಿದ ಕೂಡಲೆ ಕೂಗೋಕ್ಕೆ ಆರಂಭಿಸಿದರು: 'ನೀರು ತೊಗೊಂಡು ಬಾ, ಗಾಳಿ ಬೀಸು' ಅಂತ. ಆಗಿನಿಂದಾನೂ ಹಣೆ ಮೇಲೆ ನೀರಿನ ಬಟ್ಟೆ ಹಾಕ್ತಾನೇ ಇದ್ದರು. ರಾತ್ರಿ ಹನ್ನೆರಡು ಗಂಟೆವರೆಗೂ····ದೇವರೂ ವಿಚಿತ್ರ! ಒಳ್ಳೆಯವರನ್ನೇ ತನ್ನ ಹತ್ತಿರ ಕರೆಸಿಕೊಂಡು ಬಿಡ್ತಾನೆ. ಎರಡು ಮೂರು ವರ್ಷಗಳಾದ ಮೇಲೆ ರಾಮಕಿಸನಬಾಬು ಒಂದೇ ದಿನದ ಜ್ವರಕ್ಕೆ ದಿವಂಗತರಾದರು. ಹೇ ಭಗವಂತ, ಆದಿನ ಮಾಯಾಜಿಯವರ ಕಡೆ ಕಣ್ಣೆತ್ತಿ ನೋಡೋದೂ ಸಾಧ್ಯವಾಗ್ತಿರಲಿಲ್ಲ. ಅವರ ಆ ದಿನದ ರೂಪ····"ಗಂಗಾರೇ ಜಮುನುವಾಕೀ ಧಾರ್ ನಯನವಾಂಸೆ ನೀರ ಬಹೀ: ಫೂಟಲ್ ಭಾರತೀಯಾಕೆ ಭಾಗ್ ಭಾರತಮಾತಾ ರೋಯಿರಹೀ····" ಗಂಗಾಯಮುನೆಯರ ಪ್ರವಾಹದಂತೆ ಕಣ್ಣಿನಿಂದ ನೀರು ಹರಿಯಿತು. ಭಾರತೀಯರ ಭಾಗ್ಯ ನಷ್ಟವಾಗಿಹೋಯಿತು. ಭಾರತಮಾತೆ ಅಳುತ್ತಿದ್ದಾಳೆ. ನಿಜವಾಗಲೂ ಎಲ್ಲರ ಭಾಗ್ಯವೂ ನಷ್ಟವಾಯಿತು. ವೈಕುಂಠದ ದಿನದಿಂದಲೇ ಜಿಲ್ಲಾ ಆಫೀಸಿಗೆ "ರಾಮಕಿಸನ ಆಶ್ರಮ" ಎಂದು ಹೆಸರಾಯಿತು. ಅದರ ಮಾರನೆಯ ದಿನವೆ ಮಾಯಾಜಿ ಕಾಶಿಗೆ ಹೊರಟುಹೋದರು. ಗಾಡಿಗೆ ಹತ್ತುವ ಮುಂಚೆ, ಕಾಲು ಮುಟ್ಟಿ ನಮಸ್ಕಾರ ಮಾಡಿದಾಗ, ಮಾಯಾಜಿ ಬಿಕ್ಕಿ ಬಿಕ್ಕಿ ಅತ್ತುಬಿಟ್ಟರು, ಹಳ್ಳಿಯ ಹೆಂಗಸರ ಹಾಗೆ. ಬಾವನದಾಸನನ್ನು ನೋಡಿ ಮಾಯಾಜಿ ಹೇಳು

ತ್ತಿದ್ದರು: "ನಮ್ಮ ಠಾಕೂರು" ಎಂದು. ಭೂಮಿಯ ಮೇಲೆ ಬಿದ್ದು ಹೊರಳು ತ್ತಿದ್ದ ಬಾವನದಾಸನನ್ನು ಮೇಲಕ್ಕೆತ್ತಿ ಮಾಯಾಜಿ ಹೇಳಿದ್ದರು: "ಮಹಾತ್ಮಾಜಿ ಯವರಲ್ಲಿ ನಂಬಿಕೆ ಇಡು. ಅವರು ಎಲ್ಲರಿಗೂ ಒಳ್ಳೆಯದನ್ನೇ ಮಾಡುತ್ತಾರೆ ಮಹಾತ್ಮರ ಮಾರ್ಗವನ್ನು ಎಂದೂ ಬಿಡಬೇಡ."

....ಮಾಯಾಜಿ ಈಗ ಎಲ್ಲಿದ್ದಾರೋ?

ಬಿಸಿಯಾದ ಕಣ್ಣೀರು ಬಾಲದೇವನ ಕೆನ್ನೆಯ ಮೇಲಿನಿಂದ ಕೆಳಗೆ ಜಾರಿತು. ತಾಯಿ, ರೂಪವತಿ, ಮಾಯಾಜಿ, ಲಕ್ಷ್ಮಿ ದಾಸಿ. ಮಾಯಾಜಿಯವರ ಹಾಗೆ ಲಕ್ಷ್ಮಿಯೂ ಭಾಷಣ ಮಾಡಬಲ್ಲಳು. ಲಕ್ಷ್ಮಿ ಭಾಷಣ ಮಾಡು ತ್ತಿದ್ದಾಳೆ....

....ವಿಶಾಲವಾದ ಸಭೆ. ದೃಷ್ಟಿ ಹರಿದಷ್ಟು ದೂರ ಜನರ ತಲೆಗಳೇ ಕಾಣಿಸುತ್ತಿವೆ. ಅಡ್ಡ ಕಟ್ಟಿರುವ ಹಗ್ಗವನ್ನು ಕಿತ್ತುಕೊಂಡು ಜನ ವೇದಿಕೆಯ ಕಡೆ ನುಗ್ಗುತ್ತಿದ್ದಾರೆ. ವೇದಿಕೆಯ ಮೇಲೆ ಬಾಲದೇವನ ಲಕ್ಷ್ಮಿ ಕುಳಿತಿದ್ದಾಳೆ. ಲಕ್ಷ್ಮಿಯ ಪಾದಗಳ ಚರ್ಮವೂ ಕಿತ್ತುಹೋಗಿದೆ. ವೇದಿಕೆಯ ಮೇಲೆ ಹಾಸಿದ ಬಿಳಿ ಖದ್ದರಿನ ಮೇಲೆ ರಕ್ತದ ಬಿಂದುಗಳು ಟಪ ಟಪ ಬೀಳುತ್ತಿವೆ....ಲಕ್ಷ್ಮಿ ಭಾಷಣ ಕೊಡುತ್ತಿದ್ದಾಳೆ.

ಇದು ಯಾರು? ಹರಗೌರೀ! ಹರಗೌರಿ ಲಕ್ಷ್ಮಿಯ ಕೊರಳಿಗೆ ಮಾಲೆ ಹಾಕಲು ಮುಂದೆ ಬರುತ್ತಿದ್ದಾನೆ. ಲಕ್ಷ್ಮಿ ಮಾಲೆ ಹಾಕಿಸಿಕೊಳ್ಳುವುದಿಲ್ಲ. ಮಾಲೆ ಕೈಗೆ ತೆಗೆದುಕೊಂಡು ಬಾಲದೇವನ ಕೊರಳಿಗೆ ಹಾಕಿಬಿಡುತ್ತಾಳೆ! ಮಲ್ಲಿಗೆ ಹೂವಿನ ಮಾಲೆ....ಹೂವಿನಿಂದ ಲಕ್ಷ್ಮಿಯ ಶರೀರದ ಸುಗಂಧ ಹೊರಬರುತ್ತಿದೆ ....ಗುಂಪು ವೇದಿಕೆಯ ಕಡೆ ನುಗ್ಗುತ್ತಿದೆ. ಹರಗೌರಿ ಮುಂದೆ ಬಂದುಬಿಟ್ಟ. ಲಕ್ಷ್ಮಿಯನ್ನು ಹಿಡಿದುಕೊಂಡ....ಬಾಲದೇವ ಕೂಗಿಕೊಳ್ಳುತ್ತಿದ್ದಾನೆ. ಆದರೆ ಗಂಟಲಿನಿಂದ ಶಬ್ದವೇ ಹೊರಡುತ್ತಿಲ್ಲವಲ್ಲ! ಜನ ಗಲಾಟೆ ಮಾಡುತ್ತಿದ್ದಾರೆ. ಸಾಧ್ಯವಾದಷ್ಟು ಗಟ್ಟಿಯಾಗಿ ಬಾಲದೇವ ಕೂಗಿಕೊಳ್ಳುತ್ತಿದ್ದಾನೆ: "ಹರಗೌರಿ ಬಾಬು"

"ಗಾಂಧೀ ಮಹಾತ್ಮರಿಗೆ ಜಯವಾಗಲಿ."

"ಜಯವಾಗಲಿ."

ಬಾಲದೇವ ಗಡಬಡಿಸಿ ಎದ್ದು ಹೊರಗಡೆ ಬಂದ. ಬೆಳಗ್ಗೆ ಆಗಿತ್ತು. ಹಳ್ಳಿಯ ಯುವಕರನ್ನೆಲ್ಲಾ ಗುಂಪು ಕಟ್ಟಿಕೊಂಡು ಕಾಳೀಚರಣ ಮೆರವಣಿಗೆ

ಮಾಡಿಕೊಂಡು ಹೋಗುತ್ತಿದ್ದ. ಭೇಷ್, ಕಾಳೀಚರಣ ಬುದ್ಧಿವಂತ, ಸಾಹಸಿ. ಈ ಕಾರ್ಯಕ್ರಮ ಯಾವಾಗ ನಿಶ್ಚಯವಾಯ್ತು? ಬಹುಶಃ ರಾತ್ರಿಯೇ ಇರಬೇಕು....ಖಂಡಿತ ಮೇರೀಗಂಜ್ ಸಹ ಚನ್ನಪಟ್ಟಿಯ ಹಾಗೆ ಪ್ರಸಿದ್ಧ ವಾಗುತ್ತದೆ....ಬೆಳಗ್ಗೆಯ ಸ್ವಪ್ನ?

"ಖೇಲಾವನ್, ಈಗ ಆರೋಗ್ಯ ಹೇಗಿದೆ?"

"ನೀನು ರಾತ್ರಿ ಯಾವಾಗ ಬಂದೆ? ಸಿಪಾಯಿ ಪಂಗಡದಲ್ಲೇ ಹೊತ್ತು ಆಯ್ತೇನೋ! ಕಾಯಸ್ಥರು ರಾಜಪೂತರು ಒಂದಾದರಲ್ಲ. ಇನ್ನೇನು ಸ್ವರಾಜ್ಯ ಸಿಕ್ಕಹಾಗೇ! ಬಾಲದೇವ ನಾವಂತೂ ಸರಳ ಮನುಷ್ಯರು. ಆದರೆ ಕಾಳೀಚರಣನ ಮೇಲೆ ದೃಷ್ಟಿ ಇಟ್ಟಿರು. ಅವನಲ್ಲಿ ಇನ್ನೂ ಅನೇಕ ಗುಣಗಳಿವೆ. ಕ್ರಮೇಣ ನಿನಗೇ ಗೊತ್ತಾಗುತ್ತೆ ಅನ್ನು. ಆಮೇಲೆ ಅವನಿಂದ ಯಾವುದಾದರೂ ತೊಂದರೆ ಆದರೆ ನಾವು ಜವಾಬ್ದಾರರಲ್ಲ. ಅನಂತರ ಯಾದವ ಪಂಗಡದ ಮುಖಂಡನ ಮೇಲೆ ಮಾತು ಒರುವುದು ಬೇಡ. ಹೌದಪ್ಪಾ, ಕಾಯಸ್ಥರು, ರಾಜಪೂತರಲ್ಲಿ ಏನು ನಂಬಿಕೆ ಹೇಳು."

ಯಾರ ಮೇಲೆ ತನ್ನ ಸಿಟ್ಟು ತೋರಿಸಬೇಕೋ ಅರ್ಥವಾಗದೆ ಖಿಲಾವನ್ ಒದ್ದಾಡುತ್ತಿದ್ದ. ನೌಕರ ಹಾಲು ಕರೆಯಲು ಪಾತ್ರೆ ತೆಗೆದುಕೊಂಡು ಬಂದ. ಖೇಲಾವನ್ ಈಗಲೂ ತಾನೇ ಹಾಲು ಕರೆಯುತ್ತಾನೆ. ಒಂದೊಂದು ದಿನ ಒಬ್ಬೊಬ್ಬರು ಕೈ ಹಾಕಿದರೆ ಎಮ್ಮೆಯ ಕೆಚ್ಚಲು ಒಣಗಿಹೋಗುತ್ತದೆ ಎಂದು ಅವನ ನಂಬಿಕೆ. ಈದಿನ ನೌಕರನ ಮೇಲೂ ರೇಗಿದ. "ಮೂರ್ಖ, ಇನ್ನೂ ಎಮ್ಮೆ ಸಿದ್ಧವಾಗಿ ನಿಂತೇ ಇಲ್ಲ. ಆಗಲೇ ಹಾಲು ಕರೆಯೋದಕ್ಕೆ ಆತುರ, ಪೂರಿ–ಜಿಲೇಬಿ ಈಗಲೇ ಹಂಚುತ್ತಾರೇಂತ ನಾಲಿಗೇಲಿ ನೀರು ಸುರೀತಿದೆ ಯೇನೋ....ನಮಸ್ಕಾರ, ಜೋಯಿಸರೇ."

ಜೋಯಿಸರು ಕಿವಿಗೆ ಜನಿವಾರವನ್ನು ಸಿಕ್ಕಿಸಿಕೊಂಡು, ಕೈಯಲ್ಲಿ ತಂಬಿಗೆ ಹಿಡಿದು ಬಾವಿಯ ಕಡೆ ಹೋಗುತ್ತಿದ್ದರು. ಖೇಲಾವನ್ ಅವರನ್ನು ತಡೆದ.

"ಬನ್ನಿ ಜೋಯಿಸರೇ ಇಲ್ಲಿಗೇ ನೀರು ತರಿಸಿಕೊಡ್ತೀನಿ."

"ಖೇಲಾವನ್‌ಬಾಬು. ಹಳ್ಳಿಗೆ ಸ್ವರಾಜ್ಯ ಬಂದುಬಿಟ್ಟಿದೆ. ನೋಡಿ ದ್ರಲ್ಲಾ. ಹೂಂ....ಹಳ್ಳಿಯ ಹುಡುಗರೆಲ್ಲಾ ಬಹಳ ಸಂಭ್ರಮದಿಂದ ಓಡಾಡ್ತಿದಾರಲ್ಲ. ಕ್ಷುದ್ರ ನದೀ ಚಲೀ ಭರೀ ಉತರಾಯಿ, ಜಿಸ ಥೋರೆ ಧನ ಖಲ್ ಚೌರಾಯೀ (ಕ್ಷುದ್ರನದಿಯಲ್ಲಿ ಪ್ರವಾಹ ಬಂದ ಹಾಗೆ, ಅಲ್ಪ ಧನದಿಂದಲೇ

ಮೂರ್ಖರ ತಲೆ ತಿರುಗಿತು) ಅಂದಹಾಗಾಯ್ತು. ಮಿಸರಬನಿಯಲ್ಲೂ ಹೀಗೇ ಆಗಿತ್ತು. ನನ್ನ ಮಾವನ ಮನೆ ಮಿಸರಬನಿಯಲ್ಲೇ ಇದೆ. ಹತ್ತು ಹನ್ನೆರಡು ವರ್ಷಗಳ ಹಿಂದಿನ ಮಾತು. ನಾನು ನನ್ನ ಮಾವನ ಮನೆಗೆ ಹೋಗಿದ್ದೆ. ಮಾವನ ಹಿರಿಯ ಮಗನಿಗೆ ಉಪನಯನವಿತ್ತು. ಪ್ರಾತಃಕಾಲ ಎದ್ದು ನೋಡಿದರೆ, ಹಳ್ಳಿಯಲ್ಲೆಲ್ಲಾ ಇದೇ ರೀತಿ ತುಂಡಾಂಡಿಗಳು ಕೈಯಲ್ಲಿ ಬಾವುಟ ಹಿಡಿದು, 'ಇಂಕಿಲಾಬ್, ಜಿಂದಾಬಾದ್' ಎಂದು ಕೂಗುತ್ತಾ ಊರೆಲ್ಲಾ ಸುತ್ತುತ್ತಿದ್ದರು. ನಾನು 'ಏನು ವಿಚಾರ?' ಅಂತ ನನ್ನ ಮಾವನನ್ನು ಕೇಳಿದೆ. ಆದಕ್ಕೆ ಮಾವ ಹೇಳಿದರು: ಹಳ್ಳಿಯ ಎಲ್ಲಾ ಹುಡುಗರೂ ಕಾಂಗ್ರೆಸ್ಸಿಗೆ ಹೆಸರು ಕೊಟ್ಟು ಬಂದಿದ್ದಾರೆ. 'ಇಂಕಿಲಾಬ್, ಜಿಂದಾಬಾದ್' ಎಂದರೆ ಜಿಂದಾ ಬಾಘ್ (ಬದುಕಿರುವ ಹುಲಿಗಳು) ಎಂದರ್ಥ....ಅದೇ ಸಂಜೆ ಬದುಕಿದ್ದ ಹುಲಿಯನ್ನೂ ನೋಡಿದೆ. ಪಶ್ಚಿಮ ಕಾಂಗ್ರೆಸ್ಸಿನ, ಉಪ್ಪಿನ ಕಾನೂನು ಮುರಿಯುವ ಕೆಲಸ ನಡೆಯುತ್ತಿತ್ತು. ತಿವಾರಿ ಮುಖಂಡ ದೊಡ್ಡ ದೊಡ್ಡ ಒಲೆಗಳ ಮೇಲೆ ಕಡಾಯಿಗಳಲ್ಲಿ ನಯವಾದ ಮಣ್ಣು ನೀರು ಬೆರಸಿ ಕುದಿಸುತ್ತಿದ್ದರು. ಗೀತೆಗಳು, ಗಾಯನ, ಬಾವುಟ ಇದೇನಪ್ಪಾ? ಅಂತ ನಾನು ಕೇಳಿದ್ದಕ್ಕೆ 'ಉಪ್ಪಿನ ಕಾನೂನು ತಯಾರಾಗ್ತಿದೆ' ಅಂತ ಅವರು ಉತ್ತರ ಕೊಟ್ಟರು! ನಾನೂ ಅಲ್ಲೇ ಆ ವಿನೋದ ನೋಡ್ತಾ ನಿಂತಿದ್ದೆ. ಅಷ್ಟರಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಬರ್ತಿದಾನೆ ಅಂತ ಗಲಾಟೆ ಶುರುವಾಯ್ತು. ಸ್ಕೂಲಿನ ಕಾಂಪೌಂಡಿನಿಂದ ಒಬ್ಬ ಟೋಪಿಯವನೂ, ನಾಲ್ಕಾರು ಜನ ಕೆಂಪು ಪಗಡಿಯವರೂ ಬಂದರು. ಸರಿ, ಇನ್ನೇನು, 'ಜಿಂದಾಬಾಘ್' (ಬದುಕಿರುವ ಹುಲಿ) ಬಂದೇಬಿಟ್ಟಿತು. ಯಾರು ಯಾವ ಕಡೆ ಮುಖ ತಿರುಗಿಸಿದ್ದರೋ ಅದೇ ದಿಕ್ಕಿನಲ್ಲಿ ಓಡಿಹೋದರು. ಒಬ್ಬರ ಮೇಲೊಬ್ಬರು ಬೀಳೋದೂ ಲಕ್ಷ್ಯವಿಲ್ಲದೆ ಓಡಿದರು. ಗೀತೆಗಳು, ಗಾಯನ, ಬಾವುಟ, 'ಇಂಕಿಲಾಬ್, ಜಿಂದಾಬಾದ್,' ಎಲ್ಲಾ ಎಲ್ಲಿ ಹೋದವೋ! ಇನ್ಸ್‌ಪೆಕ್ಟರ್ ತಿವಾರಿಯನ್ನು ಹಿಡಿದುಕೊಂಡು ಹೋದರು. ಆಮೇಲೆ ಹಳ್ಳಿಯ ಮನೆಮನೆಗೂ ನುಗ್ಗಿ ತಲಾಷ್ ಮಾಡಿದರು. ಹಳ್ಳಿಯಲ್ಲಿದ್ದ ಜಿಂದಾಬಾಘ್‌ಗಳೆಲ್ಲಾ ಕೊಟ್ಟಿಗೆಯಲ್ಲಿ ಅಡಗಿಕೊಂಡವು. ಕಾಂಗ್ರೆಸ್ ರಾಜ್ಯ ಪ್ರಾರಂಭವಾದ ಮೇಲೆ ಮತ್ತೆ ಕೂಗೋದಕ್ಕೆ ಆರಂಭಿಸಿದರಂತೆ. ಪೊಲೀಸಿನವರನ್ನು ಕಂಡರೆ ಮತ್ತಷ್ಟು ಗಟ್ಟಿಯಾಗಿ ಕೂಗಿಕೊಳ್ತಾರೆ. ಕೂಗೀಪ್ಪಾ ಕೂಗಿ, ನಿಮ್ಮದೇ ರಾಜ್ಯ. ಪೊಲೀಸಿನವರು ಮನಸ್ಸಿನಲ್ಲೇ ಅಪಮಾನ ನುಂಗಿಕೊಂಡಿದ್ದಾರೆ. ಹೋದ ಸಲದ ಚಳವಳೀಲಿ ಚಳವಳಿಗಾರರು ಉತ್ಸಾಹದಲ್ಲಿ ಸಂತೆಯ ಮಾಳ

ವನ್ನು ಸುಟ್ಟರು. ಹೆಂಡದಂಗಡಿ ಲೂಟಿ ಮಾಡಿದರು. ಮಾರನೆಯ ದಿನವೇ ನಾಲ್ಕು ಲಾರಿಗಳ ಭರ್ತಿ ಬಿಳಿ ಸಿಪಾಯಿಗಳು ಬಂದರು. ಇಡೀ ಹಳ್ಳಿಯನ್ನೇ ಸುಟ್ಟು, ಲೂಟಿ ಮಾಡಿ, ಒಂದೇ ಗಂಟೆಯಲ್ಲಿ ಎಲ್ಲಾ ತಣ್ಣಗೆ ಮಾಡಿಬಿಟ್ಟರು. ಐವತ್ತು ಜನರನ್ನು ಸೆರೆ ಹಿಡಿದರು. ಇಬ್ಬರನ್ನಂತೂ ಹೊಡೆದೂ ಹೊಡೆದೂ ಜ್ಞಾನಶೂನ್ಯರನ್ನಾಗಿ ಮಾಡಿದರು. ಒಬ್ಬನಿಗೆ ಚೂರಿ ಚುಚ್ಚಿದರು. ಶೂರ ಇಂಗ್ಲೀಷ್‌ನವರಿಂದ ಯಾರೂ ತಪ್ಪಿಸಿಕೊಳ್ಳೋದಕ್ಕೆ ಆಗೋದಿಲ್ಲ. ದೊಡ್ಡ ದೊಡ್ಡ ಕುದುರೆಗಳೇ ಬಿದ್ದುಹೋದ ಮೇಲೆ ಚಿಕ್ಕ ಪುಟ್ಟ ತಟ್ಟುಗಳ ಪಾಡೇನು? ಇಂಗ್ಲೀಷ್ ಶೂರರು ಮತ್ತೆ ಯಾಕೋ ಸ್ವಲ್ಪ ಸಡಿಲ ಬಿಟ್ಟಿದ್ದಾರೆ. ಇವರೆಲ್ಲಾ ಹಾರಾಡ್ತಿದ್ದಾರೆ. ಈ ಸಲ ಯಾರ ತಲೆಯೂ ಉಳಿಯೋಲ್ಲ····"

"ಇಲ್ಲಾ ಜೋಯಿಸರೇ. ಇನ್ನು ಹಾಗೆ ಆಗೋದಿಲ್ಲ."

ಮುಂದೆ ಕೇಳಲಾರದೆ ಬಾಲದೇವ ಹೇಳಿದ. "ಹಿಂದಿನ ಚಳವಳಿಯಲ್ಲೇ ಸರ್ಕಾರದ ಬಲ ಕುಂದಿದೆ. ಸಿಮುರಬನಿಯ ವಿಚಾರ ಹೇಳ್ತಿದೀರಲ್ಲಾ, ಈಚೆಗೆ ನೀವು ಅಲ್ಲಿಗೆ ಹೋಗಿದ್ರೇನು? ಇಲ್ಲ, ಅದಕ್ಕೇ ಗೊತ್ತಿಲ್ಲ. ಒಂದು ಸಲ ಅಲ್ಲಿಗೆ ಹೋಗಿ ನೋಡ್ಕೊಂಡು ಬನ್ನಿ. ಆಸ್ಪತ್ರೆ, ಸ್ಕೂಲು, ಹುಡುಗಿಯರ ಸ್ಕೂಲು, ಚರಖಾ ಸೆಂಟರ್, ಎಲ್ಲಾ ಆಗಿದೆ ಅಲ್ಲಿ. ಪ್ರತಿ ಮನೆಯಲ್ಲೂ 'ಎ.ಬಿ.ಸಿ.ಡಿ.' ಪಾಸಾದವರೇ. ಶಿವಾನಂದ್‌ಬಾಬು ನಿಮಗೆ ಗೊತ್ತೇನು? ಅವರ ಮಗ ರಮಾನಂದನೂ ನನ್ನ ಜೊತೆ ಜೈಲಿನಲ್ಲಿದ್ದ. ಅವನು ಒಬ್ಬ ಅಧಿಕಾರಿ ಆಗ್ತಾನೆ ಖಂಡಿತವಾಗಿ."

ಖೇಲಾವನನೂ ಏನೋ ಹೇಳಬೇಕು ಅಂದುಕೊಳ್ಳುವಷ್ಟರಲ್ಲಿ ನೌಕರ ಕೂಗಿದ.

"ಕರು ಹಾಲು ಕುಡಿದುಬಿಡ್ತಾ ಇದೆ."

ಖೇಲಾವನ್ ಹಾಲು ಕರೆಯಲು ಹೊರಟುಹೋದ. ವ್ಯರ್ಥವಾಗಿ ಚರ್ಚೆ ಮಾಡುವಷ್ಟು ಬಾಲದೇವನಿಗೆ ಬಿಡುವಿರಲಿಲ್ಲ····ಹಳ್ಳಿಯಲ್ಲಿ ಜಯಜಯಕಾರ ಪ್ರತಿಧ್ವನಿಸುತ್ತಿತ್ತು. "ಗಾಂಧೀ ಮಹಾತ್ಮರಿಗೆ ಜಯವಾಗಲಿ."

# 7

ಪ್ಯಾರುವನ್ನು ಎಲ್ಲರೂ ನಾಲ್ಕು ಕಡೆಯಿಂದಲೂ ಸುತ್ತುಗಟ್ಟಿದ್ದರು. ಅವನು ಡಾಕ್ಟರ್ ಸಾಹೇಬರ ನೌಕರ. "ಡಾಕ್ಟರ್ ಸಾಹೇಬ್ ಯಾವಾಗ ಬರುತ್ತಾರೆ? ನಿನ್ನ ಹೆಸರೇನು? ಯಾವ ಜಾತಿ? **ಮುಸಾದ್** ಅಂತ ಅನ್ನಬೇಡ. ಗಹಲೋತ್ ಅನ್ನು. ಜನಿವಾರ ಎಲ್ಲಿ?"

ಬಾಲದೇವ ಪ್ಯಾರುವನ್ನು ಗುಂಪಿನಿಂದ ಹೊರಗಡೆ ಕರೆದುಕೊಂಡು ಬರುತ್ತಾ ಕೇಳಿದ.

"ನೀವೆಲ್ಲಾ ಮನುಷ್ಯರನ್ನೇ ನೋಡಿಲ್ಲವೇನಯ್ಯ? ನಿಮ್ಮ ನಿಮ್ಮ ಕೆಲಸ ನೋಡ್ಕೊಳ್ಳಿ ಹೋಗಿ. ಮಿಠಾಯಿ ಮಾಡೋರ ಹತ್ತಿರ ಯಾರಿದ್ದಾರೆ?"

ಬಾಲದೇವ ಬಹುವಚನ ಉಪಯೋಗಿಸಿಯೇ ಮಾತನಾಡುತ್ತಾನೆ. ಎಲ್ಲರ ಹೆಸರಿನೊಂದಿಗೆ 'ಜೀ' ಸೇರಿಸಿಯೇ ಸೇರಿಸುತ್ತಾನೆ. 'ಡ್ರೈವರ್‌ಜೀ' 'ಠೇಕೆದಾರ್‌ಜೀ,' 'ಹರಿಜನಜೀ' ಹೀಗೆ

ಪ್ರಶ್ನೋತ್ತರಗಳ ನಂತರ ಪ್ಯಾರು ಡಾಕ್ಟರ ಹತ್ತಿರ ನೌಕರಿ ಮಾಡಲು ಬಂದಿದ್ದಾನೆಂದು ತಿಳಿಯಿತು. ಕೌತಹಟ್‌ನಲ್ಲಿರುವ ಹೋಮಿಯೋಪತಿ ಡಾಕ್ಟರ ಹತ್ತಿರ ಪ್ಯಾರು ಐದು ವರ್ಷ ನೌಕರಿ ಮಾಡಿದ್ದಾನಂತೆ. ಆ ಡಾಕ್ಟರ್ ವಿದೇಶಕ್ಕೆ ಹೊರಟುಹೋದರು. ಮೇರೀಗಂಜಿಗೆ ಒಬ್ಬರು ಡಾಕ್ಟರು ಬರುತ್ತಾರೆನ್ನುವ ಸುದ್ದಿ ತಿಳಿಯಿತು. ಅವರ ಹತ್ತಿರವೇ ಕೆಲಸಕ್ಕೆ ಸೇರಿಕೊಂಡ.

ಬೆಲ್ಲ ನೀರನ್ನು ಸೇವಿಸಿದ ನಂತರ ಪ್ಯಾರು ಬಾಲದೇವನಿಗೆ ಹೇಳಿದ:

"ಡಾಕ್ಟರ್ ಸಾಹೇಬರ ಸಾಮಾನೆಲ್ಲಿದೆ? ಟೇಬಲ್ಲು–ಕುರ್ಚಿ ಹಾಕಬೇಕು. ಅಲ್ಮಾರವನ್ನು ಚೊಕ್ಕಟ ಮಾಡಬೇಕು. ನೀರಿನ ತೊಟ್ಟಿಯ ಹತ್ತಿರ ಒಂದು ಪಾತ್ರೆ, ಒಂದು ಸಾಬೂನು, ಒಂದು ಕರವಸ್ತ್ರ ಇಟ್ಟಿರಬೇಕು. ಡಾಕ್ಟರ್ ಸಾಹೇಬರು ಬಂದ ಕೂಡಲೇ ಸಾಬೂನಿನಿಂದ ಕೈ ತೊಳೆದುಕೊಳ್ತಾರೆ...."

ನಿಜವಾಗಲೂ ಪ್ಯಾರು ಡಾಕ್ಟರ ಹಳೆಯ ನೌಕರ. ಟೇಬಲ್–ಕುರ್ಚಿ ಸರಿಯಾಗಿ ಹಾಕಿದ್ದಾಯಿತು. ಮೂರು ಕಾಲಿನ ಕಬ್ಬಿಣದ ಸ್ಟ್ಯಾಂಡಿನ ಮೇಲೆ ನೀರಿನ ಪಾತ್ರೆ ಇಟ್ಟಿದ್ದಾಯಿತು. ಹತ್ತಿರದಲ್ಲೇ ಅಲ್ಯುಮಿನಿಯಂ ಪಾತ್ರೆ

ಇಟ್ಟಾಯಿತು. ನೀರಿನ ಪಾತ್ರೆಗೆ ನಲ್ಲಿಯೂ ಇದೆ. ನಲ್ಲಿ ತಿರುಗಿಸಿದರೆ ನೀರು ಬರುತ್ತದೆ. ಪೆಟ್ಟಿಗೆಯಿಂದ ಕರವಸ್ತ್ರ ತೆಗೆದು ಅಲ್ಲಿ ನೇತುಹಾಕಿದರು. ಕುರಿಯ ಕರುಳಿನ ಒಳಭಾಗದಲ್ಲಿರುವ ಮಾಂಸಖಂಡದಂತೆ ಕರವಸ್ತ್ರ ಬೆಳ್ಳಗಿತ್ತು. ಸಾಬೂನು? ಸಾಬೂನೆಲ್ಲಿದೆ? ಬಟ್ಟೆ ಒಗೆಯುವ ಸಾಬೂನೆಲ್ಲಿ? ಸುವಾಸನೆ ಸಾಬೂನು. ಭಗತನ ಅಂಗಡಿಯಲ್ಲಿ ಸುವಾಸನೆ ಸಾಬೂನು ಎಲ್ಲಿಂದ ಬರುತ್ತದೆ? ತಹಸೀಲ್ದಾರರ ಮಗಳು ಕಮಲಿ ಸುವಾಸನೆ ಸಾಬೂನಿನಿಂದ ಮೈ ತೊಳೆದು ಕೊಳ್ಳುವಾಗ ಊರಲ್ಲೆಲ್ಲಾ ಅದರ ಸುಗಂಧ ಹರಡುತ್ತದೆ. ಕಮಲಿಯ ಹತ್ತಿರವೆ ಸಾಬೂನನ್ನು ಕೇಳಿ ತೆಗೆದುಕೊಂಡು ಬನ್ನಿ ಎಂದು ತಹಸೀಲ್ದಾರರು ಹೇಳಿದರು.... ನಿಜವಾಗಲು ಪ್ಯಾರು ಡಾಕ್ಟರ ಹಳೆಯ ನೌಕರನೇ. ಒಳ್ಳೆ ಸಮಯಕ್ಕೆ ಸರಿಯಾಗಿ ಅವನು ಬಂದ! ಇಲ್ಲದಿದ್ದರೆ ಈ ವ್ಯವಸ್ಥೆಯಲ್ಲಾ ಯಾರಿಗೆ ತಿಳಿಯು ತ್ತಿತ್ತು? ಸಮಯುವಾಯಿತು. ಇನ್ನೇನು ಡಾಕ್ಟರೂ ಬಂದುಬಿಡುತ್ತಾರೆ. ತಹಸೀಲ್ದಾರರು ಹೇಳಿದ್ದಾರೆ: "ಶುಕ್ರ ನಕ್ಷತ್ರ ಮೂಡುವ ಮೊದಲೇ ಎತ್ತಿನ ಗಾಡಿಯನ್ನು ಕಳುಹಿಸಿದ್ದೇನೆ. ಜೊತೆಗೆ ಅಗಮೂ ಚೌಕೀದಾರನೂ ಹೋಗಿದ್ದಾನೆ."

ಇಡೀ ಹಳ್ಳಿಯಲ್ಲೇ ಉತ್ಸಾಹ ತುಂಬಿದೆ. ಜಾತ್ರೆಯ ಸಮಯದಲ್ಲೂ ಇದೇ ರೀತಿ ಉತ್ಸಾಹ ತುಂಬಿರುತ್ತದೆ. ತಹಸೀಲ್ದಾರರ ಮನೆಯಲ್ಲಿ ಭಕ್ಷ್ಯ ಮಾಡುವವರು ಬೆಳಗಿನಿಂದಲೇ ಪೂರಿ, ಜಿಲೇಬಿ ತಯಾರು ಮಾಡುತ್ತಿದ್ದರು. ಪೂರಿ ಮಾಡಿ ಮಾಡಿ ರಾಶಿ ಹಾಕಿದ್ದಾರೆ. ಹಳ್ಳಿಯ ಮಕ್ಕಳು ಬೆಳಗ್ಗಿನಿಂದಲೇ ಅಲ್ಲಿ ಸೇರಿಬಿಟ್ಟದ್ದಾರೆ. ರಾಜಪೂತ ಮತ್ತು ಕಾಯಸ್ಥರ ಮಕ್ಕಳು ಬೇರೆ ಕುಲದ ಮಕ್ಕಳನ್ನು ಆಕಡೆ ಸುಳಿಯಲೂ ಬಿಡುತ್ತಿಲ್ಲ. "ಹೋಗಿ ಮೈಲಿಗೆಯಾಗುತ್ತೆ" ಎನ್ನುತ್ತಾ ದೂರ ಕಳುಹಿಸುತ್ತಿದ್ದಾರೆ.

ಸಿಂಗಜಿ ಸ್ವತಃ ತಾವೇ ಹೋಗಿ ಖೇಲಾವನಸಿಂಹ ಯಾದವನನ್ನು ಕರೆತಂದರು.

"ನೋಡಿ ತಹಸೀಲ್ದಾರರೇ, ಇವರ ಹೊಟ್ಟೆಯಲ್ಲಿ ವಾಯು ಹೊಕ್ಕಿದೆ ಯಂತೆ. ಔತಣದ ಊಟ ಮಾಡುವ ಮೊದಲೇ ಅಜೀರ್ಣವಾಗಿದೆಯಂತೆ. ಬಿಡಣ್ಣಾ, ಹೆಂಗಸರ ಹಾಗೆ ಸಿಟ್ಟು ಮಾಡಿಕೊಂಡರೆ ಏನು ಪ್ರಯೋಜನ! ನಾನು ಹೇಳಿದ್ದು ಸರಿ ಹೌದೋ ಅಲ್ಲವೋ ನೀವೇ ಹೇಳಿ ತಹಸೀಲ್ದಾರರೇ? ಜಗಳ ಆಡಬೇಕು. ಚರ್ಚೆ ಮಾಡಬೇಕು. ಮತ್ತೆ ಒಬ್ಬರನ್ನು ಒಬ್ಬರು ಆಲಿಂಗನ ಮಾಡಿಕೊಳ್ಳಬೇಕು. ಅಂದಹಾಗೆ ಈ ಸಿಟ್ಟಿಗೆ ಏನು ಕಾರಣ? ಬಾಲದೇವನಿಂದ

ವನಿಗೆ ಸಮಾಚಾರ ತಿಳೀತು. ಹೋಗಿ ನೋಡಿದರೆ, ಆ ಕಾಕಬುಸುಂಡಿ ಇವರ ಕಿವೀಲಿ ಚೆನ್ನಾಗಿ ಮಂತ್ರ ಊದಿದ್ದಾನೆ······ಏ ಬಾಲದೇವ, ಕೇಳಿಲ್ಲಿ. ಡಾಕ್ಟರ್ ಸಾಹೇಬರು ಬಂದರೆ ಮೊದಲು ಇವರಿಗೇ ಚಿಕಿತ್ಸೆ ಮಾಡಿಸಿಬಿಡು. ಕೇಳಿದರೆ ಎಂಟನೇ ತಿಂಗಳೂ ಅಂತ ಹೇಳು......"

"ಹ ಹ ಹಾ ಹಾ....."

"ರಾಮಕೃಪಾಲ್ ಸಿಂಗ್. ಮಕ್ಕಳ ಮುಂದೆಲ್ಲಾ ಇದೇನು ಹುಡುಗಾಟ? ಹೋಗಲಿ ನನ್ನ ಕೈ ಬಿಡಿ. ಹೇಗಿದ್ರೂ ಎಲ್ಲರೂ ಇಲ್ಲೇ ಇದ್ದಾರೆ. ನಾನೊಬ್ಬ ಇಲ್ದೇ ಇದ್ರೆ ಏನು ನಷ್ಟ?"

ಸಿಂಗಜಿ ಹಾಸ್ಯದ ಮನುಷ್ಯ. ಬೆಳಗಿನಿಂದಲೂ ಎಲ್ಲರನ್ನೂ ನಗಿಸುತ್ತಲೇ ಇದ್ದರು. ಖೇಲಾವನ್ ಯಾದವ ಸಿಟ್ಟುಗೊಂಡಿದ್ದ. ಅವನನ್ನು ಎಳೆದುಕೊಂಡು ಬಂದರು. ಜೋಯಿಸರು ಬರಲಿಲ್ಲ. ಹಲ್ಲು ನೋವೆಂದು ಹೇಳಿಸಿದರು. ಅದನ್ನು ಕೇಳಿ ಸಿಂಗಜಿ ಹೇಳಿದರು.

"ಬಹುಶಃ ಅವರ ಹೊಟ್ಟೆಯಲ್ಲಿರೋ ಹಲ್ಲು ನೋಯ್ತಿದೇ ಅಂತ ಕಾಣುತ್ತೆ. ಈಗ ಡಾಕ್ಟರ್ ಕಲ್ಲಿನಿಂದ ನಕಲಿ ಹಲ್ಲುಗಳನ್ನು ಮಾಡ್ತಾರಂತೆ. ಡಾಕ್ಟರಿಗೆ ಹೇಳಿ ಜೋಯಿಸರಿಗೂ ಒಂದು ಸೆಟ್ಟು ಮಾಡಿಸಿ ಕೊಡಯ್ಯ······"

"ಡಾಕ್ಟರ್ ಸಾಹೇಬರು ಬಂದರು······"

"ಬರ್ತಿದ್ದಾರ್ಯೇ? ಎಲ್ಲಿ?"

"ಪಥಿಯಾರೀ ಪಂಗಡದ ಹತ್ತಿರ ಐದು ಎತ್ತಿನ ಗಾಡಿಗಳೂ ಬರುತ್ತಿವೆ. ಆಗಮೂ ಚೌಕೀದಾರ ಮುಂದೆ ಮುಂದೆ ಓಡಿ ಬರುತ್ತಿದ್ದಾನೆ. ಡಾಕ್ಟರ್ ಸಾಹೇಬರು ಟೋಪಿ ಹಾಕ್ಕೊಂಡಿದ್ದಾರೆ.

ಆಗಮೂ ಬಂದು ಸೇರಿದ.

"ಅವನ ಭುಜದ ಮೇಲಿರೋದೇನು? ಪೆಟ್ಟಿಗೆಯೋ?"

ಮಾಡುತ್ತಿದ್ದ ಕೆಲಸವನ್ನು ಅಲ್ಲಿಗೇ ಬಿಟ್ಟು ಎಲ್ಲರೂ ಗುಂಪು ಸೇರಿದರು. "ಡಾಕ್ಟರ್ ಸಾಹೇಬರು ಬರ್ತಿದಾರೆ."

"ಪಕ್ಕಕ್ಕೆ ಸರೀರಿ." ಆಗಮೂ ಹೇಳಿದ. "ಹುಷಾರಾಗಿ ಇಡೂ ಅಂತ ಡಾಕ್ಟರ್ ಸಾಹೇಬ್ ಹೇಳಿದ್ದಾರೆ. ಕೆಳಗೆ ತಗಲಬಾರದಂತೆ···"

ಬಾಲದೇವ ಹೇಳಿದ. "ರೇಡಿಯೋ, ರೇಡಿಯೋ!" ಇನ್ನು ಪ್ರತಿದಿನ ಬೊಂಬಾಯಿ ಕಲಕತ್ತೆಯ ಹಾಡೆಲ್ಲಾ ಕೇಳಬಹುದು. ಮಹಾತ್ಮಾಜಿಯವರ ವಿಚಾರ, ಪಾಟ್ನಾದ ಬೆಲೆ ಎಲ್ಲಾ ಬರುತ್ತೆ ಇದರಲ್ಲಿ. ತಂತಿ, ಪೆಟ್ಟು ಬಿದ್ದ ಕೂಡಲೇ ಸಿಟ್ಟಿನಿಂದ ಹೇಳುತ್ತೆ—'ಮೂರ್ಖ!'····ಮುಖ ತೊಳೀದೆ ಹತ್ತಿರ ಕೂತುಕೊಂಡರೆ ತಕ್ಷಣ ಕೇಳುತ್ತೆ 'ಈವತ್ತು ನೀವು ಮುಖ ತೊಳೀಲಿಲ್ವೇನು?' ಅಂತ.

"ಅಬ್ಬಬ್ಬಾ ಏನು ಅದ್ಭುತ!"

"ಡಾಕ್ಟರ್ ಸಾಹೇಬ್."

ಎಲ್ಲರೂ ಕೈ ಜೋಡಿಸಿಕೊಂಡು ನಿಂತರು. ಡಾಕ್ಟರು ನಗುತ್ತಾ ಎಲ್ಲರಿಗೂ ಕೈ ಮುಗಿದರು. ಬಾಲದೇವ್ "ಜೈ ಹಿಂದ್" ಎಂದ. ಅವನನ್ನು ನೋಡಿ ನೋಡಿ ಈ ನಡುವೆ ಕಾಳೀಚರಣನೂ "ಜೈ ಹಿಂದ್" ಹೇಳುವುದನ್ನು ಕಲಿತಿದ್ದಾನೆ. ಪ್ಯಾರೂ ಕುರ್ಚಿ ತಂದು ಹಾಕಿದ. ಡಾಕ್ಟರ್ ಸಾಹೇಬ್ ತಲೆಯಿಂದ ಟೋಪಿ ತೆಗೆದಿಟ್ಟರು. ಅವರ ಮುಖ ಎಷ್ಟು ಕೆಂಪಗಿದೆ! ಕೆಂಪು ಮುತ್ತುಗದ ಹೂವಿನ ಹಾಗೆ. ಮೀಸೆ ಇಲ್ಲವೇನು? ಮೀಸೆ ತೆಗೆಸಿಬಿಟ್ಟಿದ್ದಾರೆ.

ಬಾಲದೇವ ಕೈಜೋಡಿಸಿ ನಿಂತು ಕೇಳಿದ: "ರಸ್ತೆಯಲ್ಲಿ ತೊಂದರೆಯೇನೂ ಆಗಲಿಲ್ಲ ತಾನೇ?····ಎಲ್ಲಾ ಸಿದ್ಧವಾಗಿದೆ. ಊಟ ಮಾಡಿಬಿಡಬಹುದು. ಇವರ ಹೆಸರು ವಿಶ್ವನಾಥ್ ಪ್ರಸಾದ್, ಪರಬಂಗಾ ರಾಜ್ಯದ ತಹಸೀಲ್ದಾರರು. ಇವರ ಹೆಸರು ರಾಮಕೃಪಾಲ್ ಸಿಂಗ್····ಸಿಪಾಯಿ····ಅಲ್ಲ····ರಾಜಪೂತ ಪಂಗಡದ ಮುಖಂಡರು····ಇವರು ಖೇಲಾವನಸಿಂಹ ಯಾದವ. ಯಾದವ ಕ್ಷತ್ರೀ ಪಂಗಡದ ಯಜಮಾನರು. ಇವನ ಹೆಸರು ಕಾಳೀಚರಣ. ತುಂಬಾ ಸಾಹಸಿ ಯುವಕ. ಇವರೆಲ್ಲಾ ಇಲ್ಲಿನ ಜನ····ಬನ್ನಿ ಬಾಬೂಜಿ, ನೀವೆಲ್ಲಾ ಡಾಕ್ಟರ್ ಸಾಹೇಬರ ಹತ್ತಿರ ಮಾತನಾಡ್ತಿರಿ. ಈ ಹಳ್ಳಿಯ ಮಹಂತರು ಆಸ್ಪತ್ರೆ ಪ್ರಾರಂಭವಾದ ಸಂತೋಷಕ್ಕೆ ಎಲ್ಲರಿಗೂ ಸಮಾರಾಧನೆ ಮಾಡ್ತಿದ್ದಾರೆ."

ಡಾಕ್ಟರು ಕೈ ಜೋಡಿಸಿ ಮತ್ತೊಮ್ಮೆ ಎಲ್ಲರಿಗೂ ನಮಸ್ಕಾರ ಮಾಡಿದರು.

"ನಾನೀಗಲೇ ಊಟ ಮಾಡುವುದಿಲ್ಲ. ಎಲ್ಲರದೂ ಊಟವಾಗಲಿ" ಎಂದರು.

ನಿಜವಾಗಲೂ ಪ್ಯಾರೂ ಡಾಕ್ಟರ ಹಳೆಯ ನೌಕರ. ಅವನು ಹೇಳಿದ ಹಾಗೆ ಡಾಕ್ಟರ್ ಸಾಬೂನು ಹಾಕಿ ಕೈ ತೊಳೆದುಕೊಂಡರು!

ಮಠದ ಮಹಂತರು, ಕೊಠಾರಿನ್, ಲಕ್ಷ್ಮಿದಾಸಿ, ರಾಮದಾಸ್ ಮತ್ತು ಇಬ್ಬರು ಸಾಧುಗಳು ಬಂದರು. ಮಹಂತರ ಗಾಡಿಯ ಮುಂದುಗಡೆ ತುತ್ತೂರಿ ಊದುತ್ತಾ ಒಬ್ಬ ಸಾಧು ಬಂದ····'ತು ತೂ ತು ತೂ···· ತು ತೂ ತೂ'···· ತುತ್ತೂರಿಯ ಶಬ್ದ ಕೇಳಿದ ಕೂಡಲೆ ಹಳ್ಳಿಯ ನಾಯಿಗಳೆಲ್ಲಾ ಒಟ್ಟುಗೂಡಿ ಬೊಗಳಲಾರಂಭಿಸುತ್ತವೆ. ಸಣ್ಣ ಸಣ್ಣ ಮರಿಗಳಂತೂ ಬೊಗಳಿ ಬೊಗಳಿ ಸುಸ್ತಾಗಿ ಬಿಡುತ್ತವೆ. ಎಷ್ಟಾದರೂ ಹೊಸದಾಗಿ ಬೊಗಳುವುದನ್ನು ಕಲಿತಿವೆಯಲ್ಲವೇ?

ಮೊಟ್ಟಮೊದಲು ಕಾಳೀ ಮಂದಿರದಲ್ಲಿ ಪೂರಿಯ ನೈವೇದ್ಯವಾಯಿತು. ಅನಂತರ ಕೋಟೆಯ ಕಾಡಿನ ಕಡೆ ಎರಡು ಪೂರಿಗಳನ್ನು ಎಸೆದರು. ಅದು ಕಾಡಿನಲ್ಲಿರುವ ದೇವ-ದೇವತೆಗಳಿಗೆ, ಭೂತ ಪಿಶಾಚಿಗಳಿಗೆಂದು! ಅನಂತರ ಸಾಧುಗಳಿಗೆ, ಬ್ರಾಹ್ಮಣರಿಗೆ ಭೋಜನ. ಬಾಲದೇವ ಎಷ್ಟು ಹೇಳಿದರೂ ಡಾಕ್ಟರ್ ಒಪ್ಪಲಿಲ್ಲ. ಡಾಕ್ಟರ್ ಅಡಿಗೆಯವರು ಮಾಡಿದ ಪೂರಿ ಜಿಲೇಬಿ ತಿನ್ನುವುದಿಲ್ಲವೆಂದು ಪ್ಯಾರು ಹೇಳಿದ್ದು ಸರಿಯೇ. 'ಯಂತ್ರದ ಒಲೆಯ ಮೇಲೆ ಪ್ಯಾರು ಡಾಕ್ಟರಿಗೆಂದು ಅನ್ನ ಮಾಡಿದ. ಬೇಗ ಬೇಗ ಊಟ ಮುಗಿದರೆ ತಂತಿಯಿಲ್ಲದ ಯಂತ್ರ, ರೇಡಿಯೋದಿಂದ ಹಾಡನ್ನಾದರೂ ಕೇಳಬಹುದು. ಏನು? ಈವತ್ತು ಹಾಡು ಬರುವುದಿಲ್ಲವೇ?····ಹೂಂ····ಎಷ್ಟಾದರೂ ಯಂತ್ರದ ವಿಚಾರ. ಇಷ್ಟು ಬೇಗ ಹೇಗೆ ಸರಿಯಾಗುತ್ತೆ? ಅದೂ ಅಲ್ಲದೆ ಕಟಿಹಾರ ಜಂಕ್ಷನ್‌ನಲ್ಲಿ ರೈಲುಗಳ ಮತ್ತು ಮಿಲ್ಲುಗಳ ಗಲಾಟೆ ಇನ್ನೂ ತುಂಬಾ ಆಗುತ್ತಿರಬಹುದು. ಆದ್ದರಿಂದಲೇ ಅದನ್ನು ದಾಟಿ ಹಾಡು ಇಲ್ಲಿಯವರೆಗೆ ಕೇಳುವುದೂ ಇಲ್ಲ'····

"ಊಟ! ಊಟ!"

"ಪ್ರತಿ ಕುಲದ ಜನರೂ ಬೇರೆ ಬೇರೆ ಪಂಕ್ತಿಗಳಲ್ಲಿ ಕುಳಿತುಕೊಳ್ಳಿ. ನಿಮ್ಮ ಪಕ್ಕದಲ್ಲಿ ಒಂದು ಖಾಲಿ ಎಲೇನೂ ಹಾಕ್ಕೊಳ್ಳಿ. ಮನೆಯಲ್ಲಿ ಪರದೆಯಲ್ಲಿರೋ ಹೆಂಗಸರಿಗೆ ಬೇಕಲ್ಲ. ಸಂಕೋಚ ಬೇಡ····"

ಗುವರ್ ಪಂಗಡದ ವೃದ್ಧನನ್ನು ಎಲ್ಲರೂ ಸೇರಿ ರೇಗಿಸುತ್ತಿದ್ದಾರೆ. ರೌದೀ ಗೋಪ ಹಳ್ಳಿ ಹಳ್ಳಿಗೆ ಹೋಗಿ ಮೊಸರು ಮಾರುತ್ತಿದ್ದ. ಅವನ ನಡಿಗೆ, ಮಾತು-ಕಥೆ ಎಲ್ಲಾ ಹೆಂಗಸಿನ ಹಾಗೇ ಇದ್ದವು. ತಲೆಯ ಮೇಲಿನ, ಎದೆಯ ಮೇಲಿನ ಬಟ್ಟೆ ಸ್ವಲ್ಪ ಪಕ್ಕಕ್ಕೆ ಸರಿದರೂ ಹೆಂಗಸರ ಹಾಗೆ ನಾಚಿಕೊಂಡು ಸರಿಮಾಡಿಕೊಳ್ಳುತ್ತಿದ್ದ. ಗಂಡಸರ ಜೊತೆ ಮಾತನಾಡಬೇಕಾದರೆ ಲಜ್ಜೆ. ಹೆಂಗಸರು ಅವನ ಹತ್ತಿರ ಯಾವ ರೀತಿಯ ಪರದೆಯನ್ನೂ ಇಟ್ಟುಕೊಂಡಿರಲಿಲ್ಲ. ಸಂತೆಗೆ ಹೋಗು

ವಾಗ, ಬರುವಾಗ ಅವನು ಹೆಂಗಸರ ಗುಂಪಿನಲ್ಲೇ ಇರುತ್ತಿದ್ದ. ಅದಕ್ಕೆ ಈಗ ಎಲ್ಲರೂ ಸೇರಿ ಅವನನ್ನು ರೇಗಿಸುತ್ತಿದ್ದರು:

"ನಿನ್ನ ಊಟ ಮನೆಗೇ ಕಳುಹಿಸ್ತೀವಿ. ನೋಡು ಲಾಲ್‌ಬನ್ ನಿನಗೋಸ್ಕರ ಒಂದೆಲೆ ಹಾಕಿಸಿಕೊಂಡಿದ್ದಾನೆ."

"ಬಾಯ್ಮುಚ್ಚು ಸುಟ್ಟ ಮುಖದೋನೇ. ಮುದುಕನ್ನ ಹಾಸ್ಯ ಮಾಡೋದಕ್ಕೆ ನಿನಗೆ ನಾಚಿಕೆ ಆಗೋದಿಲ್ಲಾ? ನಿಮ್ಮ ಮನೆಯ ಮುದುಕಿ ಅಜ್ಜಿಯನ್ನು ಇದೇ ರೀತಿ ಗೋಳು ಹುಯ್ಕೋತೀರೇನು? ಈ ಹಳ್ಳಿಯ ಹುಡುಗರೆಲ್ಲಾ ಕೆಟ್ಟು ಹಾಳಾಗಿ ಹೋಗಿದ್ದಾರೆ. ಎಲ್ಲಾ ದೋಷ ಈ ಸಿಂಗನದು. ಮುದುಕರೇ ನೀತಿಗೆಟ್ಟಮೇಲೆ ಚಿಕ್ಕವರ ವಿಚಾರ ಏನು ಹೇಳೋದಕ್ಕಾಗುತ್ತೆ? ನಾನು ಮೊದಲೇ ಹೇಳ್ತೀನಿ, ಸುಮ್ಮನಿರಿ...."

ಮಹಂತರು ರಾತ್ರಿ ಊಟ ಮಾಡುವುದಿಲ್ಲ. "ಸದ್ಗುರು! ಡಾಕ್ಟರ್ ಸಾಹೇಬ್ ನಿಮಗೆ ಎಷ್ಟು ಸಂಬಳ ಸಿಗುತ್ತೆ? ಇನ್ನೂರು ರೂಪಾಯಿ!.... ಹೂಂ.....ಇಲ್ಲಿ ಮೇಲುಸಂಪಾದನೇನೂ ಇರುತ್ತೆ. ನಿಜವಾದ ಸಂಪಾದನೆ ಅಂದರೆ ಮೇಲುಸಂಪಾದನೇನೇ!....ತುಂಬಾ ಒಳ್ಳೇದಾಯ್ತು.....ಗಾಂಧೀಜೀ ಅವತಾರ ಪುರುಷರು....ಡಾಕ್ಟರ್ ಸಾಹೇಬ್! ಸುಮಾರು ಐದು ವರ್ಷದ ಹಿಂದೆ ಒಂದು ಸಲ ನನಗೆ ಕಣ್ಣು ಬಂದಿತ್ತು. ಆಮೇಲೆ ಎರಡು ತಿಂಗಳವರೆಗೆ ಕಣ್ಣು ಕೆಂಪಗಾಗಿತ್ತು. ಪೂರ್ಣಿಯಾದಲ್ಲಿ ಸಿವಿಲ್ ಸರ್ಜನರಿಗೆ ಐವತ್ತು ರೂಪಾಯಿ ಫೀಸ್ ಕೊಟ್ಟು ತೋರಿಸಿಕೊಂಡೆ. ಬಹಳ ದಿನ ಚಿಕಿತ್ಸೇನೂ ಮಾಡಿಸಿಕೊಂಡೆ. ಆದರೆ ಎಲ್ಲಾ ವ್ಯರ್ಥ. ಈಗ ನೀವು ಬಂದಿದ್ದೀರಿ. ಮನೆ ಡಾಕ್ಟರೇ ಬಂದಹಾಗಾಯ್ತು...."

ಲಕ್ಷ್ಮಿದಾಸಿ ರೆಪ್ಪೆ ಮುಚ್ಚದೆ ಡಾಕ್ಟರನ್ನೇ ನೋಡುತ್ತಿದ್ದಳು....ಎಂಥ ಸುಂದರ ಪುರುಷ! ಬಡಪಾಯಿ. ಈ ಹಳ್ಳೀಲಿ ಬೇಸರವಾಗುತ್ತೋ ಏನೋ! ನೌಕರಿ ಎಂಥದೇ ಆದರೂ ನೌಕರೀನೇ ತಾನೇ! ಮನಸ್ಸೆಲ್ಲಾ ಮನೇಲೆ ಇರಬಹುದು....ಹೆಂಡತಿ ಮಕ್ಕಳ ನೆನಪು ಕಾಡ್ತಿರಬಹುದು.....ಸ್ವಲ್ಪ ದಿನವಾದ್ರೆ ಎಲ್ಲಾ ಸರಿಹೋಗುತ್ತೆ....ಆಮೇಲೆ ಹೆಂಡತಿ ಮಕ್ಕಳನ್ನೂ ಕರ್ಕೊಂಡು ಬರ್ತಾರೆ. ಇದ್ದಕ್ಕಿದ್ದ ಹಾಗೆ ಅವಳು ಪ್ರಶ್ನಿಸಿದಳು:

"ನಿಮ್ಮ ಮನೇಲಿ ಇನ್ನೂ ಯಾರ್ಯಾರಿದ್ದಾರೆ ಡಾಕ್ಟರ್ ಸಾಹೇಬ್?"

"ಅಂ?" ಎಂದು ಡಾಕ್ಟರ್ ಕೊಂಚ ಗಡಿಬಿಡಿಯಿಂದಲೇ ಉತ್ತರ ಕೊಟ್ಟರು.

"ನನಗೆ ಯಾರೂ ಇಲ್ಲ. ತಂದೆತಾಯಿ ಚಿಕ್ಕಂದಿನಲ್ಲೆ ತೀರಿಕೊಂಡು ಬಿಟ್ಟರು."

ಆ ಪ್ರಶ್ನೆ ಕೇಳಲೇಬಾರದಾಗಿತ್ತೆಂದು ಲಕ್ಷ್ಮಿ ಅಂದುಕೊಂಡಳು. ಹಾಗೆ ತಾನೇಕೆ ಕೇಳಿದೆನೆಂದು ಅವಳಿಗೇ ಆಶ್ಚರ್ಯ····ನನಗೆ ಯಾರೂ ಇಲ್ಲ····

"ಲಕ್ಷ್ಮಿ, ರಾಮದಾಸನನ್ನು ಕರಿ····ಸರಿ, ಡಾಕ್ಟರ್ ಬಾಬೂ, ಇನ್ನು ನನಗೆ ಅಪ್ಪಣೆ ಕೊಡಿ. ನೀವು ಊಟ ಮಾಡಿ ವಿಶ್ರಾಂತಿ ತೆಗೊಳ್ಳಿ. ಯಾವಾಗ ಲಾದರೂ ಮಠದ ಕಡೆಗೆ ಬರ್ತಾ ಇರಿ. ಸದ್ಗುರು ಹೇಳಿದ್ದಾರೆ. "ದರಸ ಪರಸ ಸತ್ಸಂಗ್ ಛೂಟೆ ಮನ ಕಾ ಮೈಲ್" (ಸಜ್ಜನರ ದರ್ಶನ ಸ್ಪರ್ಶದಿಂದ ಮನಸ್ಸಿನ ಕೊಳೆ ದೂರವಾಗುತ್ತದೆ).

ಲಕ್ಷ್ಮಿ ಕೈ ಜೋಡಿಸಿ ನಮಸ್ಕಾರ ಮಾಡಿದಳು.

ಬ್ರಾಹ್ಮಣ ಪಂಗಡದವರು ಬಾಲದೇವನನ್ನು ಕೇಳಿದರು :

"ಡಾಕ್ಟರ್ ಬಾಬುವಿನ ನೌಕರ ದುಸಾಥ್ ಕುಲದವರು. ಹಾಗಾದರೆ ಡಾಕ್ಟರ್ ದುಸಾಥ್ ಪಂಗಡದವನು ಮಾಡಿದ್ದಲ್ಲಾ ಊಟ ಮಾಡ್ತಾರೆ!"

ಎಲ್ಲರೂ ಒಟ್ಟಿಗೆ ಹೇಳಿ :

"ಮಹಾತ್ಮಾ ಗಾಂಧಿಯವರಿಗೆ ಜಯವಾಗಲಿ."

ಸಂತರ್ಪಣೆ ಮುಗಿಯಿತು. ಯಾವ ಗಲಾಟೆಯೂ ನಡೆಯಲಿಲ್ಲ. ಎಲ್ಲರಿಗೂ ತೃಪ್ತಿಯಾಯಿತು. ಅಕಸ್ಮಾತ್ ಯಾರಿಗಾದರೂ ತಪ್ಪಿಹೋಗಿದ್ದರೆ, ಅವರು ತಮ್ಮ ಭಾಗವನ್ನು ನಾಳೆ ತೆಗೆದುಕೊಂಡು ಹೋಗುತ್ತಾರೆ····ಮೊದಲ ರಾತ್ರಿ ಯಾದ್ದರಿಂದ ಬಾಲದೇವ, ಅಗಮೂ ಚೌಕೀದಾರ್ ಮತ್ತು ವಿರಂಚಿಯ ಜೊತೆ ಅಂದು ಆಸ್ಪತ್ರೆಯಲ್ಲೇ ಮಲಗಿಕೊಂಡ.

# 8

ಲಕ್ಷ್ಮಿಗೂ ಈ ಪ್ರಪಂಚದಲ್ಲಿ ಯಾರೂ ಇಲ್ಲ.

....'ನನಗೂ ಯಾರೂ ಇಲ್ಲ'....ಲಕ್ಷ್ಮಿ ಯೋಚಿಸಿದಳು....ಅವಳ ಮನಸ್ಸು ಇಷ್ಟು ಮೃದುವಾಗಿರುವುದೇಕೆ? ಡಾಕ್ಟರನ್ನು ನೋಡಿ ಅವಳ ಮನಸ್ಸು ಕರಗಿದ್ದೇಕೆ? ಇದು ಒಳ್ಳೆಯದಲ್ಲ....ಸದ್ಗುರು, ನನಗೆ ಶಕ್ತಿ ಕೊಡು.

ಸದ್ಗುರುವೊಬ್ಬನನ್ನು ಬಿಟ್ಟು ಅವಳಿಗೆ ಬೇರೆ ಯಾರೂ ಇಲ್ಲ. ತಾಯಿಯ ನೆನಪೂ ಬರುವುದಿಲ್ಲ. ಪಸರಾಹಾ ಮಠದ ಹತ್ತಿರವಿದ್ದ ತನ್ನ ಜೋಪಡಿ ನೆನಪಿನಲ್ಲಿದೆ. ಬೆಳಗ್ಗೆ ಆದ ಕೂಡಲೆ ತಂದೆ ತಮ್ಮ ಭುಜದ ಮೇಲೆ ಅವಳನ್ನು ಕೂರಿಸಿಕೊಂಡು ಮಠಕ್ಕೆ ಕರೆತರುತ್ತಿದ್ದರು. ಆ ಮಠದ ಮಹಂತರು ರಾಮ ಗೋಸಾಯಿ ಅವಳನ್ನು ಎಷ್ಟು ಮಮತೆಯಿಂದ ಮಾತನಾಡಿಸುತ್ತಿದ್ದರು. "ನಮ್ಮ ಲಕ್ಷ್ಮಿರಾಣಿ ಬಂದಳೇನು? ಬಾ ಬಾ. ಮಿಠಾಯಿ ತಿನ್ತೀಯಾ? ಚಹ ಕುಡೀತಿಯಾ?" ಮಠದ ವ್ಯವಸ್ಥಾಪಕ ಒಂದು ಬಟ್ಟಲಿನಲ್ಲಿ ಚಹ ಜೊತೆಗೆ ಅವಲಕ್ಕಿ ತಂದಿಡುತ್ತಿದ್ದ. ತಂದೆ ಅಲ್ಲೇ ಕೂತು ಮಹಂತರಿಗಾಗಿ ಭಂಗಿ ತಯಾರಿಸಿ ಕೊಡುತ್ತಿದ್ದ. ಒಂದು ದಮ್, ಎರಡು ದಮ್, ಮೂರು ದಮ್, ಸೇದುತ್ತಿದ್ದಂತೆ ಮಹಂತರ ಕಣ್ಣುಗಳು ಕೆಂಪೇರುತ್ತಿದ್ದವು. ಕೆಲವೊಮ್ಮೆ ತಂದೆಯೂ ಕಂಪಿಸುತ್ತಿದ್ದರು. ವ್ಯವಸ್ಥಾಪಕ ಮೊಸರು ತಂದು ಕೊಡುತ್ತಾ ಹೇಳುತ್ತಿದ್ದ: "ತೊಗೋ ರಾಮಚರಣ್, ನಶೆ ಇಳಿಯುತ್ತೆ." ತಂದೆಯನ್ನು ಕಂಡರೆ ಮಹಂತರಿಗೆ ತುಂಬಾ ಅಭಿಮಾನ. ಬೇರೆ ಏನೂ ಕೆಲಸವಿಲ್ಲ. ದಿನವೆಲ್ಲಾ ಮಹಂತರ ಅಗ್ಗಿಷ್ಟಿಕೆಯ ಮುಂದೆ ಕೂತು ಭಂಗಿ ತಯಾರಿಸಿ ಕೊಡುವುದೇ ಕೆಲಸ. ಮಠದಲ್ಲೇ ಅವರಿಬ್ಬರ ಊಟ ತಿಂಡಿ ಮುಗಿದುಹೋಗುತ್ತಿತ್ತು.

ಹಳ್ಳಿಯಲ್ಲಿ ಕಾಲರಾ ರೋಗ ಹರಡಿದಾಗ ಮಹಂತರು ತಂದೆಗೆ ಹೇಳಿದರು: "ರಾಮಚರಣ್, ನೀನು ಮಠದಲ್ಲೇ ಇದ್ದುಬಿಡು." ಅಂತಹ ಆ ದಿನಗಳಲ್ಲಿ ಭಂಗಿಯ ಚಿಲುಮೆ ತಣ್ಣಗಾಗುತ್ತಲೇ ಇರಲಿಲ್ಲ. ಒಂದು ದಿನ ಮಹಂತರ ಹತ್ತಿರವಿದ್ದ ಬೀಜಕ ಗ್ರಂಥವೇ ಸುಟ್ಟುಹೋಯಿತು. ಚಿಲುಮೆಯಿಂದ ಬೆಂಕಿಯ ಕಿಡಿ ಅದು ಹೇಗೆ ಗ್ರಂಥದ ಮೇಲೆ ಬಿತ್ತೋ ಯಾರಿಗೂ ಗೊತ್ತಿಲ್ಲ. ಆಗ ಮಹಂತರು ಅಳುತ್ತಾ ಹೇಳಿದ್ದರು. "ರಾಮಚರಣ್, ಗ್ರಂಥಸಾಹೇಬ ಸುಟ್ಟು

ಹೋಯಿತು. ಅದಕ್ಕಾಗಿ ಶಿಕ್ಷೆ ಅನುಭವಿಸಲೇಬೇಕು. ಏನೋ ಅಮಂಗಳ ವಾಗುತ್ತದೆ.''....ಮಾರನೆಯ ದಿನವೇ ಮಠದ ಒಬ್ಬ ಸಾಧುವಿಗೆ ವಾಂತಿ-ಭೇದಿ ಆರಂಭವಾಯಿತು. ಮೂರನೆಯ ದಿನ ಆ ಸಾಧು ತನ್ನ ದೇಹ ತ್ಯಜಿಸಿಬಿಟ್ಟ. ಅನಂತರ ಮಹಂತರೇ ಕಾಹಿಲೆ ಬಿದ್ದರು. ತಂದೆ ಮಹಂತರಿಗೆ ತುಂಬಾ ಸೇವೆ ಮಾಡಿದರು. ಇಹತ್ಯಾಗಮಾಡುವ ಮುನ್ನ ಮಹಂತರು ಹೇಳಿದರು :

" ರಾಮಚರಣ, ಕೊನೆಯ ಬಾರಿಗೆ ಚಿಲುಮೆ ತುಂಬಿ ಕೊಡಪ್ಪಾ...."

ತಂದೆ ಚಿಲುಮೆ ತುಂಬಿ ಕೊಡಲು ಅಗ್ಗಿಷ್ಟಿಕೆಯ ಮೇಲೆ ಬಗ್ಗಿರುವಾಗಲೇ ಅದರ ಮೇಲೆ ವಾಂತಿಯಾಗಲಾರಂಭವಾಯಿತು. ಮಹಂತರು ಸಂಜೆ, ತಂದೆ ಬೆಳಗ್ಗೆ ಶರೀರ ಬದಲಾಯಿಸಿಬಿಟ್ಟರು. ವ್ಯವಸ್ಥಾಪಕರು ದೂರದಿಂದಲೇ ತಂದೆಯ ಕೊನೆಯ ದರ್ಶನ ಮಾಡಿಸಿದ್ದರು. ' ಸತ್ತವರ ಹತ್ತಿರ ಹೋಗಬಾರದು' ಎಂದು ಹೇಳಿಬಿಟ್ಟರು.

....'ಲಕ್ಷ್ಮೀ ಲಕ್ಷ್ಮೀ'

' ಬಂದೆ ' ಲಕ್ಷ್ಮಿ ಕೊಂಚ ಬೇಸರದಿಂದಲೇ ಮೇಲೆದ್ದಳು. ....ಆದಿನ 'ಬೀಜಕ' ಗ್ರಂಥವನ್ನು ಮುಟ್ಟಿ ಆಣೆ ಮಾಡಿದ್ದರು. ಈಗ ಮತ್ತೆ ಕೂಗುತ್ತಿದ್ದಾರೆ. ಸದ್ಗುರು, ನಿನ್ನ ಕರೆ ಬರುವುದು ಯಾವಾಗ? ನನ್ನನ್ನೂ ನಿನ್ನ ಹತ್ತಿರ ಬೇಗ ಕರೆಸಿಕೋ ಗುರುವೇ....

" ಲಕ್ಷ್ಮೀ"

"ಮಹಂತರೇ, ಮನಸ್ಸಿಗೆ ಶಾಂತಿ ತಂದುಕೊಳ್ಳಿ. ಸದ್ಗುರುವಿನ ಧ್ಯಾನ ಮಾಡಿ. ಮಾಯೆ...."

"ಎಲ್ಲ ಮಾಯೆಯೇ ಲಕ್ಷ್ಮೀ....ಆದರೆ ಒಂದು ಬಾರಿ ನೀನು ಹತ್ತಿರ ಬಾ...."

ಕುರುಡು ಮನುಷ್ಯ ಹಿಡಿದುಕೊಂಡರೆ ಅವನ ಕೈಗೆ ಮೊಸಳೆಯ ಶಕ್ತಿ ಬಂದು ಬಿಡುತ್ತದೇನೋ? ಕುರುಡನ ಹಿಡಿತ ಎಷ್ಟು ಪ್ರಯತ್ನಪಟ್ಟರೂ ಮಿಸುಕಾಡಲಾಗು ವುದಿಲ್ಲ. ಇದೇನು....ಕೈಯ್ಯೋ ಕನ್ಮೂರನ ಇಕ್ಕಳವೋ? ದಂತಹೀನ ಬಾಯಿಂದ ಬರುತ್ತಿದ್ದ ದುರ್ಗಂಧ....ನೊರೆ...."ಮಹಂತರೇ, ಮಹಂತರೇ ಕೇಳಿ"....ರಾಮದಾಸ ಅಗ್ಗಿಷ್ಟಿಕೆಯ ಹತ್ತಿರವೇ ಇದ್ದ...."ಮಹಂತರೇ, ರಾಮದಾಸ್, ರಾಮದಾಸ್, ಬೇಗ ಏಳು ; ಮಹಂತರಿಗೆ ಏನೋ ಆಗಿದೆ."

ಮಹಂತರನ್ನು ಸದ್ಗುರು ತನ್ನ ಹತ್ತಿರ ಕರೆದುಕೊಂಡುಬಿಟ್ಟ.

ಬೆಳಗ್ಗೆ ಇಡೀ ಹಳ್ಳಿಯ ಜನ ಸೇರಿಬಿಟ್ಟರು....ಮಹಂತರು ಸಿದ್ಧ ಪುರುಷರು. ಅವರಿಗೆ ಇಚ್ಛಾಮರಣ ಲಭಿಸಿತು. ರಾತ್ರಿಯವರೆಗೂ ಎದುರಿಗೆ ಕುಳಿತು ಹಳ್ಳಿಯ ಹಿರಿಯ ಕಿರಿಯರೆಲ್ಲರಿಗೂ ಊಟ ಮಾಡಿಸಿ ಬಂದರು. ರಾತ್ರಿಯೇ ಕಂತೆ ಒಗೆದುಬಿಟ್ಟರು. ಪ್ರಪಂಚದಲ್ಲಿ ಇಂತಹ ಸಾವು ಎಲ್ಲರಿಗೂ ದೊರೆಯುವುದಿಲ್ಲ. ಎಷ್ಟಾದರೂ ಜ್ಞಾನಿಗಳು, ಮಹಾತ್ಮರು!

ರಾಮದಾಸ ಹೇಳಿದ:

''ಸಮಾರಾಧನೆ ಮುಗಿಸಿ ಹಿಂತಿರುಗಿದ ಮೇಲೆ ಆಸನದಲ್ಲಿ ಧ್ಯಾನಮಗ್ನರಾಗಿ ಕುಳಿತರು. ಆಗ ಅವರ ಶರೀರದಿಂದ 'ಜ್ಯೋತಿ' ಕಾಣಿಸಿತು. ನಾವು ಹತ್ತಿರ ಹೋಗಲು ಪ್ರಯತ್ನಿಸಿದೆವು. ಅವರು ಕೈಸನ್ನೆಯಿಂದಲೇ ನಮ್ಮನ್ನು ತಡೆದರು. ನಾವು ಕುಂಡದ ಹತ್ತಿರ ಕೂತುಕೊಂಡು ನೋಡುತ್ತಿದ್ದೆವು. ಮಹಂತರ ದೇಹದ ಪ್ರಕಾಶ ಮತ್ತಷ್ಟು ಹೆಚ್ಚಿತು. ಅವರು ಇದ್ದಕ್ಕಿದ್ದಂತೆ ಮಗುವಾದರು. ಜ್ಯೋತಿಯ ಪ್ರಕಾಶಕ್ಕೆ ನಮ್ಮ ಕಣ್ಣುಗಳು ಮುಚ್ಚಿಕೊಂಡವು. ನಾವು ಕುಳಿತಿದ್ದ ಕಡೆಯೇ ಮಲಗಿಬಿಟ್ಟೆವು. ಲಕ್ಷ್ಮಿ ಕೂಗಿಕೊಂಡಾಗಲೇ ನಮಗೆ ಎಚ್ಚರ ವಾಗಿದ್ದು....''

ಲಕ್ಷ್ಮಿ ಏನೂ ಮಾತನಾಡಲಿಲ್ಲ.... ಈ ಸಾಧುಗಳಿಗೆ ಮಣ್ಣು ಮಾಡುವ ರೀತಿಯೂ ಗೊತ್ತಿಲ್ಲವಲ್ಲ....ಜಟೆ ಬೆಳೆಸಿಬಿಟ್ಟರೆ, ಕೈಯ್ಯಲ್ಲಿ ಕಮಂಡಲ ಹಿಡಿದು ಬಿಟ್ಟರೆ ಸರಿ; ಸಾಧುಗಳಾಗಿ ಹೋದರು....

'ಚರಣದಾಸ' ಮೊದಲು 'ಬೀಜಕ'ದ ಪಠಣ ಆಗಬೇಕು. ಆಮೇಲೆ ಮಣ್ಣು ಮಾಡಬೇಕು. ಆಮೇಲೆ ಮಿಕ್ಕ ಎಲ್ಲ ಸಾಧುಗಳ ಗೋರಿಗಳ ಮೇಲೂ ಮಣ್ಣು ಹಾಕಬೇಕು. ಇಷ್ಟೂ ಗೊತ್ತಿಲ್ಲವೇ?

"ಮಾಯಾಜಾಲ್ ಬಿಖಂಡನೆ ಸುರ ಗುರು ದುಖ ಪರಹರತಾ, ಸರಬೆ ಲೋಕ ಜನಾಬ್ ಜೇನ ಸತತಂ ಹಿಯಾ ಲೋಕಿತಾ....''

....ನಮೋಸ್ತು ಸತಗುರು ಸಾಹೇಬಕೋ
ಚರಣ ಕಮಲಧರಿ ಶೀಶ್,

[ಮಾಯಾಜಾಲವನ್ನು ಖಂಡಿಸುವ, ಸುರಗುರುಗಳ ದುಃಖವನ್ನು ಪರಿಹರಿಸುವ ಎಲ್ಲ ಲೋಕಗಳಲ್ಲೂ ಗೌರವಿಸಲ್ಪಡುವ, ಎಲ್ಲರ ಹೃದಯದಲ್ಲೂ ಪ್ರಕಾಶಿಸುವ ಸದ್ಗುರುವೇ, ನಿನ್ನ ಚರಣಕಮಲಗಳ ಮೇಲೆ ತಲೆ ಇಟ್ಟು ನಮಸ್ಕರಿಸುತ್ತೇನೆ.]

ಎಲ್ಲರಿಗಿಂತ ಮೊದಲು ರಾಮದಾಸ ಮಣ್ಣು ಹಾಕಿದ. ಅನಂತರ ಲಕ್ಷ್ಮಿದಾಸಿ ಮುಷ್ಟಿಯಲ್ಲಿ ಮಣ್ಣು ತುಂಬಿಕೊಂಡು ಮಹಂತರ ಶರೀರದ ಮೇಲಿದ್ದ ಬಿಳಿ ಚದ್ದರಿನ ಮೇಲೆ ಹಾಕಿದಳು. ಆಮೇಲೆ ಹೂವಿನ ಮಾಲೆ! ಸಾಧುಗಳು ಪಿಕಾಸಿಯಿಂದ ಗೋರಿಗೆ ಮಣ್ಣು ತುಂಬಲಾರಂಭಿಸಿದರು. ಚರಣ ದಾಸ ಹೇಳಿದ. "ಈ ಮಹಂತರನ್ನೂ ಸೇರಿ ನಾವು ಹತ್ತು ಜನ ಮಹಂತರಿಗೆ ಮಣ್ಣು ಹಾಕಿದ್ದೇವೆ." ಹಳ್ಳಿಯ ಕೀರ್ತನಕಾರರು ಕೀರ್ತನೆ ಶುರು ಮಾಡಿದರು:

"ಹಾರೇ, ಬಡಾರೇ ಜತನ್ ಸೆ ಸುಗಾ ಏಕ್ ಹೇ ಪೋಸಲ್,
ಮಾಖನ್ ದುಧವಾ ಪಿಲಾಯೆ
ಹಾರೇ, ಸೋ ಹೋರೇ ಸುಗನಾ ಬಿರಛೀ ಚಢಿ ಬೈಠಲ್
ಪಾಜಿದಾರೇ ಧರತೀ ಲೋಟಾಯೆ...."

(ತುಂಬಾ ಜೋಪಾನವಾಗಿ ಒಂದು ಗಿಣಿಯನ್ನು ಸಾಕಿದೆ. ಬೆಣ್ಣೆ ಹಾಲು ಕೊಟ್ಟು ಬೆಳೆಸಿದೆ. ಆದರೆ ಗಿಣಿ ಮರವೇರಿ ಕುಳಿತಿತು. ಪಂಜರವನ್ನು ಭೂಮಿಗೇ ಹಾಕಿಬಿಟ್ಟಿತು.)

ಗೋರಿ ಮಾಡಿದ ಮೇಲೆ ರಾಮದಾಸ ಕಂಜರ ನುಡಿಸಿಕೊಂಡು 'ನಿರ್ಗುಣ' ಪದವನ್ನು ಹಾಡಿದ:

"ಕಹವಾಂ ಸೆ ಹಂಸಾ ಅವೋಲ್,
ಕಹವಾಂ ಸಮಾವೋಲ್ ಹೋ ರಾಮ್
ಕಿ ಅಹೋ ರಾಮಾಹೋ, ಕೌನ್ ಗಢ ಕಯಲ
ಮೋಕಾಮ್ ಕವನ್ ಲಪ್ ಟೌವೋಲ್ ಹೋ ರಾಮ್
ಡಿಮ್ ಡಿಮಿಕ್ ಡಿಮಿಕ್....
ಸುರಪುರಸೆ ಹಂಸಾ ಅವೋಲ್
ನರಪುರ ಸಮಾವೋಲ್ ಹೋ ರಾಮ್
ಕಿ ಅಹೋ ರಾಮಾ ಹೇ, ಕಾಯಾಗಢ
ಕಯಲಾ ಮೋಕಾಮ್ ಮಾಯಹಿಲಪಟಾವೋಲ್ ಹೋ ರಾಮ್."

(ಹಂಸ ಎಲ್ಲಿಂದ ಬಂತು? ಎಲ್ಲಿ ಸೇರಿತು? ಯಾವ ನೆಲದಲ್ಲಿ ನೆಲೆಯೂರಿತು? ಯಾವುದು ಅದನ್ನು ಮುಚ್ಚಿತು?....ಸುರಪುರದಿಂದ ಹಂಸ ಬಂದು ದೇಹದಲ್ಲಿ ನೆಲೆಯೂರಿತು. ಮಾಯೆ ಅದನ್ನು ಮುಚ್ಚಿತು.)

ಸದ್ಗುರುವಿಗೆ ಜಯವಾಗಲಿ
ಮಹಂತ ಸಾಹೇಬರಿಗೆ ಜಯವಾಗಲಿ
ಎಲ್ಲ ಸಂತರಿಗೂ ಜಯವಾಗಲಿ

ಮಠವೆಲ್ಲಾ ಶೂನ್ಯವಾಗಿ ತೋರುತ್ತಿತ್ತು. ಜೀವನದಲ್ಲಿ ಮೊದಲ ಬಾರಿಗೆ ಲಕ್ಷ್ಮಿಗೆ ಮಹಂತರ ಬೆಲೆಯ ಅನುಭವವಾಯಿತು····ನೇತ್ರಹೀನರಾಗಿದ್ದರು. ಸ್ವಲ್ಪವೂ ಕಾಣುತ್ತಿರಲಿಲ್ಲ····ರಾಮದಾಸನ ಸಹಾಯವಿಲ್ಲದೆ ಒಂದು ಹೆಜ್ಜೆ ಇಡುವುದೂ ಸಾಧ್ಯವಾಗುತ್ತಿರಲಿಲ್ಲ. ಆದರೂ ಮಠ ತುಂಬಿರುವಂತೆ ಭಾಸವಾಗುತ್ತಿತ್ತು. ಮಹಂತರಿಲ್ಲದ ಈ ಮಠ ಪ್ರಾಣವಿಲ್ಲದ ಶರೀರದಂತೆ ಕಾಣುತ್ತಿದೆ.

**ಕಾಂಚಹಿ ಬಾಂಸ್ ಕೆ ಪಿಂಜಡಾ,**
**ಜಾಮೆ ದಿಯರೋ ನ ಬಾತೀ ಹೋ,**
**ಅರೆ ಹಂಸಾ ಉಡಲ್ ಆಕಾಶ್,**
**ಕೋಯಿಯಾ ಸಂಗೋ ನ ಸಾಥೀ ಹೋ.**

(ವಾಸಮಾಡುತ್ತಿರುವುದು ಗಾಜಿನ ಪಂಜರ. ಅದರಲ್ಲಿ ದೀಪವೂ ಇಲ್ಲ, ಬತ್ತಿಯೂ ಇಲ್ಲ. ಹಂಸ ಆಕಾಶಕ್ಕೆ ಹಾರಿತು. ಜೊತೆಗೆ ಯಾರೂ ಇಲ್ಲ.)

····ಏನಾದರಾಗಲಿ ಮಹಂತರು ಪ್ರಪಂಚದಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಲಕ್ಷ್ಮಿಯನ್ನೇ ಪ್ರೀತಿಸುತ್ತಿದ್ದರು. ಏರು ಜವ್ವನದಲ್ಲಿ ಸದ್ಗುರುವಿನ ದಯೆಯಿಂದ ಮಾಯೆಯನ್ನು ಜಯಿಸಿ ಬ್ರಹ್ಮಚಾರಿಗಳಾಗಿದ್ದರು. ಮುಪ್ಪಿನಲ್ಲಿ ಮನುಷ್ಯನ ಇಂದ್ರಿಯಗಳು ಶಿಥಿಲವಾಗುತ್ತವೆ. ಅವು ಮಾಯೆಯ ಪ್ರಬಲ ಆಘಾತವನ್ನು ಸಹಿಸಲಾರವು. ಆದ್ದರಿಂದಲೇ ಸಾಧು ಬ್ರಹ್ಮಚಾರಿಗಳು ಮುಪ್ಪಿನಲ್ಲೇ ಮಾಯೆಯ ವಶರಾಗುತ್ತಾರೆ. ಅದು ಮಹಂತರ ದೋಷವಲ್ಲ. ಅವಳ ಅದೃಷ್ಟವೇ ಕೆಟ್ಟದು. ಅವಳು ಇಲ್ಲದಿದ್ದರೆ ಮಹಂತರು ಸದ್ಗುರುವಿನ ಮಾರ್ಗದಿಂದ ಸರಿಯುತ್ತಿರಲಿಲ್ಲ. ಅದು ಧೃವ ಸತ್ಯ. ದೋಷವೆಲ್ಲಾ ಲಕ್ಷ್ಮಿಯದೇ. ಒಬ್ಬ ಬ್ರಹ್ಮಚಾರಿಯನ್ನು ಧರ್ಮಭ್ರಷ್ಟನನ್ನಾಗಿ ಮಾಡಿದ ಕಳಂಕ ಅವಳ ಹಣೆಗೆ ಕಟ್ಟಿದ್ದು. ಇನ್ನು ಅವಳಿಗೆ ಯಾರು ದಿಕ್ಕು? ಯಾರೂ ಇಲ್ಲ····

"ಮಹಂತರೇ, ಮಹಂತರೇ ನನ್ನನ್ನು ಬಿಟ್ಟು ನೀವು ಎಲ್ಲಿಗೆ ಹೊರಟು ಹೋದಿರಿ? ದಾಸಿಯ ಅಪರಾಧವನ್ನು ಕ್ಷಮಿಸಿಬಿಡಿ ಗುರು. ಬದುಕಿದ್ದಾಗ ನಿಮ್ಮ ಯಾವ ಸೇವೆಯನ್ನೂ ಸಂತೋಷದಿಂದ ಮಾಡುವುದಾಗಲಿಲ್ಲ. ಸಾಯುವ ಸಮಯದಲ್ಲೂ ನಿಮಗೆ ಸಂತೋಷ ಉಂಟುಮಾಡಲಿಲ್ಲ. ಕ್ಷಮಿಸಿ ಗುರು."

ಬಹು ದಿನಗಳಿಂದ ಹೆಪ್ಪುಕಟ್ಟಿದ್ದ ಕಣ್ಣೀರೆಲ್ಲಾ ಈವತ್ತು ಹೊರಬರಲು ಆತುರಗೊಂಡಿತ್ತು. ತಡೆದರೂ ನಿಲ್ಲಲಿಲ್ಲ.

"ಜೈ ಹಿಂದ್ ಕೊಠಾರಿನ್‌ಜೀ."

"ಸದ್ಗುರು ನಿಮಗೆ ಒಳ್ಳೆಯದನ್ನು ಮಾಡಲಿ. ಕೂತ್ಕೊಳ್ಳಿ ಬಾಲದೇವ್."

ಬಾಲದೇವ ಎಲ್ಲ ಮರೆತುಬಿಟ್ಟ. ಲಕ್ಷ್ಮಿಯನ್ನು ಸಮಾಧಾನಪಡಿಸಬೇಕೆಂದು ರಸ್ತೆಯುದ್ದಕ್ಕೂ ಯೋಚಿಸಿಕೊಂಡಿದ್ದ ಮಾತುಗಳು. ಹೇಳಬೇಕೆಂದುಕೊಂಡಿದ್ದ, ದೋಹಾ, ಕವಿತ್ತ್ ಎಲ್ಲಾ ಮರೆತೇಹೋದವು....ಅವನಿಗೆ ಮಾಯಾಜಿಯ ನೆನಪು ಬಂತು....ಅವರ ಆ ರೂಪ...."ಗಂಗಾ ರೇ ಜಮುನಾಂಕೀ ಧಾರ್ ನಯನವಾಂಸೇ ನೀರ್ ಬಹೀ" (ಗಂಗಾ ಯಮುನೆಯರ ಪ್ರವಾಹವೇ ಕಣ್ಣೀರಾಗಿ ಹರಿಯಿತು).

ಬಾಲದೇವ ನಿರ್ಮಿಸಿಕೊಂಡಿದ್ದ ಧೈರ್ಯದ ಅಣೆಕಟ್ಟು ಈ ಪ್ರವಾಹದೆದುರು ನಿಲ್ಲಲಾಗಲಿಲ್ಲ. ಬಾಲದೇವನ ಕಣ್ಣುಗಳಲ್ಲೂ ನೀರು ತುಂಬಿತು. ಫಾಲ್ಗುಣದಲ್ಲೂ ಪ್ರವಾಹ ಬರುತ್ತದೆ. ಅವನು ಮನಸ್ಸನ್ನು ಗಟ್ಟಿಮಾಡಿಕೊಂಡು ಹೇಳಿದ:

"ಕೊಠಾರಿನ್‌ಜೀ, ಎಲ್ಲ ಪರಮೇಶ್ವರನ ಮಾಯೆ. ಹಾನಿ–ಲಾಭ, ಜೀವನ–ಮರಣ, ಜಯ–ಅಪಜಯ ಎಲ್ಲ ವಿಧಿಯ ಕೈಯಲ್ಲಿದೆ....ಸೂರ್ಯ ಹುಟ್ಟುವ ಮುಂಚೆಯೇ ನಾನು ಡಾಕ್ಟರ್ ಜೊತೆ ಹೊರಗಡೆ ಹೊರಟುಹೋಗಿದ್ದೆ. ಡಾಕ್ಟರ್ ಸಾಹೇಬರಿಗೆ ಹಳ್ಳಿಯ ಚಕ್ಕುಬಂದಿ ತೋರಿಸಬೇಕಾಗಿತ್ತು. ದಕ್ಷಿಣದಲ್ಲಿ ಸಂತಾಲ ಪಂಗಡದಿಂದ ಆರಂಭಿಸಿ ದುಸಾಥ್ ಪಂಗಡದವರೆಗಿನ ಗಲ್ಲಿ ರಸ್ತೆಗಳು, ಅಂಗಳ ಹಿತ್ತಲು ನೋಡಿ ಮುಗಿಸುವ ಹೊತ್ತಿಗೆ ಹತ್ತು ಗಂಟೆಯಾಯಿತು. ಮಹಂತ ಸಾಹೇಬರು ತೀರಿಕೊಂಡರೆಂದು ಅಲ್ಲಿಯೇ ಸುದ್ದಿ ತಿಳಿಯಿತು. ಅದನ್ನು ಕೇಳಿ ಡಾಕ್ಟರೂ ಬೇಸರಪಟ್ಟರು. ತಕ್ಷಣ ಆಸ್ಪತ್ರೆಗೆ ಬಂದುಬಿಟ್ಟರು. ಮಿಕ್ಕ ಪಂಗಡದವರನ್ನು ನಾಳೆ ನೋಡುತ್ತಾರೆ...ಇಲ್ಲಿ ಆಸ್ಪತ್ರೆ ತೆರೆದಿದೆ ಅಂತ ಈವತ್ತು ಕೌತಹಟ್ ಸಂತೇಲಿ ಡಂಗೂರವನ್ನು ಸಾರಿಸಬೇಕು. ಅಲ್ಲಿಗೆ ಶೋಭನ ಮೋಚಿಯನ್ನು ಕಳಿಸಿ ನಾನಿಲ್ಲಿಗೆ ಬಂದೆ."

ಲಕ್ಷ್ಮಿಯ ಕಣ್ಣೀರು ನಿಂತಿತು. ಬಾಲದೇವ ಸರಿಯಾದ ಸಮಯಕ್ಕೆ ಬಂದ. ಮಹಂತರಿಗೆ ಬಾಲದೇವನನ್ನು ಕಂಡರೆ ತುಂಬಾ ಅಭಿಮಾನ. ಐದಾರು ದಿನಗಳ ಪರಿಚಯದಲ್ಲೇ ಮಹಂತರು ಅವನನ್ನು ಚೆನ್ನಾಗಿ ಗುರುತಿಸಿದ್ದರು. ರೂಪಾಯಿಯನ್ನು ಶಬ್ದಮಾಡಿ ಪರೀಕ್ಷಿಸಬೇಕು. ಮನುಷ್ಯನನ್ನು ಒಂದೇ ಮಾತಿನಿಂದ ಗುರುತಿಸಿಬಿಡಬಹುದು. ಮಹಂತರು ಹೇಳುತ್ತಿದ್ದರು: "ಶುದ್ಧ ವಿಚಾರದ ಮನುಷ್ಯ. ಒಳ್ಳೆಯ ಸಂಸ್ಕಾರವಿದೆ" ಎಂದು. ಇದಕ್ಕೆ ಮುಂಚೆ ಮಹಂತರು ಯಾರ ಮೇಲೂ ಇಷ್ಟೊಂದು ವಿಶ್ವಾಸ ಇಟ್ಟಿರಲಿಲ್ಲ. ಮಠಕ್ಕೆ ಪ್ರತಿದಿನ

ವಿವಿಧ ಸ್ವಭಾವದ ಸಾಧು ಸನ್ಯಾಸಿಗಳು ಬರುತ್ತಿದ್ದರು. ಆದರೆ ಮಹಂತರು ಒಂದು ದಿನವೂ ಹೇಳುವುದನ್ನು ಬಿಡುತ್ತಿರಲಿಲ್ಲ: "ಲಕ್ಷ್ಮೀ, ಈ ಜನಗಳನ್ನು ನಂಬುವುದು ಕಷ್ಟ. ಸ್ವೇಚ್ಛೆಯ ಸ್ವಭಾವದವರು. ಇವರ ಜೊತೆ ಹೆಚ್ಚು ಮಾತನಾಡುವುದು ಒಳ್ಳೆಯದಲ್ಲ." ಚಿಕ್ಕ ವಯಸ್ಸಿನ ಸಾಧುಗಳನ್ನು ಅವರ ಹೆಜ್ಜೆಯ ಸಪ್ಪಳದಿಂದಲೇ ಗುರುತಿಸಿಬಿಡುತ್ತಿದ್ದರು. ಅವರ ಅಂತರ್ದೃಷ್ಟಿ ತುಂಬಾ ತೀಕ್ಷ್ಣವಾಗಿತ್ತು. ಹೋದ ವರ್ಷ ಒಬ್ಬ ಯುವಕ ಸಾಧು 'ಸತ್ಸಂಗ'ದ ಸಮಯದಲ್ಲಿ ಬಂದು ಕುಳಿತ. ರಾತ್ರಿ ಬಂದಿದ್ದ. ವರಾಹ ಕ್ಷೇತ್ರಕ್ಕೆ ಹೋಗುತ್ತಿದ್ದ····ಅವನ ಕಣ್ಣುಗಳು ತುಂಬಾ ಚಂಚಲವಾಗಿದ್ದವು. ಸತ್ಸಂಗದಲ್ಲಿ ಕುಳಿತು ಲಕ್ಷ್ಮಿಯನ್ನು ಒಂದೇ ಸಮನೆ ನೋಡುತ್ತಿದ್ದ. ಮಹಂತರು "ಸಾಹೇಬ ವಚನ" ಹೇಳುತ್ತಿದ್ದರು. ಪಂಕ್ತಿಯನ್ನು ಹೇಳುತ್ತಾ ಹೇಳುತ್ತಾ ಒಮ್ಮೆಲೇ ತಡೆದು ಹೇಳಿದರು: "ಹೇ ಮಾಗಳಿಯ ಯುವಕ ಸಾಧು. ವಚನದ ಕಡೆ ಗಮನ ಕೊಡಪ್ಪ. ಲಕ್ಷ್ಮಿಯ ಶರೀರದಲ್ಲೇಕೆ ದೃಷ್ಟಿ ನೆಟ್ಟಿರುವೆ? ಮಣ್ಣಿನ ಶರೀರ ಮಿಥ್ಯ. ಸಾಹೇಬಗ್ರಂಥ ವಚನ ಸತ್ಯ."····ಬಡಪಾಯಿ ಪ್ರಸಾದವನ್ನೂ ತೆಗೆದುಕೊಳ್ಳದೆ ಹೊರಟುಹೋಗಿದ್ದ. ಆದರೆ ಬಾಲದೇವನ ವಿಚಾರದಲ್ಲಿ ಅವರಿಗೆ ತುಂಬಾ ನಂಬಿಕೆಯಿತ್ತು····"ಇಂತಹವರೇ ನಿಜವಾದ ತ್ಯಾಗಿಗಳು ಲಕ್ಷ್ಮಿ" ಎನ್ನುತ್ತಿದ್ದರು.

ಬಾಲದೇವನನ್ನು ಕಂಡಕೂಡಲೆ ಲಕ್ಷ್ಮಿಯ ದುಃಖ ಹೆಚ್ಚಾಯಿತು. ಬಾಲದೇವ ಹೇಳಿದ:

"ತುಂಬಾ ಅದೃಷ್ಟದಿಂದ ಇಂತಹವರ ದರ್ಶನ ಸಿಗುತ್ತದೆ. ನನಗೆ ದರ್ಶನವೇನೋ ಸಿಕ್ಕಿತು. ಆದರೆ ಸೇವೆ ಮಾಡುವುದಕ್ಕೆ ಅವಕಾಶ ಸಿಗಲಿಲ್ಲ. ನನ್ನ ದುರಾದೃಷ್ಟ····"

"ಬಾಲದೇವ್, ನೀವು 'ದಾಸ' ಪಂಗಡದವರೇನು?"

"ಹೌದು. ನನ್ನ ತಾಯಿಯೂ ದಾಸ ಪಂಗಡಕ್ಕೆ ಸೇರಿದ್ದಳು. ಮಾಂಸ, ಮೀನು ಮುಟ್ಟುತ್ತಲೂ ಇರಲಿಲ್ಲ."

"ಹಾಗಾದರೆ ನೀವು ಆಗರ್ಭದಾಸರು. ಆದರೂ ತುಳಸಿಮಾಲೆ ಯಾಕೆ ಹಾಕ್ಕೊಂಡಿಲ್ಲ?"

ಬಾಲದೇವ ಕೊಂಚ ನಕ್ಕು ಉತ್ತರ ಕೊಟ್ಟ:

"ನಿಜವಾದದ್ದು ಮನಸ್ಸಲ್ವೆ? ತುಳಸಿಮಾಲೆ ಹೊರಗಿನ ವಸ್ತು."

ಬೇರೆಯ ಸಾಧುವೇನಾದರೂ "ತುಳಸಿಮಾಲೆ ಹೊರಗಿನ ವಸ್ತು" ಎನ್ನುವ ಮಾತನ್ನು ಕೇಳಿದ್ದರೆ ಸಿಟ್ಟಾಗುತ್ತಿದ್ದಳು. ರಾಮದೇವ ಗೋಸಾಯಿಗಳಂತೂ ಇಂತಹ ಮಾತುಗಳನ್ನು ಕೇಳಿದರೆ ಇಕ್ಕಳವನ್ನು ತೆಗೆದುಕೊಂಡು ಹೊಡೆಯುವುದಕ್ಕೆ ಬರುತ್ತಿದ್ದರು. ನಿಂದೆಯ ಮಳೆ ಸುರಿಸುತ್ತಿದ್ದರು. ಆದರೆ ಲಕ್ಷ್ಮಿ ಶಾಂತವಾಗಿಯೇ ಹೇಳಿದಳು: "ತುಳಸಿಮಾಲೆ ಹೊರಗಿನ ವಸ್ತುವಲ್ಲ ಬಾಲದೇವಜೀ. ಅದೊಂದು ವೇಷ. ನೀವೇ ಯೋಚನೆ ಮಾಡಿ. ನಿಮ್ಮ ಈ ಖದ್ದರ್ ಬಟ್ಟೆಯ ಹಾಗೇ. ಮಖಮಲ್ ಅಥವಾ ಮಿಲ್ಲಿನ ಬಟ್ಟೆ ಹಾಕ್ಕೊಂಡವನು ಮನಸ್ಸಿನಲ್ಲಿ ಮಹಾತ್ಮಾಜಿಯವರ ಪಂಥವನ್ನು ಒಪ್ಪುವವನಾದರೂ ನೀವು ಅವನನ್ನು ಸ್ವರಾಜ್ಯವಾದಿ ಎಂದು ಹೇಳುವುದಿಲ್ಲ!"

ಲಕ್ಷ್ಮಿಯ ಮಾತಿಗೆ ಉತ್ತರ ಕೊಡುವುದು ಸುಲಭವಲ್ಲ. ಅವಳ ಜೊತೆ ಮಾತನಾಡಿದಾಗಲೆಲ್ಲಾ ಬಾಲದೇವನಿಗೆ ಹೊಸ ಹೊಸ ವಿಚಾರಗಳು ತಿಳಿಯುತ್ತವೆ.

"ನೀವು ಹೇಳಿದ್ರೆ ತುಳಸಿಮಾಲೆ ಹಾಕ್ಕೊಳ್ತೀನಿ."

"ಯಾರ ಹತ್ತಿರ ತೆಗೆದುಕೊಳ್ತೀರಿ?"

"ನೀವೇ ಕೊಡಿ."

ಲಕ್ಷ್ಮಿ ನಕ್ಕಳು. ಶೋಕ ತುಂಬಿದ ವಾತಾವರಣದಲ್ಲಿ ಲಕ್ಷ್ಮಿಯ ನಗು ಪ್ರಾಣ ತುಂಬಿತು.····ಎಷ್ಟು ಮುಗ್ಧ ಈ ಬಾಲದೇವ. ನನ್ನನ್ನೇ ಗುರುವಾಗಿ ಮಾಡಿಕೊಳ್ಳುತ್ತಾನಂತೆ.

"ಬೇಡ ಬಾಲದೇವ. ನಾನು ನಿಮಗೆ ಆಚಾರ್‌ಜೀಯವರಿಂದ ಮಾಲೆ ಕೊಡಿಸ್ತೀನಿ. ಅವರು ಕಾಶೀಲಿ ಇದ್ದಾರೆ. ನಾನು ನಿಮಗೆ ನನ್ನ 'ಬೀಜಕ' ಗ್ರಂಥವನ್ನು ಬೇಕಾದರೆ ಕೊಡ್ತೀನಿ. ಅದನ್ನು ಪ್ರತಿದಿನ ಓದಿ. ಬೀಜಕ ಪಠನದಿಂದ ಮನಸ್ಸು ನಿರ್ಮಲವಾಗುತ್ತದೆ. ಅಂತರ್‌ಜ್ಯೋತಿ ತೆರೆಯುತ್ತದೆ."

····ಬೀಜಕ ಒಂದು ಸಣ್ಣ ಪುಸ್ತಕ; ಅದು ಜ್ಞಾನ ಭಂಡಾರ. ಬಾಲದೇವನ ಹೃದಯ ಧಕ್ ಧಕ್ ಎಂದಿತು. ಲಕ್ಷ್ಮಿ ಹೇಳಿದಳು:

"ಎಲ್ಲಾ ಕೈಯಲ್ಲೇ ಬರೆದದ್ದು. ಒಂದು ಸಲ ಕಾಶಿಯಿಂದ ಒಬ್ಬ ವಿದ್ಯಾರ್ಥಿ ಬಂದಿದ್ದರು. ತುಂಬಾ ಎಚ್ಚರಿಕೆಯಿಂದ ಬರೆದಿದ್ದಾರೆ. ಅಕ್ಷರಗಳಂತು ಮುತ್ತಿನ ಹಾಗಿವೆ."

'ಬೀಜಕ'ದಿಂದಲೂ ಲಕ್ಷ್ಮಿಯ ಶರೀರದ ಸುಗಂಧವೇ ಹೊರಹೊಮ್ಮುತ್ತಿದೆ. ಈ ಸುಗಂಧದಲ್ಲಿ ಒಂದು ರೀತಿಯ ನಷೆ ಇದೆ. ಈ ಗ್ರಂಥದ ಪ್ರತಿ ಪುಟವನ್ನೂ ಲಕ್ಷ್ಮಿಯ ಬೆರಳುಗಳು ಸ್ಪರ್ಶಿಸಿವೆ.

....“ಪೋಥೀ ಪಢಿ ಪಢಿ ಜಗಮುವ, ಪಂಡಿತ ಭಯಾನ ಕೋಯೀ. ಢಾಯೀ ಆಖರ ಪ್ರೇಮ್ ಕಾ ಪಢಾ ಸೋ ಪಂಡಿತ ಹೋಯ್” (ಗ್ರಂಥಗಳನ್ನು ಓದಿ ಓದಿ ಜಗತ್ತು ಸತ್ತಿತು. ಯಾರೂ ಪಂಡಿತರಾಗಲಿಲ್ಲ. 'ಪ್ರೇಮ' ಎನ್ನುವ ಎರಡು ಅಕ್ಷರ ಓದಿದವನು ಪಂಡಿತನಾದ).

ಲಕ್ಷ್ಮಿಯನ್ನು ನೋಡಿದ ಕೂಡಲೇ ಮನಸ್ಸು ಪವಿತ್ರವಾಗುತ್ತದೆ.

## 9

ಡಾಕ್ಟರ್ ಪ್ರಶಾಂತಕುಮಾರ್.

ಜಾತಿ ?..........

ಹೆಸರು ಕೇಳಿದ ತಕ್ಷಣ ಜನ ಕೇಳುವುದು ಈ ಪ್ರಶ್ನೆಯನ್ನೇ. ಜಾತಿ ಯಾವುದು? ಜೀವನದಲ್ಲಿ ಪ್ರಶಾಂತಕುಮಾರರನ್ನು ಅವರ ಜಾತಿಯ ಬಗ್ಗೆ ಪ್ರಶ್ನಿಸಿರುವವರು ಬಹಳ ಕಡಿಮೆ ಜನ. ಆದರೆ ಇಲ್ಲಿ ಮಾತ್ರ ಪ್ರತಿಯೊಬ್ಬರೂ ಕೇಳುವುದು ಜಾತಿಯನ್ನೇ. ಪ್ರಶಾಂತ ನಕ್ಕು ಉತ್ತರ ಹೇಳುತ್ತಾನೆ:

“ಜಾತಿಯೇನು? ಡಾಕ್ಟರು.”

“ಡಾಕ್ಟರ್, ಡಾಕ್ಟರ್ ಜಾತಿಯೇ. ಬಂಗಾಳಿಯೋ ಬಿಹಾರಿನವರೋ.”

'ಹಿಂದೂಸ್ತಾನಿ' ಎಂದು ಡಾಕ್ಟರ್ ಉತ್ತರ ಕೊಡುತ್ತಿದ್ದರು.

ಜಾತಿ ಎನ್ನುವುದು ತುಂಬಾ ಮುಖ್ಯವಾದ ವಿಚಾರ. ಜಾತಿ ಪಂಥವನ್ನು ಒಪ್ಪದಿರುವವರಿಗೂ ಒಂದು ಜಾತಿ ಇದ್ದೇ ಇರುತ್ತದೆ. ಹಿಂದೂ ಎಂದು ಹೇಳಿದ ಮಾತ್ರಕ್ಕೆ ಸಮಸ್ಯೆ ಬಗೆಹರಿಯುವುದಿಲ್ಲ. ಬ್ರಾಹ್ಮಣರೇ?.... ಬ್ರಾಹ್ಮಣರಲ್ಲಿ ಯಾವ ಜಾತಿ? ಗೋತ್ರ ಯಾವುದು? ಯಾವ ವಂಶ?....ಪಟ್ಟಣದಲ್ಲಾದರೆ

ಯಾರೂ ಯಾರ ಜಾತಿಯನ್ನೂ ಕೇಳುವುದಿಲ್ಲ. ಇಷ್ಟಕ್ಕೂ ಅಲ್ಲಿ ಜನರ ಜಾತಿಯದು ಯಾವ ನಿಶ್ಚಯ? ಆದರೆ ಹಳ್ಳಿಯಲ್ಲಿ ಮಾತ್ರ ಜಾತಿಯನ್ನು ಹೇಳದೆ ನೀರನ್ನೂ ಮುಟ್ಟುವ ಹಾಗಿಲ್ಲ.

ಪ್ರಶಾಂತ ತನ್ನ ಜಾತಿಯನ್ನು ಮುಚ್ಚಿಡುತ್ತಿದ್ದರು. ವಾಸ್ತವ ಸಂಗತಿಯೆಂದರೆ ತಮ್ಮ ಜಾತಿಯ ಬಗ್ಗೆ ಅವರಿಗೇ ತಿಳಿದಿರಲಿಲ್ಲ. ಒಂದು ವೇಳೆ ಗೊತ್ತಿದ್ದರೆ ಅದನ್ನು ಹೇಳಲು ಸಂಕೋಚಪಡುತ್ತಿರಲಿಲ್ಲವೇನೋ! ಆಗ ಬಹುಶಃ ಜಾತಿ ಮತದ ಭೇದಭಾವಗಳ ವಿಚಾರದಲ್ಲಿ ಅವರಿಗೆ ಸ್ವಲ್ಪವಾದರೂ ನಂಬಿಕೆ ಇರುತ್ತಿತ್ತು. ಬಹುಶಃ ಬ್ರಾಹ್ಮಣ ಎಂದು ಹೇಳಿಕೊಳ್ಳುವುದಕ್ಕೂ ಹೆಮ್ಮೆ ಪಡುತ್ತಿದ್ದರೇನೋ.

ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಹೆಸರನ್ನು ಬರೆಸುವಾಗಲೂ ಪ್ರಶಾಂತನಿಗೆ ಇದೇ ಸಮಸ್ಯೆಗಳು ಇದಿರಾಗಿದ್ದವು. ರಾತ್ರಿಯಿಡೀ ಅವರು ಅದರ ವಿಚಾರವನ್ನೇ ಯೋಚಿಸುತ್ತಿದ್ದರು.

ಪ್ರಶಾಂತ ಕುಮಾರ, ತಂದೆಯ ಹೆಸರು ಅನಿಲ ಕುಮಾರ ಬ್ಯಾನರ್ಜಿ, ಹಿಂದೂ, ಬ್ರಾಹ್ಮಣ. ಎಲ್ಲಾ ಬರೀ ಸುಳ್ಳು. ಬಡಪಾಯಿ ಡಾಕ್ಟರ್ ಅನಿಲ ಕುಮಾರ ಬ್ಯಾನರ್ಜಿ ನೇಪಾಳದ ಘಟ್ಟದ ಯಾವುದೋ ಹಳ್ಳಿಯಲ್ಲಿ ತನ್ನ ಪರಿವಾರದೊಂದಿಗೆ ಸುಖವಾಗಿ ನಿದ್ದೆ ಹೊಡೆಯುತ್ತಿದ್ದನೇನೋ! ಅವನಿಗೆ 'ಪ್ರಶಾಂತ ಕುಮಾರ' ಎನ್ನುವ ಹೆಸರಿನ ಪುತ್ರನೊಬ್ಬ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಹೆಸರನ್ನು ಬರೆಸುತ್ತಿರಬಹುದು, ಎನ್ನುವ ಕನಸು ಬೀಳುವುದೂ ಸಾಧ್ಯವಿರಲಿಲ್ಲ!····ಆದರೆ ಪ್ರಶಾಂತ ತನ್ನ ಕಥಾಕಥಿತ ತಂದೆ ಡಾಕ್ಟರ್ ಅನಿಲ ಕುಮಾರನನ್ನು ತಿಳಿದಿದ್ದ. ಮೆಟ್ರಿಕ್ ಪರೀಕ್ಷೆಗೆಂದು ಫಾರ್ಮ್ ತುಂಬುತ್ತಿದ್ದಾಗಲೇ ಡಾ॥ ಅನಿಲ ಕುಮಾರ ಅವನ ತಂದೆಯ ಜಾಗದಲ್ಲಿ ಬಂದು ಕುಳಿತಿದ್ದ!

ಬಾಲ್ಯದಿಂದಲೂ ಅವನು ತನ್ನ ಹುಟ್ಟಿನ ಕಥೆಯನ್ನು ಕೇಳುತ್ತಲೇ ಇದ್ದಾನೆ. ಮನೆಯ ಕೆಲಸದವಳು, ತೋಟದ ಮಾಲಿ, ನೆರೆಯ ಮಿಠಾಯಿವಾಲಾ ಎಲ್ಲರೂ ಅವನ ಜನ್ಮಕಥೆಯನ್ನು ಹೇಳುತ್ತಿರುತ್ತಾರೆ. ಜನ ಅವನನ್ನು ಕಂಡಾಗಲೆಲ್ಲಾ ಅವನ ಕಡೆ ಬೆರಳು ತೋರಿಸಿ ಹೇಳುತ್ತಿದ್ದರು:

"ಆ ಹುಡುಗನನ್ನು ನೋಡಿದರಲ್ಲಾ. ಅವನು ಉಪಾಧ್ಯಾಯರಿಗೆ ಕೋಸೀ ನದಿಯಲ್ಲಿ ಸಿಕ್ಕಿದ. ಬಂಗಾಳಿ ಮಹಿಳಾ ಡಾಕ್ಟರೊಬ್ಬರು ಅವನ ಪಾಲನೆ ಪೋಷಣೆ ಮಾಡಿದರು." ಆಗ ಕೇಳಿದವರ ಮುಖದಲ್ಲಿ ಆಶ್ಚರ್ಯಭಾವ

ಮೂಡುತ್ತಿತ್ತು. ಕಣ್ಣುಗಳಲ್ಲಿ ಕರುಣೆ ಮೂಡುತ್ತಿತ್ತು. ಇದನ್ನು ಪ್ರಶಾಂತ ನೂರಾರು ಬಾರಿ ನೋಡಿದ್ದ····ಒಂದು ಅನಾಥ ಶವವನ್ನು ನೋಡುವಾಗಲೂ ಜನರ ಮುಖದಲ್ಲಿ ಇದೇ ಭಾವ ಮೂಡಿರುತ್ತದೆ.

ಪ್ರಶಾಂತ ಅಜ್ಞಾತ ಕುಲದವನು. ಅವನ ತಾಯಿ ಅವನನ್ನು ಒಂದು ಮಣ್ಣಿನ ಮಡಕೆಯಲ್ಲಿ ಮಲಗಿಸಿ ಪ್ರವಾಹ ತುಂಬಿದ್ದ ಕೋಸೀ ನದಿಯಲ್ಲ ತೇಲಿಬಿಟ್ಟಿದ್ದಳು. ನೇಪಾಳದ ಪ್ರಸಿದ್ಧ ಉಪಾಧ್ಯಾಯ ಪರಿವಾರದವರು ನೇಪಾಳ ಸರ್ಕಾರದ ಧನಸಹಾಯದಿಂದ ಸಹರಸಾ ಅಂಚಿನಲ್ಲಿ ಆದರ್ಶ ಆಶ್ರಮವೊಂದನ್ನು ಸ್ಥಾಪಿಸಿದ್ದರು. ಒಂದು ದಿನ ಉಪಾಧ್ಯಾಯರು ಪ್ರವಾಹ ಪೀಡಿತರ ಸಹಾಯ ಪಡೆಯಲು ದೋಣಿಯಲ್ಲಿ ಹೊರಟರು. ಪೊದೆಯ ಮರೆಯಲ್ಲಿ ಒಂದು ಮಣ್ಣಿನ ಮಡಕೆ ಕಾಣಿಸಿತು. ಹೊಸ ಮಡಕೆ! ಅವರ ಹೆಂಡತಿಗೆ ತುಂಬಾ ಕುತೂಹಲ ಉಂಟಾಯಿತು. "ಅಲ್ಲಿ ಸ್ವಲ್ಪ ನೋಡಿ, ಅಲ್ಲೇನಿದೆ?" ಎಂದರು. ದೋಣಿ ಪೊದೆಯ ಹತ್ತಿರ ಬಂದಿತು. ನೀರಿನ ಹೊಡೆತಕ್ಕೆ ಅದು ಅಲುಗಾಡಿತು. ಅದರಿಂದ ನೀರು ಹಾವೊಂದು ತಲೆಯೆತ್ತಿ ಫೋ··ಫೋ····ಎಂದಿತು. ಅನಂತರ ಹಾವು ನಿಧಾನವಾಗಿ ನೀರಿಗಿಳಿದು ಹೊರಟುಹೋಯಿತು. ಒಳಗಿಂದ ಆಗತಾನೇ ಹುಟ್ಟಿದ ಮಗುವಿನ ಅಳು ಕೇಳಿಸಿತು····ಇದೇ ಅವನ ಜನ್ಮಕಥೆ! ಇದನ್ನೇ ಪ್ರತಿ ಯೊಬ್ಬರೂ ಒಂದೊಂದು ರೀತಿಯಲ್ಲಿ ಹೇಳುತ್ತಿದ್ದರು.

ಆದರ್ಶ ಆಶ್ರಮದಲ್ಲಿ ಒಬ್ಬ ದುಃಖಿನಿ ಯುವತಿ ಇದ್ದಳು. ಅವಳ ಹೆಸರು ಸ್ನೇಹಮಯಿ. ಸ್ನೇಹಮಯಿಯನ್ನು ಅವಳ ಪತಿ ಡಾಕ್ಟರ್ ಅನಿಲ ಕುಮಾರ ಬ್ಯಾನರ್ಜಿ ತ್ಯಜಿಸಿ, ನೇಪಾಳೀ ಹೆಂಗಸೊಬ್ಬಳನ್ನು ಮದುವೆಯಾಗಿದ್ದ. ಉಪಾಧ್ಯಾಯರ ಆಶ್ರಮದಲ್ಲಿದ್ದುಕೊಂಡು ಅವಳು, ಜಿಂಕೆ, ಮೊಲ, ನವಿಲು, ಕೋತಿಗಳ ಮರಿಗಳಿಗೆ ತನ್ನ ಮಾತೃಪ್ರೇಮವನ್ನು ತೋರಿಸುತ್ತಿದ್ದಳು. ಆದಿನ ಉಪಾಧ್ಯಾಯ ದಂಪತಿಗಳು ನಿದ್ರಿಸುತ್ತಿದ್ದ ಮಗುವನ್ನೇ ಅವಳ ಮಡಿಲಿನಲ್ಲಿಟ್ಟಾಗ ಅವಳು ಆನಂದದಿಂದ ಕೂಗಿಕೊಂಡಳು. "ಪ್ರಶಾಂತ್····ನನ್ನ ಪ್ರಶಾಂತ್" ಆದಿನದಿಂದ ಪ್ರಶಾಂತ ಸ್ನೇಹಮಯಿಯ ಏಕಮಾತ್ರ ಪುತ್ರನಾಗಿ ಬೆಳೆದ. ಕೆಲವು ದಿನಗಳ ನಂತರ ನೇಪಾಳ ಸರ್ಕಾರ ಸಹಾಯಧನವನ್ನು ನಿಲ್ಲಿಸಿ, ಉಪಾಧ್ಯಾಯ ದಂಪತಿಗಳನ್ನು ಆಶ್ರಮದ ಪಶುಪಕ್ಷಿಗಳ ಸಮೇತ ನೇಪಾಳಕ್ಕೆ ವಾಪಸ್ಸು ಕರೆಸಿಕೊಂಡುಬಿಟ್ಟಿತು. ಸ್ನೇಹಮಯಿ ಮತ್ತು ಪ್ರಶಾಂತರೂ, ಉಪಾಧ್ಯಾಯ ಪರಿವಾರದವರೇ ಆಗಿದ್ದರು. ಉಪಾಧ್ಯಾಯರು ನೇಪಾಳದ ಘಟ್ಟದ ವಿರಾಟನಗರದಲ್ಲಿ ಒಂದು ಆದರ್ಶ ವಿದ್ಯಾಲಯವನ್ನು ಸ್ಥಾಪಿಸಿದರು.

ಸ್ನೇಹಮಯಿಯೂ ಅದೇ ಸ್ಕೂಲಿನಲ್ಲಿ ಹೊಲಿಗೆ ಕಲಿಸುವ ಉಪಾಧ್ಯಾಯಿನಿಯಾಗಿ ನೇಮಕಗೊಂಡಳು.

ಸ್ನೇಹಮಯಿಯ ಪ್ರೇಮದ ನೆರಳಿನಲ್ಲಿ ಬೆಳೆದ ಪ್ರಶಾಂತನ ಮೇಲೆ ಕರ್ಮನಿಷ್ಠ ಉಪಾಧ್ಯಾಯ ಪರಿವಾರದವರ ಪ್ರಭಾವ ಬೀಳದೇ ಇದ್ದಿದ್ದರೆ, ಅವನು ಸಿತಾರ್ ಮತ್ತು ರವೀಂದ್ರ ಸಂಗೀತದ ಆಕರ್ಷಣೆಯಿಂದ ಹೊರಗಡೆ ಬರುವುದು ಸಾಧ್ಯವೇ ಆಗುತ್ತಿರಲಿಲ್ಲ. ಉಪಾಧ್ಯಾಯರ ಹಿರಿಯ ಮಗ ಬಿಹಾರ ವಿದ್ಯಾ ಪೀಠದ ಪದವೀಧರ. ಮಧ್ಯದವನು ಡೆಹರಾಡೂನಿನ ಒಂದು ಪ್ರಸಿದ್ಧ ಇಂಗ್ಲೀಷ್ ಸ್ಕೂಲಿನ ವಿದ್ಯಾರ್ಥಿ. ಪುತ್ರಿ ಶಾಂತಿನಿಕೇತನದಲ್ಲಿ ಶಿಕ್ಷಣ ಪಡೆಯುತ್ತಿದ್ದಳು. ರಜಾ ದಿನಗಳಲ್ಲಿ ಅವರೆಲ್ಲಾ ಒಂದುಗೂಡಿದಾಗ ಶಾಂತಿನಿಕೇತನದಲ್ಲಿ ಶಿಕ್ಷಣ ಪಡೆಯುತ್ತಿದ್ದ ಸೋದರಿ ಮಿಕ್ಕವರಿಗೆ ಚರಖಾ ತಿರುಗಿಸುವುದನ್ನು ಹೇಳಿಕೊಡು ತ್ತಿದ್ದಳು. ವಿದ್ಯಾಪೀಠದ ಪದವೀಧರ ಆಶ್ರಮ ಭಜನಾವಳಿಯ ಪಂಕ್ತಿಗಳಿಗೆ ರವೀಂದ್ರ ಸಂಗೀತದ ಸ್ವರ ಜೋಡಿಸುತ್ತಿದ್ದ. ಇಂಗ್ಲೀಷ್ ಶಾಲೆಯ ವಿದ್ಯಾರ್ಥಿ ಸೇವಾದಳದ ಕವಾಯತ್ತುಗಳಿಗೆ ಹಿಂದೀ ಶಬ್ದ ಉಪಯೋಗಿಸುವುದರ ಬಗ್ಗೆ ವೈಜ್ಞಾನಿಕವಾಗಿ ಚರ್ಚೆ ಮಾಡುತ್ತಿದ್ದ. "ಅಟೆಂಷನ್" ಶಬ್ದಕ್ಕೆ ಇರುವ ಫೋರ್ಸ್ 'ಸಾವಧಾನ್' ಎಂದಾಗ ಬರುವುದಿಲ್ಲ! 'ಅಟೆಂಷನ್' ಎನ್ನುವ ಶಬ್ದ ಕೇಳಿದ ಕೂಡಲೇ ಡಜನ್‌ಗಟ್ಟಲೆ ಬೂಡ್ಸುಗಳು ಶಬ್ದಮಾಡಿ ನಿಂತಂತೆ ಭಾಸವಾಗು ತ್ತವೆ!

ಇಂತಹ ವಾತಾವರಣದಲ್ಲಿ ಪ್ರಶಾಂತನ ವ್ಯಕ್ತಿತ್ವ ವಿಕಾಸಗೊಂಡಿತು.

ಹಿಂದೂ ವಿಶ್ವವಿದ್ಯಾಲಯದ ಬಿ.ಎಸ್‌ಸಿ. ಪಾಸಾದ ನಂತರ ಅವನು ಪಾಟ್ನ ಮೆಡಿಕಲ್ ಕಾಲೇಜಿಗೆ ಸೇರಿದ. ಅವನು ಡಾಕ್ಟರಾಗಬೇಕೆಂಬುದು ತಾಯಿಯ ಇಚ್ಛೆಯಾಗಿತ್ತು. ಆದರೆ ತನ್ನ ಪ್ರಶಾಂತ ಡಾಕ್ಟರಾಗುವುದನ್ನು ಕಾಣುವ ಭಾಗ್ಯ ಅವಳಿಗಿರಲಿಲ್ಲ. ಕಾಶೀವಾಸದಲ್ಲಿದ್ದಾಗಲೇ, ಕಾಶಿಯ ಯಾವುದೋ ಒಂದು ಗಲ್ಲಿಯಲ್ಲಿ ಅವಳು ಕೊನೆಯುಸಿರೆಳೆದಳು....ಒಮ್ಮೆ ಲಾಹೌರಿನಿಂದ ಪ್ರಶಾಂತನ ಹೆಸರಿಗೆ ಒಂದು ಮನಿಯಾರ್ಡರ್ ಬಂದಿತ್ತು. 'ಜಯ ದೊರೆಯಲಿ' ಎನ್ನುವ ಆಶೀರ್ವಾದದೊಂದಿಗೆ ಕಳುಹಿಸಿದ್ದವರು ಶ್ರೀಮತಿ ಸ್ನೇಹಮಯಿ ಚೌಪಡಾ—ಒಬ್ಬ ತಾಯಿ ಹುಟ್ಟಿದ ಕೂಡಲೇ ಕೋಸಿ ನದಿಗೆ ಒಪ್ಪಿಸಿಬಿಟ್ಟಿದ್ದಳು! ಇನ್ನೊಬ್ಬ ತಾಯಿ ಅವನನ್ನು ಮಾನವ ಸಾಗರದ ಅಲೆಗಳಿಗೆ ಒಪ್ಪಿಸಿ ಹೊರಟು ಹೋಗಿಬಿಟ್ಟಳು! ಡಾಕ್ಟರ್ ಪರೀಕ್ಷೆ ಪಾಸಾದ ನಂತರ ಅವನು ಹೌಸ್ ಸರ್ಜನ್ ಆಗಿ ಕೆಲಸ ಮಾಡುತ್ತಿದ್ದಾಗ 1942ರ ದೇಶವ್ಯಾಪೀ ಆಂದೋಳನ ಆರಂಭ

ವಾಯಿತು. ನೇಪಾಳದಲ್ಲಿ ಉಪಾಧ್ಯಾಯ ಪರಿವಾರದ ಒಂದೊಂದು ಮಗುವನ್ನು ಸೆರೆಹಿಡಿದರು. 'ಉಪಾಧ್ಯಾಯ ಪರಿವಾರದವರು ಹಿಂದೂಸ್ತಾನದಿಂದ ಓಡಿ ಬಂದ ನಾಯಕರಿಗೆ ಸಹಾಯ ಮಾಡುವುದಲ್ಲದೆ, ಗುಪ್ತ ಆಂದೋಳನದಲ್ಲಿ ಸಕ್ರಿಯ ವಾಗಿ ಭಾಗವಹಿಸುತ್ತಿದ್ದಾರೆ ಎನ್ನುವ ವಿಚಾರ ಸರಕಾರಕ್ಕೆ ಗೊತ್ತಿತ್ತು. ಮಧ್ಯದ ಮಗ ಬಿಹಾರಿನ ಸೋಷಲಿಸ್ಟ್ ಪಕ್ಷದ ಕಾರ್ಯಕರ್ತನಾಗಿದ್ದ. ಅವನು ಮೊದಲೇ ರಾಜಕೀಯ ಅಪರಾಧಿಗಳ ಪಟ್ಟಿಯಲ್ಲಿ ಸೇರಿಬಿಟ್ಟಿದ್ದ. ಪ್ರಶಾಂತನೂ ಉಪಾಧ್ಯಾಯ ಪರಿವಾರದವನೇ ತಾನೇ? ಅವನು ತಪ್ಪಿಸಿಕೊಳ್ಳುವುದು ತಾನೆ ಹೇಗೆ ಸಾಧ್ಯ? ಅವನನ್ನು ದಸ್ತಗಿರಿ ಮಾಡಿದರು. ಜೈಲಿನಲ್ಲಿ ವಿಭಿನ್ನ ರಾಜನೈತಿಕ ದಳಗಳ ನಾಯಕರು ಮತ್ತು ಕಾರ್ಯಕರ್ತರ ನಿಕಟ ಸಂಪರ್ಕ ಪಡೆಯುವ ಅವಕಾಶ ದೊರೆಯಿತು. ಎಲ್ಲಾ ದಳಗಳ ಜನರು ಅವನನ್ನು ಪ್ರೀತಿಯಿಂದ ಕಾಣುತ್ತಿದ್ದರು.

1946 ರಲ್ಲಿ ಕಾಂಗ್ರೆಸ್ ಮಂತ್ರಿ ಮಂಡಲ ಸ್ಥಾಪಿತವಾದಾಗ ಒಂದು ದಿನ ಅವನು ಆರೋಗ್ಯ ಮಂತ್ರಿಗಳ ಮನೆಗೆ ಬಂದ. ಅವನು ಪೂರ್ಣಿಯಾ ಜಿಲ್ಲೆಯ ಯಾವುದಾದರೊಂದು ಹಳ್ಳಿಯಲ್ಲಿದ್ದುಕೊಂಡು ಮಲೇರಿಯ ಮತ್ತು ಕರೀ ಜ್ವರದ ಬಗ್ಗೆ ಸಂಶೋಧನೆ ಮಾಡಲು ಇಷ್ಟಪಡುತ್ತಿದ್ದ. ಅವನಿಗೆ ಸರ್ಕಾರದ ಸಹಾಯ ಬೇಕಾಗಿತ್ತು. ಮಂತ್ರಿವರ್ಯರು ಹೇಳಿದರು:

"ಸರ್ಕಾರ ನಿನ್ನನ್ನು ವಿದೇಶಕ್ಕೆ ಕಳುಹಿಸುತ್ತದೆ. ಸ್ಕಾಲರ್‌ಶಿಪ್...."
"ನಾನು ವಿದೇಶಕ್ಕೆ ಹೋಗೋದಿಲ್ಲ, ಸರ್."....ಪೂರ್ಣಿಯಾ ಮತ್ತು ಸಹರಸಾ ಜಿಲ್ಲೆಗಳ ಭೂಪಟವನ್ನು ಹರಡುತ್ತಾ ಅವನು ಹೇಳಿದ್ದ: "ನಾನು ಈ ಜಿಲ್ಲೆಗಳ ಯಾವುದಾದರೊಂದು ಭಾಗದಲ್ಲಿ ಇರಲು ಇಷ್ಟಪಡುತ್ತೇನೆ. ಇಲ್ಲಿ ನೋಡಿ, ಇದು ಸಹರಸಾ ಜಿಲ್ಲೆಯ ಭಾಗ. ಇಲ್ಲಿ ಪ್ರತಿ ವರ್ಷ ಕೋಸೀ ನದಿಯ ಪ್ರವಾಹ ರುದ್ರನಾಟ್ಯವಾಡುತ್ತದೆ. ಇದು ಪೂರ್ಣಿಯಾ ಜಿಲ್ಲೆಯ ಪೂರ್ವದ ಅಂಚು. ಇಲ್ಲಿ ಮಲೇರಿಯಾ ಮತ್ತು ಕರೀ ಜ್ವರಗಳಿಂದ ಮೃತ್ಯುವಿನ ಆರ್ಭಟವೇಳುತ್ತದೆ.

ಮಂತ್ರಿಗಳು ಪ್ರಶಾಂತನನ್ನು ಚೆನ್ನಾಗಿ ಅರಿತಿದ್ದರು. ಈ ವಿಚಾರದಲ್ಲಿ ಪ್ರಶಾಂತನನ್ನು ತರ್ಕದಲ್ಲಿ ಗೆಲ್ಲುವುದು ಕಷ್ಟವೆಂಬುದನ್ನೂ ಅರಿತಿದ್ದರು. ಅವರೆಂದರು:

"ಆದರೆ ಪ್ರಶ್ನೆ ಇಷ್ಟೇ...."

"ಪ್ರಶ್ನೆ-ಉತ್ತರಗಳೊಂದೂ ಬೇಡ. ನನ್ನನ್ನು ಯಾವುದಾದರೊಂದು ಮಲೇರಿಯಾ ಕೇಂದ್ರಕ್ಕೆ ಕಳುಹಿಸಿಕೊಡಿ."

"ಮಲೇರಿಯಾ ಕೇಂದ್ರಕ್ಕೆ? ಆದರೆ ನೀನು ಎಂ.ಬಿ.ಬಿ.ಎಸ್. ಪಾಸಾಗಿದ್ದೀ. ಮಲೇರಿಯಾ ಕೇಂದ್ರಕ್ಕೆ ಹೋಗೋರೆಲ್ಲಾ ಎಲ್.ಎಂ.ಪಿ. ಡಾಕ್ಟರ್‌ಗಳು."

"ಈ ರಿಸರ್ಚ್ ಕೆಲಸವನ್ನು ಮುಗಿಸುವವರೆಗೆ ನಾನು ಏನೂ ಮಾಡಲಾರೆ. ನನ್ನ ಡಿಗ್ರಿಯಿಂದ ತಾನೇ ಏನು ಉಪಯೋಗ?"

ಬಹಳ ಪ್ರಯತ್ನಪೂರ್ವಕವಾಗಿ ಅನೇಕ ಹಳೆಯ ಫೈಲುಗಳನ್ನೆಲ್ಲಾ ತಿರುವಿಹಾಕಿ, ಪೂರ್ಣಿಯಾ ಜಿಲ್ಲೆಯ ಡಿಸ್ಟ್ರಿಕ್ಟ್ ಬೋರ್ಡ್ ಚೇರ್‌ಮನ್ನರಿಗೆ ಕಾಗದ ಬರೆದು, ಮಿಸ್ಟರ್ ಮಾರ್ಟಿನ್ ಕೊಟ್ಟಿದ್ದ ಭೂಮಿಯ ಬಗ್ಗೆ ಮಂತ್ರಿವರ್ಯರು ಪತ್ತೆಹಚ್ಚಿದರು. ಇಪ್ಪತ್ತು-ಇಪ್ಪತ್ತೆರಡು ವರ್ಷಗಳ ಹಿಂದೆ ಅವರೂ ಪೂರ್ಣಿಯಾ ಜಿಲ್ಲೆಯಲ್ಲೇ ವಕೀಲಿ ವೃತ್ತಿ ಮಾಡುತ್ತಿದ್ದವರು. ಹುಚ್ಚ ಮಾರ್ಟಿನ್ನನ್ನೂ ಅವರು ಕಂಡಿದ್ದರು.

ಕೊನೆಗೆ ಕೇಂದ್ರ ಸರ್ಕಾರದ ಸಲಹೆ, ಪರಾಮರ್ಶೆಯ ನಂತರ, 'ಪೂರ್ಣಿಯಾ ಜಿಲ್ಲೆಯ ಮೇರೀಗಂಜ್ ಎನ್ನುವ ಹಳ್ಳಿಯಲ್ಲಿ ಮಲೇರಿಯಾ ಕೇಂದ್ರ ತೆರೆಯಲಾಗುತ್ತದೆ' ಎನ್ನುವ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟವಾಯಿತು.

ಪ್ರಶಾಂತನ ನಿರ್ಧಾರವನ್ನು ಕೇಳಿ ಮೆಡಿಕಲ್ ಕಾಲೇಜಿನ ಅಧಿಕಾರಿಗಳು, ಅಧ್ಯಾಪಕರು, ವಿದ್ಯಾರ್ಥಿಗಳು ವಿಧವಿಧವಾದ ಪ್ರತಿಕ್ರಿಯೆಗಳನ್ನು ತೋರಿಸಿದರು. ಪ್ರಸಿದ್ಧ ಸರ್ಜನ್, ಡಾಕ್ಟರ್ ಪಟವರ್ಧನ್ ಹೇಳಿದರು:

"ಮೂರ್ಖ."

ಇ.ಎನ್.ಟಿ. ಮುಖ್ಯ ಡಾಕ್ಟರ್ ನಾಯಕರೆಂದರು:

"ಆಮೇಲೆ ತಾನಾಗಿಯೇ ಬುದ್ಧಿ ಬರುತ್ತೆ."

ಮೆಡಿಸನ್ ಡಾಕ್ಟರ್ ತಂಘ್‌ಧಾರರ ಅಭಿಪ್ರಾಯ: "ಭಾವುಕತೆ ಎನುವುದೂ ಒಂದು ಭಯಂಕರ ರೋಗವೇ."

ಆದರೆ ಪ್ರಿನ್ಸಿಪಾಲರು ಮಾತ್ರ ತುಂಬಾ ಸಂತೋಷಪಟ್ಟರು.

"ನಿನ್ನಿಂದ ನಾನು ಇದನ್ನೇ ನಿರೀಕ್ಷಿಸಿದ್ದೆ, ಪ್ರಶಾಂತ್. ನಿನಗೆ ಸಫಲತೆ ದೊರೆಯಲೆಂದು ಆಶಿಸುತ್ತೇನೆ. ನಿನಗೆ ಏನಾದರೂ ಸಹಾಯ ಬೇಕಾದರೆ ಕೂಡಲೇ ನನಗೆ ಕಾಗದ ಬರಿ."

ಪ್ರಶಾಂತನ ಗಂಟಲ ನರಗಳು ಉಬ್ಬಿದವು.

ಮದ್ರಾಸಿನ ಗೆಜೆಟ್, ಸಂಪಾದಕೀಯ ಬರೆದು ಪ್ರಶಾಂತನನ್ನು ಅಭಿನಂದಿಸಿತು!

ಅವನು ಪೂರ್ಣಿಯಾಕ್ಕೆ ಹೊರಡಲು ಸ್ಟೀಮರ್ ಹತ್ತಿದ್ದ. ಅದು ಹೊರಡಲು ಐದು ನಿಮಿಷ ಮಾತ್ರ ಇದೆ ಎನ್ನುವಾಗ ಒಬ್ಬ ಯುವತಿ ಬೇಗ ಬೇಗ ಮೆಟ್ಟಲು ಇಳಿದು ಬರುತ್ತಿರುವುದನ್ನು ನೋಡಿದ. ಯಾರದು? ಮಮತಾ? ಹೌದು ಮಮತಾ! ಬಂದ ಕೂಡಲೇ ಅವಳು ಹೇಳಿದಳು:

"ಕೊನೆಗೆ ನಿನ್ನ ತಲೆಯೂ ಕೆಟ್ಟುಹೋಯಿತೇನು? ಈ ವಿಚಾರ ಎಂದೂ ಹೇಳಲೇ ಇಲ್ಲವಲ್ಲಾ····ಓಹ್ ಪ್ರಶಾಂತ್, ನೀನೆಷ್ಟು ದೊಡ್ಡವನು. ಎಂಥ ಮಹಾ ಪುರುಷ····ನಾನು ಈಗ ತಾನೇ ವಾರಣಾಸಿಯಿಂದ ಬರ್‍ತಿದೀನಿ. ಬಂದ ಕೂಡಲೇ ಚುನ್ನಿಯಿಂದ ನಿನ್ನ ಕಾಗದ ಸಿಕ್ಕಿತು····"

ಕರವಸ್ತ್ರದಲ್ಲಿದ್ದ ಹೂವು, ಬಿಲ್ವಪತ್ರೆಗಳನ್ನು ಪ್ರಶಾಂತನ ತಲೆಯ ಮೇಲೆ ಹಾಕುತ್ತಾ ಮಮತಾ ನುಡಿದಳು:

"ಕಾಶಿ ವಿಶ್ವನಾಥನ ಪ್ರಸಾದ. ವಿಶ್ವನಾಥ ನಿನಗೆ ಮಂಗಳವನ್ನುಂಟು ಮಾಡಲಿ. ಊರು ತಲುಪಿದ ಕೂಡಲೇ ಕಾಗದ ಬರಿ."

## 10

ಡಾಕ್ಟರ್ ಪತ್ರ ಬರೆಯುತ್ತಿದ್ದಾರೆ:

"ಮಮತಾ,"

"ಊರು ತಲುಪಿದ ಕೂಡಲೇ ಪತ್ರ ಬರಿ ಎಂದು ನೀನು ಹೇಳಿದ್ದೆ. ತಲುಪಿದ ಒಂದು ವಾರದ ನಂತರ ಬರೆಯುತ್ತಿದ್ದೇನೆ. ನಿನ್ನ ಕಾಶಿ ವಿಶ್ವನಾಥ, ನಾನು ಬರುವುದಕ್ಕೆ ಮುಂಚೆಯೇ ತನ್ನ ಒಬ್ಬ ದೂತನನ್ನು ಇಲ್ಲಿಗೆ ಕಳುಹಿಸಿದ್ದಾನೆ. ಪ್ಯಾರು, ನಿಜವಾಗಲೂ ದೇವದೂತನೇ ಸರಿ. ಆದ್ದರಿಂದ ನೀನು ನಿಶ್ಚಿಂತೆಯಾಗಿರಬಹುದು. ಏಳು ದಿನಗಳಲ್ಲೇ ಅವನು ಎರಡು ಬಾರಿ ನನ್ನ ಮೇಲೆ ಸಿಟ್ಟುಮಾಡಿ

ಕೊಂಡಿದ್ದಾನೆ! 'ಹೆಸರಿಗೆ ಡಾಕ್ಟರ್. ಹೊತ್ತು ಹೊತ್ತಿಗೆ ಊಟ ತಿಂಡಿ ಮಾಡ ದಿದ್ದರೆ ಆರೋಗ್ಯ ಕೆಟ್ಟುಹೋಗುತ್ತದೆ ಎನ್ನುವುದೂ ಗೊತ್ತಿಲ್ಲ' ಎನ್ನುತ್ತಿರು ತ್ತಾನೆ. ಇಷ್ಟರಿಂದಲೇ ನಿನಗೆ ಪ್ಯಾರುವಿನ ಪರಿಚಯ ಆಗಿರಬಹುದು.''

''ಇದೊಂದು ಹೊಸ ಪ್ರಪಂಚ. ಇದನ್ನು ವಜ್ರ ಹಳ್ಳಿ ಎಂದೂ ಕರೆಯ ಬಹುದು. ಹಳ್ಳಿಯ ಚೌಕೀದಾರ ವಾರದಲ್ಲೊಂದು ದಿನ ಹಾಜರಿ ಹಾಕಲು ಬರುತ್ತಾನೆ. ನನಗೆ ಪತ್ರ ತಂದು ಕೊಡುವವನೂ, ನನ್ನ ಪತ್ರ ತೆಗೆದುಕೊಂಡು ಹೋಗುವವನೂ ಅವನೇ.''

''ಕೆಲಸ ಪ್ರಾರಂಭ ಮಾಡಿದ್ದೇನೆ. ಬೆಳಿಗ್ಗೆ ಏಳು ಗಂಟೆಯ ಹೊತ್ತಿಗೇ ರೋಗಿಗಳ ಗುಂಪು ಸೇರಿಬಿಟ್ಟಿರುತ್ತದೆ. ಇನ್ನೂ ಜನರಲ್ ಸರ್ವೆ ಮಾಡುತ್ತಿದ್ದೇನೆ. ರಕ್ತ ತೆಗೆದುಕೊಂಡು ಪರೀಕ್ಷೆ ಮಾಡುತ್ತಿದ್ದೇನೆ. ಪ್ಯಾರು ಹೇಳುತ್ತಾನೆ, ಇಲ್ಲಿನ ಕಾಗೆಗಳಿಗೂ ಮಲೇರಿಯಾ ರೋಗವಿದೆಯಂತೆ!''

''....ಇಲ್ಲಿನ ಕೆರೆಗಳಲ್ಲಿ, ಕೊಳಗಳಲ್ಲಿ ಕಮಲದ ಎಲೆಗಳು ತುಂಬಿ ಕೊಂಡಿವೆ. ಹೂವಿನ ಕಾಲದಲ್ಲಿ ಸಣ್ಣ ಸಣ್ಣ ಹಳ್ಳಿಗಳಲ್ಲೂ ವಿಧವಿಧವಾದ ಕಮಲದ ಹೂಗಳು ಅರಳಿರುತ್ತದಂತೆ....ಆದರೆ ಇಲ್ಲಿನ ಜನರನ್ನು ಮಾತ್ರ ನೀನು ಲೋಟಸ್ ಈಟರ್ಸ್ ಅನ್ನಲಾರೆ....ಹಳ್ಳಿಗಳನ್ನೂ ಪರೀಕ್ಷಿಸುತ್ತಿದ್ದೇನೆ. ಬಹುಶಃ ಇಲ್ಲಿನ ಭೂಮಿ ಹನ್ನೆರಡು ತಿಂಗಳೂ ಒದ್ದೆಯಾಗೇ ಇರುತ್ತದೆ.''

''ಹಳ್ಳಿಯ ಜನ ತುಂಬಾ ಸರಳವಾಗಿ ಕಾಣುತ್ತಾರೆ. ವ್ಯಾವಹಾರಿಕ ವಿಷಯಕ್ಕೆ ಬಂದರೆ, ಅವರು ನನ್ನ ನಿನ್ನಂತಹವರನ್ನು ದಿನಕ್ಕೆ ಐದು ಬಾರಿ ಬೇಕಾದರೂ ಮೋಸ ಮಾಡಬಲ್ಲರು! ವಿಶೇಷವೆಂದರೆ ಮೋಸ ಹೋದಮೇಲೂ ನೀನು ಅವರ ಸರಳತೆಗೆ ಮುಗ್ಧಳಾಗುತ್ತೀ. ಇದೆಲ್ಲಾ ಕೇವಲ ಏಳು ದಿನಗಳ ಅನುಭವದ ಮಾತು. ಮುಂದೆ ನನ್ನ ಈ ನಂಬಿಕೆಗಳು ಸುಳ್ಳಾಗಲೂಬಹುದು. ಮಿಥಿಲಾ ಮತ್ತು ಬಂಗಾಳಗಳ ಮಧ್ಯದಲ್ಲಿರುವ ಈ ಭಾಗ ವಾಸ್ತವವಾಗಿಯೂ ಮನೋಹರವಾಗಿದೆ. ಹೆಂಗಸರು ಸಾಮಾನ್ಯವಾಗಿ ಸುಂದರಿಯರಾಗಿರುತ್ತಾರೆ. ಆರೋಗ್ಯಶಾಲಿಗಳು.''

''ಡಾಕ್ಟರ್ ಸಾಹಬ್.''

''ಯಾರು?''

''ವಿಶ್ವನಾಥ ಪ್ರಸಾದ್.''

"ಬನ್ನಿ, ಏನ್ಸಮಾಚಾರ?"

"ಡಾಕ್ಟರ್ ಸಾಹೆಬ್. ಸ್ವಲ್ಪ ನಮ್ಮ ಮನೆಗೆ ಬನ್ನಿ. ನನ್ನ ಮಗಳಿಗೆ ಜ್ಞಾನ ತಪ್ಪಿಹೋಗಿದೆ."

"ಜ್ಞಾನ ತಪ್ಪಿದೆ? ಅವಳಿಗೆ ಏನು ವಯಸ್ಸು? ಹಿಂದೇನೂ ಯಾವಾಗಲಾದರೂ ಹೀಗೆ ಆಗಿತ್ತೇನು?"

"ಹೌದು ಹಿಂದೇನೂ ಎರಡು ಮೂರು ಸಲ ಹೀಗೇ ಆಗಿತ್ತು. ವಯಸ್ಸು ಹದಿನಾರು ಹದಿನೇಳು ವರ್ಷ ಇರಬಹುದು. ಸ್ವಲ್ಪ ಬೇಗ····"

"ನಡೀರಿ...."

ಕತ್ತಲೆಯ ಕೋಣೆಯಲ್ಲಿ ಒಂದು ಚಾಪೆಯ ಮೇಲೆ ನೀಲಿ ಕಂಬಳಿ ಹೊದ್ದು ಮಲಗಿದ್ದ ತರುಣಿಯ ಬಿಳಿಯ ಮುಖ ಮಾತ್ರ ಹೊರಗಡೆ ಕಾಣುತ್ತಿತ್ತು. ಕೂದಲೆಲ್ಲಾ ಕೆದರಿತ್ತು. ಕಣ್ಣುಗಳು ಮುಚ್ಚಿಕೊಂಡಿದ್ದವು. ಕೊಠಡಿಯಲ್ಲಿ ಲಾಟೀನ್ ಮಂದ ಪ್ರಕಾಶ ಬೀರುತ್ತಿತ್ತು. ಬೆಳಕು ಕಡಿಮೆ, ಹೊಗೆಯೇ ಜಾಸ್ತಿಯಾಗಿತ್ತು.

ಡಾಕ್ಟರ್ ಕಿಟಕಿ ತೆರೆಯಲು ಹೇಳಿದರು. ಜೇಬಿನಿಂದ ಟಾರ್ಚ್ ತೆಗೆದು ಯುವತಿಯ ಮುಖಕ್ಕೆ ಬೆಳಕು ಬಿಟ್ಟರು...·ಮುಖ ಸರಿಯಾಗಿದೆ. ಉಸಿರಾಟ····ಸರಿಯಾಗಿದೆ. ನಾಡಿಯ ಮಿಡಿತವೂ ಸರಿಯಾಗಿಯೇ ಇದೆ. ಡಾಕ್ಟರು ರೆಪ್ಪೆ ತೆರೆದು ನೋಡಿದರು. ಕಮಲದ ದಳದಂತಿದ್ದ ರೆಪ್ಪೆಗಳು. ಕಣ್ಣುಗಳು ಚುರುಕಾಗಿದ್ದವು····ಹೊಟ್ಟೆ?····ಮಲಬದ್ಧತೆಯೇನೂ ಇಲ್ಲವಷ್ಟೆ.

ಯಾರೂ ಉತ್ತರ ಕೊಡಲಿಲ್ಲ. ಮುಖಕ್ಕೆ ಪರದೆ ಹಾಕಿಕೊಂಡಿದ್ದ ಹೆಂಗಸರ ಪರದೆಗಳೆಲ್ಲಾ ಒಂದೇ ರೀತಿಯಿದ್ದವು. ಸ್ವಲ್ಪ ವಯಸ್ಸಾದ ಹೆಂಗಸೊಬ್ಬಳು ಮುಂದೆ ಬಂದಳು. ಅವಳು ಹುಡುಗಿಯ ತಾಯಿ.

"ಅದೇನೂ ಇಲ್ಲ"

ಮನೆಯ ಕೆಲಸದವಳಿಗೆ ಪರದೆಯೇನೂ ಇಲ್ಲ. ಅವಳೆಂದಳು.

"ಡಾಕ್ಟರ್ ಬಾಬು, ನಳಿಗೆಯಿಂದ ನೋಡಿ." ನಳಿಗೆ ಅಂದರೆ ಸ್ಟೆಥಾಸ್ಕೋಪ್! ಅದನ್ನು ಇಟ್ಟು ನೋಡಿಬಿಟ್ಟರೆ ರೋಗಿಯ ದೇಹದೊಳಗಿನ ಎಲ್ಲವೂ ತಿಳಿದುಬಿಡುತ್ತದೆ ಎಂದು ಇಲ್ಲಿನವರ ನಂಬಿಕೆ. ಏನು ತಿಂದಿದ್ದಾರೆ? ಅದು ಜೀರ್ಣವಾಗಿದೆಯೋ ಇಲ್ಲವೊ? ಎಲ್ಲಾ ತಿಳಿದುಬಿಡುತ್ತದೆ!

" ಸೂಜೀನೂ ಚುಚ್ಚಿಬಿಡಿ."

" ಹೂಂ."

ಡಾಕ್ಟರ್ ಸಿರಿಂಜ್ ಸರಿಪಡಿಸಿಕೊಂಡರು. ಅಷ್ಟರಲ್ಲಿ ಯುವತಿ ಕಣ್ಣು ತೆರೆದಳು :

" ಸೂಜೀ?····ಬೇಡ ಬೇಡ ಅಮ್ಮಾ, ಅಪ್ಪಾ"

" ಸೂಜಿ ಚುಚ್ಚೋದಿಲ್ಲ, ನೀವೇ ಹೇಳಿ····ಆರೋಗ್ಯ ಹೇಗಿದೆ?···· ಒಳ್ಳೇದು, ಜ್ಞಾನ ತಪ್ಪಿದ್ದೇಕೆ?····ಅಂದರೆ ಹೇಗೆ ಜ್ಞಾನ ತಪ್ಪಿತು? ಭಯ ಆಯ್ತೇನು?····ಯಾಕೆ ಭಯ ಆಯ್ತು?···· ಆಮೇಲೆ ತಲೆ ತಿರುಗೋದಕ್ಕೆ ಆರಂಭವಾಯ್ತು····ಹೂಂ····ಸರಿ, ಈಗ ಹೇಗಿದೆ? ಈಗ ಹೆದರಿಕೆ ಆಗ್ತಾ ಇಲ್ಲಾ ತಾನೇ? ಔಷಧಿ ಕಳಿಸ್ತೀನಿ. ಇನ್ನು ಹೆದರಿಕೆ ಆಗೋದಿಲ್ಲ····"

" ಔಷಧಿ?····ಔಷಧಿ ಬೇಡ. ಅಮ್ಮಾ ನಾನು ಔಷಧಿ ಕುಡಿಯೋದಿಲ್ಲ."

" ಸರಿ? ಸೂಜೀನೂ ಬೇಡ, ಔಷಧಾನೂ ಬೇಡವೇ?····ಸಿಹಿ ಔಷಧೀ?····"

ಎಲ್ಲರೂ ನಕ್ಕರು. ಯುವತಿಯ ಒಣಗಿದ ತುಟಿಗಳ ಮೇಲೂ ಮುಗುಳ್ನಗೆ ಮಿಂಚಿತು. ಸುಮ್ಮನಿರಿ····ಔಷಧಿ ಸಿಹಿಯಾಗಿಯೂ ಇರುತ್ತದೆಯೇನು? ಎಂದು ಗದರಿಸುವಂತೆ ಕಣ್ಣಿನ ರೆಪ್ಪೆಗಳು ಸ್ವಲ್ಪವೇ ಮೇಲೆದ್ದವು. ಹೊರಗಡೆ ಬಂದು ಡಾಕ್ಟರು ತಹಸೀಲ್ದಾದರರಿಗೆ ಹೇಳಿದರು:

" ಗಾಬರಿ ಪಡಬೇಕಾದ್ದೇನೂ ಇಲ್ಲ. ಔಷಧಿ ಕಳಿಸಿಕೊಡ್ತೀನಿ. ಇದಕ್ಕೆ ಮೊದಲು ಎಷ್ಟು ಹೊತ್ತು ಜ್ಞಾನ ತಪ್ಪಿರ್ತಿದ್ದಳು?"

" ಸುಮಾರು ಒಂದು ಗಂಟೆ. ಜೋಯಿಸರ ಹತ್ತಿರ ಒಂದು ಸಲ ಯಂತ್ರ ಕಟ್ಟಿಸಿದ್ದೀನಿ; ಮಂತ್ರಾನೂ ಹಾಕಿಸಿದ್ದೀನಿ. ಡಾಕ್ಟರ್ ಸಾಹೇಬ್ ನಮಗೆ ಇವಳೊಬ್ಬಳೇ ಮಗಳು, ಮಗ ಎಲ್ಲಾ····"

" ವಾಸಿಯಾಗುತ್ತೆ, ಬಿಡಿ."

ಕೇಂದ್ರಕ್ಕೆ ಬಂದು ಡಾಕ್ಟರ್ ಯೋಚಿಸಿದರು. ಯಾವ ಔಷಧಿ ಕೊಡುವುದು? ಸಿಹಿ ಔಷಧ? ಕಾರ್ಬನೇಟಿವ್ ಮಿಕ್ಸ್ಚರ್ ಅಥವಾ ಬ್ರೋಮಾಯಿಡ್.

ನಿನ್ನ ಹೆಸರೇನಪ್ಪ?

"ನನ್ನ ಹೆಸರು? ನನ್ನ ಹೆಸರು ರಣಜೀತ್."

"ತಹಸೀಲ್ದಾರರ ಹತ್ತಿರ ಎಷ್ಟು ದಿನಗಳಿಂದ ಕೆಲಸ ಮಾಡ್ತಿದೀ?"

"ತುಂಬಾ ವರ್ಷಗಳಿಂದ. ಚಿಕ್ಕ ವಯಸ್ಸಿನಿಂದಲೂ ಮಾಡ್ತಾನೇ ಇದೀನಿ ····ಒಂದು ತುಂಡು ಬೀಡಿ ಇದರೆ ಕೊಡಿ ಡಾಕ್ಟರ್ ಬಾಬೂ."

"ಪ್ಯಾರೂ, ರಣಜೀತನಿಗೆ ಬೀಡಿ ಕೊಡು."

ಪ್ಯಾರು ಬೀಡಿ, ಬೆಂಕಿಪೊಟ್ಟಣ ಕೊಟ್ಟ. ಬೀಡಿ ಹತ್ತಿಸಿಕೊಂಡ ರಣಜೀತ್ ಹೇಳಿದ:

"ಡಾಕ್ಟರ್ ಬಾಬು, ತಹಸೀಲ್ದಾರರಿಗೆ ಈ ಪ್ರಪಂಚದಲ್ಲಿ ಇರೋಳು ಇವಳೊಬ್ಬಳೇ ಮಗಳು. ಎಷ್ಟೋ ಹರಕೆ ಪೂಜೆ ಎಲ್ಲಾ ಆದಮೇಲೆ ಕಮಲಾ ತಾಯಿಯ ದಯೆಯಿಂದ ಈ ಮಗಳು ಹುಟ್ಟಿದಳು. ಆದರೆ····"

ರಣಜೀತ್ ಬೀಡಿಯ ಬೂದಿಯನ್ನು ಕೊಡವಿ ಸುಮ್ಮನಾದ. "ಆದರೆ····" ಎಂದು ಹೇಳಿ ರಣಜೀತ್ ಮಾತನ್ನು ಅರ್ಧಕ್ಕೇ ನಿಲ್ಲಿಸಿದ ಎನ್ನುವ ವಿಚಾರ ಡಾಕ್ಟರ ಗಮನಕ್ಕೆ ಬಂತು.

"ಆದರೆ ಏನು?"

"ಅದೇ····ಮೂರು ಕಡೆ ಮಾತು ಕಥೆ ಆಗಿತ್ತು····ಮೊದಲನೆ ಕಡೆ ಅಂತೂ ನಿಶ್ಚಿತಾರ್ಥ ಆಗುವವರೆಗೆ ಮಾತು ಬೆಳೆದಿತ್ತು. ಆವರೆ ಅದೇ ದಿನ ಹುಡುಗನ ತಾಯಿ ಸತ್ತುಹೋದಳು. ಎರಡನೆ ಕಡೆ ನಿಶ್ಚಯವಾಯ್ತು, ಅವರ ಮನೆಗೆ ಬೆಂಕೀನೇ ಬಿದ್ದುಬಿಡ್ತು. ಮೂರನೆಯ ಹುಡುಗನಿಗೆ. ಸಿಡುಬು ಎದ್ದು ಅವನೇ ಸತ್ತುಹೋದ. ಈಗ ಯಾವ ಹುಡುಗನ ಮನೆಯವರೂ ಈ ಹುಡುಗೀನ ಮದುವೆ ಆಗೋದಕ್ಕೆ ಒಪ್ತಾನೇ ಇಲ್ಲ. ಸಾವಿರ, ಎರಡು ಸಾವಿರ, ಐದು ಸಾವಿರದ ತನಕ ದುಡ್ಡು ಕೊಡೋದಕ್ಕೆ ಸಿದ್ಧವಾಗಿದ್ದಾರೆ. ಆದರೆ····ಕೊನೆಗೆ ಮಾಲೀಕರು ಪಶ್ಚಿಮದಿಂದ ಒಬ್ಬ ಹುಡುಗನನ್ನು ಮನೆ ಅಳಿಯನನ್ನಾಗಿ ಮಾಡಿ ಕೊಳ್ಳಲು ಕರೆದುಕೊಂಡು ಬಂದರು. ಅದೇ ದಿನದಿಂದ ಕಮಲೀಗೆ ಮೂರ್ಛೆ ಬರೋದಕ್ಕೆ ಆರಂಭವಾಯ್ತು. ಜನ ಹೇಳೋದೇನೂ ಅಂದರೆ, ಕಮಲಿಯ ಮದುವೆ ಆಗೋದು ಕಮಲ ತಾಯಿಗೆ ಇಷ್ಟವಿಲ್ಲ. ಯಾಕೆ ಅಂದರೆ ಅವಳೂ ಕುಮಾರೀನೆ ತಾನೇ! ಈಗ ನೀವು ಬಂದಿದೀರಿ. ಹೇಗಾದರೂ ಮಾಡಿ ಕಮಲೀ ಬೇಬೇಗೆ ಆರೋಗ್ಯವಾಗೋ ಹಾಗೆ ಮಾಡಿ ಡಾಕ್ಟರ್ ಸಾಹೆಬ್. ನೀವು ಕೇಳಿದಷ್ಟು ಭಕ್ಷೀಸ್ ತಹಸೀಲ್ದಾರರು ಕೊಡ್ತಾರೆ."

" ತೊಗೋ ರಣಜೀತ್. ಮೂರು ಹೊತ್ತಿಗೆ ಔಷಧಿ ಇದೆ. ನಿನ್ನ ಕಮಲೀ ಬೀಬಿ ಆರೋಗ್ಯವಾಗ್ತಾಳೆ. ಸಿಹಿ ಔಷಧಿ. ನಾಳೆ ಬೆಳಗ್ಗೆ ಮತ್ತೆ ಬಂದು ಅವಳ ಆರೋಗ್ಯದ ವಿಚಾರ ತಿಳಿಸಿ ಹೋಗಬೇಕು. ಗೊತ್ತಾಯ್ತಾ?"

" ಮೂರು ಹೊತ್ತಿನ ಔಷಧಿ. ಯಾವಾಗ ತೊಗೋಬೇಕು? ಈಗಲೇ, ಆಹಾರ ರೊಟ್ಟಿ ಮತ್ತು ಹಾಲು" "ರಣಜೀತ್" ಎನ್ನುತ್ತಾ ಒಬ್ಬ ಮನುಷ್ಯ ಓಡೋಡಿ ಬಂದ.

" ಯಾರು, ರಾಮುದಲ್—ಏನು?"

" ಕಮಲೀಬೀಬಿ ಮತ್ತೆ ಮೂರ್ಛೆ ಹೋದಳು. ಡಾಕ್ಟರ್ ದಯವಿಟ್ಟು ಮತ್ತೊಂದು ಸಾರಿ ಅಲ್ಲಿಗೆ ಬರಬೇಕಂತೆ. ತಹಸೀಲ್ದಾರ್ ಸಾಹೆಬ್ ಹೇಳಿದರು."

ಡಾಕ್ಟರ್ ಗಂಟೆ ನೋಡಿಕೊಂಡರು····ಒಂಭತ್ತು ಗಂಟೆಯಾಗಿ ಹತ್ತು ನಿಮಿಷ. ಇನ್ನು ಕೆಲವೇ ನಿಮಿಷಗಳಲ್ಲಿ ನ್ಯೂಸ್ ಬರುತ್ತದೆ. ಕೊಂಚ ಯೋಚಿಸಿ ಡಾಕ್ಟರ್ ಹೇಳಿದರು: "ರಣಜೀತ್, ಆ ಪೆಟ್ಟಿಗೆ ತೊಗೋ···ನಡಿ."

" ಮಾತನಾಡೋ ಪೆಟ್ಟಿಗೇನಾ?"

" ಹೌದು, ನಿನ್ನ ಕಮಲೀಬೀಬಿಯ ಚಿಕಿತ್ಸೇನ ಅದರಿಂದಾನೇ ಮಾಡ್ತೀನಿ."

ಕಮಲಾ ಹಿಂದಿನಂತೆಯೇ ಜ್ಞಾನಶೂನ್ಯಳಾಗಿ ಬಿದ್ದಿದ್ದಳು. ಅವಳ ಕಣ್ಣುಗಳು ಮುಚ್ಚಿಕೊಂಡಿದ್ದವು. ಕೂದಲು ಕೆದರಿತ್ತು. ಡಾಕ್ಟರಿಗೆ ರೋಗದ ಸುಳಿವು ಸಿಕ್ಕಿತು! ಅವರು ತಮ್ಮ ಬ್ಯಾಗಿನಿಂದ ಬಾಟಲ್, ಸಿರಿಂಜ್ ಮುಂತಾದವುಗಳನ್ನು ತೆರೆದರು.

" ಸೂಜಿ? ಸೂಜಿ ಬೇಡ." ಕಮಲ ಮತ್ತೆ ಎಚ್ಚೆತ್ತು ಮಾತನಾಡಿದಳು.

" ಸೂಜಿ ಚುಚ್ಚದೆ ರೋಗ ವಾಸಿ ಆಗೋದಿಲ್ಲಮ್ಮ."

ಡಾಕ್ಟರ್ ಸಿರಿಂಜ್ ಸರಿಪಡಿಸಿಕೊಂಡರು.

" ಔಷಧಿ ಕೊಡಿ ಡಾಕ್ಟರ್. ನಾನು ಸೂಜಿ ಚುಚ್ಚಿಸಿಕೊಳ್ಳೋದಿಲ್ಲ."

" ಮತ್ತೆ ಹೆದರಿಕೆ ಆಯಿತೇನು?"

" ಹೌದು."

" ರಣಜೀತ್, ಔಷಧದ ಶೀಷೆ ಎಲ್ಲಿದೆ ತೊಗೊಂಡು ಬಾ. ಆ ಬಾಕ್ಸನ್ನೂ ಈ ಕಡೆ ತೊಗೊಂಡು ಬಾ. ಕುಡೀರಿ····ಹಾಗೇ. ಹೇಗಿದೆ ಔಷಧಿ?—ಸಿಹಿಯಾಗಿದೆ ಅಲ್ವಾ?"

ಡಾಕ್ಟರ್ ಪೋರ್ಟೆಬಲ್ ರೇಡಿಯೋ ತೆರೆದು ಮೀಟರ್ ಸರಿಪಡಿಸಿದರು.

"ಇದು ಆಲ್ ಇಂಡಿಯಾ ರೇಡಿಯೋ. ಈಗ ರಾತ್ರಿ 9-15 ಗಂಟೆ. ಈಗ ಹಿಂದಿಯಲ್ಲಿ ಸಮಾಚಾರ...."

"ಹೆದರಿಕೆ ಆಗುತ್ತೆ. ಅಮ್ಮಾ......"

"ಇಲ್ಲಿ ನೋಡಿ. ಹೆದರಿಕೆ ಯಾಕೆ? ಕೇಳಿ...."

"ಅಮ್ಮ, ನನ್ನ ಕರ್‍ಕೊಂಡು ಹೋಗು.."

"ಬೇಡ, ಇಲ್ಲೇ ಮಲಗಿರಲಿ......."

"....ಈಗ ನೀವು ಸವಿತಾದೇವಿಯಿಂದ ಒಂದು ಮೈಥಿಲೀ ಲೋಕಗೀತೆಯನ್ನು ಕೇಳುವಿರಿ."

"ಮಾಯಿಯೆ ಹಮ್‌ನಾಬಿಯಾಹೇಜ್ ಅಪನಾಗರಾಕೇಕ
ಜಾಂ ಬುಢವಾ ಹೋಯಿತ್ ಜನಾಯಗೆ ಮಾಯೀ."

"ಅಮ್ಮಾ" ಕಮಲಾ ಕಿಲಕಿಲನೆ ನಕ್ಕಳು,

"ಮದುವೆ ಹಾಡು ಬರ್ತಿದೆ."

"ಹಮ್ ನಾ ಬಿಯಾಹೇಬ ಅಪನಾಗೌರಾಕೇ...."

ಕೊಠಡಿಯಲ್ಲಿ, ಅಂಗಳದಲ್ಲಿ ಪರದೆ ಹಾಕಿಕೊಂಡಿರುವ ಹೆಂಗಸರ ಗುಂಪೇ ಸೇರಿದೆ. ಕಮಲೆಯ ಮೇಲೆ ಬ್ರೋಮಾಯಿಡ್‌ನ ಪ್ರಭಾವ ಆಗಿದೆ. ಅವಳ ಕಣ್ಣುಗಳಲ್ಲಿ ನಿದ್ದೆ ತುಂಬಿ ಬರುತ್ತಿದೆ.

ಡಾಕ್ಟರ್ ಮನೆಗೆ ಹಿಂತಿರುಗಿ ಬಂದು ಕಾಗದವನ್ನು ಪೂರ್ತಿ ಮಾಡಿದರು.... ಬೆಳಗ್ಗೆ ಏಳು ಗಂಟೆಯ ಹೊತ್ತಿಗೇ ರೋಗಿಗಳ ಗುಂಪು ಸೇರಿಬಿಡುತ್ತದೆ. ಚೌಕೀದಾರ ನಾಳೆ ಹಾಜರಿ ತೆಗೆದುಕೊಳ್ಳಲು ಬರುತ್ತಾನೆ. ಬೆಳಗ್ಗೆ ಐದು ಗಂಟೆಯ ಹೊತ್ತಿಗೇ ಅವನು ಬಂದು ಕೂಗುತ್ತಾನೆ.... ಡಾಕ್ಟರ್ ಬರೆಯಲಾರಂಭಿಸಿದರು:

"ಪತ್ರವನ್ನು ಅರ್ಧದಲ್ಲೇ ಬಿಟ್ಟು ಒಂದು 'ಕೇಸ್' ನೋಡಲು ಹೋಗಿದ್ದೆ. ಕೇಸು ವಿಚಿತ್ರವಾಗಿದೆ. ಕೇಸ್‌ಹಿಸ್ಟ್ರೀ ಮತ್ತಷ್ಟು ವಿಚಿತ್ರವಾಗಿದೆ. ಇಂದು ನಿನ್ನ ಶೀಲಾ ಇದ್ದಿದ್ದರೆ ಸಂತೋಷದಿಂದ ಕುಣಿಯುತ್ತಿದ್ದಳು....ಹಿಸ್ಟೀರಿಯಾ, ಫೋಬಿಯಾ, ಕಾಮ ವಿಕೃತಿ, ಹಠ ಪ್ರವೃತ್ತಿ ಮುಂತಾದ ಶಬ್ದಗಳ ಮಳೆಯನ್ನೇ

ಸುರಿಸಿಬಿಡುತ್ತಿದ್ದಳು. ಶೀಲಾಳನ್ನು ಭೇಟಿಯಾದರೆ ಹೇಳು. ನಾನು ನನ್ನ ಪೋರ್ಟೆಬಲ್ ರೇಡಿಯೋದ ಸಹಾಯದಿಂದ ಅವಳ ಮೆದುಳನ್ನು ಅಲ್ಲಾಡಿಸಿ ಬೇರೆ ಕಡೆ ತಿರುಗಿಸುವ ಪ್ರಯತ್ನ ಮಾಡಿದೇ ಎಂದು....”

## 11

ನಹೀಂ ತೋರಾ ಆಹೆ ಪ್ಯಾರೀ ತೇಗ್
ತರಬರಿಯಾ ಸೆ
ನಹೀಂ ತೋರಾ ಪಾಸ್ ಮೇಂ ತೀರ್ ಜೀ....

ಪ್ರೀತಿಯ ಸಖಿ ಹತ್ತಿರ ಕತ್ತಿಯೂ ಇಲ್ಲ, ಬಾಣವೂ ಇಲ್ಲ.

ಸಖಿಯೊಬ್ಬಳು ಪ್ರಶ್ನಿಸಿದಳು: “ನಿನ್ನ ಹತ್ತಿರ ಬಾಣವಿಲ್ಲ, ಕತ್ತಿಯೂ ಇಲ್ಲ.”

....ನಹೀಂ ತೋರಾ ಆಹೆ ಪ್ಯಾರೀ ತೇಗ್
ತರಬರಿಯಾ ಸೆ
ಕೌನಹಿ ಚೀಜವಾ ಸೆ ಮಾರಲೂ ಬಟೋಹಿಯಾ ಕೆ
ಧರತೀ ಲೋಟಾಬೇಲಾ ಬೇಪಿರ್ ಜೀ....

ಪ್ರಿಯ ಸಖಿ, ನಿನ್ನ ಹತ್ತಿರ ಕತ್ತಿಯೂ ಇಲ್ಲ, ಬಾಣವೂ ಇಲ್ಲ. ಪಥಿಕನ ಮಾರ್ಗದಲ್ಲಿ ಅಡ್ಡವಾಗಿ ಬಿದ್ದಿರುವ ಬಳ್ಳಿಯನ್ನು ಯಾವ ವಸ್ತುವಿನಿಂದ ಕತ್ತರಿಸುತ್ತೀ?

ಇದನ್ನು ಕೇಳಿದ ಕೂಡಲೇ ಸದಾಬ್ರಿಜನನ್ನು ಮೋಹಿಸಿದ್ದ ಹೆಂಗಸರು ಹೇಳಿದಳು:

ಸಾಸೂ ಮೋರಾ ಮರೆ ಹೋ,
ಮರ ಮೇರಾ ಬಹಿನೀ ಸೆ.
ಮರೆ ನನದ್ ಜೇಠ್ ಮೋರ್ ಜೀ
ಮರೆ ಹಮಾರೆ ಸಬಕುಛ್ ಪಲಿಟರವಾಸೆ
ಘಸೀ ಗಯಿಲೀ ಪರೇಮ್‌ಕಿ ಡೋರ್ ಜೀ....

ಅತ್ತೆ, ಸೋದರಿ, ಭಾವ, ನಾದಿನಿ ಮುಂತಾದ ನನ್ನ ಬಂಧುಗಳೆಲ್ಲ ಬೇಕಾದರೆ ಸತ್ತುಹೋಗಲಿ. ನಾನಂತೂ ಪ್ರೇಮಬಂಧನದಲ್ಲಿ ಬಂಧಿತಳಾದೆ.

ಇಷ್ಟು ಹೇಳಿ ಅವರು ಸದಾಬ್ರಿಜನ ಸಮೀಪ ಬಂದು ಅವನಿಗೆ ನೀರು ಕುಡಿಸಿ ಪ್ರೀತಿಯಿಂದ ಮಾತನಾಡಲಾರಂಭಿಸಿದರು : . . . .

. . . . ಆಜು ಕೀ ರತಿಯಾ ಹೋ ಪ್ಯಾರೆ,
ಯುಹೀ ಬಿತಾವೋ ಜೀ

ಹೇ ಪ್ರಿಯತಮ, ಇಂದು ರಾತ್ರಿ ಇಲ್ಲಿಯೇ ಇರು.

ತಂತ್ರಿಮ ಪಂಗಡದಲ್ಲಿ ಸುರಂಗ ಸದಾಬ್ರಿಜನ ಕಥೆ ನಡೆಯುತ್ತಿತ್ತು. ಮಹಂಗೂದಾಸನ ಗುಡಿಸಿಲಿನ ಮುಂದೆ ಜನ ಸೇರಿದ್ದರು. ಪೂರ್ಣಿಯಾ ಸ್ಟೇಷನ್ನಿನಿಂದ ಒಬ್ಬ ಅತಿಥಿಯೂ ಬಂದಿದ್ದ. ಅವನು ರೈಲ್ವೇ ಕೆಲಸಗಾರ. ತಂತ್ರಿಮಾ ಪಂಗಡದ ಜನ ಹೇಳುತ್ತಿದ್ದರು : ಅವನು ಮಾಡುತ್ತಿದ್ದುದು ಕಲಾಸಿ ಕೆಲಸವಂತೆ. ಕಲಾಸಿ, ಸರ್ಕಾರಿ ಮನುಷ್ಯ. ಅವನು ಒಂದು ವೇಳೆ ಕೆಲವು ಬಾವುಟ ತೋರಿಸಿದನೆಂದರೆ ರೈಲಿಗೆ ರೈಲೇ ನಿಂತುಹೋಗುತ್ತದೆ. ನಿಲ್ಲದೇ ಏನು? ಕೆಂಪು ಬಾವುಟವನ್ನು ನೋಡಿದ ಕೂಡಲೇ ರೈಲು ನಿಂತೇಬಿಡುತ್ತದೆ. ಕೆಂಪು ಮುಸುಕು ಹಾಕಿಕೊಂಡು ರೈಲು ಹತ್ತಲು ಹೋದರೆ. . . .ರೈಲು ನಿಲ್ಲುತ್ತದೆ. . . . ಮುಸುಕು ಹಾರಿಹೋಗುತ್ತದೆ· · · · ತುಂಬಾ ಒಳ್ಳೆಯ ಮನುಷ್ಯ. ಒಳ್ಳೆಯ ಮಂತ್ರವಾದಿಯೂ ಹೌದು. ಚಕ್ರ ಪೂಜಿಸುತ್ತಾನೆ. ಮರಕ್ಕೆ ಮೊಳೆ ಹೊಡೆದು ಭೂತ ಪ್ರೇತಗಳನ್ನು ವಶಪಡಿಸಿಕೊಳ್ಳುತ್ತಾನೆ. ಬಂಜೆಯರಿಗೆ ತಾಯಿತಿ ಕಟ್ಟುತ್ತಾನೆ. "ಕುಮರ್ ಬಿಜ್ಜೈಭಾನ್," ಲೋರಿಕಾ, ಮತ್ತು ಸುರಂಗಾ ಸದಾಬ್ರಿಜನ ಗೀತೆಗಳನ್ನೂ ಚೆನ್ನಾಗಿ ಬಲ್ಲ. ಒಳ್ಳೆ ಕಂಚಿನಂತಹ ಧ್ವನಿ· · · · ಸ್ವರಾಜ್ಯ ಚಳವಳಿ ನಡೆಯುತ್ತಿದ್ದಾಗ ಕಲಾಸಿ, ಸಾಹೇಬ, "ಬ್ಯಾಗನವಾಡಿಯ ಜಮೀನ್‌ದಾರನ ಮಗ ರೈಲ್ವೇ ಲೈನು ಮುರಿದಿದ್ದಾನೆ" ಎಂದು ಬರೆದು ಕಳುಹಿಸಿದ ಕೂಡಲೇ ಆ ಹುಡುಗನಿಗೆ ಗಲ್ಲಿನ ಶಿಕ್ಷೆಯಾಯಿತು. ಹೈಕೋರ್ಟು ಮತ್ತು ಲಂಡನ್ನಿನಲ್ಲೂ ಮೊಕದ್ದಮೆ ನಡೆದು ಅಲ್ಲೂ ಗಲ್ಲಿನ ಶಿಕ್ಷೆಯೇ ಖಾಯಂ ಆಯಿತು· · · · ಆದರೆ ಮಹಂಗೂದಾಸನಿಗೆ ಮಾತ್ರ ಬುದ್ಧಿಯೇ ಇಲ್ಲ. ಬಡಪಾಯಿ ಕಲಾಸಿ, ಮಹಂಗೂದಾಸನ ವಿಧವೆ ಮಗಳು ಫುಲಿಯಾಳನ್ನು ಕೂಡಿಕೆ ಮಾಡಿಕೊಳ್ಳಲು ಒಂದು ವರ್ಷದಿಂದ ಓಡಾಡುತ್ತಿದ್ದಾನೆ. ಪ್ರತಿಸಲ ಬಂದಾಗಲೂ ನೇಪಾಳೀ ಅಫೀಮನ್ನೂ ಚೀಲದಲ್ಲಿ ತುಂಬಿ ತರುತ್ತಾನೆ. ತಂತ್ರಿಮ ಪಂಗಡದ ಪಂಚರಿಗೆಲ್ಲಾ ಹಂಚು

ತ್ತಾನೆ. ಸುರಂಗ ಸದಾಬ್ರಿಜ ಹಾಡುತ್ತಾನೆ. ಹಳ್ಳಿಯ ರೋಗಿಗಳಿಗೆ ಮಂತ್ರ ತಂತ್ರ ಮಾಡುತ್ತಾನೆ. ಕಳೆದ ಬಾರಿಯಂತೂ ಉಚಿತದಾಸನ ಮನೆಯಾಕೆಗೆ ತಾಯಿತಿ ಕಟ್ಟಿದ. ಸಾಯುವುದಕ್ಕೆ ನಾಲ್ಕುದಿನ ಮುಂಚೆ ಮುದುಕ ಉಚಿತದಾಸ ಸಂತಾನದ ಮುಖ ಕಾಣುವಂತಾಯಿತು····ಆದರೆ ಮಹಂಗೂದಾಸನಿಗೆ ಬುದ್ಧಿ ಹೇಳುವವರು ಯಾರು? ಇಷ್ಟೇ ಅಲ್ಲ ಕಲಾಸಿ ಕೊಡುವ ಬಿಡುವ ಮಾತನ್ನೂ ಆಡಿದ್ದಾನೆ. ಒಂದು ಕವಡೆಯನ್ನು ನಗದಾಗಿ ಕೊಡುವುದಿಲ್ಲ. ಆದರೆ ಇಡೀ ಕುಲದವರಿಗೆ ಔತಣದ ಊಟ ಹಾಕಿಸುತ್ತಾನೆ. ಇನ್ನೇನು ಬೇಕು? ಸರ್ಕಾರಿ ಮನುಷ್ಯ ಕೈಯಲ್ಲಿದ್ದ ಹಾಗಾಗುತ್ತದೆ. ಎಂದಾದರೂ ಯಾತ್ರೆ ಹೊರಟರೆ ರೈಲಿನ ಟಿಕೆಟ್ ತೆಗೆದುಕೊಳ್ಳದೆ ಇರಬಹುದು····

ರಮಜೂದಾಸನ ಹೆಂಡತಿ ತಂತ್ರಿಮ ಪಂಗಡದ ಹೆಂಗಸರಿಗೆಲ್ಲಾ ಮುಖಂಡಳು. ಸಂತೆಗೆ, ವ್ಯಾಪಾರಕ್ಕೆ ಹೋಗುವಾಗ, ಮಾಲೀಕರ ಗದ್ದೆಗಳಲ್ಲಿ ಭತ್ತ ನೆಡುವಾಗ, ಕೀಳುವಾಗ, ಹಳ್ಳಿಯ ಮದುವೆಗಳಿಗೆ ಹೋಗುವಾಗ ಪಂಗಡದ ಹೆಂಗಸರೆಲ್ಲಾ ಅವಳ ಮುಖಂಡತ್ವದಲ್ಲೇ ನಡೆಯುತ್ತಾರೆ. ರಜಪೂತ, ಬ್ರಾಹ್ಮಣ ಮತ್ತು ಮಾಲೀಕ ಪಂಗಡದ ಹೆಂಗಸರು, ಗಂಡಸರು ಎಲ್ಲರೊಡನೆಯೂ ಅವಳು ಮಾತನಾಡುತ್ತಾಳೆ. ವಿನೋದವಾಗಿ ಉತ್ತರ ಕೊಡುತ್ತಾಳೆ. ಸಮಯ ಬಂದಾಗ ಕೈ ತಿರುಗಿಸಿಕೊಂಡು ಜಗಳಕ್ಕೂ ಹೋಗುತ್ತಾಳೆ. ಒಂದು ಸಲವಂತೂ ಸಿಂಘಜೀ ಯನ್ನೇ ದಬಾಯಿಸಿಬಿಟ್ಟಿದ್ದಳು. ಹೂಂ····ಮುದುಕನಾದರೂ ಆಸೆ ಕಡಿಮೆ ಯಾಗಿಲ್ಲ. ತಲೆಯ ಕೂದಲೆಲ್ಲಾ ಬೆಳ್ಳಗಾಯಿತು. ಮನಸ್ಸಿನ ಬಣ್ಣ ಮಾತ್ರ ಇಳೀಲಿಲ್ಲ····ನನ್ನ ಹೆಚ್ಚು ಬಾಯಿ ಮಾಡಿಸಬೇಡಿ ಸಿಂಘಜೀ····ಅವಳನ್ನು ಕಂಡರೆ ಎಲ್ಲರಿಗೂ ಭಯ. ಯಾವಾಗ ಯಾರ ರಹಸ್ಯವನ್ನು ಬಯಲು ಮಾಡು ತ್ತಾಳೋ ಹೇಳುವಂತಿಲ್ಲ. ಎಲ್ಲರೂ ಅವಳ ಮುಖಸ್ತುತಿ ಮಾಡುತ್ತಾರೆ. ಪಂಗಡದ ಯುವತಿಯರೆಲ್ಲಾ ಅವಳ ಹಿಡಿತದಲ್ಲೇ ಇರುತ್ತಾರೆ. ಈ ಮಾತಿಗೆ ಯಾರೂ ಹೊರತಲ್ಲ. ಈ ಬಾರಿ ಕಲಾಸಿ ಜಾತ್ರೆಯಲ್ಲಿ ಅವಳಿಗೆಂದು ಗಿಲೀಟಿನ ಒಂದು ಜೊತೆ ಬಳೆ ತಂದಿದ್ದಾನೆ. ಬಳೆ ಬೆಳ್ಳಿಯ ಹಾಗೆ ಹೊಳೆಯುತ್ತಿದೆ····

"ಚಿಕ್ಕಮ್ಮ, ಹೇಗಾದರೂ ಮಾಡಿ ಫುಲಿಯಾ ಜೊತೆ ಮದುವೆ ನಿಶ್ಚಯ ಮಾಡು." ಕಲಾಸಿ ಈದಿನ ಮನಃಪೂರ್ವಕವಾಗಿ ಹಾಡುತ್ತಿದ್ದ:

"ಅರೆ ಸೂತೆ ಲೇ ದೇಜಾ ಹೇ ಪ್ಯಾರೆ
ಲಾಲೀ ಪಲಂಗಿಯಾ ಸೆ
ಖಾಯೆ ಲೇ ಗುಆ ಖಿಲ್ಲೀ ಪಾನ್ ಜೀ····"

ಕೆಂಪು ಹಾಸಿಗೆಯಿಂದ ದಾರವನ್ನು ತೆಗೆದುಕೊಡು ಪ್ರಿಯ. ಎಲೆಡಿಕೆಯನ್ನು ತಿನ್ನು....

ಕಲಾಸಿ ಈದಿನ ತನ್ಮಯನಾಗಿ ಹಾಡುತ್ತಿದ್ದ. ಅವನಿಗೆ ತಾನೇ ಸದಾಬ್ರಿಜ ಎನ್ನುವ ಭ್ರಮೆ ಆಗಿತ್ತು. ಆದರೆ ಅವನ ಫುಲಿಯಾ ಅವನನ್ನು ಅಲ್ಲಿಯೇ ಇರುವಂತೆ ಕೇಳಿಕೊಳ್ಳಲೂ ಇಲ್ಲ, ಮಹಂಗೂದಾಸ ಅವನ ಮದುವೆಗೆ ಒಪ್ಪಿಗೆ ಕೊಡಲೂ ಇಲ್ಲ....

"ಅರೆ ಸೂತೆ ಲೇ ದೇಜಾ ಹೋ
ಪ್ಯಾರೆ ಲಾಲೀ ಪಲಂಗಿಯಾ ಸೇ...."

ಹೇ ಪ್ರಿಯ, ಕೆಂಪು ಹಾಸಿಗೆಯಿಂದ ದಾರವನ್ನು ತೆಗೆದುಕೊಡು.

ಫುಲಿಯಾ ಏನು ತಾನೇ ಮಾಡಬಲ್ಲಳು? ತಂದೆತಾಯಿಯರ ಮುಂದೆ ಅವಳು ಮಾತನಾಡಲಾರಳು. ಒಳಗೊಳಗೇ ಉರಿದು ಬೂದಿಯಾಗುತ್ತಿದ್ದಳು. ಆದರೆ ಬಾಯಿ ಬಿಡಲಾರದೆ ಸುಮ್ಮನಿದ್ದಳು. ಜನ ಏನನ್ನುತ್ತಾರೆ! ರಮುಜೂ ದಾಸನ ಹೆಂಡತಿಗೆ ಫುಲಿಯಾಳ ಕುದಿಯುತ್ತಿದ್ದ ಮನಸ್ಸು ಅರ್ಥವಾಗಿತ್ತು. ಒಂದು ದಿನ ಫುಲಿಯಾ ಹೇಳಿದ್ದಳು:

"ಅತ್ತೆ, ಯಾರ ಹತ್ತಿರಾನೂ ಹೇಳಬೇಡ. ಕಲಾಸಿ ಸಾಹೇಬರು ಇಷ್ಟು ದಿನಗಳಿಂದ ಓಡಾಡ್ತಿದ್ದಾರೆ. ಅಪ್ಪ ಸ್ಪಷ್ಟವಾಗಿ ಯಾವ ಉತ್ತರಾನೂ ಕೊಡೋದೇ ಇಲ್ಲ. ಪಾಪ, ಆತ ಎಷ್ಟು ದಿನ ತಾನೆ ಓಡಾಡ್ತಾನೆ? ಆಗುವುದಿಲ್ಲ ಎಂದರೆ ಬೇರೆ ಕಡೆ ಹುಡುಕ್ತಾನೆ. ಪ್ರಪಂಚದಲ್ಲಿ ಬೇರೆ ಎಲ್ಲೂ ತಂತ್ರಿಮಾ ಜಾತಿಯ ಹುಡುಗಿ ಸಿಗೋದೇ ಇಲ್ವೇನು?....ಒಂದಿನ ಏನಾದರೂ ಹೆಚ್ಚು ಕಡಿಮೆ ಆದರೆ ಸಹದೇವ ಮಿಶ್ರ ದೇಹದ ಮೇಲೆ ನೊಣ ಕೂತುಕೊಳ್ಳೋದಕ್ಕೂ ಬಿಡೋದಿಲ್ಲ. ಆಗ ಹುಳುಕು ಮುಖದ ಚಮ್ಮಾರಳ ಮುಖಸ್ತುತಿ ಮಾಡಬೇಕು. ಕಹಿ ಔಷಧಿ ಕುಡೀಬೇಕು. ಹಿಮ್ಮಡಿಯಿಂದ ಹೊಟ್ಟೇವರೆಗೆ ಉರೀ ಅನುಭವಿಸಬೇಕು.... ಕಳೆದ ಬಾರಿ ಜೋಯಿಸನ ಮಗ ನಾಮುಲರೈನ್ ಏನು ಕೊಟ್ಟ? ಒಂದು ಗರ್ಭಿಣಿ ಕುರಿ ಕೊಟ್ಟು ಋಣ ಹರಿಸಿಕೊಂಡ...."

ಯಾದ್ ಜೋಆವೆ ಹೇ ಪ್ಯಾರೀ
ತೋಹರೀ ಸುರತಿಯಾ ಸೆ
ಶಾಲೆ ಕರೇಜವಾ ಮೇ ತೀರ್ ಜೀ....

(ಹೇ ಪ್ರಿಯತಮೆ, ನಿನ್ನ ನೆನಪಾದೊಡನೆಯೇ, ಎದೆಯಲ್ಲಿ ಬಾಣ ಚುಚ್ಚಿದ ಹಾಗಾಗುತ್ತದೆ).

ಕಲಾಸಿ ಬಿಟ್ಟ ಬಾಣದಿಂದ ಅವಳ ಹೃದಯ ನೋವು ಅನುಭವಿಸುತ್ತಿತ್ತು. ಫುಲಿಯಾ ಏನು ಮಾಡಬಲ್ಲಳು? ಆವರೆ ರಮುಜೂದಾಸನ ಹೆಂಡತಿಯ ಬಾಯನ್ನು ಯಾರು ಮುಚ್ಚಬಲ್ಲರು?······"ಫುಲಿಯಾಳ ತಾಯೀ, ನಿಮಗೆ ನಾಚಿಕೆ. ಧರ್ಮ ಒಂದೂ ಇಲ್ವೇನು?······ಮಗಳ ಸಂಪಾದನೆಯಿಂದ ಎಷ್ಟು ದಿನ ಮೆರೀಬೇಕೂ ಅಂತ ಇದೀ ; ಯಾವುದಕ್ಕೂ ಒಂದು ಮಿತಿ ಬೇಡ್ವೇನು? ಯುವತಿಯಾದ ವಿಧವೆ ಮಗಳು ಕರೆಯೋ ಹಸುವಿನ ಹಾಗೇ ಅನ್ನೋದು ನನಗೂ ಗೊತ್ತು. ಆದರೆ ದೇಹದಲ್ಲಿರೋ ರಕ್ತವೂ ಒಣಗಿ ಹೋಗುವಹಾಗೆ ಹಾಲು ಕರೀಬೇಡ····"

"ಹೌದೌದು····ನನ್ನ ಮಗಳ ವಿಚಾರ ನಿನಗ್ಯಾಕೆ? ಕೈಯಲ್ಲಿ ಬಳೆ ತಿರುಗಿಸ್ಕೊಂಡು ಓಡಾಡ್ತಿದೀಯಾ: ಕಲಾಸಿಗೆ ಒಂದು ಡಬ್ಬ ಕುಂಕುಮ ಸಿಗೋದಿಲ್ವೇನು?"

ರಮುಜೂದಾಸನ ಹೆಂಡತಿಯ ಕೈಯಲ್ಲಿ ಬಳೆಯನ್ನು ನೋಡಿದಾಗಿನಿಂದ ಅವಳ ಹೊಟ್ಟೆ ಉರಿಯುತ್ತಿತ್ತು. ಮಹಂಗೂದಾಸನ ಮೇಲೆ ಸಿಟ್ಟು ಮಾಡಿಕೊಂಡರೂ ಪ್ರಯೋಜನವಿಲ್ಲ. ಕಲಾಸಿಯ ಬುದ್ಧಿಗೆ ಮಂಕು ಕವಿದಿದೆ. ರಮುಜೂವಿನ ಹೆಂಡತಿಯಿಂದ ಕುಂಟಣಗಿತ್ತಿ ಕೆಲಸ ಮಾಡಿಸಿಕೊಂಡು ಬಳೆ ಕೊಟ್ಟಿದ್ದಾನೆ. ಎಲ್ಲರೂ ಅವಳ ಮಾತು ಕೇಳೋದಕ್ಕೆ ರಮುಜೂವಿನ ಹೆಂಡತಿಯೇನು ಕಾಳಿಮಾತೆಯೇನು?

"ನಾಲಿಗೆ ಬಿಗಿಹಿಡಿದು ಮಾತಾಡು ಚಂಡಾಲಿ. ಹೆಚ್ಚು ಮಾತಾಡಿದರೆ ಒಳ್ಳೇದಲ್ಲ. ಕಲಾಸಿ ನನ್ನ ಅಕ್ಕನ ಮಗ. ಅಕ್ಕನ ಮಗನ ಜೊತೆ ಹೆಸರನ್ನು ಸೇರಿಸ್ತೀಯೇನು? ನೀನು ಬೈದರೆ ನನಗೇನೂ ಅಂಟೋದಿಲ್ಲ. ಕಳಂಕ ನಿನ್ನ ದೇಹಕ್ಕಾದರೆ ಅಂಟಿಕೊಂಡೇ ಇವೆಯಲ್ಲಾ. ಸ್ವಂತ ಅಣ್ಣನ ಮಗನ ಜೊತೆ ಓಡಿ ಹೋಗಿದ್ದೇ ನೀನು. ನನ್ನ ಬೈಯ್ತೀಯಾ? ನಾಚಿಕೆ ಆಗೋದಿಲ್ಲಾ ನಿನಗೆ? ನಾಚಿಕೆಗೆಟ್ಟವಳು. ಪಂಚಾಯಿತೀಯಲ್ಲಿ ಎಲ್ಲರ ಮುಂಜೆ ಬೆನ್ನ ಮೇಲೆ ಪರಕೆಯ ಹೊಡೆತ ಬಿದ್ದದ್ದು ಮರೆತುಬಿಟ್ಯೇನು? ಗುವರ್ ಪಂಗಡದ ಕಲರೂ ಜೊತೆ ರಾತ್ರಿಯೆಲ್ಲಾ ರಸಲೀಲೆ ಆಡ್ತಿದ್ದದ್ದು ಯಾರಿಗೆ ಗೊತ್ತಿಲ್ಲ? ನೀನು ನನ್ನ ಅಸ್ತೀಯಾ?"

"ಸಿಂಘಜೀಯ ಸೊಳೆ ನಿಲ್ಲಿಸೇ ನಿನ್ನ ಮಾತು! ಸಿಂಘಜೀಯ ತೋಟದ ಮಾವಿನಹಣ್ಣಿನ ರುಚಿ ಮರೆತುಹೋಯ್ತೇನು? ತೋಟದಲ್ಲಿ ರಾತ್ರಿಯೆಲ್ಲಾ ಕಣ್ಣುಮುಚ್ಚಾಲೆ ಆಡ್ತಿದ್ದೇನು? ಮಗು ಆದಾಗ ಆ ಮಗುವಿನ ಮುಖ ಸಿಂಘಜಿಯನ್ನೇ ಹೋಲುತ್ತಿದ್ದದ್ದು ಯಾರಿಗೆ ಗೊತ್ತಿಲ್ಲ? ····"

"····ಇಷ್ಟು ಮಾತು ಕೇಳಿದ ಕೂಡಲೇ ಸದಾಬ್ರಿಜ ಮತ್ತೆ ಮೂರ್ಛಿತ ನಾಗಿ ನೆಲದ ಮೇಲೆ ಬಿದ್ದುಬಿಟ್ಟ····"

ಮಹಂಗೂದಾಸನ ಗುಡಿಸಿಲಿನ ಮುಂದೆ ನಡೆಯುತ್ತಿದ್ದ ಸುರಂಗ ಸದಾಬ್ರಿಜನ ಕಥೆಯ ಸಮಯದಲ್ಲಿ ಹೆಂಗಸರ ಜಗಳವೂ ನಿರ್ವಿಘ್ನವಾಗಿ ಸಾಗಿತು. ಹೆಂಗಸರ ಜಗಳದ ಕಡೆ ಗಂಡಸರ್‍ಯಾರೂ ಗಮನವನ್ನೇ ಕೊಡುತ್ತಿರಲಿಲ್ಲ. ಹೆಂಗಸರ ಜಗಳವೇನು? ಈಗ ಜಗಳವಾಡ್ತಾರೆ, ಒಬ್ಬರನ್ನೊಬ್ಬರು ಬೈದಾಡ್ತಾರೆ, ಕೈ ಬಾಯಿ ತಿರಿಗಿಸಿಕೊಂಡು, ಗಂಟಲು ಕಿತ್ತುಹೋಗೋ ಹಾಗೆ, ಒಬ್ಬರನ್ನೊಬ್ಬರು ಕುಲ ಗೋತ್ರ ತೆಗೆದು ಹಿಯ್ಯಾಳಿಸ್ತಾರೆ. ನಾಲಿಗೆಯ ಅಲುಗಿನಿಂದಲೇ ಮಕ್ಕಳು ಮರಿಯ ತಲೆ ಕತ್ತರಿಸಿಹಾಕ್ತಾರೆ, ಕಾಳಿಮಾತೆಗೆ ಬಲಿ ಕೊಡ್ತಾರೆ, ಕೈ ಕಾಲುಗಳಿಗೆ ಕುಷ್ಟ ರೋಗ ಬರಲೆಂದು ಹಾರೈಸುತ್ತಾರೆ. ····ಒಂದೆರಡು ಗಂಟೆ ಗಳ ನಂತರ ಎಲ್ಲಾ ತಣ್ಣಗಾಗುತ್ತದೆ. ಮತ್ತೆ ಸ್ನೇಹದ ಮಾತು—ಕಥೆ ಆರಂಭ ವಾಗುತ್ತದೆ. ಒಬ್ಬರ ಕೈಯ್ಯಿಂದ ಮತ್ತೊಬ್ಬರು ಹುಕ್ಕಾ ತೆಗೆದು ಸೇದೋದಕ್ಕೆ ಪ್ರಾರಂಭ ಮಾಡ್ತಾರೆ. ಸೊಪ್ಪುತೊಗೊಂಡು ಬದಲಿಗೆ ಕಬ್ಬು ಕಳಿಸಿಕೊಡ್ತಾರೆ. —"ನಿನ್ನ ಸಂಜೆ ಮಾಲೀಕರ ಗದ್ದೆಯಿಂದ, ನಮ್ಮ ಹುಡುಗ ಕಿತ್ತುಕೊಂಡು ಬಂದ. ಮಾಲೀಕರು ನೋಡಿದ್ದಿದ್ರೆ ಬೆನ್ನಿನ ಚರ್ಮ ಸುಲಿದುಹಾಕಿಬಿಡ್ತಿದ್ರು."

ಮೊದಲು ಜಗಳ ಆರಂಭವಾಗುತ್ತಿದ್ದುದು ಇಬ್ಬರು ಹೆಂಗಸರ ಮಧ್ಯೆಯೇ. ಜಗಳದ ಮಧ್ಯೆ ಒಮ್ಮೊಮ್ಮೆ ಅಕ್ಕಪಕ್ಕದ ಹೆಂಗಸರ ಮಾತೂ ಬರುತ್ತಿತ್ತು. ಜಗಳ ವಾಡುವವರ ಸಂಖ್ಯೆಯೂ ಬೆಳೆಯುತ್ತಿತ್ತು. ಈ ಜಗಳಗಳಿಂದ ಅವರ ಕೆಲಸ ಕಾರ್ಯಗಳಿಗೆ ಯಾವ ತೊಂದರೆಯೂ ಆಗುತ್ತಿರಲಿಲ್ಲ. ಇಡೀ ಹಳ್ಳಿಯ ಹೆಂಗಸ ರೆಲ್ಲಾ ಜಗಳ ಆರಂಭಿಸಿದಾಗ ಒಬ್ಬರ ಮಾತು ಒಬ್ಬರ ಕಿವಿಗೆ ಬೀಳುತ್ತಿರಲಿಲ್ಲ. ತಮ್ಮ ತಮ್ಮ ಬಾಯಿಗೆ ಬಂದದ್ದು ಆಡುತ್ತಿದ್ದರು····ಆದರೆ ಇಂದು ಫೂಲಿಯಾ ಜಗಳದಲ್ಲಿ ಭಾಗವಹಿಸಲಿಲ್ಲ. ಅವಳು ಹಟ್ಟಿಯ ಮರೆಯಲ್ಲಿ ನಿಂತು ಸುರಂಗ ಸದಾಬ್ರಿಜನ ಕಥೆ ಕೇಳುತ್ತಿದ್ದಳು····ಕಲಾಸಿಯ ಕಂಠದಲ್ಲಿ ಆಕರ್ಷಣೆ ಇದೆ. ಅವನು ಒಳ್ಳೆಯ ಮನುಷ್ಯ. ಕಥೆ, ಹಾಡುಗಳ ಆನಂದದಲ್ಲಿ, ಸಹದೇವ ಮಿಶ್ರ

ತೋಟದಲ್ಲಿ ತನಗಾಗಿ ಕಾಯುತ್ತಾ ನೊಣ ಹೊಡೆಯುತ್ತಿದ್ದಾನೆ ಎಂಬುದನ್ನೂ ಅವಳು ಮರೆತುಬಿಟ್ಟಿದ್ದಳು....ಕಂಠದಲ್ಲಿ ಅಂಥ ಆಕರ್ಷಣೆ ಇದೆ.

"ಅತ್ತೆ"

"ಏನೇ? ಸಹದೇವ ಮಿಶ್ರನ ಹತ್ತಿರ ಹೋಗ್ತೀಯೋ ಇಲ್ವೋ?"

"ಇಲ್ಲ ಅತ್ತೆ. ನಿನ್ನ ಹತ್ತಿರ ಒಂದು ಮಾತು ಹೇಳೋದಕ್ಕೆ ಬಂದಿದೀನಿ. ಕಾಳೀಮಾತೆಯ ಮೇಲಾಣೆ ಯಾರಿಗೂ ಹೇಳಬಾರದು....ಕಲಾಸಿ ಸಾಹೇಬ ನಿನ್ನ ಗುಡಿಸಿಲಿನಲ್ಲಿ ಮಲಗ್ತಾರೆ ಅಲ್ವಾ? ಕಾಳೀಮಾತೇ ಆಣೆ."

ಸುರಂಗ ಸದಾಬ್ರಿಜರ ಕಥೆ ಸಮಾಪ್ತವಾಯಿತು. ಜಗಳ ಲಂಕಾ ಕಾಂಡದ ವರೆಗೆ ಬಂದು ಅಲ್ಲಿಯೇ ನಿಂತಿತು. ಸಹದೇವ ಮಿಶ್ರ ಎಷ್ಟು ಹೊತ್ತು ನೊಣದಿಂದ ಕಡಿಸಿಕೊಳ್ಳುತ್ತಾ ಕುಳಿತಿರುವುದು ಸಾಧ್ಯ....ಸುಡುಗಾಡು ಕಲಾಸಿ, ಹರಾಮು ಜಾದಿ ಫೂಲಿಯಾ, ನಾಳೆ ಆಗಲಿ....ಸರಿಯಾಗಿ ನೋಡಿಕೊಳ್ತೀನಿ....

ಹಳ್ಳಿಯಲ್ಲಿ ನೀರವತೆ ಹರಡಿತ್ತು. ರಮಜೂವಿನ ಹೆಂಡತಿಯ ಗುಡಿಸಿಲಿನಲ್ಲಿ ಸುರಂಗ, ಸದಾಬ್ರಿಜನೊಂದಿಗೆ ಹೇಳಿದಳು :

"ಈಗಲೇ ಬೇಡ, ಅಪ್ಪ ಅಮ್ಮ ಕೂಡಿಕೆಗೆ ಒಪ್ಪದಿದ್ರೆ ನಾನು ನಿನ್ನ ಜೊತೆ ಓಡಿಬರ್ತೀನಿ."

"ಅವರನ್ನು ಒಪ್ಪಿಸೋದು ಹೇಗೆ? ಮಿಶ್ರ ಇದಾನಂತೆ...." ಬಡಪಾಯಿ ಸದಾಬ್ರಿಜ ಹೇಳಿದ.

"ಎಲ್ಲಾ ಸುಳ್ಳು. ನೀನು ಬಾಲದೇವನಿಗೆ ಹೇಳು."

"ಯಾವ ಬಾಲದೇವ? ಪೂರ್ಣಿಯಾ ಆಶ್ರಮದವನೇನು?"

"ಹೌದು. ಅವನ ಮಾತನ್ನು ಎಲ್ಲರೂ ಒಪ್ತಾರೆ. ಅಪ್ಪ ಅಮ್ಮಾನೂ ಒಪ್ತಾರೆ. ಅವನಿಗೆ ನೀನು ನಮಸ್ಕಾರ ಅನ್ನಬಾರದು, ಜೈಹಿಂದ್ ಅನ್ನಬೇಕು."

"ಆದರೆ ಅವನಿಗೆ ನನ್ನ ಮೇಲೆ ತುಂಬಾ ಸಿಟ್ಟಿದೆ. ದೇಶದ್ರೋಹಿಗಳ ಲಿಸ್ಟ್‌ನಲ್ಲಿ ಸೇರಿಸಿಬಿಟ್ಟಿದ್ದಾನೆ."

"....ಅಮ್ಮನಿಗೋಸ್ಕರ ಮೂಗಿನ ಬುಲಾಕು, ಅಸಲಿ ಹಿತ್ತಾಳೆದನ್ನು ತರೋದು ಮರೀಬೇಡ."

## 12

ಹೊಸ ಮಹಂತನಿಗೆ ಪಟ್ಟಕಟ್ಟಲು ಮಠಕ್ಕೆ ಆಚಾರ್ಯರು ಬರುವವರಿದ್ದರು. ಅದನ್ನು ಹೇಳಲು ಮುಜಫರ್ ಜಿಲ್ಲೆಯಿಂದ ಒಬ್ಬ ಸಾಧು ಬಂದಿದ್ದ. ಹೆಸರು ಲರಸಿಂಘದಾಸ್. ಆಚಾರ್ಯರು ಮುಜಫರ್ ಜಿಲ್ಲೆಯ ಪುಪಡೀ ಮಠಕ್ಕೆ ಸಮಾರಾಧನೆಗೆ ಬಂದಿದ್ದರು. ಆಚಾರ್ಯ ಗುರು ಬರುತ್ತಾರೆಂಬ ಸುದ್ದಿ ತೆಗೆದು ಕೊಂಡು ಲರಸಿಂಘದಾಸ್ ಬಂದಿದ್ದ. ಮಠದ ಕೆಲಸಗಾರರಿಗೆ, ಸುತ್ತಮುತ್ತಲ ಮನೆಯವರಿಗೆ ಮೊದಲೇ ವರ್ತಮಾನ ಕೊಡಬೇಕಾಗಿತ್ತು.

ರಾಮದಾಸನಿಗೆ ಮಹಂತ ಪಟ್ಟ ದೊರೆಯುವುದಿತ್ತು. ಮಹಂತ ಸೇವಾದಾಸನ ಏಕಮಾತ್ರ ಶಿಷ್ಯ ಅವನೊಬ್ಬನೇ····ರಾಮದಾಸ ಯೋಚಿಸುತ್ತಿದ್ದ···ಖಂಜರ ನುಡಿಸುವುದನ್ನು ಕಲಿಯದಿದ್ದರೆ ಇದುವರೆಗೆ ಬೇಲಾಹಿಯ ಜಮೀಂದಾರನ ಎಮ್ಮೆಗಳ ಬಾಲ ಹಿಡಿದೇ ಓಡಾಡುತ್ತಿರಬೇಕಾಗಿತ್ತು. ಮಹಂತರು ಅವನ ಖಂಜರ ಕೇಳಿ ಮುಗ್ಧರಾಗಿದ್ದರು. ಅವನು ರಾತ್ರೋರಾತ್ರಿ ಮಹಂತರ ಜೊತೆ ಓಡಿಬಂದು ಮೋರೀಗಂಜ್ ಸೇರಿದ್ದ·········ಇದು ಹದಿನೈದು ವರ್ಷಗಳ ಹಿಂದಿನ ಮಾತು. ಹದಿನೈದು ವರ್ಷಗಳ ನಂತರ ರಾಮದಾಸನ ಭಾಗ್ಯದ ಬಾಗಿಲು ತೆರೆದಿತ್ತು. "ಸದ್ಗುರು ಸಾಹೇಬರಿಗೆ ಜಯವಾಗಲಿ."

ನಿಯಮಾನುಸಾರ ಎಲ್ಲ ಪಂಚರ ಮುಂದೆ ಹೊಸ ಮಹಂತ ಒಂದು ನಿಯಮಾವಳಿಯನ್ನು ಬರೆಯಬೇಕಾಗಿತ್ತು—ಯಾವಾಗಲೂ "ಲಂಗೋಟಿ ಧಾರಿ" ಯಾಗಿದ್ದುಕೊಂಡು ಸದ್ಗುರುವಿನ ಸ್ಥಾನವನ್ನು ರಕ್ಷಣೆ ಮಾಡುತ್ತೇನೆ. ಯಾವ ರೀತಿಯ ಮಾದಕ ವಸ್ತುಗಳನ್ನೂ ಸೇವಿಸುವುದಿಲ್ಲ. ದಾಸಿಯದನ್ನು, ಇತರರನ್ನು ಇಟ್ಟುಕೊಳ್ಳುವುದಿಲ್ಲ ಇತ್ಯಾದಿ.....ಇದಾದನಂತರ ಆಚಾರ್ಯ ಗುರುಗಳು ಮಠಕ್ಕೆ ಸಂಬಂಧಪಟ್ಟ ರಿಜಿಸ್ಟರಿನಲ್ಲಿ ಸಹಿ ಮಾಡಿ ಹೊಸ ಮಹಂತರ ಕೈಗೆ ಕೊಡುತ್ತಾರೆ. ಆಮೇಲೆ ಪಟ್ಟಕಟ್ಟುವ ವಿಧಿಗಳು. ಮೊಸರಿನಲ್ಲಿ ತಿಲಕವಿಡುವುದು····ತಲೆಯ ಮೇಲೆ ದರ್ಭೆ ಬತ್ತಗಳನ್ನು ಹಾಕುವುದು····ಆ ಗಳಿಗೆಯಿಂದ ಹೊಸ ಮಹಂತ ಒಂಭೈನೂರು ಬೀಘ ಭೂಮಿಯ ಏಕಮಾತ್ರ ಮಾಲೀಕನೆನ್ನಿಸಿ ಕೊಳ್ಳುತ್ತಾನೆ.

ಲರಸಿಂಘದಾಸ ಬಂದದ್ದೇನೋ ಆಚಾರ್ಯರ ಸಂದೇಶವನ್ನು ತೆಗೆದು ಕೊಂಡು. ಆದರೆ ಮೋರೀಗಂಜಿನ ಮಠದಲ್ಲಿ ಒಂದೇ ಒಂದು ರಾತ್ರಿ ಇರುವಷ್ಟರಲ್ಲಿ

ಅವನ ತಲೆಗೆ ಮಹಂತ ಪದವಿಯ ಮೋಹ ಏರಿತು. ಒಂಭೈನೂರು ಬೀಘ ಭೂಮಿಯ ಒಡೆತನ, ಕಲಮೀ ಮಾವಿನ ತೋಟ, ಹತ್ತು ಬೀಘ ಜಮೀನಿನಲ್ಲಿ ಕೇವಲ ಬಾಳೆಯ ತೋಟವನ್ನೇ ಬೆಳೆಸಿದ್ದಾರೆ. ಒಂದೊಂದು ಗೊನೆಯಲ್ಲಿ ಸಾವಿರಾರು ಬಾಳೆಯ ಹಣ್ಣುಗಳು ಬಿಟ್ಟವೆ. ಸಾವಿರಾರು ಬಾಳೆಯ ಹಣ್ಣುಗಳು! ಎರಡಿಪ್ಪತ್ತು ಹಸುಗಳು! ಇವೆಲ್ಲವುಗಳಿಗಿಂತ ಅಮೂಲ್ಯವಾದ ಸಂಪತ್ತು—ಲಕ್ಷ್ಮಿದಾಸಿ! ಲಕ್ಷ್ಮಿದಾಸಿ ಹೇಳುತ್ತಾಳೆ, ಮಹಂತರ ಏಕಮಾತ್ರ ಶಿಷ್ಯ ರಾಮದಾಸನೊಬ್ಬನೇ ಎಂದು. ಆದ್ದರಿಂದ ಕಾನೂನಿನ ಪ್ರಕಾರ ರಾಮದಾಸನೊಬ್ಬನೇ ಮಹಂತ ಪದವಿಗೇರಲು ಅರ್ಹನಾದ ಅಧಿಕಾರಿ. ರಾಮದಾಸ ಕಟ್ಟಿಗೆಯ ಗೂಬೆ. ಸದ್ಗುರು ಇದೆಂಥ ಅನರ್ಥ! ಇಲ್ಲ, ರಾಮದಾಸ ಮಹಂತನಾಗಲಾರ. ಹೆಗ್ಗಣದ ಹಾಗಿದ್ದಾನೆ. ಅವನು ಹೇಗೆ ಮಹಂತನಾಗ್ತಾನೆ? ಇಲ್ಲ, ಇಲ್ಲ, ಖಂಡಿತ ಹಾಗಾಗಬಾರದು ಇನ್ನು ಈ ಲಕ್ಷ್ಮೀ········ಶಾಪಗ್ರಸ್ತ ಅಪ್ಸರೆ!

ಲಕ್ಷ್ಮಿ ಲರಸಿಂಘದಾಸನ ಕಣ್ಣಿನಲ್ಲಿ ಅದೇನನ್ನು ಕಂಡಳೋ ಅವನ ನೆರಳನ್ನು ಕಂಡರೆ ಹೆದರುತ್ತಿದ್ದಳು. ರಾತ್ರಿ ಬಾಗಿಲನ್ನು ಭದ್ರವಾಗಿ ಹಾಕಿಕೊಂಡು ಮಲಗಿದಳು. ಚಿಲಕ ಹಾಕಿದ್ದಲ್ಲದೆ, ಒಂದು ಒರಳನ್ನು ಬಾಗಿಲಿಗೆ ಒರಗಿಸಿಟ್ಟಿದ್ದಳು....ಲರಸಿಂಘದಾಸನಿಗೆ ಬಹುಶಃ ಬಹುಮೂತ್ರ ರೋಗವಿರಬೇಕು. ರಾತ್ರಿಯಲ್ಲಿ ಹತ್ತು ಹನ್ನೆರಡು ಬಾರಿ ಮೂತ್ರ ವಿಸರ್ಜನೆಗೆಂದು ಏಳುತ್ತಿದ್ದ. ಪ್ರತಿ ಬಾರಿಯೂ ಕುಂಡದ ಬಳಿ ಮಲಗಿದ್ದ ರಾಮದಾಸ ಅವನನ್ನು ಕೇಳುತ್ತಿದ್ದ: "ಯಾರು?" ಲರಸಿಂಘದಾಸ್ ಸಾಮಾನ್ಯವಾಗಿ ಉತ್ತರವನ್ನೇ ಕೊಡುತ್ತಿರಲಿಲ್ಲ. ಒಮ್ಮೆ ಮಾತ್ರ ಸಿಟ್ಟಿನಿಂದ ಉತ್ತರ ಕೊಟ್ಟ: "ಮಹಂತನಾಗುವುದಕ್ಕೆ ಮುಂಚೆಯೇ ಕುರುಡನಾದೆಯೇನು? ಕಣ್ಣು ಕಾಣಿಸೋದಿಲ್ವೇನು?······ ಗುರುವಿಗೆ ತಕ್ಕ ಶಿಷ್ಯ····"

ರಾಮದಾಸ ಗೊಣಗಿಕೊಂಡು ಸುಮ್ಮನಾದ. ಆದರೆ ಸತ್ಸಂಗದ ಸಮಯದಲ್ಲೇ ಲಕ್ಷ್ಮಿ ಸಿಡಿದುಬಿದ್ದಳು:

"ನೀವು ರಾತ್ರಿ ಹಾಗೆ ಮಾತಾಡಿದೇಕೆ? ಮಹಂತನಾಗುವುದಕ್ಕೆ ಮುಂಚೆಯೇ ಕುರುಡನಾದೆ ಎಂದಿರಲ್ಲಾ ಗುರುವಿನ ಹಾಗೇ····ಗುರುನಿಂದೆ ಕೇಳುವ ಕಿವಿಗಳು····ಇಲ್ಲ, ನಾನು ಗುರುನಿಂದೆ ಕೇಳಲಾರೆ. ಸಹಿಸಲಾರೆ. ರಾಮದಾಸನನ್ನು ನೀವು ಏನೆಂದು ತಿಳಿದಿರಿ? ಅವನು ಈ ಮಠದ ಅಧಿಕಾರಿ

ಮಹಂತ. ನಿಮ್ಮಂತಹ ಇಪ್ಪತ್ತು ಜನ ಬೀದಿ ತಿರುಕ ಸಾಧುಗಳಿಗೆ ಅವನು ದಿನವೂ ಪ್ರಸಾದ ಕೊಡುತ್ತಾನೆ····ಮಾತನಾಡುವುದಕ್ಕೂ ಬರುವುದಿಲ್ಲ ವೇನು? ಆಚಾರ್ಯರು ಬರಲಿ, ತಾಳಿ.''

ರಾಮದಾಸನೂ ಮಾತು ಜೋಡಿಸಿದ:

''ರಾತ್ರಿ ನಾನು ಸುಮ್ಮನಿದ್ದೆ. ಈಗೇನಾದರೂ ಮಾತನಾಡಿದರೆ, ನೇರವಾಗಿ ಪಶ್ಚಿಮದ ದಾರಿ ತೋರಿಸಿಬಿಡ್ತೀನಿ. ಗೊತ್ತಾಯ್ತೇನು?''

ಉಗ್ರಾಣಿಕ ಮೊದಲ ದರ್ಜೆಯ ಸೈತಾನ. ನಿನ್ನೆಯಿಂದಲೇ ಅವನು ತಲೆ ಹರಟೆ ಆರಂಭಿಸಿದ್ದ. ಬೇಳೆಯ ಸಾರಿನಲ್ಲಿ ಬರೀ ನೀರೇ ಇತ್ತು. ಆಲೂಗೆಡ್ಡೆಯ ಪಲ್ಯವನ್ನು ಎರಡನೆಯ ಸಲ ಬಡಿಸಲಿಲ್ಲ. ತುಪ್ಪ ಕೇಳಿದ್ದಕ್ಕೆ ಹೇಳಿದ: ''ಬೇಳೆಗೆ ಬೇಕಾದಷ್ಟು ತುಪ್ಪ ಹಾಕಿದೆ.'' ಬಾಳೇಹಣ್ಣನ್ನು ಮಾರಾಟಕ್ಕೆಂದು ಪೇಟೆಗೆ ಕಳುಹಿಸಿಬಿಟ್ಟ. ಹಾಲಿಗೆ ನೀರು ಬೆರಸಿ ಕೊಟ್ಟ. ನೈವೇದ್ಯಕ್ಕೆ ಮೊದಲು ಮೊಸರು—ಅವಲಕ್ಕಿ ಕೊಡುತ್ತಿದ್ದವನು ಈ ದಿನ ಬರೀ ಅವಲಕ್ಕಿ ಕೊಟ್ಟು ಹೋದ.

''ಬೀದಿ ತಿರುಕ ಸಾಧು!····ಅಬ್ಬಾ ರಂಡೆಗೆ ಎಷ್ಟೊಂದು ಧೈರ್ಯ? ಅವನನ್ನು ಬೀದಿತಿರುಕ ಸಾಧು ಎಂದುಬಿಟ್ಟಳಲ್ಲಾ ಇರಲಿ ಇರಲಿ!''

·· ಲಕ್ಷ್ಮಿಗೆ ಮೊದಲಿನಿಂದ ಅವನ ಪರಿಚಯವೇನೂ ಇರಲಿಲ್ಲ. ಪರಿಚಯ ಇರುವುದಾದರೂ ಹ್ಯಾಗೆ ಸಾಧ್ಯ? ಅವನು ಹಿಂದೆಂದೂ ಇಲ್ಲಿಗೆ ಬಂದಿರಲಿಲ್ಲ. ಪುಪಡೀ ಮಠದಿಂದಲೂ ಯಾವಾಗಲೂ ಯಾವ ಸಾಧುವೂ ಇಲ್ಲಿಗೆ ಬಂದಿರಲಿಲ್ಲ. ಗೊಲ್ಲರವಳು ಸೋನಮತಿಯೂ ಇಲ್ಲಿಗೆ ಬಂದಿಲ್ಲ. ಆ ಬಾರಿ ತನ್ನ ಮಗಳು ರಾಧೆಯನ್ನು ಹುಡುಕಿಕೊಂಡು ಇಲ್ಲಿಯವರೆಗೆ ಬಂದಿದ್ದರೂ ಇರಬಹುದು. ಸರಿ····ರಾಧೆ! ರಾಧೆಯನ್ನು ಮೊದಲ ಬಾರಿ ನೋಡಿದಾಗಲೂ, ಅವನ ಮನಸ್ಸಿನ ಸ್ಥಿತಿ ಹೀಗೆಯೇ ಆಗಿತ್ತು. ಕಿವಿಯ ತುದಿಗಳು ಬಿಸಿಯೇರಿದ್ದವು. ಆದರೆ ರಾಧೆ ಮುಗ್ಧೆ. ಒಂದೇ ಬಾರಿಗೆ ಬಲೆಗೆ ಬಿದ್ದಳು. ಲಕ್ಷ್ಮಿ ಪ್ರೌಢೆ, ಅನುಭವಸ್ಥಳು. ಎಪ್ಪತ್ತು ಇಲಿ ತಿಂದವಳು: ····ಅವನು ರಾಧೆಯನ್ನೂ ಕರೆದುಕೊಂಡು ಆರ್ಕೆಸ್ಟ್ರಾ ಕಂಪನಿಗೆ ಸೇರದೇ ಇದ್ದಿದ್ದರೆ ರಾಧೆ ಕೈ ಜಾರಿ ಹೋಗುತ್ತಿರಲಿಲ್ಲ. ಆರ್ಕೆಸ್ಟ್ರಾ ಕಂಪನಿಯ ಮಾಲೀಕನ ವಿಚಾರ ಮಾತ್ರ ವಾಗಿದ್ದರೆ ಅವನು ಹೇಗಾದರೂ ಸಹಿಸಿಕೊಂಡಿರುತ್ತಿದ್ದ. ಹಾರ್ಮೋನಿಯಂನವನೂ ತಬಲಾ ಬಾರಿಸುವವನೂ ರಾಧೆಗೆ ಬಿಡುವೇ ಕೊಡುತ್ತಿರಲಿಲ್ಲ. ಒಂದು ಸಲ

ತಾಳದ ರಿಹರ್ಸಲ್, ಮತ್ತೊಮ್ಮೆ ನಾಟ್ಯದ ರಿಹರ್ಸಲ್····ರಾಧೆಯೂ ಸಾಕು ಪ್ರಾಣಿಯಂತೆ ಆಡೋದಕ್ಕೆ ಶುರುಮಾಡಿದ್ದಳು. ಪೂರ್ತಿ ಬದಲಾಗಿಬಿಟ್ಟಳು.

ಲರಸಿಂಘದಾಸ ತನ್ನ ತಲೆಯ ಮೇಲಿದ್ದ ಗುರುತನ್ನು ಸವರಿಕೊಂಡು, ಮಫ್ಲರಿನಿಂದ ಮುಚ್ಚಿಕೊಂಡ. ಬದ್ಮಾಶ್ ತಬಲದವನು ತಲೆಗೆ ಸರಿಯಾಗಿ ದೊಣ್ಣೆಯಿಂದ ಪೆಟ್ಟುಕೊಟ್ಟದ್ದ

····ಮಠಕ್ಕೆ ಹಿಂತಿರುಗಿದ ಮೇಲೆ ಮಹಂತರು ಪಾದರಕ್ಷೆಗಳಿಂದಲೇ ಪೂಜೆ ಮಾಡಿದ್ದರು. ಆದರೆ ಏಳು ದಿನಗಳ ಉಪವಾಸದಿಂದ ಬಳಲಿದ್ದ ಶರೀರಕ್ಕೆ ಮತ್ತೆ ಓಡಿಹೋಗುವಷ್ಟು ಶಕ್ತಿಯಿರಲಿಲ್ಲ. ತಲೆಯ ಮೇಲಿನ ಪೆಟ್ಟು ಹಸಿಯಾಗಿಯೇ ಇತ್ತು. ಮಹಂತರ ಪಾದರಕ್ಷೆಗಳು ಗುರುಗಳ ಪಾದರಕ್ಷೆಗಳಲ್ಲವೇ? ಮಹಂತರ ಕಾಲುಗಳ ಮೇಲೆ ಅವನು ಮಲಗಿಬಿಟ್ಟದ್ದ. ಅವರು ತುಂಬಾ ದಯಾಳುಗಳು. ಲರಸಿಂಘದಾಸ ಅವರ ಏಕಮಾತ್ರ ಶಿಷ್ಯನಾಗಿದ್ದ. ಅವನನ್ನು ಅವರು ಕ್ಷಮಿಸಿಬಿಟ್ಟಿದ್ದರು. ಮಹಂತರು ಶರೀರ ತ್ಯಜಿಸಿದ ಮೇಲೆ ಪುಪಡೀ ಮಠದ ಮಹಂತ ಪಟ್ಟ ಅವನಿಗೇ ದೊರೆಯುತ್ತಿತ್ತು. ಆದರೆ ರಾಮುಬರನ ಕೋಯರೀ ಅವನ ಬುದ್ಧಿ ಕೆಡಿಸಿಬಿಟ್ಟ····"ಲರಸಿಂಘದಾಸ್, ನೇಪಾಳೀ ಆಫೀಮಿನಿಂದ ತುಂಬಾ ಲಾಭವಿದೆ. ಹತ್ತು ರೂಪಾಯಿ ತಂದರೆ ನಾನೂರು ರೂಪಾಯಿ ಸಂಪಾದಿಸಬಹುದು. ನೇಪಾಳದಲ್ಲಿ ನಾಲ್ಕಾಣೆಗೆ ಸೇರು ಆಫೀಮು ಸಿಗುತ್ತದೆ. ವರಾಹಕ್ಷೇತ್ರದ ಜಾತ್ರೆಯ ಹೊತ್ತಿಗೆ ಹೊರಟುಬಿಡು."

ಮಹಂತರು ಶರೀರ ತ್ಯಜಿಸಿದ ಸಮಯದಲ್ಲಿ ಅವನು ಜೈಲಿನಲ್ಲಿದ್ದ. ಮಹಂತರು ಸಾಯುವ ಸಮಯದಲ್ಲಿ ಜೀಮೂತದಾಸನನ್ನು ಶಿಷ್ಯನನ್ನಾಗಿ ಮಾಡಿಕೊಂಡು, ಹಾಗೆಯೇ 'ವಿಲ್' ಬರೆದುಬಿಟ್ಟಿದ್ದರು····ಇಲ್ಲದಿದ್ದರೆ ಇಂದು ಅವನೂ ಒಂದು ಮಠದ ಮಹಂತನಾಗಿರುತ್ತಿದ್ದ. ಆಗ ಲಕ್ಷ್ಮಿ ಅವನನ್ನು ಬೀದಿ ತಿರುಕ ಸಾಧು ಎಂದು ಕರೆಯುವುದು ಸಾಧ್ಯವಿರಲಿಲ್ಲ. ಆಗ ಕಾಲು ಮುಟ್ಟಿ, ಕಾಲಿನ ಹತ್ತು ಬೆರಳುಗಳನ್ನೂ ತೊಳೆದು, ಅವಳು ಭಕ್ತಿಯಿಂದ ಚರಣೋದಕ ಕುಡಿಯುತ್ತಿದ್ದಳು····ಆದರೆ ಅವನು ಲಕ್ಷ್ಮಿಗೆ ಚರಣೋದಕ ಕುಡಿಸಿಯೇ ಕುಡಿಸುತ್ತಾನೆ····

"ರಾಮದಾಸ್."

"ಏನು? ರಾಮದಾಸ ಎನ್ನಬೇಡಿ. ಅಧಿಕಾರೀ ಎಂದು ಕೂಗಿ."

"ಲರಸಿಂಘದಾಸ್ ಹೋಗುತ್ತಿದ್ದಾನೆಂದು ಕೊಠಾರಿನ್‌ಗೆ ಹೇಳಿಬಿಡು."

"ಹೋಗುವುದಾದರೆ ಹೋಗಿ."

"ನೀನು ಕೊಠಾರಿನ್‌ಗೆ ಈ ಮಾತನ್ನು ತಿಳಿಸು."

"ನೀನು ತಾನೂ ಎನ್ನಬೇಡಿ. ಕೊಠಾರಿನ್‌ಗೆ ಹೇಳುವುದೇನು ಬಂತು? ರಸ್ತೆ ಖರ್ಚಿಗೆ ಹಣವನ್ನು ಅವಳು ನಿನ್ನೆಯೇ ಕೊಟ್ಟಿದ್ದಾಳೆ."

ರಾಮದಾಸ ಜೋಳಿಗೆಯಿಂದ ಐದು ರೂಪಾಯಿನ ನೋಟನ್ನು ತೆಗೆದು ಲರಸಿಂಘದಾಸನ ಮುಂದೆ ಎಸೆದ.

"ನಾನು ಕೊಠಾರಿನ್ನಳನ್ನು ಕೇಳಬೇಕು. ಅವಳು ನನಗೆ ಅಪಮಾನ ಮಾಡಿದ್ದೇಕೆ? ನನ್ನನ್ನು ಬೀದಿ ತಿರುಕ ಸಾಧು ಎಂದಿದ್ದೇಕೆ? ನಮ್ಮ ಆಚಾರ್ಯ ಗುರುಗಳನ್ನು ಬೈದದ್ದೇಕೆ?"

"ಆಚಾರ್ಯ ಗುರುಗಳನ್ನು ಬೈದಳೇ ?"

"ಹೌದು. ಪೂಜೆ ಪುನಸ್ಕಾರಗಳ ಸಮಯದಲ್ಲಿ ಆಚಾರ್ಯ ಸಮಯ ಬಂದರೆ ಸರಿಯಾಗಿ ಉತ್ತರ ಸಿಗುತ್ತೆ. ಇವತ್ತು ಆಚಾರ್ಯ ಗುರು ಅನ್ನಿಸಿ ಕೊಂಡಿದ್ದಾರೆ. ನಿನ್ನೆಯವರೆಗೆ ಸೋದರ ಗುರು ಮಾತ್ರವೇ ಆಗಿದ್ದರು.... ಇವೆಲ್ಲಾ ಬೈಯ್ಯೋದಲ್ಲದೆ ಮತ್ತೇನು?"

"ಪ್ರಪಂಚದಲ್ಲಿ ಸತ್ಯಕ್ಕೂ ಸ್ವಲ್ಪ ಜಾಗ ಕೊಡಿ ಸಾಧು ಮಹಾರಾಜರೇ."

ಒಳಗಡೆಯಿಂದ ಬರುತ್ತಾ ಲಕ್ಷ್ಮಿ ಹೇಳಿದಳು: "ಸುಳ್ಳು ಹೇಳುವುದು ಸಾಧುಗಳ ಕೆಲಸವಲ್ಲ. ಛೀ....ಛೀ...."

"ಛೀ....ಛೀ....ಏನು ಬಂತು. ನನ್ನ ನೀವು....ನೀನು ಬೀದಿ ತಿರುಕ ಅನ್ನಲಿಲ್ಲವೇನು?"

"ರಾಮದಾಸ್" ಲಕ್ಷ್ಮಿ ಗರ್ಜಿಸಿದಳು: "ಕತ್ತು ಹಿಡಿದು ಇವನನ್ನು ಆಚೆಗೆ ದಬ್ಬು. ಇವನು ಸಾಧುವಲ್ಲ, ರಾಕ್ಷಸ. ಇವನ ತಲೆಯಲ್ಲಿ ಮಾಯೆ ತುಂಬಿಕೊಂಡಿದ್ದಾಳೆ. ಈವತ್ತು ಬೆಳಗ್ಗೆ ನಾನು ಸ್ನಾನ ಮಾಡುತ್ತಿದ್ದಾಗ ಚಾಪೆಯ ಮಧ್ಯೆ ತೂತು ಮಾಡಿಕೊಂಡು ಏನು ನೋಡುತ್ತಿದ್ದನಂತೆ ಇವನನ್ನು ಕೇಳು. ಪಿಶಾಚಿ."

ಬುಸುಗುಟ್ಟುತ್ತಾ ಲಕ್ಷ್ಮಿ ಒಳಗೆ ಹೊರಟುಹೋದಳು. ರಾಮದಾಸ ಮೇಲೆದ್ದು ಲರಸಿಂಘದಾಸನ ಕುತ್ತಿಗೆ ಹಿಡಿದು ದಬ್ಬಿದ. ಲರಸಿಂಘದಾಸ ಮೆಟ್ಟಿಲುಗಳ ಮೇಲೆ ಬಿದ್ದ. ಮೂಗಿನಿಂದ ರಕ್ತ ಸುರಿಯಿತು.

"ಜೈಹಿಂದ್ ರಾಮದಾಸಜೀ, ಏನಿದು? ಏನ್ಸಮಾಚಾರ?"

ಬಾಲದೇವ ರಕ್ತವನ್ನು ನೋಡಿ ಗಾಬರಿಯಾಗಿ ಪ್ರಶ್ನಿಸಿದ.

"ಏನೂ ಇಲ್ಲ. ಪಶ್ಚಿಮದ ಸಾಧು, ದೇಹದಲ್ಲಿ ಸಾಧುವಿನ ಸ್ವಭಾವ ಸ್ವಲ್ಪವೂ ಇಲ್ಲ. ಕೊಠಾರಿನ್ ಜೊತೆ ಚರ್ಚೆಮಾಡ್ತಾನೆ."

"ಆದರೆ, ಜಗಳ ಯಾಕೆ? ಎಲ್ಲಾ ಕೆಲಸಾನೂ ಶಾಂತಿಯಿಂದ ಮಾಡಬೇಕು. ಹಿಂಸೆ ಮಾಡಬಾರದು."

"ರಾಮದಾಸ್, ಬಾಲದೇವನನ್ನು ಒಳಗೆ ಕಳುಹಿಸು."

ಮೂಗಿನ ರಕ್ತವನ್ನು ಒರಸಿಕೊಳ್ಳುತ್ತಾ ಲರಸಿಂಘದಾಸ ನೋಡಿದ. ಬಾಲದೇವ ಎನ್ನುವ ಹೆಸರಿನ ಖದ್ದರ್‌ಧಾರೀ ವ್ಯಕ್ತಿ ಒಳಗೆ ಹೋಗುತ್ತಿದ್ದ. ನೇರವಾಗಿ ಲಕ್ಷ್ಮಿಯ ಕೊಠಡಿಗೇ ಹೋದ.

....ಜೈಹಿಂದ್ ಬಾಲದೇವಜೀ:

....ಬಹುಶಃ ಆ ಖದ್ದರ್‌ಧಾರಿ ಮತ್ತು ಲಕ್ಷ್ಮಿ ಈಗ ಒಂದೇ ಆಸನದಲ್ಲಿ, ಒಬ್ಬರಿಗೊಬ್ಬರು ಹತ್ತಿರ ದೇಹಕ್ಕೆ ದೇಹ ತಗುಲಿಸಿಕೊಂಡು ಕುಳಿತಿರಬಹುದು ....ಇರಲಿ....

## 13

ಹಳ್ಳಿಯ ಗ್ರಹಗತಿ ಚೆನ್ನಾಗಿಲ್ಲ.

ಜೋಯಿಸರು ಮಾತ್ರವಲ್ಲದೆ, ಹಳ್ಳಿಯ ಹಿತೈಷಿಗಳೆಲ್ಲಾ ಮನಸಿನಲ್ಲೇ ಯೋಚಿಸಿಕೊಂಡರು: ಹಳ್ಳಿಯ ಗ್ರಹಗತಿ ಚೆನ್ನಾಗಿಲ್ಲ.

ತಹಸೀಲ್ದಾರರನ್ನು ಸ್ಟೇಟಿನ ಸರ್ಕಲ್ ಮ್ಯಾನೇಜರ್ ಕರೆಸಿ ಏಕಾಂತದಲ್ಲಿ ತಿಳಿಸಿದ್ದರು:

"ಒಂದು ವರ್ಷದ ಕಂದಾಯ ಬಾಕಿ ಇರುವವರ ಮೇಲೂ ಮೊಕದ್ದಮೆ ಹೂಡಿ ಲಂಚ ಕೊಟ್ಟಾದರೂ 58 ಬಿ ಆಜ್ಞೆ ಹೊರಡಿಸಿ. ಜಪ್ತಿಗೆ ಪ್ರಕಟಣೆ ಹೊರಡಿಸಿ.

ಚಪರಾಸಿಯನ್ನು ಕರೆದುಕೊಂಡು ಹೋಗುವ ಅವಶ್ಯಕತೆಯೇನೂ ಇಲ್ಲ. ಆಫೀಸಿನಲ್ಲಿ ಕುಳಿತೇ, ಹಳ್ಳಿಯ ಚಮ್ಮಾರನಿಂದ ಹೆಬ್ಬೆಟ್ಟು ಗುರುತು ಹಾಕಿಸಿಕೊಂಡು ಡಂಗೂರ ಸಾರಿಸಿದ್ದಕ್ಕೆ ರಸೀದಿ ಬರೆಸಿಕೊಳ್ಳಿ.... ಹಳ್ಳಿಯಲ್ಲಿ ಒಂದಿಬ್ಬರು ಸಾಕ್ಷಿಗಳನ್ನೂ ಸಿದ್ಧ ಮಾಡಿಟ್ಟುಕೊಳ್ಳಿ. ರಾಜ್ಯದಿಂದ ಅವರಿಗೆ ಭತ್ಯ ಸಿಗುತ್ತದೆ.... ಈ ಕಾಂಗ್ರೆಸ್ಸಿನವರ ನೆಚ್ಚಿಕೆ ಇಲ್ಲ.''

ಯಾದವ ಪಂಗಡದ ಮೂರ್ಖರು ಎದೆ ಉಬ್ಬಿಸಿಕೊಂಡು ಓಡಾಡುವುದು ಸಿಂಘಜೀಗೆ ಸಹಿಸುತ್ತಿರಲಿಲ್ಲ. ಜೋಯಿಸರು ಹೇಳುವುದೂ ಸರಿಯೇ. ಈ ಯಾದವರು ಮಾತೆತ್ತಿದರೆ ಲಾಠಿ, ಕತ್ತಿ ತೋರಿಸುತ್ತಾರೆ. ಕೇಳಿದರೆ ಮೈಗೆ ಬೆಂಕಿ ಹತ್ತಿದ ಹಾಗುತ್ತೆ. ರೇಗಿಸೋದಕ್ಕೆ ಒಂದೊಂದು ಸಲ ಆ ಕಲಿಯಾ ನಮಸ್ಕಾರ ಮಾಡ್ತಾನೆ. ಆದರೆ ಸಿಂಘಜೀ ಏನು ತಾನೇ ಮಾಡಬಲ್ಲರು? ರಾಜಪೂತ ಪಂಗಡದ ಯುವಕರು ಇತ್ತೀಚೆಗೆ ಗೊಲ್ಲರ ಪಂಗಡದವರೊಡನೆ ಹೆಚ್ಚು ಹೆಚ್ಚು ಬೆರೆಯುತ್ತಿದ್ದಾರೆ. ಅಖಾಡಾದಲ್ಲಿ ಗೊಲ್ಲರ ಜೊತೆ ಕುಸ್ತಿ ಮಾಡುತ್ತಾರೆ. ಪ್ರತಿದಿನ ಸಂಜೆ ಕೀರ್ತನೆಯಲ್ಲೂ ಭಾಗವಹಿಸುತ್ತಿದ್ದಾರೆ. ಹರಗೌರಿ ಹೇಳಿದ್ದೂ ಸರಿಯೇ: ''ಇದೇ ಪರಿಸ್ಥಿತಿ ಮುಂದುವರಿದರೆ ಇನ್ನೈದು ವರ್ಷಗಳಲ್ಲಿ ಗೊಲ್ಲರು ಮದುವೆಯಾಗಲು ಕನ್ಯೆಯರನ್ನೂ ಕೇಳುತ್ತಾರೆ. ಹಾಗಾದರೆ ಹರಗೌರಿ ಹೇಳುತ್ತಿದ್ದ ಕಪ್ಪು ಅಂಗಿಧಾರಿಗಳನ್ನು ಕರೆಸುವುದು ಒಳ್ಳೆಯದೇನು? ದೊಣ್ಣೆ ಕತ್ತಿ ತಿರುಗಿಸುವುದನ್ನು ಹೇಳಿಕೊಡುವುದಕ್ಕೂ ಮಾಸ್ಟರ್ ಬರುತ್ತಾರಂತೆ. ಸಂಯೋಜಕರು, ಸಂಚಾಲಕರು ಬರುತ್ತಾರಂತೆ. ಹಿಂದೂ ರಾಜ್ಯ ಮಹಾರಾಣ ಪ್ರತಾಪ ಮತ್ತು ಶಿವಾಜಿಯ ರಾಜ್ಯ ಆರಂಭವಾಗುತ್ತದೆ. ಹರಗೌರಿ ಇತ್ತೀಚೆಗೆ ತುಂಬಾ ದೊಡ್ಡ ದೊಡ್ಡ ಮಾತುಗಳನ್ನಾಡುತ್ತಾನೆ.

ಸಮಾರಾಧನೆಯ ದಿನ ಸಿಟ್ಟುಗೊಂಡಿದ್ದ ಖೇಲಾವನ ಸಿಂಹನನ್ನು ಸಿಂಘಜೀ ಬಲವಂತವಾಗಿ ಮನೆಯಿಂದ ಕರೆದುಕೊಂಡು ಬಂದಿದ್ದರು. ಆದರೆ ಖೇಲಾವನ ಸಿಂಹನ ಸಿಟ್ಟು ಅಡಗಿರಲಿಲ್ಲ. ಜೋಯಿಸ ಚಿಕ್ಕಪ್ಪ ಪ್ರತಿದಿನ ಬರುತ್ತಿದ್ದರು. ಅವರು ಭವಿಷ್ಯ ನುಡಿದಿದ್ದರು. ಸಕಲದೀಪನ ಜಾತಕದಲ್ಲಿ ಅವನ ಹದಿನೆಂಟನೇ ವರ್ಷದಲ್ಲೇ ಮಾತಾ-ಪಿತರ ವಿಯೋಗ ಇದೆಯಂತೆ. ಸಕಲದೀಪನಿಗೆ ಈಗ ಹದಿನೇಳು ವರ್ಷ. ಅವನ ತಾಯಿ ಅವನಿಗೆ ಶೋಭನ ಪ್ರಸ್ತ ಮಾಡಲು ಪ್ರತಿದಿನ ಒತ್ತಾಯ ಮಾಡುತ್ತಿದ್ದಳು. ಮಗನನ್ನು ವಕೀಲನನ್ನಾಗಿ ಮಾಡವ ಅವನ ಇಚ್ಛೆಯನ್ನು ಬಹುಶ: ಕಾಳೀಮಾತೆ ಪೂರೈಸಲಾರಳು. ಪ್ರಸ್ತವಾದಮೇಲೆ ಅವನೇನು ಓದುತ್ತಾನೆ? ಮಾತಾ-ಪಿತರ ವಿಯೋಗ.. ಈ ಬಾಲದೇವನಿಗೆ ಇಡೀ ಪ್ರಪಂಚದ

ಒಳ್ಳೆಯದು ಹೋಳೆಯುತ್ತದೆ. ಆದರೆ ಉಪ್ಪುಂಡ ಮನೆಯವರಿಗಾಗಿ ಒಂದು ತೃಣದಷ್ಟೂ ಯೋಚಿಸುವುದಿಲ್ಲ. ದಿನವೆಲ್ಲಾ ತಹಸೀಲ್ದಾರರ ಮನೆಯಲ್ಲಿ ಕೂತಿರುತ್ತಾನೆ. ಸಂಜೆಯಾಯಿತೆಂದರೆ ಕೀರ್ತನೇ! ಕಮಲಾನದಿಯ ದಡದಲ್ಲಿ ಕಲರೂ ಪಾಸ್ವಾನನ ಅಜ್ಜನ ಹೆಸರಿನಲ್ಲಿ ಜಮೀನಿದೆ. ಕಲರೂವಿಗೆ ಹೇಳಿ ಆ ಭೂಮಿಯನ್ನು ಬರೆಸಿಕೋ ಎಂದು ಹೇಳಿದರೆ ಬಾಲದೇವ ಕೇಳಿಸಿಕೊಳ್ಳುವುದೇ ಇಲ್ಲ. ಗೋನಾಯ್ ತತಮಾ ನಾಳೆಯಿಂದ ಹೊಲ ಉಳಲು ಬರುವುದಿಲ್ಲವಂತೆ. ಕಳೆದ ವರ್ಷದ ಬಾಕಿ ತೀರಿಸುವವರೆಗೆ ನೇಗಿಲು ಹಿಡಿಯುವುದಿಲ್ಲ ಎನ್ನುತ್ತಾನೆ. ಬಾಲದೇವ ಮಿಕಿ ಮಿಕಿ ನೋಡುತ್ತಿದ್ದನೇ ಹೊರತು, ಒಂದು ಮಾತನ್ನೂ ಆಡಲಿಲ್ಲ. ಸಾಲದ್ದಕ್ಕೆ ಚರ್ಚೆ ಬೇರೆ: "ಬಡವರ ಹಣವನ್ನು ಹಿಡಿದುಕೊಳ್ಳಬಾರದೂ ಅಣ್ಣಾ."

ಜೋಯಿಸರ ಹದಿನೆಂಟು ವರ್ಷದ ನವ ವಧುವಿಗೆ, ಊಟ ಮಾಡಿದ ಕೂಡಲೇ ಹೊಟ್ಟೆ ನೋಯುವುದಂತೆ. ಕಳೆದ ಒಂದು ವರ್ಷದಲ್ಲಿ ಊಟ ಮಾಡಿದ ಕೂಡಲೇ ಅವಳು ಹೊಟ್ಟೆ ಹಿಡಿದುಕೊಂಡು ಮಲಗಿಬಿಡುತ್ತಾಳೆ.

ಈ ವರ್ಷವಂತೂ ನೋವು ಮತ್ತಷ್ಟು ಹೆಚ್ಚಿದೆ····ಡಾಕ್ಟರ ಔಷಧೀ? ಬೇಡ, ಬೇಡ. ಡಾಕ್ಟರ್ ಹೊಟ್ಟೆ ಹಿಚುಕುತ್ತಾನೆ, ನಾಲಿಗೆ ನೋಡುತ್ತಾನೆ, ಕಣ್ಣಿನ ರೆಪ್ಪೆಗಳನ್ನು ತಿರುಗಿಸಿ ನೋಡುತ್ತಾನೆ, ಮಲ, ಮೂತ್ರ ವಿಸರ್ಜನೆಯ ಬಗ್ಗೆ ಕೇಳುತ್ತಾನೆ. ಬಹುಶಃ ರಕ್ತವನ್ನೂ ಪರೀಕ್ಷಿಸಬಹುದು. ಆದರೆ ಈ ನಡುವೆ ಅವಳು ದಿನವೂ ಹೇಳುತ್ತಾಳೆ–ಕೋಥಲೀ ಪಂಗಡದ ಚಂಪಾಗೆ ಒಂದು ಇಂಜಕ್ಷನ್ನಿನಲ್ಲಿ ಡಾಕ್ಟರ್ ಹೊಟ್ಟೆನೋವು ವಾಸಿ ಮಾಡಿದರಂತೆ. ಇದೇ ರೀತಿ ಅವಳಿಗೂ ಹೊಟ್ಟೆನೋವು ಬರುತ್ತಿತ್ತು. ಹೆಂಗಸರಿಗೆ ಬುದ್ಧಿ ಹೇಳುವುದು ತುಂಬಾ ಕಷ್ಟ. ಎಲ್ಲಾ ಹೆಂಗಸರೂ ಒಂದೇ ರೀತಿ····ಹಠ ಹಿಡಿದರೆ ಏನು ಮಾಡಿದರೂ ಬಿಡುವುದಿಲ್ಲ. ಜೋಯಿಸರಿಗೆ ತಮ್ಮ ನಾಲ್ಕು ಜನ ಪತ್ನಿಯರ ಅನುಭವ ಇದೆ. ಮೊದಲನೇ ಬಡಪಾಯಿಗೆ ಜಾತ್ರೆ ನೋಡುವ ಹುಚ್ಚು. ಅವಳು ಯಾವ ಜಾತ್ರೆಯನ್ನೂ ನೋಡದೆ ಬಿಡುತ್ತಿರಲಿಲ್ಲ. ಜಾತ್ರೆ ನಡೆಯುತ್ತೆಂದರೆ ಜೋಯಿಸರು ಪರಮಾನ ಝಾನ ಮುಖಸ್ತುತಿ ಆರಂಭಿಸಬೇಕಾಗುತ್ತಿತ್ತು. ಯಾಕೆಂದರೆ ಅವನ ಎತ್ತಿನ ಗಾಡಿಯಲ್ಲೇ ಜಾತ್ರೆಗೆ ಹೋಗಬೇಕಾಗಿತ್ತು. ಪಾಪ ಪರಮಾನ, ತಾನೇ ಗಾಡಿ ಹೊಡೆದುಕೊಂಡು ಜಾತ್ರೆಗೆ ಹೋಗುತ್ತಿದ್ದ. ಎಂದೂ ಬಾಡಿಗೆ ತೆಗೆದುಕೊಳ್ಳುತ್ತಿರಲಿಲ್ಲ. ಕೊನೆಗೆ ಆ ಬಡಪಾಯಿಯ ಸಾವೂ ಜಾತ್ರೆಯಲ್ಲೇ ಸಂಭವಿಸಿತು. ಆ ವರ್ಷ ಅರ್ಧೋದಯದ ಜಾತ್ರೆಯಲ್ಲಿ ಕಾಲರಾ ಜೋರಾಗಿ ಹರಡಿತ್ತು····ಎರಡನೆಯವಳಿಗೆ ಹುಕ್ಕಾ ಸೇದುವ ಚಟ. ಬ್ರಾಹ್ಮಣಳಾಗಿ

ಹುಕ್ಕಾ ಸೇದುವುದು ! ಆದರೆ ಜೋಯಿಸರು ಏನು ತಾನೇ ಮಾಡಬಲ್ಲರು ? ಹೆಂಗಸಿನ ಹಠ ! ಅವಳು ಕಾಯಿಲೆ ಮಲಗಿದಾಗ ಜೋಯಿಸರೇ ಹುಕ್ಕಾ ಸಿದ್ಧಮಾಡಿಕೊಡ ಬೇಕಾಯಿತು. ಹಳೆಯ ಕೆಮ್ಮಿನ ರೋಗ ಅವಳಿಗೆ. ಕೆಮ್ಮುತ್ತಲೇ ಪ್ರಾಣ ಬಿಟ್ಟಳು. ····ಮೂರನೆಯವಳ ಹಠ ಇನ್ನೊಂದು ರೀತಿ. ಹಳ್ಳಿಯ ಹುಡುಗರೊಂದಿಗೆ ನಗುತ್ತಾ ಮಾತನಾಡುವುದನ್ನು ಅವಳು ನಿಲ್ಲಿಸುತ್ತಲೇ ಇರಲಿಲ್ಲ.····ಈಗ ಈ ಕಂಚೀರವಾಲಿಗೆ ಡಾಕ್ಟರ ಔಷಧ ಕುಡಿಯುವ ಹಠ ಆರಂಭವಾಗಿದೆ. ಏಕಮಾತ್ರ ಪುತ್ರ ರಾಮನಾರಾಯಣ ಸುಪುತ್ರ ಎನ್ನಿಸಿಕೊಂಡಿದ್ದಾನೆ. ವಿದ್ಯಾಪತಿ ನೃತ್ಯ ಮಾಡುತ್ತಾನೆ. ಸದಾ ತಶಮಾ, ಪಾಸ್ವಾನ್ ಪಂಗಡದವರೊಡನೆ ಇರುತ್ತಾನೆ. ಬ್ರಾಹ್ಮಣ ಮಂಡಲಿಯಲ್ಲೆಲ್ಲಾ ಅವನ ದೂರೇ. ಯಾರೂ ಮಗಳನ್ನು ಕೊಡು ವುದಕ್ಕೂ ಒಪ್ಪುತ್ತಿಲ್ಲ. ಜೋಯಿಸರು ತಾನೇ ಏನು ಮಾಡಬಲ್ಲರು ? ಕೈಯ್ಯಿನ ಊರ್ಧ್ವರೇಖೆ ನೇರವಾಗಿ ಹೆಬ್ಬೆರಳಿಗೆ ಹೋಗಿ ತಲುಪಿದೆ. ಆದರೆ ಕುಂಡಲಿಯಲ್ಲಿ ದಶಮ ಗ್ರಹದಲ್ಲಿ ಶನಿ ಇದ್ದಾನೆ. ಹೆಸರನ್ನಾದರೂ ರಾಮನಾರಾಯಣ ಮಿತ್ರ ಎಂದು ಹೇಳಿಕೊಳ್ಳುವಂತೆ ಬುದ್ಧಿ ಹೇಳಿ ಹೇಳಿ ಆಯಾಸವಾಯಿತು. ಅವನು ಮಾತ್ರ ಹಳ್ಳಿಯವರ ಹಾಗೆ "ನಾಮ ಲರ್ಕೈನ" ಎಂದೇ ಹೇಳಿಕೊಳ್ಳುತ್ತಾನೆ. ....ಕಂಚೀರವಾಲಿಯನ್ನು ರಾಮನಾರಾಯಣನ ಜೊತೆ ಒಂದು ದಿನ ಆಸ್ಪತ್ರೆಗೆ ಕಳುಹಿಸಿದರೆ ಹೇಗೆ ? ಮನೆಗೆ ಕರೆದರೆ ಡಾಕ್ಟರಿಗೆ ದುಡ್ಡು ಕೊಡಬೇಕಾಗುತ್ತದೆ.

ಲರಸಿಂಘದಾಸ ಮನೆ ಮನೆಗೆ ಹೋಗಿ ಪಂಚರೊಡನೆ ಹೇಳುತ್ತಿದ್ದಾನೆ. ಆಚಾರ್ಯರು ಬರುತ್ತಿದ್ದಾರೆ. ಮಠದ ಅಧಿಕಾರಿ ಮಹಂತ ತಾನೇ. ತನಗೇ ಪಟ್ಟ ಸಿಗಬೇಕು. ಹಿಂದಿನ ಮಹಂತನ ಉಪಪತ್ನಿ ಅಥವಾ ದಾಸಿಗೆ ಮಠದ ವಿಚಾರದಲ್ಲಿ ಮಾತನಾಡುವ ಅಧಿಕಾರವಿಲ್ಲ. ರಾಮದಾಸ ಕೋಣ. ಇಷ್ಟೊಂದು ದೊಡ್ಡ ಮಠವನ್ನು ನಡೆಸಿಕೊಂಡುಹೋಗುವುದು ಮೂರ್ಖರಿಂದ ಆಗುವ ಕೆಲಸವಲ್ಲ. ತಾನಾದರೆ ಬಿ.ಎ. ಪಾಸಾಗಿದ್ದಾನೆ. ಇಂಗ್ಲೀಷಿನಲ್ಲೇ ಬೀಜಕವನ್ನು ಓದುವ ಶಕ್ತಿಯಿದೆ. ಆದ್ದರಿಂದಲೇ ತಲೆಯ ಮೇಲೆ ಕೂದಲು ಬಿಟ್ಟಿದ್ದಾನೆ. ಪಂಚೆ, ಕುರ್ತಾ ಧರಿಸುತ್ತಾನೆ. ಅರ್ಧ ಮೀಸೆ ಕತ್ತರಿಸಿಕೊಂಡಿದ್ದಾನೆ···· ಮಠದಲ್ಲಿ ಒಂದು ಸ್ಕೂಲು ತೆರೆಯಬೇಕು. ಹಳ್ಳಿಯವರಿಗೆ ಒಳ್ಳೆಯದನ್ನು ಮಾಡಬೇಕು....ನೀವೆಲ್ಲಾ ಬುದ್ಧಿವಂತ ಜನ. ಸ್ವತಃ ಆಲೋಚಿಸಿ ನೋಡ ಬಹುದು. ಉಪಪತ್ನಿ, ದಾಸಿ ಮಠವನ್ನು ಹಾಳುಮಾಡುತ್ತಾಳೆ. ಸಾಧು ಧರ್ಮ ವನ್ನು ಭ್ರಷ್ಟಗೊಳಿಸುತ್ತಾಳೆ. ನೀವೇ ಆಲೋಚಿಸಿ ನೋಡಿ.

ತಂತ್ರಿಮ ಪಂಗಡದ ಪಂಚಾಯಿತಿ ನಡೆದು ನಿಶ್ಚಯವಾಯಿತು, ತಂತ್ರಿಮ ಪಂಗಡದ ಹೆಂಗಸರ್ಯಾರೂ ಮುಂದೆ ಬಾಬು ಪಂಗಡದ ಯಾರ ಮನೆಯಲ್ಲೂ

ಕೆಲಸ ಮಾಡಬಾರದು. ಆ ಪಂಗಡದ ಹೆಂಗಸರು, ಗಂಡಸರು ಸಂಜೆ ಹಳ್ಳಿಯೊಳಗೆ ಬಂದರೆ ಪರವಾಗಿಲ್ಲ. ಯಾರ ಮನೆಯ ಒಳಗೂ ಹೋಗಬಾರದು. ಕೂಲಿ ಕೆಲಸದಲ್ಲಿ ಅರ್ಧ ಒಂದು ಸೇರು ಧಾನ್ಯ ಸಿಕ್ಕರೆ, ಅಷ್ಟರಿಂದಲೇ ತೃಪ್ತಿಪಟ್ಟುಕೊಳ್ಳ ಬೇಕು. ಮೇಲುಸಂಪಾದನೆ ಹೆಚ್ಚಾಗಿ ಸಿಗಬಾರದು. ಅನೋಷೆ ಮತ್ತು ಉಚಿತ ದಾಸರು ಛಡೀದಾರರೆಂದು ನೇಮಕಗೊಂಡಿದ್ದಾರೆ. ಯಾರಾದರೂ ತಪ್ಪಿ ನಡೆದರೆ ಬೆತ್ತದ ಛಡಿಯಿಂದ ಬೆನ್ನಿನ ಚರ್ಮ ಸುಲಿದುಬಿಡುತ್ತಾರೆ.

ತಂತ್ರಿವಾ ಪಂಗಡದ ಈ ಯೋಜನೆಯ ನಂತರ ಗಹಲೋತ ಕ್ಷತ್ರಿಯ, ಕುರ್ಮ ಕ್ಷತ್ರಿಯ, ಪೋಲಿಯಾ ಪಂಗಡದವರು, ಧನುಷಧಾರಿ ಮತ್ತು ಕುಶನಾಹ ಕ್ಷತ್ರಿಯ ಪಂಗಡದವರ ಪಂಚಾಯಿತಿಯಲ್ಲೂ ಇದೇ ರೀತಿಯ ವ್ಯವಸ್ಥೆ ಆಯಿತು. ....ಕೇವಲ ಜನಿವಾರ ಹಾಕಿಕೊಂಡರೆ ಸಾಲದು. ಕರ್ಮವನ್ನೂ ಮಾಡಬೇಕು. ಯಾರಾದರೂ ಬಾಬು ಸಂಜೆ ಅಥವಾ ರಾತ್ರಿ ಬೇಕಾದರೆ ಸಂಥಾಲ ಪಂಗಡದ ಮನೆಗೆ ಹೋಗಲಿ. ಅವರ ಹೆಂಗಸರೊಡನೆ ವಿನೋದವನ್ನೂ ಮಾಡಲಿ.... ಸಂಥಾಲರ ಬಾಣಕ್ಕೆ ವಿಷ ಲೇಪಿಸಿರುತ್ತಾರೆ.

ಕುರ್ಮ ಕ್ಷತ್ರಿಯ ಪಂಗಡದ ಯುವಕರು ಹಿಂದಿನ ರಾತ್ರಿ ಶಿವಶಂಕರ ಸಿಂಹನಿಗೆ ನೀರಿಲ್ಲದಂತೆ ಮಾಡಿಬಿಟ್ಟರು. ಝುಬರಿ ಮುಸಮ್ಮಾತಳ ಮನೆ ದಿಣ್ಣೆಯ ಮೇಲೆ ಒಂದು ಮೂಲೆಯಲ್ಲಿ, ಸಿಪಾಯಿ ಪಂಗಡದ ಬಾಂಸ್‌ವಾಡಿಯ ಪಕ್ಕ ದಲ್ಲಿದೆ. ಬೊಂಬಿನ ಪೊದೆಗಳ ಮರೆಯಲ್ಲಿ ಯುವಕರು ಮೊದಲೇ ಅವಿತು ಕೊಂಡಿರುತ್ತಾರೆಂದು ಪಾಪ ಶಿವಶಂಕರ ಸಿಂಹನಿಗೇನು ಗೊತ್ತು....ಝುಬರೀ ಮುಸಮ್ಮಾತಳಿಗೆ ಹತ್ತು ರೂಪಾಯಿ ಜುಲ್ಮಾನೆ! ಹೇಗಾದರೂ ಮಾಡಿ ಜುಲ್ಮಾನೆ ಕೊಡಲೇಬೇಕು. ಇಲ್ಲದಿದ್ದರೆ ಬಹಿಷ್ಕಾರ! ಶಿವಶಂಕರ ಸಿಂಹನ ಹತ್ತಿರವೇ ತೆಗೆದುಕೊಂಡು ಕೊಡಲಿ. ಈ ಬಾರಿ ಲಾಲ್‌ಬಾಗ್ ಜಾತ್ರೆಯಲ್ಲಿ ಪೆಟ್ರೋಮ್ಯಾಕ್ಸ್ ಕೊಂಡುಕೊಳ್ಳಬೇಕು. ಪೆಟ್ರೋಮ್ಯಾಕ್ಸ್ ಇಲ್ಲದೆ ಪಂಚಾಯಿತಿಗೆ ಏನು ಬೆಲೆ? ಅದನ್ನು ಕೊಳ್ಳಲು ಇನ್ನೂ ಇಪ್ಪತ್ತು ರೂಪಾಯಿ ಕಡಿಮೆಯಿದೆ. ಅದಕ್ಕೆ ಮತ್ತೊಂದು ದಿನ ಬೆತ್ತದ ಪೊದೆಯ ಮರೆಯಲ್ಲಿ ನೊಣ ಹೊಡೆಯುತ್ತಾ ಕಾಯುತ್ತಿರಬೇಕು. ಮತ್ತೇನು ಮಾಡುವುದು?

ಕಾಲೀಚರಣನ ಅಖಾಡಾ ಈಗ ಸದಾ ತುಂಬಿರುತ್ತದೆ. ಸಂಜೆ ಕೀರ್ತನೆ ಚೆನ್ನಾಗಿ ನಡೆಯುತ್ತದೆ. ಹೊಸ ಹಾರ್ಮೋನಿಯಂ ಬಂದಿದೆ. ಗಂಗಾ ಜಾತ್ರೆ ಯಲ್ಲಿ ಗಂಗತೀರಿಯ ಡೋಲನ್ನು ತಂದಿದ್ದಾರೆ. ಒಳ್ಳೆ ಜೋರಾಗಿರುತ್ತದೆ.

ಬಾಲದೇವನಿಗೆ ಕೀರ್ತನೆ ಕೇಳುವುದೇನೋ ಇಷ್ಟವೇ. ಆದರೆ ಕುಸ್ತಿ, ವ್ಯಾಯಾಮಗಳನ್ನು ಅವನು ಕೆಟ್ಟದೆಂದು ಭಾವಿಸುತ್ತಾನೆ....ಶರೀರದಲ್ಲಿ ಹೆಚ್ಚು ಬಲವಿದ್ದರೆ ಹಿಂಸಾವಾದ ಹರಡುವ ಭಯವಿರುತ್ತದೆ. ನಿಜವಾಗಿ ಬೇಕಾದುದು ಬುದ್ಧಿ. ಬುದ್ಧಿಯ ಬಲದಿಂದಲೇ ಮಹಾತ್ಮಾ ಗಾಂಧಿ ಇಂಗ್ಲೀಷಿನವರನ್ನು ಸೋಲಿಸಿದ್ದಾರೆ. ಗಾಂಧೀಜಿಯ ದೇಹದಲ್ಲಿ ಒಂದು ಹಕ್ಕಿಯಷ್ಟು ಮಾಂಸವೂ ಇಲ್ಲ. ಕಾಂಗ್ರೆಸ್ಸಿನ ಮಿಕ್ಕ ನಾಯಕರೂ ತೆಳುವಾಗಿಯೇ ಇದ್ದಾರೆ.

ಆದರೆ ಕಾಲೀಚರಣನ ಅಖಾಡಾ ಮುಚ್ಚುವುದು ಸಾಧ್ಯವೇ ಇಲ್ಲ. ಡೋಲಿನ ಶಬ್ದದಲ್ಲಿ ಒಂದು ವಿಶೇಷ ಆಕರ್ಷಣೆಯಿದೆ. ಅದು ಕುಸ್ತಿ ಮಾಡುವ ಯುವಕರ ರಕ್ತವನ್ನು ಬಿಸಿ ಮಾಡುತ್ತದೆ.

ಧಾಕ್ ಧಿನ್ನಾ, ಧಕ್ ಧಿನ್ನಾ:

ಶೋಭನ ಮೋಚಿ ಕಟ್ಟಿಗೆಯಿಂದ ಡೋಲಿನ ಮೇಲೆ ಮೊದಲ ಏಟು ಹಾಕುವಷ್ಟರಲ್ಲೇ ದೇಹ ಮಿಸುಕಾಡಲಾರಂಭಿಸುತ್ತದೆ.

ಧಿನ್ನಾ, ಧಿನ್ನಾ, ಧಿನ್ನಾ, ಧಿನ್ನಾ....
ಅಂದರೆ ಆಜಾ, ಆಜಾ, ಆಜಾ, ಆಜಾ:
(ಬಾ ಬಾ ಬಾ ಬಾ)

ಎಲ್ಲರೂ ಅಖಾಡಾಕ್ಕೆ ಬಂದರು. ಕಚ್ಚೆ, ಸೊಂಟದ ಪಟ್ಟಿ ಕಟ್ಟಿದರು. ಒಂದು ಹಿಡಿ ಮಣ್ಣನ್ನು ತೆಗೆದು ತಲೆಯ ಮೇಲೆ ಸುರಿದುಕೊಂಡರು. "ಆಜಾ...." ಎನ್ನುತ್ತಾ ಮೈದಾನದಲ್ಲಿ ಇಳಿದರು. ಕಾಲೀಚರಣ 'ಆ ಅ ಅಲೀ' ಎನ್ನುತ್ತಾ ಕುಸ್ತಿಗೆ ಆರಂಭಿಸುತ್ತಿದ್ದ. ಚಂಪಾವತೀ ಜಾತ್ರೆಯಲ್ಲಿ ಪಂಜಾಬಿ ಪೈಲ್ವಾನ ಮುಶ್ತಾಕ ಇದೇ ರೀತಿ 'ಆಲೀ' (ಯಾಲಲೀ) ಎಂದು ಕುಸ್ತಿ ಆರಂಭಿಸುತ್ತಿದ್ದ. ಈಗ ಶೋಭನ ಲಯ ಬದಲಾಯಿಸಿದ:

ಚಟಧಾ ಗಿಡಧಾ, ಚಟಧಾ ಗಿಡಧಾ:

—ಆಜಾ ಭಿಡಜಾ, ಆಜಾ ಭಿಡಜಾ:

(ಬಂದು ಕುಸ್ತಿ ಮಾಡು)

ಅಖಾಡಾದಲ್ಲಿ ಪೈಲ್ವಾನರು ಗತ್ತು ಬದಲು ಮಾಡಿದರು. ಯಾರು ಯಾರಿಗೂ ತನ್ನ ಕೈಯನ್ನು ಮುಟ್ಟಲೂ ಅವಕಾಶ ಕೊಡುತ್ತಿರಲಿಲ್ಲ. ಮೊದಲ ಹಿಡಿತದ ನಿರೀಕ್ಷೆಯಲ್ಲಿದ್ದರು. ಆ ಹಿಡಿತ....

ಧಾಗಿಡಾಗಿ, ಧಾಗಿಡಾಗಿ, ಧಾಗಿಡಾಗಿ.

(ಬಿಗಿಯಾಗಿ ಹಿಡಿ, ಬಿಗಿಯಾಗಿ ಹಿಡಿ)

ಚಟಾಕ್ ಚಟಫಾ, ಚಟಾಕ್ ಚಟಫಾ.

(ಎತ್ತಿಹಾಕು, ಎತ್ತಿಹಾಕು:)

ಗಿಡ್ ಗಿಡ್ ಗಿಡ್ ಫಾ, ಗಿಡ್ ಫಾ, ಗಿಡ್ ಫಾ:

(ವಾಹ್ ವಾಹ್, ವಾಹ್ ವೀರ:)

ಎತ್ತಿಹಾಕಿದ್ದೇನೋ ಆಯಿತು. ಈಗ ಮೇಲೆತ್ತುವುದೇನೂ ಸುಲಭ ವಲ್ಲ. ಮಣ್ಣು ಹಿಡಿದುಬಿಟ್ಟಿದ್ದಾನೆ. ಎಲ್ಲ ವರಸೆಗಳನ್ನೂ ಅವರು ಬಲ್ಲರು.

ಧಾಕ್ ಧಿನ್ನಾ: ಧಾಕ್ ಧಿನ್ನಾ:

ಭೇಷ್ ವೀರ: ಪಟ್ಟು ಕತ್ತರಿಸಿ ಹೊರಗಡೆ ಬಂದ. ಮತ್ತೆ ಕೈ ಕೈ ಸೇರಿಸು. ಮತ್ತೆ ಕುಸ್ತಿ ಆರಂಭ ಮಾಡು.

ಡೋಲಿನ ಪ್ರತಿ ಲಯದಲ್ಲಿ ಕುಸ್ತಿಯ ಚಲನೆ, ವರಸೆ, ಪಟ್ಟುಗಳ ಧ್ವನಿ ಹೊರಡುತ್ತಿತ್ತು.

ಕಾಳೀಮಂದಿರದಲ್ಲಿ ಪೂಜೆಯ ದಿನ ಇದೇ ಡೋಲಿನ ಲಯ ಒಮ್ಮೆಲೇ ಬದಲಾಗುತ್ತಿತ್ತು. ಧ್ವನಿಯೂ ಬದಲಾಗುತ್ತಿತ್ತು. ಧಾಗಿಡ್ ಧಿನ್ನಾ, ಧಾಗಿಡ್ ಧಿನ್ನಾ:

ಜೈ ಜಗದಂಬಾ: ಜೈ ಜಗದಂಬಾ:

ಹಳ್ಳಿಯನ್ನು ರಕ್ಷಿಸು ಹೇ ಜಗದಂಬಾ!

# 14

ಚಢಲೀ ಜವಾನೀ ಮೋರಾ ಅಂಗ ಅಂಗ ಫಡಕೆಸೆ
ಕಬ್ ಹೋಯಿಹೈಂ ಗವಾನಾ ಹಮಾರಾರೇ ಭವಜಿಯಾ....

ಏರುತ್ತಿರುವ ಯೌವನದಿಂದ ನನ್ನ ಶರೀರವೆಲ್ಲಾ ಸ್ಪಂದಿಸುತ್ತಿದೆ. ನಮ್ಮ ಮದುವೆ ಆಗುವುದೆಂದು ಭಾವಾಜೀ?....

ಒಳ್ಳೆಯ ರಸ್ತೆಯಲ್ಲಿ ಗಾಡಿಯವರ ಗುಂಪು ಭಾವೂಜಿಯ ಹಾಡು ಹಾಡುತ್ತಾ ಗಾಡಿ ಹೊಡೆಯುತ್ತಿದ್ದರು.

"ಏ....ಏ: ನಡಿ ನಡಿ: ಬಲಗಡೆ....ಆಂ....ಕುದುರೆ ನೋಡೂ ಹೆದರುತ್ತೆ."

ಹಥವಾ ರಂಗಾಯೆ ಸೈಯಾಂ ದೆಹರೀ ಬೈಠಾಯಿ ಗಯಿಲ
ಫಿರಹೂ ಅಹಲೆ ಉದೇಶ ರೇ ಭಉಜಿಯಾ:

ಕೈಗೆ ಬಣ್ಣವನ್ನು ಹಚ್ಚಿಕೊಂಡು ಬಾಗಿಲಲ್ಲೇ ಕಾದು ಕುಳಿತಿದ್ದೇನೆ. ಆದರೂ ಯಾವ ಸಂದೇಶವೂ ಬರಲಿಲ್ಲ.

ನಾದಿನಿಯವರ ಹೃದಯದ ಕೂಗು ಗಾಡಿಯವರ ಗಂಟಲಲ್ಲಿ ಹಾಡಾಗಿ ಬರುತ್ತಿತ್ತು. ಭಾವೂಜೀ?....ಕಮಲೀಗೆ ಭಾವ ಇರಲಿಲ್ಲ, ಅವಳು ತನ್ನ ಮನಸ್ಸಿನ ಮಾತನ್ನು ಯಾರ ಹತ್ತಿರ ಹೇಳಿಕೊಳ್ಳಬೇಕು? ಭಾವನ ನಾದಿನಿಯ್ರ ಮದುವೆ ಆಗಿಬಿಟ್ಟದೆ. ಆದರೆ ಕಮಲಿಯ ಕೈಗಳು ಇನ್ನೂ ಅರಿಶಿನದಿಂದ ಹಳದಿಯಾಗಿಲ್ಲ. ...."ಪ್ರೇಮಸಾಗರ" (ಭಾಗವತ) ದಲ್ಲಿ ಮನಸ್ಸು ನೆಡುತ್ತಿಲ್ಲ....ಶ್ರೀ ಶುಕದೇವ ಹೇಳಿದರು:

"ಹೇ ರಾಜ, ಒಂದು ದಿನ ಕೃಷ್ಣ, ಮುರಳೀ ಲೋಲ,
ಕದಂಬ ವೃಕ್ಷದ ಮೇಲೆ ಕುಳಿತು ಕೊಳಲು ನುಡಿಸುತ್ತಿದ್ದ."

ವಸ್ತ್ರಾಪಹರಣ ಚಿತ್ರವನ್ನು ನೋಡಿದರೆ ಕಮಲಿಯ ಮನಸ್ಸಿನಲ್ಲಿ ಏನೇನೋ ಆಗುತ್ತಿತ್ತು. ಅವಳು 'ಪ್ರೇಮಸಾಗರ' ವನ್ನು ಮುಚ್ಚಿಬಿಡುತ್ತಿದ್ದಳು.

....ಬೆಳಗ್ಗೆ ಪ್ಯಾರೂ ಬಂದಿದ್ದ. ಪ್ಯಾರೂ ಎಂತಹ ಹಸುವಿನಂತಹ ಮನುಷ್ಯ:...."ಈವತ್ತು ಏನು ಅಡಿಗೆ ಮಾಡಿದ್ದೆ ಪ್ಯಾರೂ? ಡಾಕ್ಟರ್

ಸಾಹೇಬ್ ಈವತ್ತು ಸರಿಯಾದ ಸಮಯಕ್ಕೆ ಊಟ ಮಾಡಿದರೋ ಅಥವಾ ಶೀಷೆ ಬಾಟಲಿಗಳಲ್ಲೇ ಮುಳುಗಿಹೋಗಿದ್ದರೋ?····" ಪ್ಯಾರು ನಗುತ್ತಾ ಎಂದಿನಂತೆ ಉತ್ತರ ಕೊಡುತ್ತಿದ್ದ.

"ಏನು ಕೇಳ್ತೀ ತಾಯೀ. ಈ ಮನುಷ್ಯನ ಸ್ವಭಾವಾನೇ ನನಗೆ ಅರ್ಥವಾಗೋದಿಲ್ಲ. ಪ್ರತಿದಿನ, ಪ್ಯಾರೂ ಈದಿನ ಸ್ವಲ್ಪ ಬೇಗ ಅಡಿಗೆ ಮಾಡು ಅಂತ ಹೇಳಿಬಿಡ್ತಾರೆ. ಆದರೆ ಊಟ ಮಾಡೋದು ಮಾತ್ರ ಮಧ್ಯಾಹ್ನ ಎರಡು ಗಂಟೆಗೆ, ರಾತ್ರಿ ಹನ್ನೊಂದು ಗಂಟೆಗೆ. ಈವತ್ತು, ಹುಳಿ ಮಾಡಿದ್ದೆ. ಅವರು ಹುಳಿ ಏನು ತಿನ್ತಾರೆ? ಖಾರ ಮುಟ್ಟೋದೇ ಇಲ್ವಲ್ಲ: ಊಟದಲ್ಲಿ ಏನೂ ಆಸಕ್ತಿಯಿಲ್ಲ ಪುಣ್ಯಾತ್ಮನಿಗೆ, ಏನು ಮಾಡಿ ಹಾಕಿದರೂ ತಿನ್ತಾರೆ···· ಇನ್ನು ಶೀಷೆ ಬಾಟಲ್ಲುಗಳ ವಿಚಾರ: ಅದನ್ನು ಏನು ಕೇಳ್ತೀರಿ ತಾಯಿ? ನಿನ್ನೆಯಿಂದ ಸೊಳ್ಳೆ, ತಿಗಣೆ, ಜಿರಳೆಗಳನ್ನು ಹಿಡಿದಿದ್ದಾರೆ. ಈವತ್ತು ಸಂಥಾಲಿ ಪಂಗಡದ ಜೋಗಿಯಾ ಹತ್ತಿರ ಹೇಳ್ತಿದ್ರು—ನಾಲ್ಕು ಮೊಲಗಳು, ಒಂದು ಡಜನ್ ಇಲಿಗಳನ್ನು ಹಿಡಿದುಕೊಂಡು ಬಾ. ಚೆನ್ನಾಗಿ ಇನಾಮು ಕೊಡ್ತೀನಿ ಅಂತ."

ಪ್ಯಾರುವನ್ನು ಹಳ್ಳಿಯ ಹೆಂಗಸರೆಲ್ಲಾ ಪ್ರೀತಿಸುತ್ತಿದ್ದರು. ಹಳ್ಳಿಯಲ್ಲಿ ಎಲ್ಲಾ ಕಡೆಯೂ ಅವನಿಗೆ ಅತ್ತೆ, ಚಿಕ್ಕಮ್ಮ, ಅತ್ತಿಗೆ, ಅಜ್ಜಿಯರು ಸಿಕ್ಕಿಬಿಟ್ಟಿದ್ದರು. ಎಲ್ಲ ತರುಣಿಯರನ್ನೂ ಅವನು 'ತಾಯಿ' ಯೆಂದೇ ಸಂಬೋಧಿಸುತ್ತಿದ್ದ.

····ಡಾಕ್ಟರ್ ಮುಗುಳ್ನಗೆ ಪ್ರಾಣಘಾತಕವಾದದ್ದು. ಬಂದಾಗಲೆಲ್ಲಾ ಮುಗುಳ್ನಗುತ್ತಲೇ ಬರುತ್ತಾರೆ····ಹೆದರಿಕೆಯಾಗುತ್ತೆ····ಹೌದು, ನನಗೆ ಹೆದರಿಕೆಯಾದರೆ ನಿಮಗೇನು? ನಿಮಗೆ ತಮಾಷೆ ಅನ್ನಿಸುತ್ತದೇನೋ: ನಗುತ್ತಾ ಹೋಗಿ····ಕೊರಳಲ್ಲಿ ಸ್ಟೆತಾಸ್ಕೋಪ್ ತೂಗಿಹಾಕಿಕೊಂಡು ಓಡಾಡುತ್ತಾರೆ, ಡಾಕ್ಟರ್ ಬಾಬು. ಎದೆಯ ಮೇಲೆ ಬೆನ್ನಿನ ಮೇಲೆ ಅದನ್ನಿಟ್ಟು ಜನರ ಹೃದಯದ ಕಾಹಿಲೆಗಳನ್ನೆಲ್ಲಾ ಕಂಡುಹಿಡಿಯುತ್ತಾರೆ. ಉಹುಂ····ಅದು ಸುಳ್ಳು: ಇಷ್ಟು ದಿನಗಳಾದುವು, ನನ್ನ ಹೃದಯದ ವಿಚಾರ, ನನ್ನ ಕಾಹಿಲೆಯ ವಿಚಾರ ತಿಳಿಯಲಿಲ್ಲವಲ್ಲ: ಅಥವಾ ತಿಳಿದೂ ತಿಳಿಯದವರ ಹಾಗಿದ್ದಾರೇನೋ! ಡಾಕ್ಟರ್, ನಿಮ್ಮ ನಗುವನ್ನು ನೋಡಿದರೆ ಅದೇ ಸಂಶಯ ಬರುತ್ತದೆ····ಒಳ್ಳೇದು ಡಾಕ್ಟರ್, ನಿಜ ಹೇಳಿ. ನೀವು ಸದಾ ನಗುತ್ತಿರುವುದೇಕೆ? ನನ್ನ ಹೊಟ್ಟೆ

ಉರಿಸುವುದಕ್ಕಾಗಿ ಈ ಹಳ್ಳಿಗೇಕೆ ಬಂದಿರಿ? ಇಲ್ಲ ಇಲ್ಲ····ನೀವು ಬರದೇ ಇದ್ದಿದ್ದರೆ ನಾನು ಹುಚ್ಚಳಾಗಿರುತ್ತಿದ್ದೆ. ಪ್ರತಿದಿನ ಸ್ವಪ್ನದಲ್ಲಿ, ಕಮಲಾ ನದಿಯ ಪ್ರವಾಹದಲ್ಲಿ ತೇಲಿಹೋಗುತ್ತಿದ್ದೆ. ದೊಡ್ಡ ದೊಡ್ಡ ಹಾವುಗಳು: ವಿಧ ವಿಧವಾದ ಹಾವುಗಳು ಕಚ್ಚಲು ಓಡಿಬರುತ್ತಿದ್ದವು. ನೀವು ಬಂದಿರಿ, ಮುಳುಗು ತಿದ್ದ ನಾನು ಉಳಿದುಕೊಂಡೆ····ನನ್ನ ಕಣ್ಣುಗಳನ್ನು ಅಗಲಿಸಿ ನೋಡಿ, ನನ್ನ ಬೆನ್ನ ಮೇಲೆ ಸ್ಟೆತಾಸ್ಕೋಪ್ ಇಟ್ಟು ನೋಡಿ, ನನ್ನ ಹೃದಯದ ಮಾತನ್ನು ಕೇಳಿಸಿಕೊಳ್ಳಿ. ····ನೀವು ಗದರಿಸುತ್ತೀರಿ, ಅದೂ ಎಷ್ಟು ಹಿತವೆನಿಸುತ್ತದೆ. ನೀವು ಸೂಜಿ ತೋರಿಸಿ ನನ್ನನ್ನು ಹೆದರಿಸುತ್ತೀರಿ, ರೇಗಿಸುತ್ತೀರಿ, ಅದೂ ಎಷ್ಟು ಚೆನ್ನಾಗಿರುತ್ತದೆ. ಆಮೇಲೆ ಸಿಹಿ ಔಷಧಿ?····ಹೂಂ ಕಳಿಸಿ, ಖಂಡಿತ ಕಳಿಸಿ ಅದನ್ನು ಕೇಳೋದೇನು? ನಿಮ್ಮ ಮಾತೇನೂ ಕಡಿಮೆ ಸಿಹಿಯಾಗಿರುತ್ತೇನು, ನೀವು ಒಂದು ಬಾರಿಯಾದರೂ ಖಂಡಿತ ಬನ್ನಿ. ನೀವು ಬರದಿದ್ದರೆ ನನಗೆ ಭಯವಾಗುತ್ತದೆ····ಸಿಪಾಯಿ ಪಂಗಡದ ಕುಸುಮೀ ಹೇಳುತ್ತಿದ್ದಳು. ಸಿಹಿ ಔಷಧಿ ಬೇಕೆ? ಎಂದು ಡಾಕ್ಟರ್ ನನ್ನನ್ನೂ ಕೇಳಿದರೂ ಅಂತ····ನನಗೆ ನಂಬಿಕೆಯಿಲ್ಲ. ಡಾಕ್ಟರ್ ಅಂತಹವರಲ್ಲ. ಕುಸುಮೀ ಸುಳ್ಳು ಹೇಳುತ್ತಾಳೆ. ಸಿಹಿ ಔಷಧಿ ಬೇರೆ ಯಾರಿಗೂ ಸಿಗುವುದೇ ಇಲ್ಲ. ಡಾಕ್ಟರ್ ಹುಷಾರ್, ಕುಸುಮಿ ತುಂಬಾ ಚಾಲೂಕಿನ ಹೆಣ್ಣು. ಅನೇಕರಿಗೆ ಕೆಟ್ಟ ಹೆಸರು ತಂದಿದ್ದಾಳೆ. ಹರಗೌರಿ ಅವಳ ಚಿಕ್ಕಪ್ಪನ ಮಗ, ಆದರೆ····ಹೋಗಲಿ ಬಿಡಿ. ಅದನ್ನೆಲ್ಲಾ ಕೇಳಿ ಏನು ಮಾಡ್ತೀರಿ? ಅವಳ ಅತ್ತೆಯ ಮನೆ ಫಾರ್‌ಬಿಸ್‌ಗಂಜ್‌ನಲ್ಲಿದೆ. ಗಂಡ ಒಬ್ಬ ಮಾರ್ವಾಡೀ ಸಿಪಾಯಿ. ರಾತ್ರಿಯೆಲ್ಲಾ ಅವನು ಕಾವಲು ಕಾಯ್ತಿರ್ತಾನೆ, ಕುಸುಮಿ 'ಬೈಸ್‌ಕೋಪ್' ನೋಡೋದಕ್ಕೆ ಹೋಗ್ತಾಳೆ····ಶ್ರೀ ಶುಕದೇವರು ಹೇಳಿದರು: "ಹೇ ರಾಜು, ಒಂದು ದಿನ ಯಶೋದೆ ಎಲ್ಲ ಗೊಲ್ಲತಿಯರನ್ನು ಕರೆಸಿದಳು."

"ಕಮಲೀ."

"ಏನಮ್ಮಾ?"

"ಓದೋದನ್ನು ನಿಲ್ಲಿಸು. ಡಾಕ್ಟರ್ ಬೇಡಾ ಅಂತ ಹೇಳಿಲ್ವೇನು, ಔಷಧಿ ಕುಡಿ. ನಿನ್ನ ಪುಸ್ತಕಾನ ಪೆಟ್ಟಿಗೇಲಿ ಇಟ್ಟು ಬೀಗ ಹಾಕಿಬಿಡ್ತೀನಿ, ಅಷ್ಟೆ. ಇಲ್ಲದಿದ್ದರೆ ನೀನು ಒಪ್ಪೋದಿಲ್ಲ."

"ಓದೋದ್ರಿಂದ ಏನಾಗುತ್ತೆ ಅಮ್ಮ?"

" ಇವಳ ಮಾತನ್ನು ಕೇಳಿ. ಓದೋದ್ರಿಂದ ಏನಾಗುತ್ತೆ ಅಂತ ಡಾಕ್ಟರನ್ನೇ ಕೇಳು."

" ಡಾಕ್ಟರನ್ನು ಕೇಳಲೇನು? ಅಮ್ಮಾ, ನಿನ್ನ ಡಾಕ್ಟರ್ ಏನು ಗೊತ್ತೇನು? ಮಣ್ಣಿನ ಮಹಾದೇವ."

ತಾಯಿ ಗಟ್ಟಿಯಾಗಿ ನಕ್ಕಳು. " ನೀನೋ ನಿನ್ನ ಮಾತೋ; ತಡೆ ಈವತ್ತು ಡಾಕ್ಟರ್ ಬರಲಿ, ಹೇಳ್ತೀನಿ."

ಕಮಲ, ತಾಯಿ ತಂದೆಯರ ಕಣ್ಣಿನ ಬೊಂಬೆ. ತಹಸೀಲ್ದಾರರು ಮಗಳ ಇಚ್ಛೆಗೆ ವಿರುದ್ಧವಾಗಿ ಏನೂ ಮಾಡುತ್ತಿರಲಿಲ್ಲ. ತಾಯಿಯಂತೂ ಬಾಯಿ ತೆರೆಯುವುದಕ್ಕೆ ಮುಂಚೆಯೇ ಮಗಳ ಅವಶ್ಯಕತೆಯನ್ನೆಲ್ಲಾ ಪೂರೈಸುತ್ತಿದ್ದಳು. ರಾಮಾಯಣ, ಮಹಾಭಾರತ, ನಳ-ದಮಯಂತಿ, ಸಾವಿತ್ರಿ-ಸತ್ಯವಾನ್, ಪಾರ್ವತಿ ಕಲ್ಯಾಣ, ಶಿವಪುರಾಣ ಮುಂತಾದವುಗಳನ್ನು ತಂದೆಯೇ ಹೇಳಿಕೊಟ್ಟಿದ್ದರು. ಕಮಲಾ ದಿನವೂ ಶಿವನನ್ನು ಪೂಜಿಸುತ್ತಿದ್ದಳು: ಓಂ ಶಿವಶಂಕರ ಸುಖಕರ, ನಾಥ, ವರದಾಯಕ ಮಹಾದೇವ: ಮಹಾದೇವ: .... ಮಣ್ಣಿನ ಮಹಾದೇವ.

"ಅಮ್ಮಾ, ಸುಮ್ಮನಿರು:" ಕಮಲಾ ತಾಯಿಯನ್ನು ತಬ್ಬಿಕೊಂಡು ಕೈಗಳಿಂದ ಅವಳ ಬಾಯಿ ಮುಚ್ಚಿದಳು. " ನಿನ್ನ ಡಾಕ್ಟರನ್ನು ಕೇಳು, ಮೋಲಿ ಸಾಕಿ ಏನು ಮಾಡ್ತಾರೇ ಅಂತ.?"

ಡಾಕ್ಟರ್ ಯಾವುದಕ್ಕೂ ಉತ್ತರ ಕೊಡುವುದಿಲ್ಲ. ಸುಮ್ಮನೆ ನಗುತ್ತಾರೆ. ಆಮೇಲೆ ಗಂಭೀರವಾಗಿ ಹೇಳುತ್ತಾರೆ: " ಈವತ್ತಂತೂ ಇಂಜಕ್ಷನ್ ಕೊಡಲೇ ಬೇಕು. ಜ್ಞಾನ ತಪ್ಪೋದೇನೋ ನಿಂತಿತು. ಆದರೆ ಹುಚ್ಚು...."

ಎಲ್ಲರೂ ಗಟ್ಟಿಯಾಗಿ ನಗುತ್ತಾರೆ—

ತಹಸೀಲ್ದಾರರು, ತಾಯಿ, ಪ್ಯಾರೂ ಎಲ್ಲಾ. ಕಮಲಿಯ ಮುಖ ಕೆಂಪಗಾಗುತ್ತದೆ. " ಈವತ್ತು ನಾನು ರಕ್ತದ ಒತ್ತಡ ಪರೀಕ್ಷೆ ಮಾಡಿಸಿಕೊಳ್ಳೋದಿಲ್ಲ. ಎಲ್ಲಾ ಸರಿಯಾಗಿದೆ. ಹೌದು ನಾನು ಹುಚ್ಚಿ."

" ಅಕ್ಕಾ:" ತಹಸೀಲ್ದಾರರು ಮಗಳನ್ನು 'ಅಕ್ಕ' ಎಂದೇ ಕರೆಯುತಿದ್ದರು. " ಬೇಗ ಬಾಮ್ಮ. ಡಾಕ್ಟರಿಗೆ ಹೊತ್ತಾಗುತ್ತೆ."

ಬ್ಲಡ್ ಪ್ರೆಷರ್ ಪರೀಕ್ಷೆ ಮಾಡುವಾಗ ಡಾಕ್ಟರ್ ಗಂಭೀರವಾಗಿ ಯಂತ್ರದ ಕಡೆ ನೋಡುತ್ತಾರೆ. ಕಮಲಿ ಓರೆಗಣ್ಣಿನಿಂದ, ಕದ್ದು ಕದ್ದು ಡಾಕ್ಟರರ ಮುಖ

ಪನ್ನೇ ನೋಡುತ್ತಾ ಅಂದುಕೊಳ್ಳುತ್ತಾಳೆ: "ಹೌದು, ನನ್ನ ಹುಚ್ಚೀ ಅಂತೀರಿ ಅಲ್ವಾ? ಆದರೆ ನನ್ನ ಹುಚ್ಚಳನ್ನಾಗಿ ಮಾಡಿದೋರು ಯಾರು?"

ಹಳ್ಳಿಯಲ್ಲಿ ತಹಸೀಲ್ದಾರರೊಬ್ಬರು ಮಾತ್ರವೇ ಚಹಾ ಕುಡಿಯುತ್ತಿದ್ದವರು. ಒಳ್ಳೆ ಚಹಾ ಪುಡಿಯ ವ್ಯಾಪಾರವನ್ನು ಮಾಡುತ್ತಿದ್ದರು. ಡಾಕ್ಟರ್ ಇವರ ಮನೆಗೆ ಪ್ರತಿದಿನ ಚಹಾ ಕುಡಿಯಲು ಬರುತ್ತಿದ್ದರು. ಕಮಲಿಯ ತಾಯಿಯೆ, ಪ್ರತಿದಿನ ಟೀ ಕುಡಿಯಲು ಬರುವಂತೆ ಅವರನ್ನು ಒತ್ತಾಯಮಾಡಿದ್ದಳು.

ಡಾಕ್ಟರ್ ತಮ್ಮ ಸಂಬಂಧಿಕರಂತೆಯೇ ಆಗಿಹೋಗಿದ್ದಾರೆಂದು ತಹಸೀಲ್ದಾರರು ಹೇಳುತ್ತಿದ್ದರು. ಡಾಕ್ಟರಿಗೂ ಅವರಲ್ಲಿ ಒಳ್ಳೆಯ ಸ್ನೇಹ ಬೆಳೆದಿತ್ತು. ತಹಸೀಲ್ದಾರರಿಂದ ಹಳ್ಳಿಯ ಎಲ್ಲ ವಿಚಾರಗಳೂ ಜಿಲ್ಲೆಯ ಹಳೆಯ ಹೊಸ ವಿಚಾರಗಳೂ ತಿಳಿಯುತ್ತಿದ್ದವು....ರಾಜಪರಬಂಗಾ ಸ್ಟೇಟಿನ ಜನರಲ್ ಮ್ಯಾನೇಜರ್ ಡಫ್ ಸಾಹೇಬರು ಎಂತಹ ಮನುಷ್ಯರು: ಈಚೆಗಂತೂ ಒಮ್ಮೆಲೇ ಭಾರತೀಯರಾಗಿಬಿಟ್ಟಿದ್ದಾರೆ. ಪಂಚೆ, ಕುರ್ತಾ ಧರಿಸುತ್ತಾರೆ. ಹಣೆಗೆ ತಿಲಕವನ್ನು ಇಟ್ಟುಕೊಳ್ಳುತ್ತಾರೆ. ರಾಜಪರಬಂಗಾದ ಕುಮಾರಜೀ, ಅವರ ಮುಷ್ಟಿಯಲ್ಲೇ ಇದ್ದಾರೆ. ಡಫ್ ಸಾಹೇಬನ ಮಗಳು ಇರುವವರೆಗೆ ಕುಮಾರ್‌ಜೀ ಅವರನ್ನು ದೂರ ಮಾಡಲಾರರು....ಮಹಾರಾಣಿ ಚಂಪಾವತಿ ಕೆಳಜಾತಿಯಲ್ಲಿ ಹುಟ್ಟಿದವಳು....ರಾಜ ಭೂಪತಸಿಂಹನಿಗೆ 'ಮೇಮ್‌ರಾಣಿ' ಯಲ್ಲಿ ಇಬ್ಬರು ಗಂಡು ಮಕ್ಕಳಿದ್ದಾರೆ....ರಾಜ ಭೂಪತ್‌ಸಿಂಹ ಸುಖಿಪುರುಷ್ ಪೋಲೋ ಆಟದ ಪಕ್ಕಾ ಆಟಗಾರ: ಡಾರ್ಜಿಲಿಂಗ್ ರೇಸಿನಲ್ಲಿ ಪ್ರತಿವರ್ಷ ಅವನ ಕುದುರೆ ಗೆಲ್ಲುತ್ತದೆ. ಈಗಲೂ ಅವನ ಹತ್ತಿರ ಇಪ್ಪತ್ತೆರಡು ಕುದುರೆಗಳಿವೆ. ಒಳ್ಳೇ ಸುಖಿಪುರುಷ: ಪುಣ್ಯಾಹದಲ್ಲಿ ಬನಾರಸ್, ಅಲಹಾಬಾದ್, ಲಕ್ನೋಗಳಿಂದ ಗಾಯಕಿ ನರ್ತಕಿಯರನ್ನು ಕರೆಸುತ್ತಾನೆ. ಮೂರು ದಿನ ಹಗಲೂ ರಾತ್ರಿ ಸಭೆ ನಡೆಯುತ್ತಲೇ ಇರುತ್ತದೆ. ಒಂದು ನಿಮಿಷವೂ ಬಿಡುವಿರುವುದಿಲ್ಲ ...ಅವನು ಕುಡಿಯುವುದೇ ಪ್ಯಾರಿಸ್ಸಿನ ಶರಾಬನ್ನು. ನಿಜವಾದ ರಾಜ ಅಂದರೆ ಅವನೇ. ರಾಜಪರಬಂಗಾದವನು ಬರೀ ಜಿಪುಣ.... ಜಿಲ್ಲೆಯಲ್ಲಿ ಎಲ್ಲರಿಗಿಂತ ದೊಡ್ಡ ರೈತ ಭೋಲಾಬಾಬು. ಅವನ ಹತ್ತಿರ ಮೂವತ್ತುಸಾವಿರ ಬೀಘ ಭೂಮಿಯಿದೆ. ರಹುವಾ ಸ್ಟೇಟಿನ ಗುರುಬಂಶಿಬಾಬುವೂ ರೈತನೇ. ಅವನದೊಂದು ವಿಚಿತ್ರ. ದಾನದಲ್ಲಿ ಕರ್ಣ, ವಾರ್‌ಫಂಡಿಗೆ ಎಲ್ಲರಿಗಿಂತ ಹೆಚ್ಚು ರೂಪಾಯಿ ಕೊಟ್ಟ, ಕಾಂಗ್ರೆಸ್ ಸಹಾಯಕ ಫಂಡಿಗೂ ಹೆಚ್ಚು ಹಣ ಕೊಟ್ಟ. ಪ್ರಪಂಚದ ನ್ಯಾಯ ಎಂದರೆ ಇದೇ. ಮನಸ್ಸು

ಬಿಚ್ಚಿ ದಾನ ಮಾಡಿದ್ದರ ಪರಿಣಾಮ ಏನಾಯಿತು ಗೊತ್ತೇನು? ಜನ ಸುಳ್ಳು ಸುಳ್ಳೇ ಅಪವಾದಗಳನ್ನು ಹರಡಿದರು—ನಕಲೀ ನೋಟು ಅಚ್ಚು ಮಾಡುತ್ತಾನೆ ಎಂದು. ನೋಟುಗಳು ತಯಾರಾಗುತ್ತದೆ—ಕೋಸೀಗಂಗಾ ನದಿಗಳ ದಡದಲ್ಲಿರುವ ಅವನ ಸಾವಿರಾರು ಎಕರೆ ಜಮೀನಿನಲ್ಲಿ. ಅಲ್ಲಿ ನೇಗಿಲೂ ಬೇಡ, ಎತ್ತೂ ಬೇಡ. ಕೂಲಿ ಬೇಡ, ಕೂಲಿಗಾರ ಬೇಡ. ಪ್ರವಾಹ ಬಂದು ಹೋದಮೇಲೆ ನೀರನ್ನು ಹಿಂದಕ್ಕೆ ಸರಿಸಿ, ಕೊಚ್ಚೆಯ ಮಣ್ಣಿನಲ್ಲಿ ಕಡಲೆ, ಬಟಾಣಿ, ಉದ್ದು, ಸಾಸಿವೆ ಬೀಜಗಳನ್ನು ಹಾಕಿಬಿಟ್ಟರೆ ಮುಗಿಯಿತು. ಬೀಜ ಹಾಕುವುದಕ್ಕೆ ಎಷ್ಟು ಶ್ರಮ ಬೇಕಾಗುತ್ತದೆ: ಕೋಸೀ ಗಂಗೆಯ ನೀರಿನಲ್ಲಿ ಮಿಂದ ಭೂಮಿತಾಯಿ ಧಾರಾಳವಾಗಿ ಸಂಪತ್ತನ್ನು ಅನುಗ್ರಹಿಸುತ್ತಾಳೆ.... ಜಿಲ್ಲಾ ಕಾಂಗ್ರೆಸ್ಸಿನ ದೊಡ್ಡ ಮುಖಂಡ ವಿಶ್ವನಾಥ ಚೌಧರೀಜಿ.—ಅಂದಹಾಗೆ ನಿಮಗೆ ಅವರು ಗೊತ್ತೇ ಇರಬಹುದಲ್ಲ! ಅವರೂ ದೊಡ್ಡ ರೈತರೇ.... ಪೂರ್ಣಿಯಾ ಕೋರ್ಟಿನಲ್ಲಿ ಶಶಿಬಾಬು ಮಾಡಿದ ವಕಾಲತ್ತಿನ ಮುಂದೆ ಬೇರೆ ಯಾವ ವಕೀಲ ನಿಲ್ಲಬಲ್ಲ? ಹೈಕೋರ್ಟಿನ ಬ್ಯಾರಿಸ್ಟರೂ ಅವನ ವಾದದ ಮುಂದೆ ಪ್ರತಿಮಾತನ್ನಾಡಲಾರ. ಆದರೆ ಕ್ರಿಮಿನಲ್ ಕೋರ್ಟಿನಲ್ಲಿ ಮಾತ್ರ ಆತ ಎಂದೂ ಕಾಲಿಡುವುದಿಲ್ಲ. ಒಂದು ಬಾರಿ ರಾಜಾ ಭೂಪತ್ ಹತ್ತು ಸಾವಿರ ರೂಪಾಯಿ ಫೀಸ್ ಕೊಡಲು ಸಿದ್ಧನಾಗಿದ್ದ. ಖೂನೀ ಕೇಸು. ಶಶಿ ಬಾಬು ತನ್ನ ಪ್ರತಿಜ್ಞೆ ಬಿಡಲಿಲ್ಲ. ಕೋರ್ಟಿಗೆ ಹೋಗಲಿಲ್ಲ. ಕಾಗದ ಓದಿ ಒಂದು ಜಾಗದಲ್ಲಿ ಒಂದು ಲೈನ್ ಹೊಡೆದುಹಾಕಿದ, ಇನ್ನೊಂದು ಕಡೆ ಒಂದು ಅಕ್ಷರ ಸೇರಿಸಿದ. ರಾಜಾ ಭೂಪತ್ ನಿಷ್ಕಳಂಕನಾಗಿ ಹೊರಬಂದ.... ಈಗ ಆ ಅಯೋಧ್ಯೆಯೂ ಇಲ್ಲ. ಆ ರಾಮನೂ ಇಲ್ಲ.... ....

"ಅಪ್ಪಾ"

"ಏನಕ್ಕಾ?"

"ಡಾಕ್ಟರ್ ಸಾಹೇಬ್ ಈವತ್ತು ಇಲ್ಲೇ ಊಟ ಮಾಡಲಿ."

"ಪ್ಯಾರೂ ಹತ್ತಿರ ಜಗಳ ಆಡೋಣಾ ಅಂತಿದೀಯೇನು?"

"ಪ್ಯಾರೂಗೆ ನಾನಾಗ್ಲೇ ಹೇಳಿದೀನಿ."

"ಹಾಗಾದರೆ ಡಾಕ್ಟರ್ ಬಾಬು,.... ನನಗಂತೂ ಧೈರ್ಯ ಇಲ್ಲ. ಆದರೆ ಅಕ್ಕಾ ಹೇಳ್ತಿದ್ದಾಳೆ. ತೊಂದರೆಯೇನೂ ಇಲ್ಲದಿದ್ದರೆ ..."

"ತೊಂದರೆಯೇನು ಬಂತು." ಆದರೆ....

"ಖಾರ, ಹುಳಿ ತಿನ್ನೋದಿಲ್ಲ." ಕಮಲಿ ಮಧ್ಯದಲ್ಲೇ ಮಾತನಾಡಿದಳು; "ಕುದಿಸಿದ ಪದಾರ್ಥಗಳನ್ನಷ್ಟೇ ತಿನ್ನೋದು. ಅಷ್ಟೇ ತಾನೇ."

ಡಾಕ್ಟರಿಗೆ ಅರ್ಥವಾಗುತ್ತಿದೆ—ರೋಗ ದಿನದಿನಕ್ಕೆ ಹೆಚ್ಚುತ್ತಿದೆ···· ಶೀಲಾ ಇದ್ದಿದ್ದರೆ ತಕ್ಷಣ ಹೇಳಿಬಿಡುತ್ತಿದ್ದಳು. 'ಭಾವಾತ್ಮಕ ಸಂಕ್ರಮಣ': ಅಥವಾ 'ಪ್ರತ್ಯಾವರ್ತನ'ದ ತಿರುವಿಗೆ ರೋಗ ತಲುಪಿದೆ ಎನ್ನುತ್ತಿದ್ದಳು.

# 15

ಸುಮರಿತದಾಸನನ್ನು ಜನ ಸುಳ್ಳುಗಾರ ಎಂದೇ ನಂಬಿದ್ದಾರೆ. ಆದರೂ ಒಂದೊಂದು ಸಾರಿ, ಅವನು ಉಪಯುಕ್ತ ವಿಷಯಗಳನ್ನು ತಿಳಿಸಿಬಿಡುತ್ತಾನೆ. ಈ ನಡುವೆ ಅವನನ್ನು ಜನ ಕರೆಯುವುದು ವೈರಲೆಸ್ ನ್ಯೂಸ್ ಎಂದೇ! ಸಂಕೇತವಾಗಿ 'ವೈರಲೆಸ್' ಎನ್ನುತ್ತಾರೆ. ವಿಷಯ ದೊಡ್ಡದಿರಲಿ, ಸಣ್ಣದಿರಲಿ ಹೊಸ ವಿಚಾರವನ್ನು ಈ 'ವೈರ್‌ಲೆಸ್' ಮನೆ ಮನೆಗೆ ತಲುಪಿಸಿಬಿಡುತ್ತಾನೆ. ತಹಸೀಲ್ದಾರನಿಗೆ ಅವನೊಬ್ಬ ಸಾಕ್ಷಿದಾರ. ಸಾಕ್ಷಿ ಹೇಳ-ಹೇಳುತ್ತಲೇ ಅವನು ಮುದುಕನಾದ. ವಸೂಲಿ, ತಗಾದೆಗಳ ಸಮಯದಲ್ಲೂ ಅವನು ತಹಸೀಲ್ದಾರರ ಜೊತೆಯಲ್ಲೇ ಇರುತ್ತಾನೆ. ಯಾರಿಗಾದರೂ ಜಮಾನು ಬರೆಸಬೇಕಾದರೆ, ಯಾವನಾದರೂ ರೈತನ ಭೂಮಿಯಲ್ಲಿ ಏನಾದರೂ ಸಮಸ್ಯೆಯಿದ್ದರೆ ಅಥವಾ ಯಾರಿಗಾದರೂ ಬಂದೋಬಸ್ತು ಮಾಡಬೇಕಾಗಿದ್ದರೆ, ತಹಸೀಲ್ದಾರರಿಗಿಂತ ಮೊದಲು ಸುಮರಿತದಾಸನ ಹತ್ತಿರವೇ ಮಾತನಾಡಬೇಕು. ಅವನು ರೈತರನ್ನು ಏಕಾಂತವಾಗಿ ಕರೆದುಕೊಂಡುಹೋಗಿ ಹೇಳುತ್ತಾನೆ. "ತಹಸೀಲ್ದಾರರು ನನ್ನ ಮುಷ್ಠಿಯಲ್ಲೇ ಇದ್ದಾರೆ. ಇಷ್ಟವಿದ್ದರೆ ಎಲೆ ಅಡಿಕೆಗೆ ನನಗೆ ಕಾಸು ಕೊಡು. ಆದರೆ ತಹಸೀಲ್ದಾರ ಸಾಹೇಬರಿಗೆ ಮಾತ್ರ···· ಮಾಮೂಲು ಎಷ್ಟು ಕೊಡಬೇಕೋ ಅಷ್ಟು····"

ರೈತರ ಹತ್ತಿರ ಸಣ್ಣ ಸಣ್ಣ ಪದಾರ್ಥಗಳನ್ನೆಲ್ಲಾ ತಹಸೀಲ್ದಾರರು ಹೇಗೆ ಕೇಳಿ ತೆಗೆದುಕೊಳ್ಳುತ್ತಾರೆ! ಅದಕ್ಕೇ ಸುಮರಿತದಾಸನೇ ಕೇಳುತ್ತಾನೆ- ಕುಂಬಳಕಾಯಿ, ಸೋರೇಕಾಯಿ, ಬದನೇಕಾಯಿ, ಹಾಗಲಕಾಯಿ, ಅರಶಿನ, ಮೆಣಸು, ಜೀರಿಗೆ, ಮೂಲಂಗಿ, ಸಾಸುವೆ, ಎಣ್ಣೆ, ಇತ್ಯಾದಿ ಇದನ್ನೆಲ್ಲಾ

ಸುಮರಿತದಾಸ ತನಗಾಗಿ ತೆಗೆದುಕೊಳ್ಳುತ್ತಾನೆ. ಆದರೆ ಸಾಮಾನುಗಳನ್ನು ತೆಗೆದುಕೊಳ್ಳುವಾಗ ರೈತರೊಂದಿಗೆ ಏಕಾಂತವಾಗಿ ಹೇಳುತ್ತಾನೆ: "ಬಿಡಣ್ಣಾ, ಇದನ್ನೆಲ್ಲಾ ತೊಗೊಂಡು ನಾನು ಏನು ಮಾಡಿಕೊಳ್ಳಲಿ? ನನಗೇನೂ ಮನೆಯಿಲ್ಲ, ಭೂಮಿಯಿಲ್ಲ. ಒಲೆಯಿಲ್ಲ, ಒರಳಿಲ್ಲ. ಒಂದು ಹೊಟ್ಟೆ ತುಂಬಿಸಿಕೊಳ್ಳೋದ ಕ್ಕೋಸ್ಕರ ನಾನು ಬೇರೆಯವರ ಮುಂದೆ ಯಾಕೆ ಕೈ ನೀಡಲಿ? ಇವೆಲ್ಲಾ····" ಎಂದು. ಒಂದು ಕಾಸಿನ ತರಕಾರಿಯನ್ನೂ ತಹಸೀಲ್ದಾರರು ಕೊಳ್ಳುವುದಿಲ್ಲ. ಆದರೆ, ಸುಮರಿತದಾಸ ಬೇಡುತ್ತಾನೇನು? ಈವತ್ತೇನೋ ಅವನ ಸ್ಥಿತಿ ಕೆಟ್ಟರ ಬಹುದು. ಅಂದ ಮಾತ್ರಕ್ಕೆ ಅವನು ತನ್ನ ವಂಶದ ಗೌರವವನ್ನು ಮಣ್ಣು ಗೂಡಿಸುತ್ತಾನೆಯೇ? ಅವನ ಮುತ್ತಜ್ಜನ ಮನೆಯ ಮುಂದೆ ಆನೆ ಕಟ್ಟುರು ತ್ತಿದ್ದರು. ಎಲ್ಲಾ ಕರ್ಮದ ಫಲ····ಸುಮರಿತದಾಸನ ಹೊಟ್ಟೆಯಲ್ಲಿ ಯಾವ ಮಾತೂ ಅರಗುವುದಿಲ್ಲ. ಕಾಳೀಚರಣ ಸರಿಯಾಗೇ ಹೇಳುತ್ತಾನೆ: "ಬಾಯಲ್ಲಿ ಹಲ್ಲಿಲ್ಲ. ಮಾತುಗಳನ್ನು ತಡೆಯುವುದಾದರೂ ಹೇಗೆ? ವೈರ್‌ಲೆಸ್:"

ವೈರ್‌ಲೆಸ್‌ಗೆ ಈಗ ಬೇಕಾದಷ್ಟು ವಿಷಯಗಳು ಸಿಕ್ಕಿವೆ. ಮೊದಲನೆಯದಾಗಿ ಪಶ್ಚಿಮದಿಂದ ಮಠಕ್ಕೆ ಆಚಾರ್ಯ ಗುರು ಬರುವವರಿದ್ದಾರೆ. ಲಡಸಿಂಘ ದಾಸನನ್ನು ಕಲೆಕ್ಟರ್ ಸಾಹೇಬರೂ ಮಹಂತನೆಂದು ಒಪ್ಪಿಬಿಟ್ಟಿದ್ದಾರೆ. ಎರಡನೆಯ ವಿಚಾರ—ನಾಳೆಯಿಂದ ಕಣಜ ತೆರೆಯುತ್ತದೆ. ಮಧ್ಯದಲ್ಲಿ ಭಾದ್ರಪದ ಬಂದಿತ್ತು. ತಹಸೀಲ್ದಾರರು ಹೇಳಿದ್ದಾರೆ: ನಾಳೆ ಶುಭದಿನವಂತೆ.

ತಹಸೀಲ್ದಾರರ ಕಣಜದ ಜೊತೆಗೇ ಹಳ್ಳಿಯ ಇತರ ರೈತರ ಕಣಜಗಳೂ ತೆರೆಯುತ್ತದೆ. ತಹಸೀಲ್ದಾರರ ಕಣಜ ಎಲ್ಲದಕ್ಕಿಂತ ದೊಡ್ಡದು. ಕಂದಾಯ ಕೊಟ್ಟ ನಂತರವೂ ಎರಡು ಸಾವಿರ ಮಣ ಭತ್ತ ಸಿಗುತ್ತದೆ.

····ಅಂದ ಹಾಗೆ ಮೂರನೆಯ ವಿಚಾರ ತಿಳಿಸುವುದನ್ನು ಮರೆತೇಬಿಟ್ಟಿದ್ದ ವೈರ್‌ಲೆಸ್. ಅವನು ಮತ್ತೆ ಹೇಳಿದ: "ಬಟ್ಟೆ, ಎಣ್ಣೆ ಮತ್ತು ಸಕ್ಕರೆಗಳನ್ನು ಹಂಚುವ ಕೆಲಸ ಬಾಲದೇವನ ಪಾಲಿಗೆ ಬಂದಿದೆ. ಅದರಲ್ಲಿ ಡಾಕ್ಟರ್ ಬಾಬುವಿನ ಹೆಸರೂ ಇದೆ. ಆದರೆ ತಮಗೆ ಬಿಡುವಿಲ್ಲವೆಂದು ಡಾಕ್ಟರ್ ಹೇಳಿದರು. ನನ್ನ ಕೆಲಸವನ್ನು ನೀನೇ ಮಾಡು ಎಂದು ನನಗೆ ಹೇಳಿದರು. ನನಗೆ ತಾನೇ ಬಿಡುವೆಲ್ಲಿದೆ ಎಂದು ನಾನು ಉತ್ತರ ಕೊಟ್ಟೆ."

ಆಚಾರ್ಯ ಗುರು ಬರುವ ವಿಚಾರ ಅಷ್ಟು ಮಹತ್ವದ್ದಲ್ಲದಿದ್ದರೂ, ಮಿಕ್ಕ ಎರಡು ವಿಚಾರಗಳು ನಿಜವಾದರೆ, ತುಂಬಾ ಮಹತ್ವದವುಗಳು.

ಮಾತು ನಿಜ. ಬಾಲದೇವನೂ ಹೇಳುತ್ತಿದ್ದಾನೆ: ಮಾತು ನಿಜ.

ಕಣಜ, ಇಡೀ ವರ್ಷದ ಸಂಪಾದನೆಯ ಲೆಕ್ಕಪತ್ರವೆಲ್ಲಾ ಕಣಜದಲ್ಲೇ ತಯಾರಾಗುತ್ತದೆ. ಎರಡು ತಿಂಗಳು ಕಟಾವೂ, ಒಂದು ತಿಂಗಳು ಮುಚ್ಚಿಡುವುದು, ನಂತರ ವರ್ಷ ಪೂರ್ತಿಯ ಗಳಿಕೆ. ಎಲ್ಲವನ್ನೂ ಭದ್ರವಾಗಿ ಸೇರಿಸಿಡಬೇಕು. ವರ್ಷವೆಲ್ಲಾ ಮಾಡಿರುವ ಸಾಲವನ್ನು ಲೆಕ್ಕಾಚಾರ ಮಾಡಿ ತೀರಿಸಬೇಕು. ಬಾಕಿ ಏನಾದರೂ ಉಳಿದಿದ್ದರೆ, ಮತ್ತೆ ಖಾಲಿ ಕಾಗದದ ಮೇಲೆ ಹೆಬ್ಬೆಟ್ಟಿನ ಗುರುತು ಹಾಕಬೇಕು. ಒಪ್ಪದಿದ್ದರೆ ಎತ್ತುಗಳನ್ನು, ಹಸುಗಳನ್ನು ಒತ್ತೆ ಇಡುವುದು; ಮತ್ತೆ ಸಾಲ ಮಾಡುವುದು. ಕಣಜದ ಚಕ್ರ ತಿರುಗುತ್ತಲೇ ಇರುತ್ತದೆ. ಕಣಜದಲ್ಲಿ ಎತ್ತಿನ ಗುಂಪುಗಳಿಂದ ಧಾನ್ಯವನ್ನು ತುಳಿಸುತ್ತಾರೆ. ಎತ್ತುಗಳ ಬಾಯಿಗೆ ಜಾಲರಿಯನ್ನು ಕಟ್ಟಿರುತ್ತಾರೆ. ಬಡವರು, ಭೂಮಿಯಿಲ್ಲದ ಜನರ ಸ್ಥಿತಿಯೂ ಕಣಜದ ಎತ್ತುಗಳಂತೆಯೇ....ಬಾಯಿಗೆ ಬಿಗಿದಿರುವ ಜಾಲರಿ....ಆದರೆ ಕಣಜದ ಮೋಹ, ಬಿಡುವುದಿಲ್ಲ. ಶುಕ್ರ ನಕ್ಷತ್ರ ಉದಿಸಿದ ಕೂಡಲೇ ಕಣಜ ಎಚ್ಚೆತ್ತುಕೊಳ್ಳುತ್ತದೆ. ಸೂಜಿಯಂತೆ ಚುಚ್ಚುವ ಮಾಘ ಮಾಸದ ಬೆಳಗಿನ ಗಾಳಿಯ ಪ್ರಭಾವವೂ ದೇಹಕ್ಕೆ ತಟ್ಟುವುದಿಲ್ಲ. ಹಿಮದಿಂದ ದೇಹ ಜಡ್ಡು ಕಟ್ಟಿ ಹೋಗಿರುತ್ತದೆ. ಕೈಯಿಂದ ಮೂಗು ಮುಟ್ಟಿಕೊಳ್ಳುವುದಕ್ಕೂ ಆಗದಷ್ಟು ಕೈ ಹಿಮುಗಟ್ಟಿದಾಗ, ಗುಂಡಿಗೆ ಒಣಗಿದ ಪುರಲೆಗಳನ್ನು ಹಾಕಿ ಉರಿ ಹಚ್ಚಿಸುವುದು. ಉರಿಯಲ್ಲಿ ಕಬ್ಬು ಬೇಯುತ್ತಿರುತ್ತದೆ. ಉರಿಯ ಹತ್ತಿರ ಮೈ ಕಾಯಿಸಿಕೊಳ್ಳುವ ಸರದಿ ಬಂದವನು, ಬೆಳಗ್ಗಿನ ಪ್ರಾರ್ಥನೆ ಹಾಡಲಾರಂಭಿಸುತ್ತಾನೆ—

"ಹರಿ ಬಿನು ಕೇ ಪೂರಿಹೈಂ,
ಮೋರ್ ಸುಅರಥ್, ಹರಿ ಬಿನು ಕೆ."....

ಅಥವಾ ನನ್ನ ಆಸೆಗಳನ್ನೆಲ್ಲ ಹರಿಯಲ್ಲದೆ ಬೇರೆ ಯಾರು ಪೂರ್ಣಗೊಳಿಸ ಬಲ್ಲರು?

"ನಿರಬಲ ಕೇ ಬಲ ರಾಮ ಹೋ ಸಂತೋ,
ನಿರಬಲಕೇ ಬಲ ರಾಮ್."

ಹೇ ಸಂತರೇ, ದುರ್ಬಲರಿಗೆಲ್ಲಾ ಬಲ ನೀಡುವವನು ರಾಮ.

ದಿನವೆಲ್ಲಾ ಭತ್ತವನ್ನು ಗುಡಿಸಿ ಒಟ್ಟುಮಾಡಿದ್ದಾಯಿತು. ಆಮೇಲೆ ಭತ್ತವನ್ನು ಉದುರಿಸಿದರು. ಸಂಜೆ ಮತ್ತೆ ಎತ್ತುಗಳಿಂದ ತುಳಿಸುವ ಕೆಲಸ

ಶುರುವಾಯಿತು. ಸಂಜೆ ಗುಡಿಸಿಲಿನ ಹತ್ತಿರ 'ಲೋರಿಕ್' ಅಥವಾ ಕುಮರ ಬಿಜ್ಜೈಮಾನನ ಕಥೆ-

ಅರೆ ರಾಮು ರಾಮು ರೆ ದೈಬಾ ರೇ ಈಸರ ರೇ ಮಹಾದೇವ,
ಬಾಮೆ ಠಾಢೀ ದೇವಿ ದುರಗಾ ಧಾಹಿನ್ ಬೋಲೆ ಕಾಗ್.
ಅಪನ ಮನ ಮೇಂ ಸೋಚ್ ಕರ್ರೈಯೆ ಮಾನಿಕ ಸರದಾರ್.
ಬಾತ್ ಸೆ ನಾಹಿಂ ಮಾನೆ ವೀರ ಕನೌಜಿಯಾ ಗುಆರ್....

ಹೇ ರಾಮು, ಹೇ ಈಶ್ವರ, ಹೇ ಮಹಾದೇವ ಎಡಗಡೆಯಲ್ಲಿ ದುರ್ಗಾದೇವಿ ನಿಂತಿದ್ದಾಳೆ. ಬಲಗಡೆ ಕಾಗೆ ಕೂಗುತ್ತಿದೆ. ವೀರ ಕನೌಜಿಯು ಗೊಲ್ಲ ಮಾತಿಗೆ ಒಪ್ಪುವುದಿಲ್ಲ ಎಂದು ಮಾಣಿಕ ಸರದಾರ ಮನಸ್ಸಿನಲ್ಲೇ ಯೋಚಿಸಿಕೊಂಡ.

ಬಟ್ಟೆ, ಎಣ್ಣೆ ಮತ್ತು ಸಕ್ಕರೆಗಳನ್ನು ಕಮಲದಾಹದ ಕಮರುದ್ದೀನ್ ಬಾಬು ಹಂಚುತ್ತಿದ್ದ ಮೇರೀಗಂಜಿನಿಂದ ಕಮಲದಾಹಕ್ಕೆ ಹತ್ತು ಹರಿದಾರಿ ದೂರ. ಹತ್ತು ಹರಿದಾರಿ ಹೋಗುವುದೇನೂ ಕಷ್ಟವಲ್ಲ. ಆದರೆ ಸಾಮಾನನ್ನು ಪಡೆಯುವುದು ಮಾತ್ರ ದೊಡ್ಡ ಅದೃಷ್ಟ. ಕಮರುದ್ದೀನ್ ತರಕಾರಿ ಬೆಳೆಯುವ ಸಾಮಾನ್ಯ ಜಾತಿಯವನು. ಬದನೆಕಾಯಿ ಮಾರಾಟದಿಂದಲೇ ಅವನು ಜಮೀನ್ದಾರನಾದ. ಈಗ ಮುಸ್ಲಿಂಲೀಗಿನ ನಾಯಕನಾಗಿದ್ದಾನೆ. ಕಟಿಹಾರಿನಲ್ಲಿ ಮೋಟಾರ್ ರಸ್ತೆಯ ಪಕ್ಕದಲ್ಲೇ ಅವನ ಮನೆ. ಅಧಿಕಾರಿಗಳು, ಮುಖಂಡರು ಸದಾ ಅವನ ಮನೆಗೆ ಬರುತ್ತಲೇ ಇರುತ್ತಾರೆ. ತಿಂಗಳಿಗೆ ಅರವತ್ತು ಕೋಳಿಗಳು ಖರ್ಚಾಗುತ್ತಿದ್ದವು. ಜನ ಹೇಳುತ್ತಿದ್ದರು: ಹೊಸ ಜಿಲ್ಲಾಧಿಕಾರಿ ಅಧಿಕಾರ ವಹಿಸಿಕೊಂಡಾಗ ಅವರು ತುಂಬಾ ಶಿಸ್ತಿನವರು, ಯಾರ ಮನೆಗೂ ಹೋಗುವುದಿಲ್ಲ, ಯಾರ ಹತ್ತಿರವೂ ಎಲಡಿಕೆಯನ್ನು ಕೂಡಾ ತೆಗೆದುಕೊಳ್ಳುವುದಿಲ್ಲ ಎನ್ನುವ ಅಭಿಪ್ರಾಯವಿತ್ತು. ಆದರೆ ಕಮರುದ್ದೀನ ಕೈಕಟ್ಟಿ ಕೂರುವ ಸ್ವಭಾವದವನಲ್ಲ. ಸಾಹೇಬನ ಡ್ರೈವರ್ ಮುಸಲ್ಮಾನ. ಅವನಿಗೆ ಖುರಾನಿನ ಮೇಲಾಣೆ ಇಟ್ಟು ಎಲಡಿಕೆ ತಿನ್ನಿಸಿದ. ಸರಿ, ಒಂದು ಬಾರಿ ಅಧಿಕಾರಿ ಕಟಿಹಾರಿನಿಂದ ಹಿಂತಿರುಗುತ್ತಿದ್ದಾಗ ಕಮರುದ್ದೀನನ ಮನೆಯ ಮುಂದೆ ಸರಿಯಾಗಿ ಕಾರು ಕೆಟ್ಟುಹೋಯಿತು. ರಾತ್ರಿ ಹತ್ತು ಗಂಟೆಯಲ್ಲಿ ಸಾಹೇಬರು ಎಲ್ಲಿಗೆ ಹೋಗುತ್ತಾರೆ.... ಮುಂದೆ ಕಮರುದ್ದೀನ್ ಕಣ್ಣುಮುಚ್ಚಿಕೊಂಡು ಬ್ಲಾಕ್ ಮಾಡಲಾರಂಭಿಸಿದ. ಒಂದು ಬಾರಿ ಪೂರ್ಣಿಯ ಮೀಟಿಂಗಿನಲ್ಲಿ ಕಾಂಗ್ರೆಸ್ಸಿನ ಖುಶಾಯು ಬಾಬು ಜಿಲ್ಲಾಧಿಕಾರಿಯ ಹತ್ತಿರ ಹೇಳಿದ:

"ಜನ ತುಂಬಾ ದೂರು ಕೊಡ್ತಿದ್ದಾರೆ." ಕಮರುದ್ದೀನ್ ನಗುತ್ತಾ ಕೇಳಿದ:

"ಹಿಂದೂ ಜನರೋ, ಮುಸಲ್ಮಾನರೋ?" ಜಿಲ್ಲಾಧಿಕಾರಿ ಅಂದುಕೊಂಡ:

"ಕಮರುದ್ದೀನ್ ಬಾಬು ಲೀಗಿನ ಸದಸ್ಯ. ಆದ್ದರಿಂದಲೇ ಜನ ಸುಳ್ಳು ಸುಳ್ಳೇ ದೋಷಾರೋಪಣೆ ಮಾಡುತ್ತಾರೆ."

ಈ ಬಾರಿ ಬಾಲದೇವ ಸಾಮಾನುಗಳನ್ನು ತೆಗೆದುಕೊಂಡು ಹೋಗ ಬೇಕಾಗಿತ್ತು. ಬಾಲದೇವ ವಿದೇಶೀ ಬಟ್ಟೆಗಳನ್ನು ಹೇಗೆ ಕೊಳ್ಳುತ್ತಾನೆ? ಖದ್ದರನ್ನು ಬಿಟ್ಟರೆ ಬೇರೆ ಬಟ್ಟೆಯನ್ನು ಅವನು ಕೈಯಿಂದಲೂ ಮುಟ್ಟುವು ದಿಲ್ಲ.... ಮುಟ್ಟುತ್ತಾನೆ. ಮುಟ್ಟೋದರಲ್ಲೇನೂ ತಪ್ಪಿಲ್ಲ....

"ಜೈ, ಗಾಂಧೀ ಮಹಾತ್ಮರಿಗೆ ಜಯವಾಗಲಿ, ನಾಳೆ ಕಣಜ ತೆರೆಯುತ್ತದೆ. ಕಳೆದ ವರ್ಷ ಆ ದಿನ ಜಾಲಿಮಸಿಂಹನ ನೃತ್ಯವಿತ್ತು. ಜಾಲಿಮಸಿಂಹ 'ಡೋಮ' ಜಾತಿಯ ಹೆಂಗಸನ್ನು ಮದುವೆಯಾಗಿದ್ದ.. ಆದರೆ ಈ ಬಾರಿ ಕೀರ್ತನೆ ನಡೆಯ ಬೇಕು. ಸ್ವರಾಜ್ಯದ ಕೀರ್ತನೆ. ವೈರಲೆಸ್ ಹೇಳುತ್ತಿದ್ದ—ಈ ಬಾರಿ ವಿದ್ಯಾ ಪತಿ ನೃತ್ಯ ನಡೆಯುತ್ತದಂತೆ. ಡಾಕ್ಟರು ವಿದ್ಯಾಪತಿ ನೃತ್ಯ ನೋಡಬೇಕಂತೆ.... ತಹಸೀಲ್ದಾರರು ಅದನ್ನು ಕೇಳಿ ನಕ್ಕೂ ನಕ್ಕೂ ಸುಸ್ತಾದರು. ಡಾಕ್ಟರಿಗೆ ಎಷ್ಟೋ ತಿಳುವಳಿಕೆ ಹೇಳಿದರು: ಡಾಕ್ಟರ್, ಅದೊಂದು ಹಳೆಯ ನಾಟ್ಯ. ತುಂಬಾ ಹಾಸ್ಯ ಇರುತ್ತದೆ." ಆದರೂ ಡಾಕ್ಟರ್ 'ವಿದ್ಯಾಪತಿಯನ್ನೇ ಮಾಡಿಸಿ' ಎಂದರು. ಪಾಸ್ವಾನ ಪಂಗಡದ ಅಬಡೂವಿಗೆ ಹೇಳಿಕಳುಹಿಸಿ ಆಗಿದೆ. ಅಬಡು ನಾಟ್ಯಕ್ಕೆ ಮೂಲ, ಅಂದರೆ ಅವನೇ ಮ್ಯೂಸಿಕ್ ಡೈರೆಕ್ಟರ್.

ಕಾಳೀಚರಣನ ಕೀರ್ತನೆ ನಡೆಯುವುದಿಲ್ಲವೇನು? ಪರವಾಗಿಲ್ಲ, ಡಾಕ್ಟರಿಗೆ ಒಂದು ದಿನ ಕೀರ್ತನೆಯನ್ನು ಕೇಳಿಸಿದರಾಯಿತು.

ಬಾಲದೇವನಿಗೆ ಡಾಕ್ಟರ ಬುದ್ಧಿಯನ್ನು ಕಂಡು ಆಶ್ಚರ್ಯ....ವಿದ್ಯಾಪತಿ ನೃತ್ಯವನ್ನು ಏನು ನೋಡುತ್ತಾರೋ: ಬಹಳ ಕೆಟ್ಟ ನಾಟ್ಯ. ಮರ್ಯಾದಸ್ಥರಾರೂ ಅದನ್ನು ನೋಡುವುದಿಲ್ಲ. ಕೆಟ್ಟ ಕೆಟ್ಟ ಹಾಡುಗಳು. ನಾಟ್ಯವನ್ನೇ ನೋಡ ಬೇಕೆಂದು ಇಷ್ಟವಿದ್ದರೆ ತಹಸೀಲ್ದಾರರಿಗೆ ಹೇಳಿ ಮಿಸರಬನಿ ಹಳ್ಳಿಯಿಂದ ನಾಟಕ ಕಂಪನಿಯನ್ನು ಕರೆಸಿದ್ದರಾಗಿತ್ತು. ಬಂದು ಹೋಗುವುದಕ್ಕೆ, ಇಪ್ಪತ್ತೈದು ಜನಕ್ಕೆ ಊಟ ಹಾಕುವುದಕ್ಕೆ ತಗಲುವ ಖರ್ಚನ್ನು ಕೊಡುವುದು ತಹಸೀಲ್ದಾರರಿ

ಗೇನೂ ಕಷ್ಟದ ಕೆಲಸವಲ್ಲ. ಹಳ್ಳಿಯವರು ನೋಡಿದ್ದರೆ, ಅವರ ಕಣ್ಣಾದರೂ ತೆರೆಯುತ್ತಿತ್ತು. ಮಿಸರಬನಿಯ ನಾಟಕ ಕಂಪನಿ ಪ್ರಸಿದ್ಧವಾದುದು ಮಹಾಧೀರ್ ದುರ್ಯೋಧನನ ವೇಷ ಧರಿಸಿ, ಕೈಯಲ್ಲಿ ಕತ್ತಿ ಹಿಡಿದು ಗರ್ಜಿಸುತ್ತಾ ಬಂದರೆ ಒಂದು ಹರಿದಾರಿ ದೂರ ಅವನ ಧ್ವನಿ ಸ್ಪಷ್ಟವಾಗಿ ಕೇಳುತ್ತದೆ—

"ಸಾಕು ನಿಲ್ಲಿಸು ಈ ಮೃದಂಗ ವಾದ್ಯಗಳನ್ನು, ನನಗೆ ಇಷ್ಟವಾಗುವುದಿಲ್ಲ."

ಧಿನ್ನಾ ಧಿನ್ನಾ ಧಿನ್ನಾ ನಿನ್ನಾ ನಿನ್ನಾ:
ಧಿನ್ ಡಕ್ ಧಿನ್ನಾ, ಧಿನ್ ತಕ ಧಿನ್ನಾ:

ವಿದ್ಯಾಪತಿ ನಾಟ್ಯದ ಜನನಿಕೆ ಮೇಲೇಳಲು ಆರಂಭವಾಗಿತ್ತು.

ಧಿನಕ್ ಧಿನಕ್ ಧಾ ತಿರಕಿಟ್ ಧಿನ್ನಾ:
ಧಿನಕ್ ಧಿನಕ್ ಧಾ ತಿರಕಿಟ್ ಧಿನ್ನಾ :

ಹಳ್ಳಿಯ ಜನರೆಲ್ಲಾ ತಹಸೀಲ್ದಾರರ ಕಣಜದ ಬಳಿ ಒಂದುಗೂಡಿದ್ದರು ಶಾಮಿಯಾನ ಹಾಕಿದ್ದರು. ಶಾಮಿಯಾನ ಭರ್ತಿಯಾಗಿತ್ತು. ಡಾಕ್ಟರ್ ಸಿಂಘಜೀ, ಖೆಲಾವನಸಿಂಹ ಕುರ್ಚಿಗಳ ಮೇಲೆ ಕುಳಿತಿದ್ದರು. ಕಾಳೀಚರಣ ತನ್ನ ಗುಂಪಿನವರೊಂದಿಗೆ ಸಿದ್ಧವಾಗಿದ್ದ. ಜೋಯಿಸರು ಮಾತ್ರ ಬಂದಿರಲಿಲ್ಲ. ಸಿಂಘಜೀ ಹೇಳಿದರು : "ಈವತ್ತೂ ಅವರಿಗೆ ಹಲ್ಲು ನೋವಂತೆ, ಅಣ್ಣಾ" ಇದನ್ನು ಕೇಳಿ ಎಲ್ಲರೂ ಗಟ್ಟಿಯಾಗಿ ನಕ್ಕರು. ಜೋಯಿಸರು ಬರದೇ ಇದ್ದುದರ ಕಾರಣ ಎಲ್ಲರಿಗೂ ತಿಳಿದಿತ್ತು—ಅವರ ಮಗ ನಾಮಲರ್ಕೈನ್‌ನೂ 'ವಿದ್ಯಾಪತಿ' ನಾಟ್ಯದಲ್ಲಿ ಪಾತ್ರಧಾರಿ.····ಬ್ರಾಹ್ಮಣ ಕುಣಿಯುವುದೂ····ಗಾಣಿಗ ಕೂತು ತಮಾಷೆ ನೋಡುವುದು ! ರಾಮನಾರಾಯಣ ಕುಪುತ್ರ ಎನ್ನಿಸಿಕೊಂಡ. ಶಿವ, ಶಿವಾ····ಬಾಲದೇವ ಬಂದಿಲ್ಲ.....ಮರ್‍ಯಾದಸ್ಥರ್‍ಯಾರೂ ವಿದ್ಯಾಪತಿಯನ್ನು ನೋಡುವುದಿಲ್ಲ. ಈಗ ಮೃದಂಗದಲ್ಲಿ 'ಚಲಂತೀ' ಆರಂಭವಾಯಿತು :

ತಿರಕಿಟ ಧಿನ್ನಾ, ತಿರಕಿಟ ಧಿನ್ನಾ :
ಧಿನ್ ತಕ್ ಧಿನ್ನಾ, ಧಿನ ತಕ ಧಿನ್ನಾ :
ಧಿನಕ್ ಧಿನಕ್ ಧಾ
ಧಿಕ್ ಧಿಕ್ ತಿನ್ನಾ :

"ಓ····ಹೋ····ವಿದೂಷಕ ಬಂದ :" ವಿದೂಷಕ ಬಂದ. ಗುಂಪಿನಲ್ಲಿ ನಗುವಿನ ಅಲೆಯೇ ಎದ್ದಿತು. ನೂರಾರು ಮುಕ್ತ ಹೃದಯಗಳ ನಗು··· ಕಾಲಿನ ಗೆಜ್ಜೆಗಳ ಝುಣತ್ಕಾರ :

ಮುಖಕ್ಕೆ ಸುಣ್ಣ ಮಸಿ ಬಳಿದುಕೊಂಡು, ಹರಕಲಾದ ಹಳೆಯ ಪೈಜಾಮಾ ತೊಟ್ಟು ಲೋಕಾಯದಾಸ ವಿದೂಷಕನಾಗಿದ್ದ. ಅವನೊಬ್ಬ ಹುಟ್ಟು ವಿದೂಷಕ. ದೇವರು ಅವನನ್ನು ವಿದೂಷಕನನ್ನಾಗೇ ಹುಟ್ಟಿಸಿದ್ದ. ಮೇಲ್ತುಟಿ ತ್ರಿಭುಜಾಕಾರದಲ್ಲಿ ಕತ್ತರಿಸಿಹೋಗಿತ್ತು. ಮುಂದಿನ ಹಲ್ಲು ಸದಾ ಹೊರಗೆ ಇಣುಕಿ ನೋಡುತ್ತಿತ್ತು. ಸಿಡುಬು ತಾಯಿ ಒಂದು ಕಣ್ಣನ್ನೂ ಕಿತ್ತುಕೊಂಡಿದ್ದಳು. ಮಾತನ್ನು ಜೋಡಿಸುವುದರಲ್ಲಿ ಪಂಡಿತ:

"ಓ, ಹೋ ನಾಯಕರೇ."

"ಏನು?"

"ಪಟಕ್ ಪಟಕ್ ಅಂತ ಇದೇನು ಬಡಕೊಳ್ತಿದೆ?"

"ಅದು ಮೃದಂಗ, ಇದು ತಾಳ, ಇದು ಖಂಜರ."

"ಅದೇನೋ ಅರ್ಥವಾಯ್ತು. ಆದರೆ ಧಿಡಿಗ್ ಧಿಡಿಗ್ ಅಂತ ಬಾರಿಸ್ತಿದಾರಲ್ಲಾ ಏನದು?"

"ನಾಟ್ಯ ನಡೆಯುತ್ತೆ—ನಾಟ್ಯ. ವಿದ್ಯಾಪತಿ ನಾಟ್ಯ."

"ಓ, ನಾನಂದುಕೊಂಡೆ 'ಹರಾಜು' ನಡೆಯುತ್ತೆ. ಅದಕ್ಕೇ ಡೋಲು ಬಡೀತಿದಾರೇ ಅಂತ—

ಧಿನ್ ತಾಕ್ ಧಿನ್ನಾ, ಧಿನ್ ತಾಕ್ ಧಿನ್ನಾ :
ಅಹೆ : ಉತ್ತರಹಿ ರಾಜ ಸೆ ಆಯೇಲ ಹೇ ನಟುಕುವಾ ಕಿ ಅಹೆ ಮೈಯಾ.
ಕಿ ಅಹೆ ಮೈಯಾ ಸರಸೋತಿ ಹೈ ಪರಥಮೇ ಬನ್ನೋನಿ ಹೇ ತೋಹಾರ್ :
····ಹಮುಹೂಂ ಮೂರಖ ಗಂವಾರ್ ಕಿ ಅಹೆ ಮೈಯಾ, ಸರೋಸತೀ,
ಭೂಲಲ್ ಅಬರ ಜೋಡಿಕೆ ಅಹೆ ಮೈಯಾ, ಕಂಠೆ ಲೀಹೈ ಹೇ ಬಾಸ್ :

ಉತ್ತರದಿಂದ ನಟರು ಬಂದಿದ್ದಾರೆ; ತಾಯೀ, ಸರಸ್ವತೀ ಅನುಗ್ರಹ ಮಾಡು. ನಾವಂತೂ ಮೂರ್ಖ ಹಳ್ಳಿಯವರು, ನಮ್ಮ ತಪ್ಪನ್ನು ಮನ್ನಿಸಿ, ನಮ್ಮ ಧ್ವನಿಗೆ ಶಕ್ತಿಯನ್ನು ಕೊಡು.

"ಓ····ಹೋ ನಾಯಕರೇ."

ವಿದೂಷಕ ಜೋರಾಗಿ ಕಿರುಚಿದ. ತಾಳವು ನಿಂತಿತು. ತಾಳ ನಿಲ್ಲುವ ಹೊತ್ತಿಗೆ ಸರಿಯಾಗಿ ವಿದೂಷಕ ಕೂಗಿಕೊಳ್ಳಬೇಕು. ಆದ್ದರಿಂದ ಮೃದಂಗದ ತಾಳ ಜ್ಞಾನ ವಿದೂಷನಿಗೆ ಇರಲೇಬೇಕು.

"ನೀನಂತಹ ಮೂರ್ಖನಯ್ಯಾ?"

"ನಾಯಕರೇ, ನೀವೆಲ್ಲಾ ಯಾರಿಗೆ ವಂದಿಸುತ್ತಿದ್ದೀರಿ?"

ಹ ಹ ಹ ಹ ಹಾ :—ನಗೆಯ ಎರಡನೆಯ ತೆಳುವಾದ ತೆರೆ ಮೇಲೆದ್ದಿತು.

"ಮೂರ್ಖ, ಕೇಳಿಸಲಿಲ್ವೇನು: ಸರಸ್ವತಿಮಾತೆಗೆ ವಂದಿಸುತ್ತಿದ್ದೇವೆ."

"ಈ ಸರಸ್ಸೂ ಸುರತೀ····ಸುರ····ಸುರಸ್ಸತಿಯನ್ನು ನೀವು ನೋಡಿದ್ದೀರೇನು?····ನನ್ನನ್ನು ಮೂರ್ಖ ಎನ್ನುತ್ತೀರಲ್ಲಾ? ನೀವೇ ಮೂರ್ಖರು. ಸರಸ್ವತಿ ವಂದನೆಯನ್ನು ಮಾಡಬೇಕಾದವರು ಪಂಡಿತರು."

ಗುಂಪಿನಲ್ಲಿ ನಗುವೆದ್ದಿತು. "ಹಾಗಾದರೆ ನಾವು ಯಾರನ್ನು ವಂದಿಸಬೇಕು?"
"ನೀನೊಬ್ಬ ಬೆರಕೇ ತುಪ್ಪ. ಸಮಾರಾಧನೆಯ ದಿನ ಆ ತುಪ್ಪದಲ್ಲಿ ಕರಿದ ಪೂರಿ ತಿಂದಿದ್ದರಿಂದ ಹತ್ತು ದಿನ ನಮಗೆ ಹೊಟ್ಟೆ ಕೆಟ್ಟಿತ್ತಲ್ಲ'····ನೀನೂ ಯಾವುದರ ಬೆರಕೆಯೂ ಇಲ್ಲದ ಶುದ್ಧ ಮೂರ್ಖ ಅನ್ನಿಸುತ್ತಿದೆ···ಅಷ್ಟೂ ತಿಳಿಯೋದಿಲ್ವೇನು? ಕೇಳು ವಾದ್ಯದವರಿಗೆ ಸ್ವಲ್ಪ ನುಡಿಸೋದಕ್ಕೆ ಹೇಳು. ಧಿನಕ್ ಧಿನ್ನಾ ತಿರಕಿಟ ಧಿನ್ನಾ:

'ಅರೆ ದಾಲ್ ಬಂದೋ, ಭಿತ್ ಬಂದೋ ಸಾಸ್ ಬಂದೋ ಬಧುವಾ,'
(ಬೇಳೆಗೆ ವಂದಿಸಿ, ಅನ್ನಕ್ಕೆ ವಂದಿಸಿ, ಸೊಪ್ಪಿಗೆ ವಂದಿಸಿ ಬಂಧುಗಳೇ) "ಇದೆಲ್ಲಾ ಹಸೀ ಪದಾರ್ಥಗಳಾದುವು, ಸ್ವಾಮಿ. ಸ್ವಲ್ಪ ಪಕ್ವ ಪದಾರ್ಥಗಳನ್ನು ಸೇರಿಸಿ··"
"ಅರೆ ಚೂಡಾ ಬಂದೋ, ಭೂಜಾ ಬಂದೋ, ರೋಟೀ ಬಂದೋ ಮಡವಾ."

(ಅವಲಕ್ಕಿಗೆ ವಂದಿಸಿ, ಹುರಿಗಾಳಿಗೆ ವಂದಿಸಿ, ರೊಟ್ಟಿಗೆ ವಂದಿಸಿ ಮೂರ್ಖರೇ.)

"ಈಗೊಂದಿಷ್ಟು ಹಣ್ಣುಗಳು, ಸ್ವಾಮೀ."

"ಅರೆ ಗುಲರ್ ಬಂದೋ, ಡುಮುರ್ ಬಂದೋ, ಜಾರ್ ಬಂದೋ ಅಲ್ಲುವಾ."

ಹಾ, ಹಾ, ಹಾ, ······ನೂರಾರು ಜನರ ನಗೆ: "ಹಲ್ ಬಂದೋ, ಬೈಲ್ ಬಂದೋ ಔರ್ ಬಂದೋ ಗಯಿವಾ."

(ನೇಗಿಲಿಗೆ ವಂದಿಸು, ಎತ್ತಿಗೆ ವಂದಿಸು, ಹಸುವಿಗೆ ವಂದಿಸು.)

"......ಈಗ ಎಲ್ಲದಕ್ಕಿಂತ ದೊಡ್ಡ ಭಗವಂತ:" ವಿದೂಷಕ ಮುಖ ಸೊಟ್ಟಗೆ ಮಾಡಿದ.

"ಚಟಾಕ್ ಪಟಪಟ್ ದಡತ ಸಿರ ಪರ ಭಾಗತ್ ಬಾಪಕೆ ಭೂತವಾ
ಸಬಸೆ ಬಢಿ ಕೆ ಕೋಹರಿ ಬಂದೋ ಮಾಲಿಕ್ ಬಾಬೂಕ ಜೂತವಾ"

ಚಟ ಪಟವೆನ್ನುತ್ತಾ ತಂದೆಯ ಭೂತ ತಲೆಯ ಮೇಲೆ ಓಡುತ್ತದೆ. ಎಲ್ಲದಕ್ಕಿಂತ ದೊಡ್ಡದು ಮಾಲೀಕರ ಚಪ್ಪಲಿ.

ವಿದೂಷಕ, ಶೇಲಾವನ್ನನ ಕಾಲುಗಳಲ್ಲಿದ್ದ ಚಪ್ಪಲಿಗೆ ನಮಸ್ಕಾರ ಮಾಡಿದ.

ಡಾಕ್ಟರಂತೂ ಆಶ್ಚರ್ಯದಿಂದ ಮೂಕರಾಗಿದ್ದರು. ನಾಟ್ಯದಲ್ಲಿ ಮೈಮರೆತು ಬಿಟ್ಟಿದ್ದರು....ನಾಟ್ಯ ಮುಂದುವರಿಯಿತು. ಇದೆಲ್ಲಾ ಹಳೆಯ ಸಂಪ್ರದಾಯ ಗಳು....

...—ಧಿನ್ನಾ ಧಿನ್ನಾ, ಧಿನ್ನಾ ತಿನ್ನಾ:

ಮೇಳದವರು ಪ್ರಾರಂಭ ಮಾಡಿದರು.

ಆಹೆ ಲೇಲ ಪರದೇಶ ಪರಮ ಸುಕುಮಾರೀಹೇ,
ಹಂಸ ಗಮನ ಬಿರಖಾಮಾನ ದೂಲಾರೀ ಹೇ.

ಸುಕುಮಾರಿಯನ್ನು ಪರದೇಶಕ್ಕೆ ಕರೆದುಕೊಂಡುಹೋದರು. ಹಂಸ ಗಮನೆ ಬಿರುಖೊಮಾನನ ಪ್ರಿಯತಮೆಯನ್ನು ಕರೆದುಕೊಂಡುಹೋದರು.

ಮೃದಂಗದ ತಾಳಕ್ಕನುಗುಣವಾಗಿ ಹೆಜ್ಜೆ ಹಾಕುತ್ತಾ ನಟ ಪ್ರವೇಶಿಸಿದ.

ನೃತ್ಯದ ನಡಿಗೆಯಲ್ಲೇ ಮುಂದೆ ಬಂದು ಎಲ್ಲದಕ್ಕಿಂತ ಮೊದಲು ಮೃದಂಗಕ್ಕೆ ಪ್ರಣಾಮ ಮಾಡಿದ, ಅನಂತರ ತಾಳಗಳಿಗೆ. ಕೊನೆಯದಾಗಿ ಸಂಗೀತ ನಿರ್ದೇಶಕ ಅಬಡೂವಿನ ಕಾಲು ಮುಟ್ಟಿ ನಮಸ್ಕಾರ ಮಾಡಿದ. ಪೋಲಿಯಾ ಪಂಗಡದ ಚಿತ್ತದಾಸನ ಮಗ ಚಲಿತ್ತರ ಹೆಣ್ಣುಮಕ್ಕಳಂತೆ ಉದ್ದವಾಗಿ ಕೂದಲು ಬಿಟ್ಟಿದ್ದ. ಮೂಗಿನಲ್ಲಿ ಸದಾ ಬುಲಾಕನ್ನೂ ಹಾಕಿ ಕೊಂಡಿರುತ್ತಾನೆ. ಅವನೊಬ್ಬ ನಟ. ಅಲಂಕಾರ ಮಾಡಿಕೊಂಡು ಬಂದರೆ ಬ್ರಾಹ್ಮಣ ಸ್ತ್ರೀಯಂತೆಯೇ ಕಾಣುತ್ತಿದ್ದ....ಕಿವಿಯ ಓಲೆ ಯಾರದ್ದೋ? ಕಮಲಿಯದೆಂದು ತೋರುತ್ತದೆ....ಭಲೇ ಹುಡುಗ: ಈವತ್ತು ಈ ಕಿವಿ ಯೋಲೆಗಳನ್ನು ನೀನು ಭಕ್ಷೀಸಾಗಿ ಪಡೆದರೆ ಆಗ ನಿಜವಾದ ವಿದ್ಯಾ ಪತಿಯ ಶಿಷ್ಯ. ಉಚಿತದಾಸ ಮೃದಂಗ ನುಡಿಸುತ್ತಿದ್ದ. ಏನೆಂದೆ ?—ನಿಜವಾದ

ವಿದ್ಯಾಪತಿಯ ಶಿಷ್ಯನೇ ?····ನಾನು ಸಹರಸದ ಮೃದಂಗ ವಿದ್ವಾನ್ ಗೈನೂವಿನ ಶಿಷ್ಯ.····ಗೊತ್ತಿಲ್ಲವೇನು ? ಒಂದು ಬಾರಿ ಗೈನು ಮೇಳದವರೊಡನೆ ಎಲ್ಲಿಂದಲೋ ನೃತ್ಯ ಮುಗಿಸಿಕೊಂಡು ಬರುತ್ತಿದ್ದ. ಅವನ ಮೇಳದಲ್ಲಿ ಪ್ರತಿಯೊಬ್ಬನ ಹತ್ತಿರ ನೂರು ನೂರು ರೂಪಾಯಿ ನಗದು ಹಣ, ಪಂಚೆ ಇರುತ್ತದೆಂದು ಕಳ್ಳರಿಗೆ ಗೊತ್ತಿತ್ತು. ಸರಿ, ಮರದ ಮರೆಯಲ್ಲಿ, ಕಳ್ಳರು, ಗೈನುವನ್ನು ಸುತ್ತುಗಟ್ಟಿದರು. ಬಹುಶಃ ಅವನು ಮೂತ್ರ ವಿಸರ್ಜನೆಗಾಗಿ ಸ್ವಲ್ಪ ಹಿಂದುಳಿದಿದ್ದ ಅಂತ ಕಾಣುತ್ತೆ. ಗೈನೂ ಏನುಮಾಡಿದ ಗೊತ್ತೇನು ? ಹೇಳಿ····ಗೊತ್ತಿಲ್ವೇನು : ಮೃದಂಗದ ಮೇಲೆ ಒಂದು ಬಾರಿ ಹೊಡೆದ. ಬಲಗಡೆ ಭಾಗದಲ್ಲಿ ಬೆರಳುಗಳು ಜೀರುಬುಗುರಿಯ ಹಾಗೆ ಕುಣಿಯತೊಡಗಿದವು—'ಧುಕಿಟ ಧಿನ್ನಾ, ನಾನಿನ್ನು ನಾ ನಿನ್ನಾ ನಾ ನಾ!, ಮೃದಂಗದ ಒಣಚರ್ಮವೂ ಜೀವ ತಳೆದಂತೆ ಕಂಡಿತು. ಮನುಷ್ಯ ಮಾತನಾಡುವಂತೆಯೇ ಸ್ಪಷ್ಟವಾಗಿ ಶಬ್ದಗಳು ಕೇಳಿದವು: ಮರದ ಮರೆಯಲ್ಲಿ ಕಳ್ಳರು ಸುತ್ತುಗಟ್ಟಿದ್ದಾರೆ,····ಹೂಂ ಅಖಡೂದಾಸನ ಮೇಳದವರು ಅಂದರೆ ಹುಡುಗಾಟವಲ್ಲ....ಕುಣಿ ಮಗೂ····

> ಫಿರಿನಾಗಿ ಫಿರಿನಾಗಿ ಫಿರಿನಾಗಿ ಧಿನತಾ :
> ಅಹೆ ತನ ಮನ ಬದನ ಸಹ ಜೋರ್ ಹೈ,
> ಅಹೆ ದಾಮಿನೀ ಊಪರ್····

ತನುಮನಗಳೆಲ್ಲಾ ಕಳ್ಳನೇ, ಮೇಲೆ ಮಿಂಚು ಮಿಂಚುತ್ತಿದೆ.

"ಹೋ····ಹೋ····" ಎಂದು ಕೂಗುತ್ತಾ ವಿದೂಷಕ ಮುಖವನ್ನು ವಿಕಾರವಾಗಿ ಮಾಡಿದ.

> ಧಿನಕ್ ಧಿನಕ್ ತಾ, ಧಿನಕ್ ಧಿನಕ್ ತಾ····
> ಅಹೆ, ದಾಮಿನೀ ಊಪರ್ ಉಗಲಯ ಚಾನ್ ಹೈ.

ವಿದೂಷಕ ಮೂರ್ಛಿತನಾಗಿ ಕೆಳಗೆ ಬಿದ್ದುಬಿಟ್ಟ.

"ಅಯ್ಯೋ, ಏನಾಯ್ತು ?

"ಅಯ್ಯಯ್ಯೊ !"

"ಮಾತನಾಡಯ್ಯ. ಏನಾಯ್ತು ?"

"ನಾಯಕರೇ ಒಂದು ಮಾತು ಹೇಳಿ. ಬೇಗ ಹೇಳಿ ಆಕಾಶದಲ್ಲಿರೊ ಚಂದ್ರ ಭೂಮಿಗೆ ಇಳಿದು ಬಂದಿರೋದು ನಿಜಾ ಆದರೆ, ಭೂಮಿಯ ಚಂದ್ರ ಮೇಲಕ್ಕೆ ಹೋಗಬೇಕಾಗುತ್ತೇನು ?"

"ಏನಯ್ಯಾ? ಭೂಮಿ ಮೇಲೆ ಚಂದ್ರ ಇರ್ತ್ತಾನೇನು?" "ಇವರ ಮಾತು ಕೇಳಿದ್ರಾ. ಅದಕ್ಕೇ ನಾನಾಗ್ಲೇ ಹೇಳಿಪ್ದು ಬೆರಕೆ ತುಪ್ಪ ಅಂತ....ಈ ಸಜಿನೆ ರೈಲುಗಳಲ್ಲೂ ದೀಪ ಇರೋದಿಲ್ವಂತೆ. ಮೊದಲು ಬ್ಲಾಕ್ ಔಟ್, ಆಮೇಲೆ ಬ್ಲಾಕ್ ಮಾರ್ಕೆಟ್."

"ಮೂರ್ಖ ಕಟಿಹಾರದಲ್ಲಿ ಅಜ್ಜೀ ಮನೆಗೆ ಸದಾ ಹೋಗ್ತಿರ್ತ್ತಾನೆ. ರೈಲು ಗಾಡಿಯಲ್ಲೂ ತಪ್ಪು ಹುಡುಕ್ತಾನೆ. ವಕ್ರ ಮನುಷ್ಯನ ಕಣ್ಣಿಗೆ ಪ್ರಪಂಚವೆಲ್ಲಾ ವಕ್ರವಾಗೇ ಕಾಣುತ್ತೆ. ಅದೇನೋ ಹೇಳ್ತಾ ಇದಾನೆ ಕೇಳೋಣ, ಯಾರನ್ನು ಭೂಮಿಯ ಚಂದ್ರನನ್ನಾಗಿ ಮಾಡುತ್ತಾನೋ!

"ಓ ನಾಯಕರೇ, ಭೂಮಿಯು ಚಂದ್ರ ತನ್ನ ಮೂವತ್ತಾರು ಕಲೆಗಳ ಸಹಿತ ನಿಮ್ಮ ಮುಂದೆ ನಿಂತಿದ್ದಾನೆ. ಬೆಚ್ಚುತ್ತಿದ್ದೀರೇನು? ಸ್ವಲ್ಪ ಆರನೆಯ ದೀಪ ಹಚ್ಕೊಂಡು ನೋಡಿ."

ಮೂರ್ಖ ಚೆನ್ನಾಗಿ ಮಾತಾಡ್ತಾನೆ.

"ಆರನೆಯ ದೀಪ ಯಾವುದೂ ಅಂತ ಗೊತ್ತಾಗ್ಲಿಲ್ವೇನು? ಪೆಟ್ರೋ ಮ್ಯಾಕ್ಸ್ ದೀಪವೇನೋ ಇಲ್ಲೇ ಇದೆ. ಪಂಚ ಪರಮೇಶ್ವರರ ಮಧ್ಯೆ ಉರೀತಿದೆ. ....ಆರನೆಯ ದೀಪ ಈ ನಡುವೆ ನಿಮ್ಮ ಮನೆಯಲ್ಲೇ ಉರಿಯುತ್ತಿರುತ್ತದೆ. ಎಣ್ಣೆ ಸಿಗೋದಿಲ್ಲ—ಸೆಣಬಿನ ದೊನ್ನೆಯಲ್ಲಿ ಬೆಂಕಿ ಹಾಕಿ ಕೈಲಿ ಹಿಡಿದು ನಿಂತಿರಿ. ಭಕ್ ಭಕ್ ಅಂತ ಗ್ಯಾಸ್ ಬತ್ತಿಯ ಹಾಗೇ ಉರಿಯುತ್ತೆ. ನಾನು ಈ ನಡುವೆ ಮಾಡೋದೇ ಹಾಗೆ....ಅದು ಹಾಗಿರಲಿ. ಪರಮೇಶ್ವರ ಸ್ವರೂಪರಾದ ಪಂಚರೇ, ನೀವೇ ಹೇಳಿ, ನಮಗಿಂತ ರೂಪವಂತರು ಇಲ್ಲಿ ಬೇರೆ ಯಾರಾದರೂ ಇದಾರೇನು?"

ಸಿಂಘಜೀ ಹೇಳಿದರು:

"ಇಲ್ಲ, ಇಲ್ಲ, ನೀನು ಕಾಮದೇವನ ಅಪರಾವತಾರ," ಕುಣಿಯಯ್ಯಾ: ಈವತ್ತು ಉತ್ಸಾಹ ತುಂಬಿದೆ: ಮನಃಪೂರ್ತಿ ಕುಣೀ, ಮಗೂ!

ಧಿನಾಗಿ ಧಿನ್ನಾ, ತಿರನಾಗಿ ತಿನ್ನಾ
ಧಿನಕ್ ಧಿನತಾ ತಿಟಿಕತ್ ಗ—ದ—ಧಾ:....
ಆಹೆ ಚಲಹು ಸಖಿ ಸುಖಧಾಮು, ಚಲಹು:
ಆಹೆ ಕನ್ಹೈಯಾ ಜಹಾಂ ಸಖಿ ಹೇ
ರಾಸ ರಚಾ ಓಲ್ ಹೇ: ಚಲಹು ಹೇ ಚಲಹು:

····ಧಿನ್ನಾ ಧಿನ್ನಾ ನಾ ಧಿ ಧಿನ್ನಾ :
ಅಹೆ ಸಿರ್ ಬಿರನಾಬನ್ ಕುಂಜ ಗಲಿನ ಮೇಂ.
ಕಾನ ಚರಾವತ ಧೇನು,
ಅಹೆ ಮುಡಲೀ ಜ ಚೇಡೆ ಬೀರೀಥೀ ಕೆ ಓಟೆ,
ಅಹೆ ಅಬ ಗ್ರಿಹೆ····
····ಧಿರಿನಾಗಿ ಧಿರಿನಾರಿ ಧಿರಿನಾಗಿ····
ಅಹೆ : ಅಬ್ ಗ್ರಿಹೆ ರಹಲೋ ನಿ ಜಾಯೋ, ಚಲಹು ಹೇ ಚಲಹು :

ಹೇ ಸಖಿ, ನಡಿ ಹೋಗೋಣ. ಶ್ರೀಕೃಷ್ಣ ರಸಲೀಲೆಯನ್ನಾಡುತ್ತಿರುವ ಜಾಗಕ್ಕೆ ಹೋಗೋಣ. ವ್ರಜನಾಥ ಕೃಷ್ಣ ಗೋಕುಲದ ಗಲ್ಲಿಗಳಲ್ಲಿ ಹಸುಗಳನ್ನು ಮೇಯಿಸುತ್ತಿದ್ದಾನೆ. ಮುರಳಿಯೂದುತ್ತಿರುವ ಅವನ ತುಟಿಗಳು ಓರೆಯಾಗಿ ಕಾಣುತ್ತಿವೆ. ಇನ್ನು ಮನೆಯಲ್ಲಿರುವುದು ಸಾಧ್ಯವಿಲ್ಲ. ಸಖಿ ನಾವು ಹೋಗೋಣ ನಡಿ.

ತತವಾ ಪಂಗಡದ ಹೆಂಗಸರ ಮಧ್ಯೆ ಕುಳಿತಿರುವ ಪೂಲಿಯಾಳ ಮನಸ್ಸು ಸಿಡುಗುಟ್ಟುತ್ತದೆ :

....ಅಬ ಗ್ರಿಹೆ ರಹಲೋ ನಿ ಜಾಯೆ : (ಮನೆಯಲ್ಲಿ ಇರುವುದಕ್ಕಾಗು ವುದಿಲ್ಲ.)

ತಹಸೀಲ್ದಾರರ ಬಂಗಲೆಯ ಎದುರಿನ ಕಿಟಕಿ ತೆರದಿದೆ. ಕಮಲಿಯೂ ನೋಡುತ್ತಿದ್ದಾಳೆ. ನೋಡದೆ ಭಕ್ಷೀಸು ಕೊಡುವುದು ಹೇಗೆ?

"ನೋಡು ಮಗೂ. ಬುಗರೀ ಹಾಗೆ ಕುಣಿ. ಕಮಲದ ಹೂವಿನ ಹಾಗೆ ಲಂಗದ ನೆರಿಗೆಗಳೆಲ್ಲಾ ಹರಡಿಕೊಳ್ಳಲಿ."

"ನಾಯಕರೇ ಒಂದು ಮಾತು ಹೇಳಿಹೋಗಿ. ಅವಳು ನನ್ನನ್ನು ಬಿಟ್ಟು ಎಲ್ಲಿಗೆ ಹೋಗ್ತಿದ್ದಾಳೆ? ಎಲ್ಲಾದ್ರೂ ಜಾತ್ರೆ ನಡೀತಿದೆಯೇನು? ಅಥವಾ ಸಂತರ್ಪಣೆಗೋ? ಅಥವಾ ಯಾರಾದರೂ ಬಟ್ಟೆಗಳನ್ನು ಹಂಚುತ್ತಿದ್ದಾರೋ?"

"ಅವಳು ನಿನ್ನ ಹತ್ತಿರಾನೇ ಬರ್‍ತಿದಾಳೆ. ನೀನೇ ಕೃಷ್ಣಕನೆಯ್ಯಾ ಅಲ್ಲವೇ ನಿನ್ನ ರೂಪವನ್ನು ಕಂಡು ಮೋಹಿತಳಾಗಿದ್ದಾಳೆ."

"ಓಹೋ, ಅದೇ ನಾನು ಅಂದ್ಕೊಂಡೆ—ನನ್ನನ್ನು ಬಿಟ್ಟು ಎಲ್ಲಿಗೆ ಹೋಗ್ತಿದಾಳೇ ಅಂತ. ನಾನೇ ಕೃಷ್ಣ. ಆದರೆ ಕೃಷ್ಣನ ತಂದೆ ಹೆಸರು ನಂದ. ನನ್ನ ತಂದೆಯ ಹೆಸರು ಉಜಾಡೂ ದಾಸ."*

* ಉಜಾಡೂ :—ಹಾಳುಮಾಡುವವನು.

"ಅಯ್ಯೋ ಗೂಬೆ. ನಿನ್ನ ತಂದೆ ಹೆಸರು ಉಜಾಗಿರದಾಸ.* ಆ ಹೆಸರನ್ನು ಕೆಡಿಸಿ ನೀನು ಹೇಳ್ತಿದೀಯಲ್ಲ :"

"ತಂದೆ ತಾಯಿ ಇಟ್ಟಿದ್ದೇನೋ ಉಜಾಗರದಾಸ ಅಂತಾನೇ. ಆದರೆ ಅವನು ಯಾವ ಮಾಲೀಕನ ಹತ್ತಿರ ಕೆಲಸಕ್ಕೆ ಹೋಗಲಿ, ಸ್ವಲ್ಪದಿನದಲ್ಲೇ ಆ ಮಾಲೀಕ ಅವನನ್ನು ಹೊಡೆದೂ ಬಡಿದೂ ಕೆಲಸದಿಂದ ಓಡಿಸಿಬಿಡ್ತಿದ್ದ. ಯಾಕೆಂದರೆ, ನನ್ನ ತಂದೆ ಹಸು ಎಮ್ಮೆಗಳನ್ನು ತೆಗೆದುಕೊಂಡು ಹೋಗಿ ಮಾಲೀಕರ ಹಸಿರು ತುಂಬಿದ ಗದ್ದೆಯಲ್ಲೇ ಮೇಯಲು ಬಿಟ್ಟು ನಿದ್ದೆ ಮಾಡಿಬಿಡುತ್ತಿದ್ದ. ಶ್ರಮಪಟ್ಟಿದ್ದ ಎತ್ತುಗಳು, ಹಸುಗಳು, ಯಾವ ಹಸುಗಳಿಂದ ಹಾಲು ಕರೆದು ಮಾಲೀಕರು ಬೆಣ್ಣೆ ತುಪ್ಪಗಳನ್ನು ತಿನ್ನುತ್ತಿದ್ದರೋ ಆ ಮೂಕ ಪ್ರಾಣಿಗಳಿಗೂ ಬೆಳೆಯಲ್ಲಿ ಪಾಲಿರಬೇಡವೇ? ತಿನ್ನು ಲಕ್ಷ್ಮೀ....ಆದ್ದರಿಂದಲೇ ಜನ ಅವನನ್ನು ಉಜಾಡೂ ದಾಸ (ಹಾಳುಮಾಡುವವನು) ಎಂದು ಕರೆಯೋದಕ್ಕೆ ಪ್ರಾರಂಭ ಮಾಡಿದರು."

ನಟ ಈಗ ಗಾಂಜಾ ಸೇವಿಸಿ ಬಂದಿದ್ದಾನೆ. ಇನ್ನು ಹೇಗೆ ಕುಣೀತಾನೆ ನೋಡ್ತಿರಿ.

ಘರನಾಗಿ ಧಿನ್ನಾ......
ಆಹೆ ಕುಂಜ ಭವನ ಸೆ ನಿಕಲಲ ಹೋ,
ಆಹೆ ಸಖಿ ಶೋಕಲ ಗಿರಧಾರೀ :

"ಓ ಹೋ, ಕಳ್ಳತನದಿಂದ ಮನೆಯಿಂದ ಹೊರಟು ತೋಟಕ್ಕೆ ಹೋಗ್ತೀಯೇನು? ರಾಸಲೀಲೆ ಆಡೋದಕ್ಕೆ. ಯಾರೂ ತಡೆಯೋದಿಲ್ವಾ? ಒಳ್ಳೇದಾಯ್ತು"

....ವಿದೂಷಕ ತನ್ನ ಪಾಡಿಗೆ ತಾನು ಬಡಬಡಿಸಿದ. ಸ್ತ್ರೀವೇಷಧಾರಿ ನಟ ಎರಡು ಕೈಗಳನ್ನು ಜೋಡಿಸಿ, ಹೆಡೆ ಎತ್ತಿದ ಗೋಧೀ ಹಾವಿನಂತೆ ತೂಗಾಡುತ್ತಾ, ಸೊಂಟದ ಆಧಾರದಿಂದ ಕುಳಿತ. ಭೂಮಿಯ ಮೇಲೆ ಲಂಗ ಕಮಲದ ಎಲೆಯಂತೆ ಹರಡಿಕೊಂಡಿತ್ತು.... ಪ್ರಾರ್ಥನೆ ನಡೆಯಿತು, ಭಲೇ ಹುಡುಗ: ಹಳ್ಳಿಯ ಹೆಸರನ್ನು ಉಳಿಸಿದೆ.

* ಉಜಾಗಿರ್ :—ಪ್ರಕಾಶಮಾನವಾದ.

ಆಹೆ, ಏಕ ಹಿ ನ—ಗ—ರ ಬಸೂ ಮಾಧವ ಹೋ,
ಆಹೆ ಜನಿ ಕರೂ ಬಟವಾ—ವಾ—ರೀ:
ಆಹೆ ಛೋಡೂ ಛೋಡೂ ಜದುಪತಿ ಆಂಚರ ಹೋ:
ಹೋ ಭಾಂಗತ ನ—ಬ ಮಾರೋ:

ಹೇ ಮಾಧವ. ಒಂದೇ ನಗರದಲ್ಲಿ ವಾಸಿಸು. ಸುಮ್ಮನೆ ಚೌಕಾಸೀ ಯಾಕೆ ಮಾಡುತ್ತೀ? ಹೇ ಯದುಪತಿ ನನ್ನ ಸೆರಗನ್ನು ಬಿಡು. ಸಣ್ಣ ರೆಂಬೆಗಳಿಂದ ನನ್ನನ್ನು ಹೊಡೆಯಬೇಡ.

"ಹೌದಣ್ಣಾ.... ಇದು ಕಂಟ್ರೋಲ್ ಯುಗ. ಬಟ್ಟೆ ಸಿಗೋದಿಲ್ಲ. ಸ್ವಲ್ಪ ಹುಷಾರಾಗಿ...."

ಅರೆ ಅಪಜಸ ಹೋಯಿತ ಜಗತ್ರ ಭರಿ ಹೋ:

(ಜಗತ್ತಿನಲ್ಲಿ ಅಪಯಶಸ್ಸಾಗುತ್ತದೆ.)

"ಓಹೋಹೋ ದೊಡ್ಡ ಕುಲಸ್ತ್ರೀ ಆಗಿಬಿಟ್ಟಳು"

—ವಿದೂಷಕ ಮಧ್ಯೆ ಮಧ್ಯೆ ಮಾತನಾಡುತ್ತಾನೆ.

ಆಜು ಪರೇಮ ರಖಿ ಲಯ ಲೀಹ ಹೋ,
ಆಹೆ ಪಂಥ ಭಾಡೂ ಝುಟಕಾರೀ

ನನ್ನ ಮೇಲೆ ಪ್ರೀತಿಯನ್ನಿಟ್ಟು ತಕ್ಷಣ ದಾರಿಯನ್ನು ಬಿಡು.

"ಮೊಸರೆಲ್ಲಾ ಸೇರಿಸ್ಕೊಳ್ಳೋ ಕೃಷ್ಣಾ."

ವಿದೂಷಕ ಕೂಗಿದ.

ಆಹೆ ಸಂಗ ಕೆ ಸಖಿ ಆಗು ಆಯಿಲ ಹೋ
ಆಹೋ ಕಾನಾ. ಹ—ಮಗಹೂ ಏಕಸರಿ ನಾರೀ....
ಭನಹಿಂ ವಿದ್ಯಾಪತಿ ಗಾವೋಲ್ಲ ಹೋ,
ಸುನು ಕುಲವಂತೀ ನಾರೀ.
ಹರಿ ಕೇ ಸಂಗ ಕಿಛು ಡರ್ ನಾಹಿಂ ಹೈ....

ಹೇ ಸಖಿ, ನನ್ನ ಜೊತೆ ಬಾ, ನಾನು ಒಂಟಿ ಹೆಂಗಸು, ಕೃಷ್ಣ ಬಂದಿದ್ದಾನೆ. ವಿದ್ಯಾಪತಿ ಹಾಡುತ್ತಾನೆ. ಹೇ ಕುಲೀನ ಸ್ತ್ರೀ ಕೇಳು. ಹರಿಯೇ ಜೊತೆಗಿರುವಾಗ ಯಾವ ಭಯ?

"ಹೌದೌದು. ಹರಿಯ ಸಂಗದಲ್ಲಿ ದೋಷವಿಲ್ಲ. ನಮ್ಮ ಸಂಗದಲ್ಲಾದರೆ ದೋಷ. ನಾವೇನಾದರೂ ರಾಸಲೀಲೆ ಆಡಿದರೆ, ಪಂಚಾಯಿತಿಯಿಂದ ನಮಗೆ ಪೊರಕೆಯ ಮತ್ತು ಚಪ್ಪಲಿಗಳ ಪೂಜೆ ಆಗುತ್ತೆ."

ಏನು? ಏನಂತೆ? ಡಾಕ್ಟರರ ನೌಕರ ಬಂದು ಏನು ಹೇಳುತ್ತಿದ್ದಾನೆ? ····ಕಮಲೀ ಕಿವಿಯ ಓಲೆಗಳನ್ನು ಕೊಟ್ಟುಬಿಟ್ಟಳೇ?···ಭಲೇ, ಹುಡುಗ· ಹೆಸರು ಗಳಿಸಿದೆ:····ದೀರ್ಘಕಾಲ ಬದುಕು.

ವಿದೂಷಕ ಯಾಕೆ ಹಿಂದುಳಿಯುತ್ತಾನೆ? ಇಂದು ಅವನೂ ಕುಣಿಯುತ್ತಾನೆ. ಸಭೆ ಒಳ್ಳೇ ಕಳೆ ಕಟ್ಟಿದೆ ಈವತ್ತು.

"ನಾಯಕರೇ, ನನ್ನ ದುಃಖವನ್ನು ನೋಡುವವರೂ, ಕೇಳುವವರೂ ಯಾರೂ ಇಲ್ಲ."

"ಏನಾಯ್ತು?"

ವಿದೂಷಕ ತಹಸೀಲ್ದಾರರ ಕಡೆ ಬೆರಳು ತೋರಿಸಿ ಅವರಿಗೆ ಹೆದರುತ್ತಿರುವಂತೆ ಮುಖ ಮಾಡಿ ಪ್ರಶ್ನಿಸಿದ: "ಹೇಗೆ ಹೇಳಲಿ?"

ತಹಸೀಲ್ದಾರರು ಹೇಳಿದರು: "ನನಗೆ ಅರ್ಥವಾಯ್ತು. ನೀನು ಹೇಳಯ್ಯಾ. ಪ್ರಪಂಚದಲ್ಲಿ ನಾನೊಬ್ಬನೇ ತಹಸೀಲ್ದಾರನೇನು? ನೀನು ಹೇಳೋದೂ ಸರಿಯಾಗೇ ಇದೆ. ಡಾಕ್ಟರ್ ಬಾಬು, ಈಗವನು ತಹಸೀಲ್ದಾರರ ತಮಾಷೆ ಮಾಡ್ತಾನೆ."

"ನಾಯಕರೇ, ನನಗೆ ಧೈರ್ಯ ಹೇಳೋರು ಯಾರೂ ಇಲ್ಲ. ವರಾಹ ಕ್ಷೇತ್ರದಲ್ಲಿ ಸರ್ಕಾರದವರು ಕೋಸೀ ಮಾತೆಗೆ ಅಣೆಕಟ್ಟು ಕಟ್ಟುತ್ತಿದ್ದಾರಂತೆ; ಆದರೆ ನನ್ನ ಹೃದಯವನ್ನು ಕಟ್ಟುವವರು ಯಾರೂ ಇಲ್ಲ."

"ಏನಾಯ್ತು ಹೇಳಯ್ಯ ಅಂದರೆ?"

"ಹಾಗಾದರೆ ಹೇಳುತ್ತೇನೆ. ಐವತ್ತು ವರ್ಷದಿಂದ ಸರ್ವೇ ಸೆಟಲಮೆಂಟ್ ವರ್ಷದಿಂದ." ಅಭ್ಯಾಸ····ಕೇಳಿ, ಕೇಳಿ, ಖಂಡಿತ ಹೊಸ ವಿಷಯ ಯಾವುದನ್ನೋ ಹೇಳ್ತಿದ್ದಾನೆ. ಇವನೂ ಈವತ್ತು ಇನಾಮು ಪಡೆದೇ ಪಡೀತಾನೆ.

"ವಾದ್ಯ ನುಡಿಸೋದಕ್ಕೆ ಹೇಳಿ."

**"ಅರಿ ಕೇನಾ ಕೇ ಬಾಂಧವ್ವೆ ರೇ ಧೀರಜಾ"**
**ಕೇನಾ ಕೇ ಬಾಂಧವ್ವೆ ರೇ:**

"ಸರ್ವೇ ಆರಂಭವಾದಾಗ"

**ದಸ್ ಸಹಾಥ್ ಕೆ ಲಗ್ಗಾ ಬನ್ನೈಲಕೆ**
**ಪಾಂಚೆ ಹಾಥ್ ನಪಾಯೀ:**

ಗಲ್ಲೀ—ಕುಚೀ ಸೇ ಹೋ ನಪಲಕ್ಕೈ,
ಢೀಪ್—ಢಾಪ್ ಸೇ ಹೋ ನಪಲಕ್ಕೈ,
ಘಾಟ—ಬಾಟ್ ಸೇ ಹೋ ನಪಲಕ್ಕೈ,
ಡರ್—ಪೋಖರ್ ಸೇ ಹೋ ನಪಲಕ್ಕೈ:

ಧೈರ್ಯವಾಗಿ ಇರುವುದು ಹೇಗೆ? ಪಟವಾರಿ ವಸೂಲಿಗೆ ಬಂದಿರುವಾಗ ಧೈರ್ಯದಿಂದಿರುವುದು ಹೇಗೆ? ಹತ್ತು ಕೈಯಳತೆಯ ಬೆತ್ತ ಹಿಡಿದು ಐದು ಕೈಯಳತೆ ಎಂದು ಅಳತೆ ಮಾಡಿದ ಇನ್ನೈದು ಕೈಯಳತೆ ಬಿಟ್ಟೇಹೋಯಿತು. ರಸ್ತೆ, ಘಟ್ಟ, ಬೀದಿ ಎಲ್ಲವನ್ನೂ ಆಡಂಬರದಿಂದ ಅಳೆದಾಯಿತು.

"ಆಮೇಲೆ"

ಹಾಥೀ ಜಸ್ ಭಲವೇಸನ್ ಬೈಠಲ ಕೈ,
ಜಮ್ಮಾ ಭೀಲೈ ಭಾರೀ ರೇ ಧೀರಜಾ ಕೇ ಬಾಂಧವ್ವೈರೇ,

ಆನೆಯ ಮೇಲೆ ಕುಳಿತು ಕಂದಾಯ ವಸೂಲಿ ಮಾಡುತ್ತಾ ಹೊರಟ, ಇನ್ನು ಧೈರ್ಯದಿಂದಿರುವುದು ಹೇಗೆ?

"ಈ ಕಡೆ ಜಮೀಂದಾರರ ಸೈನಿಕರು ಚಪ್ಪರದಲ್ಲಿದ್ದ ಕುಂಬಳಕಾಯಿ, ಸೋರೆಕಾಯಿ, ಕೊಬ್ಬಿದ ನಾಲ್ಕು ಕುರಿಗಳು ಮತ್ತು ನಾಲ್ಕು ಜೊತೆ ಪಾರಿವಾಳಗಳನ್ನು ಭತ್ಯವೆಂದೇ ಮುಗಿಸಿಬಿಟ್ಟರು."

"ಆಮೇಲೆ"

ಥಾರೀ ಬೇಂಚ್ ಪಟವಾರೀ ಕೇ ದೇಲಿಯ್ಯೆ,
ಲೋಟಾ ಬೇಂಚ್ ಚೌಕೀದಾರೀ
ಬಾಕೀ ಥೋಡೆಕ್ ಲಿಕಾಯೀ ಜ್ಯೆ ಪಹಲ್ಯೆ,
ಕಲವರ್ ದೇಲಕ್ ಘುರಾಯೀ ರೇ ಧಿರಜಾ:

ತಟ್ಟೆಯನ್ನು ಮಾರಿ ಪಟವಾರಿಗೆ ಕೊಟ್ಟಾಯಿತು, ಲೋಟವನ್ನು ಮಾರಿ ಚೌಕಿದಾರನಿಗೆ ಕೊಟ್ಟಾಯ್ತು. ಬಾಕಿಗೆ ಸಾಲ ಬರೆದು ಕೊಟ್ಟಾಯ್ತು. ಇನ್ನು ಧೈರ್ಯದಿಂದಿರುವುದು ಹೇಗೆ?

"ಕೊನೆಗೆ......

ಕಹೆ ಕಬೀರ ಸುನೋ ಭಾಯಿ ಸಾಧೋ
ಸಬ ದಿನ್ ಕರೀ ಬೇಗಾರೀ
ಝಂಜಡೀ ಬಜಾಕೆ ಗೀತ್ ಗವೈಥೀ.
ಭಟಕನಾಥ್ ಗಿರಧಾರೀ ರೇ ಧಿರಜಾ.

ಕಬೀರ ಹೇಳುತ್ತಾನೆ, ಸೋದರರೇ ಕೇಳಿ. ದಿನವೆಲ್ಲಾ ದುಡಿಯುವುದರಲ್ಲೇ ಕಳೆಯಿತು. ಇನ್ನಾದರೂ ಖಂಜರ ನುಡಿಸುತ್ತ ಗಿರಿಧಾರಿಯನ್ನು ಸ್ಮರಿಸಿ.

ಹಾ ಹಾ ಹಾ ಹಾ····ಡೇರೆ ಕಿತ್ತುಹೋಗುವಂತೆ ನಗುವಿನ ಅಲೆ ಎದ್ದಿತು ····ಜಾದು ಮಾಡಿಬಿಟ್ಟ, ಒಳ್ಳೇ ಗುಂಪು ಶಹಬಾಸ್ ಲೋಕಾಯದಾಸ್.

ಡಾಕ್ಟರ್ ತಹಸೀಲ್ದಾರರನ್ನು ಕೇಳಿದರು: "ಗೀತೆಗಳೇನೋ ವಿದ್ಯಾಪತಿಯದು. ವಿದೂಷಕನ ಸಂಭಾಷಣೆ ಬರೆದೋರು ಯಾರು?"

ಡಾಕ್ಟರ ಪ್ರಶ್ನೆಗೆ ತಹಸೀಲ್ದಾರರು ನಕ್ಕರು. "ಒಳ್ಳೇ ಪ್ರಶ್ನೆ ಕೇಳ್ತೀರಲ್ಲಾ?" ಡಾಕ್ಟರ್. ಇವನ ಮಾತುಗಳನ್ನು ಬರೆಯೋದಕ್ಕೂ ತುಲಸೀದಾಸರೋ, ವಾಲ್ಮೀಕಿಯೋ ಬರಬೇಕೇನು? ಗದ್ದೇಲಿ ಕೆಲಸ ಮಾಡ್ತಿರೋವಾಗಲೇ ಪ್ರಾಸಕ್ಕೆ ಪ್ರಾಸ ಸೇರಿಸಿ ಮಾತುಗಳನ್ನು ಜೋಡಿಸಿಬಿಡ್ತಾನೆ."

ಡಾಕ್ಟರು ವಿದೂಷಕನಿಗೆ ಏನು ಕೊಟ್ಟರು?····ಐದು ತೊಲದ ಲೋಟ ····ವಿದೂಷಕ ಗೆದ್ದಹಾಗಾಯಿತು:

> ಆಹೆ ಪರಥಮ ಸಮಾಗಮ ಪಹುಸಂಗ ಹೇ····
> ಧಿರನಾಗಿ ಧಿರನಾಗಿ :

ಕಿರಣದೊಂದಿಗೆ (ಜ್ಯೋತಿಯೊಂದಿಗೆ) ಪ್ರಥಮ ಸಮಾಗಮವಾಯಿತು.

ಶುಕ್ರ ನಕ್ಷತ್ರ ಉದಿಸುವ ಹೊತ್ತಿಗೆ ನಾಟ್ಯ ಮುಕ್ತಾಯವಾಯಿತು. ಒಳ್ಳೇ ಗುಂಪು ಸೇರಿತ್ತು. ಈಗ ಕಣಜವನ್ನು ತೆರೆಯುತ್ತಾರೆ.

ಹಾಸಿಗೆಯ ಮೇಲೆ ಮಲಗಿ ಡಾಕ್ಟರ್ ಯೋಚಿಸುತ್ತಿದ್ದರು: ಕೋಮಲ ಗೀತೆಗಳ ಸಾಲು ಅಪಭ್ರಂಶ ಭಾಷೆಯ ಶಬ್ದಗಳೂ ಎಷ್ಟೊಂದು ಮಧುರವಾಗಿರುತ್ತವೆ:····

> 'ಪಿಯಾ ಭಯಿಲೆಡುಮರೀ ಕೆ ಫೂಲ್ ರೇ ಪಿಯನಾ ಭಯಿಲೇ'····
> ಚಾಂದ್ ಯರಿ ಭೇಲ್ ಬಾದಲ್, ಮವಲೀ ಬಯರೀ
> ಮಹಾಜಲ್, ತಿರಿಯಾ ಬಯರಿ ದುಹು ಲೋಚನ್—
> ರಿದಯೇ ಕೆ ಭೇದ್ ಬತಾಯೆ····ಭೊಂಮರಾ—
> ಭೋಂಮರೀ····ರೋಯೀ ರೋಯೀ ಕಜರಾ
> ದಹಾಯಲ್, ಫಾಮೆ ತಿಲಕ ಬಹಿ ಗೇಲ್····
> ಧಾನ್ ಕೆ ಉಗಯತ್ ದೇಖಲ್ ಸಜನೀ ಗೇ

**ಲಟ ಧೋಯೆ ಗಯಿಲೀ ಹವಸ್ ಬಾಬಾ ಕೀ**
**ಪೋಖರಿಯಾ....ಪೋಖರೀ ಮೇಂ ಚಾಲ್ ಕೇಲಿ ಕರೆ**

ಚಂದ್ರನಿಗೆ ಮೋಡ, ಮೀನಿಗೆ ಜಾಲ, ಸ್ತ್ರೀಗೆ ಅವಳ ಎರಡು ಕಣ್ಣುಗಳೇ ವೈರಿಗಳು. ಯಾಕೆಂದರೆ ಇವು ಹೃದಯದ ರಹಸ್ಯವನ್ನು ತೋರಿಸಿಬಿಡುತ್ತವೆ.... ಅತ್ತೂ ಅತ್ತೂ ಕಣ್ಣಿಗೆ ಹಚ್ಚಿದ ಕಾಡಿಗೆಯೆಲ್ಲಾ ಕದಡಿಹೋಯಿತು. ಹಣೆಯ ತಿಲಕವೂ ಅಳಿಸಿಹೋಯಿತು. ಚಂದ್ರೋದಯವಾಗುತ್ತಿರುವುದನ್ನು ನೋಡಿ, ಕೂದಲು ಸರಿಪಡಿಸಿಕೊಂಡು, ಕೊಳದಲ್ಲಿ ಪ್ರಿಯನೊಂದಿಗೆ ಜಲಕೇಳಿಯಾಡಲು ಹೊರಟಳು.

ಡಾಕ್ಟರ್ ಯೋಚಿಸುತ್ತಿದ್ದರು: ವಿದ್ಯಾಪತಿಯ ವಿಷಯ ಬಂದಾಗಲೆಲ್ಲಾ ಕವಿವರ 'ದಿನಕರ್' ಅವರ ಒಂದು ಪ್ರಶ್ನೆ ಒಂದೇ ಸಮನೆ ಮುಂದೆ ಬಂದು ನಿಲ್ಲುತ್ತಿತ್ತು. 'ವಿದ್ಯಾಪತಿಯ ಗಾನ ಎಲ್ಲಿದೆ?'' ಬಹಳ ದಿನಗಳಿಂದ ಸಿಕ್ಕು ಸಿಕ್ಕಾಗಿದ್ದ ಪ್ರಶ್ನೆಗೆ ಮನಸ್ಸು ಉತ್ತರಕೊಟ್ಟಿತು: ಜೀವನ ಪೂರ್ತಿ ಕೂಲಿಕೆಲಸ ಮಾಡುತ್ತಾ ಕಾಲ ಕಳೆಯುವ ಅಶಿಕ್ಷಿತ ಅರ್ಧ ನಗ್ನ ಜನರು. ಹೇ ಕವಿ, ನಿಮ್ಮ ವಿದ್ಯಾಪತಿಯ ಗಾನವನ್ನು ನಮ್ಮ ಮುರುಕಲು ಗುಡಿಸಲುಗಳಲ್ಲಿ ಜೀವನದ ಮಧುರ ರಸದಂತೆ ಸುರಿಸುತ್ತಿದ್ದಾರೆ. ಓ ಕವಿ, ನಿಮ್ಮ ಕವಿತೆ ಒಮ್ಮೆ ಹಠದಿಂದ ಹೇಳಿತ್ತು— ''ಹೊರಡು ಕವಿ ವನಪುಷ್ಪದೆಡೆಗೆ:''

....ವನಪುಷ್ಪಗಳು ನೀವು ಬರುವ ದಾರಿಯನ್ನೇ ಇದಿರುನೋಡುತ್ತಿವೆ.

## 16

ಸುಂದರಿ ಸ್ತ್ರೀ:

ಕಟ್‌ಪೀಸ್—ಒಂದು ಗಜ.

ಚೀಟಿ—$1\frac{1}{2}$ ಗಜ.

ಸ್ಯಾಟಿನ್—ಒಂದು ಗಜ.

ಸೀರೆ—ಒಂದು.

ಬಾಲದೇವ ಬಟ್ಟೆಯ ಪೊಟ್ಟಣಗಳನ್ನು ಹಂಚಿದ. ರೌತಹಟ್ ಸ್ಟೇಷನ್ನಿನ ಹಂಸರಾಜ ಬಚ್ಚರಾಜ ಮಾರವಾಡಿಯ ಹತ್ತಿರ ಬಟ್ಟೆ ಸಿಗುತ್ತದೆ.

ಖೇಲಾವನ ಯಾದವನ ಮನೆಯ ಅಂಗಳದಲ್ಲಿ ನಿಲ್ಲುವುದಕ್ಕೂ ಜಾಗ ವಿರಲಿಲ್ಲ. ಬೆಳಗ್ಗೆಯಿಂದ ಸಾಮಾನುಗಳನ್ನು ಹಂಚುತ್ತಲೇ ಇದ್ದಾನೆ. ಮಧ್ಯಾಹ್ನ ವಾಯಿತು····ಸೀರೆ ಇಲ್ಲ····ಇಲ್ಲವೆ? ···ಬಾಲದೇವಜಿ, ನಮಗೊಂದು ಸೀರೆ····ತಾಘಾ ತಾಯೀಗೆ ಉಡೋದಕ್ಕೂ ಬಟ್ಟೆ ಇಲ್ಲದ ಹಾಗಾಗಿದೆ:

ಬಾಲದೇವ ಹೇಳಿದ:

"ನೋಡಿ, ಕೊಟ್ಟಿದ್ದೂ ಒಟ್ಟು ಏಳು ಸೀರೆ ಮಾತ್ರಾನೇ. ದೊಡ್ಡ ಸೀರೆಗಳು ನಾಲ್ಕಿವೆ. ಅದು ಮಾಲೀಕರ ಮನೆ ಹೆಂಗಸರು ಉಡುವುದಕ್ಕೆ ಬೇಕಾದವು····ಹದಿನಾಲ್ಕು ರೂಪಾಯಿ ಜೊತೆ. ಮಿಕ್ಕ ಮೂರು ಸೀರೆಗಳನ್ನು ನಾನು ಪರದೆ ಇಲ್ಲದವರಿಗೆ ಹಂಚಿದೀನಿ····"

"ಇಡೀ ಹಳ್ಳಿಯಲ್ಲೇ ಎಲ್ಲರೂ ಪರದೆಯಿಲ್ಲದವರು ಬಾಲದೇವಜೀ,"

ಖೇಲಾವನ ಯಾದವ ಹೇಳಿದ.

"ಇಷ್ಟು ದಿನಗಳಿಂದ ಕಮರುದ್ದೀನ್ ಬಾಬು ಬಟ್ಟೆಗಳನ್ನು ಹಂಚುತ್ತಿದ್ದಾಗ ಪರದೆ ಇರಲಿಲ್ಲವೇನು? ಇದ್ದಷ್ಟರಲ್ಲಿ ಎಲ್ಲರಿಗೂ ಸರಿಯಾಗಿ ಹಂಚಯ್ಯಾ."

ಕಾಳೀಚರಣ ಇನ್ನೆರಡು ಗಜ ಚೀಟಿಬಟ್ಟೆ ಬೇಕೇಬೇಕೆಂದು ಹಠ ಮಾಡು ತ್ತಿದ್ದ. ಹಾರ್ಮೋನಿಯಂ ಕವರ್ ಹೊಲಿಸಬೇಕು. ಆದರೆ ಬಾಲದೇವ ಅದಕ್ಕೊಪ್ಪುತ್ತಿಲ್ಲ····ಮನುಷ್ಯರಿಗೇ ಉಡಲು ಬಟ್ಟೆಯಿಲ್ಲ, ಹಾರ್ಮೋನಿಯಂಗೆ ಡೋಲಿಗೆ ಬಟ್ಟೆ ಹೊಲಿಸುವುದೆಂದರೇನು? ಒಳ್ಳೇ ಮನುಷ್ಯ!

ಬಾಲದೇವ ರಸ್ತೆಯಲ್ಲಿ ನಡೆಯುವುದೇ ಕಷ್ಟವಾಯಿತು. ಬಟ್ಟೆ ಮಾರುವ ಕೆಲಸ ಸಿಕ್ಕಿದ್ದು ಒಳ್ಳೆ ತೊಂದರೆಗೆ ಸಿಕ್ಕಿಕೊಂಡಹಾಗಾಯಿತು. ಮೂತ್ರ ವಿಸರ್ಜನೆಗೆ ಹೋಗುವಾಗಲೂ ಜನ ಹಿಂಬಾಲಿಸುತ್ತಿದ್ದರು····ಜೈ ಹಿಂದ್ ಬಾಲದೇವಜೀ. ನಿಮ್ಮನ್ನು ನೋಡೋದಕ್ಕೇ ಬರ್‍ತಾ ಇದ್ದೆ. ದುಲಾರಿಯ ಪ್ರಸ್ತ····. ಇರಲಿ, ಆಮೇಲೆ ಬರ್‍ತೀನಿ····ಪಾಪ, ಬಟ್ಟೆ ಈಗ ನಿಮ್ಮ ಹತ್ತಿರ ಎಲ್ಲಿದೆ?····ಸ್ಟಾಕ್‌ನಲ್ಲೂ ಇಲ್ಲ. ಬರೀ ಹೆಣದ ಮೇಲೆ ಹೊದಿಸೋ ಬಟ್ಟೆ ಮತ್ತೆ ಶ್ರಾದ್ಧಕ್ಕೆ ಉಪಯೋಗಿಸೋ ಬಟ್ಟೆಗಳಿವೆ····ಅದರಲ್ಲೇ ಕೊಡಲೇ? ಹೇಗೆ ಕೊಡೋದು? ಹೆಣಕ್ಕೆ ಹೊದಿಸೋ ಬಟ್ಟೇನಾ ಪ್ರಸ್ತಕ್ಕೆ?

ದುಲಾರಿಯ ಪ್ರಸ್ತ ಆಗಿ ಐದು ವರ್ಷಗಳಾಗಿದ್ದವು, ಅವಳಿಗೆ ಮೂರು ಮಕ್ಕಳೂ ಇದ್ದರು. ಈ ವಿಚಾರ ಪಾಪ ಬಾಲದೇವನಿಗೇನು ಗೊತ್ತು?

ಲಕ್ಷ್ಮೀ ರಾಮದಾಸನನ್ನು ಕಳುಹಿಸಿದ್ದಳು:

'ಆಚಾರ್ಯರು ಬರ್ತಿದಾರೆ. ಈ ನಡುವೆ ನಿಮಗೆ ಬಿಡುವೇ ಆಗೋದಿಲ್ಲಾ ಅಂತ ಕಾಣುತ್ತೆ. ಈ ಕಡೆ ಬಂದೇ ಇಲ್ಲ. ಶಿಷ್ಯ ಸ್ವೀಕಾರದ ಮಾತು ನಡೆಯು ತ್ತಿತ್ತು. ಈ ವಿಚಾರದಲ್ಲಿ ನಿಮ್ಮ ಅಭಿಪ್ರಾಯ ಏನು? ಆಚಾರ್ಯರು ಬರ್ತಿದ್ದಾರೆ. ಪಟ್ಟ ಕಟ್ಟುವ ಸಮಾರಂಭಕ್ಕೆ ಚದ್ದರೂ, ಜೊತೆಗೆ ಒಂದು ಜೊತೆ ಪಂಚೆ ಬೇಕಾ ಗಿತ್ತು—ಅಂಚಿಲ್ಲದ ನಯವಾದ ಪಂಚೆಗಳು—ಅವಳಿಗೂ ಬಟ್ಟೆ ಬೇಕಾಗಿತ್ತು.'

ತುಂಬಾ ಕಷ್ಟಕ್ಕೇ ಬಂತಲ್ಲ? ರಿಜರ್ವನಲ್ಲಿ ಸ್ವಲ್ಪ ಬಟ್ಟೆ ಇದೆ. ಅದು ಮದುವೆ–ಮುಂಜಿ, ಶ್ರಾದ್ಧ ಇದಕ್ಕೆಲ್ಲಾ ಬೇಕು. ಹೇಗೆ ಕೊಡುವುದು? ಅಂದ ಹಾಗೆ ಆಚಾರ್ಯರು ಬರ್ತಿರೋದು ಮಹಂತರ ಶ್ರಾದ್ಧಕ್ಕೆ. ಹಾಗಾದರೆ ಸರಿ:— ಶ್ರೀಮತಿ ಇಲ್ಲ ಇಲ್ಲ, ಶ್ರೀಮತಿ ಅಲ್ಲ, ಲಕ್ಷ್ಮೀದಾಸಿ· · ·ತೆಳುವಾಗಿರೋ ಬಟ್ಟೆ ಹತ್ತು ಗಜ: ದಪ್ಪ ಬಟ್ಟೆ ಹತ್ತು ಗಜ ಒಂದು ಚದ್ದರು:

ರಾಮದಾಸ ಜ್ಞಾಪಿಸಿದ: "ಲಂಗೋಟಿಗೋಸ್ಕರಾನೂ ಒಂದು ಗಜ ಬೇಕು."

ತುಂಬಾ ಕಷ್ಟ. ಬಾಲದೇವ ಈಗ ದಿನಕ್ಕೆ ಹತ್ತು ಹನ್ನೆರಡು ಬಾರಿ ಯಾದರೂ ಸುಳ್ಳು ಹೇಳಬೇಕಾಗುತ್ತದೆ. ಏನು ಮಾಡುವುದು? ತುಂಬಾ ಕಷ್ಟದ ಕೆಲಸ. . . . ಜಿಲ್ಲಾ ಕಾಂಗ್ರೆಸ್ಸಿನ ಮೀಟಿಂಗ್ ಬೇರೆ ಇದೆ. ಮಿನಿಸ್ಟರ್ ಬರುತ್ತಾರೆ. ಹಳ್ಳಿಯಿಂದ ಬಾವುಟದ ಜೊತೆಗೆ ಮೆರವಣಿಗೆಯನ್ನೂ ತೆಗೆದುಕೊಂಡು ಹೋಗ ಬೇಕು. ಜಿಲ್ಲೆಯ ಸೆಕ್ರೆಟರಿ ಗಂಗೂಲಿ ಕಾಗದ ಬರೆದಿದ್ದಾನೆ. . . .

ನಡೆಯಿರಿ: ನಡೆಯಿರಿ: ಪೂರ್ಣಿಯಾಗೆ ನಡೆಯಿರಿ: ಹೆಂಗಸರು–ಗಂಡಸರು ಬಾವುಟ ಹಿಡಿದು 'ಇಂಕಿಲಾಬ್ ಜಿಂದಾಬಾದ್' ಎಂದು ಘೋಷಣೆ ಮಾಡುತ್ತಾ ಪೂರ್ಣಿಯಾಗೆ ನಡೆಯಿರಿ: · · · · ರೈಲಿಗೆ ಟಿಕೆಟ್ಟೇ? · · · · ಏನು ಮೂರ್ಖರಪ್ಪಾ: ಮಂತ್ರಿಗಳು ಬರ್ತಾ ಇದಾರೆ, ಆದರೂ ರೈಲಿಗೆ ಟಿಕೆಟ್ ತೋಗೋತಾರೇನು? ಬಾಲದೇವ ಹೇಳಿದ್ದಾನೆ, ಸ್ಟಾಕ್‌ನಲ್ಲಿ ತುಂಬಾ ಕಡಿಮೆ ಬಟ್ಟೆ ಇದೇ ಅಂತ. ಮಂತ್ರಿ ಗಳಿಗೆ ಹೇಳಬೇಕಂತೆ. . . . ಹೊರಡಿ: ಹೊರಡಿ: ಪೂರ್ಣಿಯಾಗೆ ಹೊರಡಿ: ಶುಕ್ರ ನಕ್ಷತ್ರ ಹುಟ್ಟೋ ಹೊತ್ತಿಗೆ ಕಾಳೀ ಮಂದಿರದಲ್ಲಿ ಎಲ್ಲಾ ಸೇರಿ ಅಲ್ಲಿಂದ ಮೆರವಣಿಗೆ ಹೊರಡಬೇಕು.

"ಎಲ್ಲರೂ ಒಂದು ಸಲ ಹೇಳಿ: ಕಾಳೀಮಾತೆಗೆ ಜಯವಾಗಲಿ:"

"ಜೈ: ಜೈ:"

"ಒಂದು ಬಾರಿ ಪ್ರೀತಿಯಿಂದ ಹೇಳಿ: ಗಾಂಧೀ ಮಹಾತ್ಮರಿಗೆ ಜಯವಾಗಲಿ"

"ಜೈ: ಜೈ:"

ಫರ್‍ರ್‍ರ್‍....ಮರದ ಪೊಟರೆಗಳಲ್ಲಿ ಮಲಗಿದ್ದ ಪಕ್ಷಿಗಳೆಲ್ಲಾ ರೆಕ್ಕೆ ಪಟಪಟನೆ ಒಡಿದುಕೊಂಡು ಹಾರಿದವು. .... ಕಾಳೀಚರಣ ಹೇಳಿದ—"ಪಿಸ್ತೂಲಿದ್ದಿದ್ದರೆ ಈ ಕತ್ತಲೆಯಲ್ಲೂ ಒಂದೆರಡು ಹಸಿರು ಪಾರಿವಾಳಗಳನ್ನು ಹೊಡೆದು ಹಾಕುತ್ತಿದ್ದೆ." ವಾಸುದೇವ ಅವನನ್ನು ತಡೆದ: "ಸುಮ್ಮನಿರು. ಬಾಲದೇವ ಸಧ್ಯ ಕೇಳಲಿಲ್ಲ. ಕೇಳಿದ್ದಿದ್ರೆ ಮತ್ತೆ ಉಪವಾಸ ಆರಂಭಿಸ್ತಿದ್ದ.—"

ಲೆಕ್ಕ ಮಾಡು. ಎಷ್ಟು ಜನ ಹೆಂಗಸರಿದ್ದಾರೆ? ಎಷ್ಟು ಜನ ಗಂಡಸರಿದ್ದಾರೆ? ಮಕ್ಕಳನ್ನು ಕರೆದುಕೊಂಡು ಬರಬೇಡಿ, ತೊಂದರೆ ಆಗುತ್ತೆ, ಕಾಳೀಚರಣ ಮತ್ತು ಗೂದರ್, ಎಲ್ಲರ ಮೈಯನ್ನೂ ಮುಟ್ಟಿ ಮುಟ್ಟಿ ಲೆಕ್ಕಮಾಡಿದರು. ಕಾಳೀಚರಣ ಹೇಳಿದ: ಐದಿಪ್ಪತ್ತು ಗಂಡಸರು, ನಾಲ್ಕು ಜನ ಹೆಂಗಸರು, ಗೂದರನ ಲೆಕ್ಕದ ಪ್ರಕಾರ ನಾಲ್ಕಿಪ್ಪತ್ತು ಮೇಲೆ ಹತ್ತು ಜನ ಗಂಡಸರು....ಸತ್ಯನಂತರು ಎಲ್ಲಿಗೆ ಹೋಗಬೇಕು?....ಸತ್ಯನಂತರು ಯಾವಾಗಲೂ ದಂಗೆಯೇಳುತ್ತಾರೆ....ಬಾಲದೇವ ಈಪತ್ತು ಒಂದು ಹೊಸ ಶಬ್ದವನ್ನು ಹೇಳಿಕೊಟ್ಟು.... ಕ್ರಾಂತಿ, ಕ್ರಾಂತಿಕಾರ:

ಮೆರವಣಿಗೆಯಲ್ಲಿ ಹಾಡುವುದಕ್ಕೆ ಬಾಲದೇವನಿಗೆ ಬರುತ್ತಿದ್ದುದು ಎರಡೇ ಹಾಡುಗಳು. ಒಂದು ಉಪ್ಪಿನ ಸತ್ಯಾಗ್ರಹದ ಸಂದರ್ಭದಲ್ಲಿ ಕಲಿತಿದ್ದ ಗೀತೆ—"ಆವೋ ದೀರೋ ಮರದ್ ಬನೋ ಅಬ್ ಜೆಹಲ್ ತುಮೆ ಭರನಾ ಹೋಗಾ." (ಬಾ ವೀರ, ನಿಜವಾದ ಗಂಡಸಿನಂತೆ ಮುಂದೆ ಬಂದು ಜೈಲುಸೇರು) ಎರಡನೆಯದು ನಲವತ್ತೆರಡರ ಚಳುವಳಿಯಲ್ಲಿ ಜೈಲಿನಲ್ಲಿ ಕಲಿತದ್ದು: "ಜಿಂದಗೀ ಹೈ ಕಿರಾಂತೀ ಕೀ ಕಿರಾಂತೀ ಮೇ ಉಟಾಯೇ ಜಾ" (ಜೀವನವೇ ಒಂದು ಕ್ರಾಂತಿ· ಕ್ರಾಂತಿಗಾಗಿ ನಿನ್ನನ್ನೂ ನೀನು ಅರ್ಪಿಸಿಕೋ). ಆದರೆ ಇದು ಸೋಷಿಯಲಿಸ್ಟ್ ಪಾರ್ಟಿಯ ಗೀತೆ. ಮೊದಲನೆಯದೇ ಸರಿ—"ಆವೋ ವೀರೋ ಮರದ್ ಬನೋ, ...." ಇಂದು ಸ್ವತಃ ಬಾಲದೇವನೇ ಹಾಡುತ್ತಾನೆ, ಸುನರಾನೂ ದನಿಗೂಡಿಸುತ್ತಾನೆ.

ತಂತ್ರಿಮ ಸಂಗಡದ ಮಂಗಳನಿಗೂ ನಡುಕವೇ ಆರಂಭವಾಯಿತು. ಜೈಲು: ಅಯ್ಯೋ ರಾಮ....ಈ ಜನ ಜೈಲಿಗೆ ಕರೆದುಕೊಂಡು ಹೋಗ್ತಿದ್ದಾರೆ. ಹದಿನೈದು

ವರ್ಷಗಳ ಹಿಂದೆ ಅವನಿಗೆ ಕಳ್ಳತನದ ಕೇಸಿನಲ್ಲಿ ಜೈಲಿನ ಶಿಕ್ಷೆಯಾಗಿತ್ತು. ಜೈಲಿನ ಇನ್ಸ್‌ಪೆಕ್ಟರ್ಸ್ ಬೆಲ್ಟಿನ ಪೆಟ್ಟನ್ನು ಅವನಿನ್ನೂ ಮರೆತಿಲ್ಲ. ನಾಲ್ಕು ತೊಟ್ಟಿಗಳಿಗೆ ದಿನವೂ ನೀರು ತುಂಬಿಸಬೇಕಾಗಿತ್ತು. ಇಲ್ಲ: ಇಲ್ಲ:····ಅವನು ಮೂತ್ರ ವಿಸರ್ಜನೆಯ ನೆಪ ಹೇಳಿ ಹಿಂದೆ ನಿಂತ····ಅನಂತರ ಎಲ್ಲರ ಕಣ್ಣು ತಪ್ಪಿಸಿ ಮನೆಯ ಕಡೆ ಓಡಿದ. ಎಲ್ಲರೂ ಹುಚ್ಚರು:

ಪೂರ್ಣಿಯಾ ಪಟ್ಟಣ:····ಇದೇ ಪೂರ್ಣಿಯಾ ಪಟ್ಟಣ....ಅಚ್ಚುಕಟ್ಟಾದ ರಸ್ತೆಗಳು, ರೈಲುಗಾಡಿ, ಕುದುರೆಗಾಡಿ: ಭದ್ರವಾದ ಮನೆಗಳು····"ಒಂದುಕಿಡಿ ಬೆಂಕಿ, ಪೂರ್ಣಿಯಾ ಪಟ್ಟಣವನ್ನೇ ನಾಶ ಮಾಡಿಬಿಡ್ತು"····ಏನು ಹೇಳಿ "ಬೆಂಕಿ"....ಹಳ್ಳಿಯ ಮಕ್ಕಳು ಈಗಲೂ ಒಗಟನ್ನು ಹೇಳುವಾಗ ಪೂರ್ಣಿಯಾದ ಹೆಸರೆತ್ತುತ್ತಾರೆ. ಮೇರೀಗಂಜಿನ ಈ ಮೆರವಣಿಗೆಯಲ್ಲಿ ಪೂರ್ಣಿಯಾ ಪಟ್ಟಣವನ್ನು ಈ ಹಿಂದೆಯೇ ನೋಡಿದ ನಾಲ್ಕು ಜನರೂ ಇದ್ದರು. ಬಹಳ ಜನ ಈವತ್ತೇ ಮೊದಲಬಾರಿಗೆ ರೈಲು ಗಾಡಿಯನ್ನು ಹತ್ತುತ್ತಿರುವುದು. ಎದೆ ಡವ ಡವ ಎನ್ನುತ್ತಿದೆ. ಗಾಂಧೀ ಮಹಾತ್ಮನ ಬಾವುಟವನ್ನು ಹಿಡಿದಿದ್ದವರನ್ನು ಟಿಕೆಟ್ ಬಾಬು ಟಿಕೆಟ್ ಕೇಳುವುದಿಲ್ಲ····ನಿಜವಾಗಲೂ ರೈಲುಗಾಡಿ "ಜೈ ಜೈ ಕಾಳಿ, ಜೈ ಜೈ ಕಾಳಿ ಎನ್ನುತ್ತಾ ಓಡುತ್ತದೆ! ಇದೇ ಕಾಳೀ ಸೇತುವೆ····ಬಾಲದೇವ ತೋರಿಸಿದ, ಇದೇ ಕಾಳೀ ಸೇತುವೆ. ಸೇತುವೆ ಕಟ್ಟುವಾಗ ಐದು ಜನರನ್ನು ಬಲಿ ಕೊಟ್ಟರು····ಅಬ್ಬಬ್ಬಾ ಐದು ಜನ····ಜೈ ಕಾಳೀ: ಉಪ್ಪಿನ ಸತ್ಯಾಗ್ರಹದ ಸಂದರ್ಭದಲ್ಲಿ ಇದೇ ಸೇತುವೆಯ ಕೆಳಗೆ ಪೋಲೀಸಿನವರು ಚಳಿಗಾಲದ ರಾತ್ರಿಯಲ್ಲಿ, ನೀರಿನಲ್ಲಿ ಮುಳುಗಿಸಿ-ದೊಣ್ಣೆಯಿಂದ ಒಡೆದಿದ್ದರು····ತಲೆಯನ್ನು ನೀರಿನಲ್ಲಿ ಒತ್ತಿ ಹಿಡಿದಿರುತ್ತಿದ್ದರು. ಉಸಿರು ಕಟ್ಟುತ್ತಿತ್ತು, ಕಿವಿ ಮೂಗುಗಳಲ್ಲೆಲ್ಲಾ ನೀರು ತುಂಬಿಬಿಡುತ್ತಿತ್ತು, ಇದೇ····ಆಸ್ಪತ್ರೆ····ನಮ್ಮ ಹಳ್ಳಿಯ ಆಸ್ಪತ್ರೆ. ಇದರ ಮುಂದೆ ಎಳೇ ಮಗು....ಜೈಲೇ? ಇದೇ ಜೈಲು····ಜೈಲು ಅನ್ನಬಾರದು ಅಣ್ಣಾ ಮಾವನ ಮನೆ!····ನಾವು ಮದುವೆ ಆಗೋದಕ್ಕೆ ಹೋಗ್ತೀವಿ.... "ಬನ್ನಿ ವೀರರೇ ಜೈಲಿಗೆ ಹೋಗೋಣ." ಪೂಲಿಯಾ ಪೂರ್ಣಿಯಾ ಸ್ಟೇಷನ್ನಿನಿಂದಲೇ ಯಾರನ್ನೋ ಹುಡುಕುತ್ತಿದ್ದಾಳೆ....ಕಲಾಸಿ ಧರಿಸುವುದು ಕಪ್ಪು ಅಂಗಿಯನ್ನು····ಇದು ಕೋರ್ಟು. ಈ ಕೋರ್ಟಿನಲ್ಲೇ ಜನ ಮೊಕದ್ದಮೆಗಳನ್ನು ನಡೆಸಲು ಬರುವುದು:

ಪಟ್ಟಣದ ಜನರೂ ಆಶ್ಚರ್ಯದಿಂದ ಈ ಮೆರವಣಿಗೆಯನ್ನು ನೋಡುತ್ತಿದ್ದರು. "ಇಂಕಿಲಾಬ್ ಜಿಂದಾಬಾದ್"····ಕೋರ್ಟಿನ ತಿರುವಿನಲ್ಲಿ,

ಹಣ್ಣಿನ ಅಂಗಡಿಯಲ್ಲಿ ಕುಳಿತಿದ್ದ ಮನೌಲ್ವೀ ಸಾಹೇಬರು ನಕ್ಕರು: "ಇವರೆಲ್ಲಾ ಬಂದಿರೋದು ಬಟ್ಟೆ ತೊಗೋಳ್ಳೋದಕ್ಕೆ! ಹೋಗಿ ಹೋಗಿ ಬಟ್ಟೆ ಸಿಗುತ್ತೆ—'ಇಂಕಿಲಾಬ್' ಎನ್ನುತ್ತಾರೆ. ಅರ್ಥವು ಗೊತ್ತಿದ್ಯೋ ಇಲ್ಲೋ····"

ಬಾವುಟ? ದೊಡ್ಡ ಬಾವುಟ ಆಕಾಶದಲ್ಲಿ ಹಾರುತ್ತಿದೆ. ಇದೇ ರಾಮಕೃಷ್ಣ ಆಶ್ರಮ····ಇಲ್ಲಿ ಎಲ್ಲಾ ನಿಲ್ಲಿ, ಬಟ್ಟೆ ಸರಿಮಾಡಿಕೊಳ್ಳಿ····ನಲ್ಲಿ ಹತ್ತಿರ ಹೋಗಿ ಮುಖ ತೊಳೆದುಕೊಳ್ಳಿ····ಹೆದರಿಕೆ ಯಾಕೆ? ಬಾಲದೇವ ಇದಾರಲ್ಲ. ಇಲ್ಲಿಂದ ಸಾಲುಗಟ್ಟಿ ಹೋಗಬೇಕು. ಬಾಲದೇವ ಎಲ್ಲರಿಗಿಂತ ಮುಂದಿರುತ್ತಾನೆ· ಎಲ್ಲರಿಗಿಂತ ಮೊದಲು ಕಾಳೀಚರಣ ಘೋಷಣೆಗಳನ್ನು ಕೂಗುತ್ತಾನೆ 'ಇಂಕಿಲಾಬ್' ಎಂದು. ಆಗ ನೀವೆಲ್ಲಾ ಒಟ್ಟಾಗಿ 'ಜಿಂದಾಬಾದ್' ಅನ್ನಬೇಕು. ಸ್ವಲ್ಪ ಗಡಿಬಿಡಿ ಆಗುತ್ತೆ····ಕಾಳೀಚರಣ 'ಇಂಗ್ಲೀಷ ರಾಜ್ಯ' ಎಂದಾಗ ನೀವು, "ನಾಶವಾಗಲಿ:" ಎಂದು ಕೂಗಬೇಕು. ಆರಂಭಮಾಡು ಕಾಳೀಚರಣ. ಕಾಳೀಚರಣ ಎದೆಯಲ್ಲಿರುವ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿ ಕೂಗಿದ: "ಇಂಕಿಲಾಬ್:"

"ನಾಶವಾಗಲಿ: ಅಲ್ಲ ಅಲ್ಲಿ ಜಿಂದಾ····"

"ಸ್ವಲ್ಪ ತಡೀರಿ, ಸರಿಹೋಗಲಿಲ್ಲಾ."

ಶಿವನಾಥ ಚೌಧರೀ, ಗಂಗೂಲಿ, ಶಶಾಂಕ ನಾಥ ಬಾಬು ಎಲ್ಲರೂ ಆಶ್ಚರ್ಯದಿಂದ ನೋಡುತ್ತಿದ್ದರು. ಚೌಧರಿಯವರಿಗಂತೂ ಬಾಲದೇವನನ್ನು ಕಂಡು ತುಂಬಾ ಖುಶಿಯಾಗಿತ್ತು. ನಾಥ ಬಾಬು, "ಎಲ್ಲ ಕಾರ್ಯಕರ್ತರೂ ತಮ್ಮ ತಮ್ಮ ಸ್ಥಾನಗಳಲ್ಲಿ ಹೀಗೆಯೇ ಕೆಲಸ ಮಾಡಬಾರದೇ" ಎಂದು ಉದ್ಗಾರವೆತ್ತಿದರು. ····ಎರಡೇ ತಿಂಗಳಲ್ಲಿ ಇಷ್ಟೊಂದು ಹಳ್ಳಿಗಳನ್ನು ಇಷ್ಟು ಚೆನ್ನಾಗಿ ಆರ್ಗನೈಸ್ ಮಾಡಿದ್ದಾನಲ್ಲಾ, ಎಷ್ಟು ಜನಗಳನ್ನು ನಾಲ್ಕಾಣೆ ಸದಸ್ಯರನ್ನಾಗಿ ಮಾಡಿದ್ದಾನೆ. ಐನೂರು ಜನರನ್ನೇ: ಹಾಗಾದರೆ ನೀನು....ಅಲ್ಲ ನೀವು ಜಿಲ್ಲಾ ಕಮಿಟಿ ಮೆಂಬರ್ ಆದಿರಿ····ಗಂಗೂಲಿಯೇನೋ ಬಾಲದೇವನನ್ನು ಮೊದಲಿನಿಂದಲೂ ನೀವು ಎಂದೇ ಕರೆಯುತ್ತಿದ್ದರು, ಈವತ್ತು ನಾಥಬಾಬುವೂ ನೀವು ಎಂದರು. ಚೌಧರೀ ಹೇಳಿದರು: "ಬಾಲದೇವ, ಚರಖಾ ಸೆಂಟರವೊಂದನ್ನು ತೆಗೀರಿ. ರಚನಾತ್ಮಕ ಕೆಲಸಗಳು ಏನಾದರೂ ನಡೀತಿದೆ ತಾನೇ?"

ಖಾದೀ ಭಂಡಾರದ ಭತ್ತೀಸ್ ಬಾಬು ಹೇಳಿದರು: "ಹಳ್ಳಿಯಿಂದ ಖಾದೀ ಭಂಡಾರಕ್ಕೆ ಒಳ್ಳೆ ಹಸುವಿನ ತುಪ್ಪ ಕಳುಹಿಸು ಬಾಲದೇವ."

ನಿಜವಾಗಲೂ ಬಾಲದೇವ ಜ್ಞಾನಿ, ದೊಡ್ಡ ಮನುಷ್ಯ! ಬಾಬುಗಳೆಲ್ಲಾ ಕುಳಿತಿರೋ ವೇದಿಕೆಯ ಮೇಲೆ ಬಾಲದೇವನೂ ಕುಳಿತಿದ್ದಾನೆ!.... ಅರೆ, ಅದು ಯಾರು? ಕುಳ್ಳ.... ಮೂರು ಅಡಿ ಮನುಷ್ಯ, ನೋಡೋಕ್ಕೆ ನಾಲ್ಕು ವರ್ಷದ ಹುಡುಗನ ಹಾಗೆ ಕಾಣ್ತಾನೆ. ಮೀಸೆ ಗಡ್ಡ ಬೆಳೆದಿದೆ! ಧ್ವನಿ ಎಷ್ಟು ದಪ್ಪಗಿದೆ, ಲೌಡ್ ಸ್ಪೀಕರಿನಲ್ಲಿ ಎಲ್ಲರ ಧ್ವನೀನೂ ದಪ್ಪಕ್ಕೇ ಕೇಳಿಸುತ್ತೆ. ಯಾರ ಮಾತೂ ಅರ್ಥವಾಗುತ್ತಿಲ್ಲ.... ಯಾವ ದೇಶದ ಭಾಷೆಯಲ್ಲಿ ಮಾತಾಡ್ತಿದಾರೋ! ಹಿಂದೂಸ್ತಾನ, ಸ್ವಾತಂತ್ರ್ಯ, ಗಾಂಧೀಜಿ, ಈ ಶಬ್ದಗಳನ್ನು ಬಿಟ್ಟರೆ ಮಿಕ್ಕ ಯಾವುದೂ ಅರ್ಥವಾಗ್ತಿಲ್ಲ.... ಚಪ್ಪಾಳೆ ಯಾಕೆ ತಟ್ಟಿದಾರೆ? ಓ.... ಸಭೆ ಮುಗಿಯಿತು. ಮಂತ್ರಿವರ್ಯರು ಬರಲಿಲ್ಲ? ಯಾರು? ಅದೇ ತೆಳ್ಳಗೆ, ದೊಡ್ಡ ದೊಡ್ಡ ಮೀಸೆ ಬಿಟ್ಟಿರೋ ಮನುಷ್ಯನೇ ಪ್ರೀತಿಯಿಂದ ಎಲ್ಲರಿಗೂ ನಮಸ್ತೆ! ನಮಸ್ತೇ ಅನ್ನುತ್ತಿದ್ದಾರೆ.... ತಲೆಯ ಮೇಲಿರೋ ಟೋಪಿಯೂ ದೊಗಲೆ ದೊಗಲೆಯಾಗಿದೆ. ಒಂದು ಬಾರಿ ಹಳ್ಳೀಗೆ ಇನ್ಸ್‌ಪೆಕ್ಟರ್ ಬಾಬು ಬಂದಿದ್ದರಲ್ಲಾ! ನೋಡಿದ್ರೇನು! ಇಡೀ ಮೈಗೇ ತೊಗಲಿನ ಬಟ್ಟೆ ಹಾಕ್ಕೊಂಡಿದ್ರು. ಮಂತ್ರಿ ಅಂದರೆ ಹೀಗಿರ್ತಾರಾ? ಇವರೆಂಥ ಆಫೀಸರೂ?

ಕಾಳೀಚರಣ ಹೇಳಿದ: ಮಂತ್ರಿ! ಅಲ್ಲಿ ಅವರು ರಾಜೇಂದ್ರಬಾಬು. ಸ್ವರಾಜ್ಯದ ಹಾಡಿನಲ್ಲಿ ದಿನಾ ಕೇಳ್ತೀವಲ್ಲಾ .... ದೇಸವಾಕೆ ಖಾತಿರ್ ಮಜರೂಲ್ ಹಕ್ ಭಯಲೆ ಫಕೀರವಾ, ಹೋ ದೀನ್ ಭೇಲೆ ರಜಿನ್ದರ್ ಪರಸಾದ್ ದೇಸವಾಸಿ ಯೋ (ದೇಶಕ್ಕಾಗಿ ಮಜರೂಲ್ ಹಕ್ಕರು ಫಕೀರರಾದರು, ರಾಜೇಂದ್ರಬಾಬು ದೀನರಾದರು). ದೇಶಕ್ಕೋಸ್ಕರ ತಮ್ಮ ಸರ್ವಸ್ವವನ್ನೂ, ಭೂಮಿ, ಮನೆ, ಧನ-ಧಾನ್ಯ, ಹಸುಕರುಗಳು ಎಲ್ಲವನ್ನೂ ಕಳೆದುಕೊಂಡು ಫಕೀರರಾದರು.... ಹೂಂ.... ಈಗ ಇವರು ಮಂತ್ರಿಗಳಿಗಿಂತ ಪ್ರಭಾವಶಾಲಿಗಳಪ್ಪಾ! ದೇಶಕ್ಕೋಸ್ಕರ ಎಲ್ಲಾನೂ ತ್ಯಾಗಮಾಡಿದ್ದಾರೆ....

ಚೌಧರಿ, ಬಾಲದೇವನ ಕೈಲಿ ಹತ್ತು ರೂಪಾಯಿಗಳ ನೋಟು ಕೊಟ್ಟರು.

"ಎಲ್ಲರಿಗೂ ತಿಂಡಿ ಕೊಡಿಸು."

"ಜೈ! ಜೈ! ಹೊರಡಿ ಹೊರಡಿ!"

ಕಾಳೀಚರಣ ಎಲ್ಲಿ? ವಾಸುದೇವನೂ ಕಾಣಿಸ್ತಿಲ್ಲ. ಹಿಂತಿರುಗಿ ಹೋಗುವಾಗ ಘೋಷಣೆಗಳನ್ನು ಕೂಗುವ ಅವಶ್ಯಕತೆಯೇನೂ ಇಲ್ಲ. ಆದರೆ ಕಾಳೀ

ಚರಣ, ವಾಸುದೇವ ಎಲ್ಲಿಗೆ ಹೋದರು: ಗುಂಪಿನಲ್ಲಿ ಯಾರೋ ಹೇಳಿದರು: "ಅವರಿಬ್ಬರೂ ಪೈಜಾಮಾ ಹಾಕಿಕೊಂಡಿದ್ದ ವ್ಯಕ್ತಿಯ ಜೊತೆ ಹೋದರು?" ····ಪೈಜಾಮಾ ಹಾಕಿಕೊಂಡಿದ್ದ ವ್ಯಕ್ತಿಯೇ ಆದರೆ ಹೇಳದೇ ಕೇಳದೆ ಯಾಕೆ ಹೋದರು? ಪಟ್ಟಣದ ವಿಚಾರ····ಈಚಿನ ದಿನಗಳಲ್ಲಿ ಬಾಲದೇವನಿಗೆ ಕಾಳೀಚರಣನ ವಿಚಾರದಲ್ಲಿ ಸಮಾಧಾನವಿಲ್ಲ. ಕಾಳೀಚರಣನೂ ಬಾಲದೇವ ನಿಂದ ದೂರ ದೂರವಾಗಿಯೇ ಇರುತ್ತಾನೆ.

"ಕಾಳೀಚರಣ ಅಲ್ಲ, ಕಾಮ್ರೇಡ್ ಕಾಳೀಚರಣ. ಕಾಮ್ರೇಡ್ ಅಂದರೆ ಜೊತೆಗಾರ. ನಾವೆಲ್ಲರೂ ಜೊತೆಗಾರರೇ. ಇಲ್ಲಿ ಯಾರೂ ಲೀಡರ್ ಎನ್ನಿಸಿ ಕೊಳ್ಳುವುದಿಲ್ಲ. ಎಲ್ಲರೂ ಲೀಡರ್, ಎಲ್ಲರೂ ಜೊತೆಗಾರರು····ಒಳ್ಳೇದು ಕಾಮ್ರೇಡ್, ನಿಮ್ಮ ಹಳ್ಳಿಯಲ್ಲಿ ಹೆಚ್ಚು ಜನ ಯಾವ ಜಾತಿಯವರು?···· ಯಾದವರು: ಸರಿ. ರೈತರು?····ಒಬ್ಬರೂ ಇಲ್ಲವೇ! ಗುಡ್. ಮೆರವಣಿಗೆ ಯಲ್ಲಿ ಇದ್ದವರೆಲ್ಲಾ ಬಾಲದೇವನಿಂದ ಪ್ರಭಾವಿತರಾಗಿದ್ದಾರೇನು? ಅಂದರೆ ಬ್ಲೈಂಡ್ ಫಾಲೋವರ್····ಅಂದರೆ ಕಣ್ಣು ಮುಚ್ಚಿಕೊಂಡು ಹೇಳಿದ್ದನ್ನು ನಂಬೋದು. "ಕುರುಡು ಭಕ್ತರು. ಹೌದೇ?"

"ಮಹಂತ ಸೇವಾದಾಸನೊಬ್ಬ ಕುರುಡು ಭಕ್ತನಾಗಿದ್ದ ಅವನ ಕೊಠಾರಿನ್····"

"····ಸರಿ, ಒಳ್ಳೇದು. ನಿಮಗೆ ಎಲ್ಲಾ ಮಾತುಗಳೂ ಅರ್ಥವಾಯ್ತು ತಾನೇ? ಸದಸ್ಯತ್ವದ ಫಾರಂ ತೊಗೊಂಡು ಹೋಗಿ. ರಾಜ ಐರ್ಲೀ, ಇವರಿ ಗೊಂದಿಷ್ಟು ಲಿಟರೇಚರ್ ಕೊಡಿ. ಕಾಮ್ರೇಡ್ ಸೈನಿಕಜೀನ ಇಲ್ಲಿಗೆ ಕಳುಹಿಸಿ. ···ಇವರು ಕಾಮ್ರೇಡ್ ಗಂಗಾಪ್ರಸಾದಸಿಂಹ ಯಾದವ ಸೈನಿಕರು, ಇವರು ಕಾಮ್ರೇಡ್ ಕಾಳೀಚರಣ ಮತ್ತು ನಿಮ್ಮ ಹೆಸರೇನು? ಹಾಂ ವಾಸುದೇವ, ಈವತ್ತು ಮೇರೀಗಂಜಿನಿಂದ ರಾಮಕೃಷ್ಣ ಆಶ್ರಮಕ್ಕೆ ಮೆರವಣಿಗೆ ಬಂತಲ್ಲಾ, ಅದರ ನಾಯಕರು ಇವರೇ. ಪಾರ್ಟಿಯ ಪುಸ್ತಕದಲ್ಲಿ ಸೈನ್ ಮಾಡಿಸಿಕೊಳ್ಳಿ. ಮೇರೀಗಂಜಿನಲ್ಲಿ ಎಲ್ಲರಿಗಿಂತ ಹೆಚ್ಚಾಗಿರುವುದು ಯಾದವ ಸಂಗಡದ ಜನ. ನೀವು ಅಲ್ಲಿಗೆ ಹೋಗೋದೇ ಒಳ್ಳೇದು. ಅಲ್ಲಿ ಆರ್ಗನೈಸ್ ಮಾಡೋದು ಕಷ್ಟವಿಲ್ಲ····ಅವನೇ, ಆ ಬಾಲದೇವ ಒಬ್ಬ····ಒಳ್ಳೇದು ಕಾಮ್ರೇಡ್ ಕಾಳೀಚರಣ, ನೀವು ಇನ್ನೇನಾದರೂ ಕೇಳಬೇಕೇನು?····"

"ನಾವು ಏನಾದರೂ ಕೆಲಸ ಮಾಡಿದರೆ, ಹತ್ತು ಜನ 'ಪಬ್ಲಿಕ್'ನ ಒಳ್ಳೇದಕ್ಕೋಸ್ಕರ. ಯಾರಾದರೂ ಲೆಕ್ಕ ಪತ್ರ ಅಂತ ತಡೆದರೆ ಏನು ಮಾಡ ಬೇಕು?" ಎಂದು ಕಾಳೀಚರಣ ಕೇಳಿದ.

ಜಿಲ್ಲಾ ಕಾರ್ಯದರ್ಶಿ ಯೋಚಿಸಲಾರಂಭಿಸಿದರು. ಆದರೆ ಕಾಮ್ರೇಡ್ ರಾಜಬಲ್ಲಿಯರು ಯೋಚಿಸುವುದಕ್ಕೆ ಸಮಯ ತೆಗೆದುಕೊಳ್ಳಲಿಲ್ಲ, ತೊದಲುತ್ತಾ ಅವರು ತಮ್ಮ ಮಾತು ಮುಗಿಸುವ ಹೊತ್ತಿಗೆ ಸ್ವಲ್ಪ ಸಮಯವಾಗಿತ್ತು ಅಷ್ಟೆ.... "ಕಾ—ಕಾಮರೆಡ್....ಸ—ಸ....ಸ್ಪಷ್ಟವಾಗಿ ಹೇಳಿಬಿಡಿ.. ..ನೀವು ರಿಯಾಕ್ಷನರೀ ಅಂತ ಹೇ..ಹೇಳಿಬಿಡಿ. ಇ....ಇದು ತೊಗೊಳ್ಳಿ ....ಎರಡು ಪು....ಪುಸ್ತಕಗಳು: "ಸಮಾಜವಾದಿಯೇ ಏಕಾಗಬೇಕು?" ....ಇವರಲ್ಲಿ ಎ....ಎಲ್ಲಾ ಬರೆದಿದೆ. "ಲಾಲ್ ಪತಾಕ" ದ (ಕೆಂಪು ಬಾವುಟ) ಒಂದು ಕಾ—ಕಾಫೀನೂ ತೊ....ತೊಗೊಂಡು ಹೋಗಿ. ಇದರ ಗ್ರ....ಗ್ರಾ....ಗ್ರಾಹಕರಾಗಿ ಬಿಡಿ. ಕೆಂಪು ಬಾ....ಬಾವುಟ ತೊಗೊಂಡರೆ ತಾನೇ?"

ಕೆಂಪು ಬಾವುಟ:

> ಊಠ್ ಮೆಹನತಕಶ್ ಅಬ್ ಹೋಶ್ ಮೇಂ ಆ ಹಾಥ್ ಮೇಂ ಝಂಡಾ
> ಲಾಲ್ ಉಠಾ, ಜುಲ್ಮ್ ಕಾ ನಾಮೋನಿಶಾನ್ ಮಿಟಾ ಅಬ್ ಹೋಶ್
> ಮೇಂ ಆ ಬೇದಾರ್ ಹೋಜಾ:

ದುಡಿಯುವವರೇ ಎಚ್ಚರಗೊಳ್ಳಿ, ಕೈಯಲ್ಲಿ ಕೆಂಪು ಬಾವುಟ ಹಿಡಿದೆತ್ತಿ—ದಬ್ಬಾಳಿಕೆಯ ಹೆಸರೇ ಅಳಿಸಿಹೋಗಲಿ. ಈಗ ಜಾಗ್ರತರಾಗಿ.

ಕಾಮ್ರೇಡ್ ಕಾಳೀಚರಣ್ ಮತ್ತು ಕಾಮ್ರೇಡ್ ವಾಸುದೇವ: .... ಸೋಷಿಯಲಿಸ್ಟ್ ಪಾರ್ಟಿ:.... ರಸ್ತೆಯಲ್ಲಿ ಬರುವಾಗ ಕಾಳೀಚರಣ ವಾಸುದೇವನಿಗೆ ತಿಳಿಸಿದ: "ಇದೇ ನಿಜವಾದ ಪಾರ್ಟಿ. ಬಿಸಿ ಪಾರ್ಟಿ, 'ಕ್ರಾಂತಿದಳ'ದ ಹೆಸರು ಕೇಳಿದೀಯೇನು?"...."ಬಮ್ ಫೋಡ್ ದಿಯಾ ಫಟಾಕ್ ಸೆ ಮಸ್ತಾನಾ ಭಗತ್‌ಸಿಂಗ್."

ಭಗತ್‌ಸಿಂಗ್ ಫಟಾಕ್ ಎಂದು ಬಾಂಬ್ ಎಸೆದ.

(ವೀರ ಭಗತ್‌ಸಿಂಹ ಬಾಂಬ್ ಹಾಕಿಬಿಟ್ಟ) ....ಈ ಹಾಡನ್ನು ಕೇಳಿಲ್ವಾ? ಅದೇ ಪಾರ್ಟಿ. ಇದರಲ್ಲಿ ಯಾರೂ ಲೀಡರಿಲ್ಲ. ಎಲ್ಲರೂ ಜೊತೆಗಾರರು. ಎಲ್ಲರೂ ಲೀಡರ್. ಕೇಳಲಿಲ್ವಾ ಅಹಿಂಸಾವಾದ ಅನ್ನೋರು ಬೂರ್ಜ್ವಾಗಳು

ಬಾಲದೇವ ಬೂರ್ಜ್ವಾಪೂಂಜೀವಾದಿ.... ಈ ಪುಸ್ತಕದಲ್ಲಿ ಎಲ್ಲಾ ಬರೆದಿದೆ ಬೂರ್ಜ್ವಾ, ಪೂಂಜೀವಾದ, ಪೂಂಜೀಪತಿ, ಅತ್ಯಾಚಾರಿ ಜಮೀಂದಾರ,.... ದುಡಿದವನು ತಿನ್ನುತ್ತಾನೆ....ಹೀಗೇ....ಇನ್ನು ಬಾಲದೇವನ ನಾಯಕತ್ವ ನಡೆಯೋದಿಲ್ಲ. ಯಾವಾಗ ನೋಡಲಿ ಅಹಿಂಸಾವಾದ ಅನ್ನೋದು, ಅನಶನ ಆರಂಭಿಸೋದು....ಬಟ್ಟೆ ಮಾರುವ ಕಾಂಟ್ರಾಕ್ಟ್ ಹೇಗಾದರೂ ಸಿಕ್ಕಿಬಿಡಲಿ, ನೋಡ್ತಿರು."

ಸ್ಟೇಷನ್ನಿನಲ್ಲಿ ವಾಸುದೇವನೂ ಒಂದು ಪುಸ್ತಕ ಖರೀದಿ ಮಾಡಿದ. ಬೆಲೆ ಕೇವಲ ಒಂದು ಆಣೆ. "ಕೆಂಪು ಪುಸ್ತಕ." ಒಬ್ಬ ಮನುಷ್ಯ ಚೀಲದಲ್ಲಿಟ್ಟು ಕೊಂಡು ಮಾರುತ್ತಿದ್ದ: "ಏಸುವಿನ ಸಂದೇಶ."

ಈಗ ಎರಡು ಪುಸ್ತಕಗಳಾದವು: "ಏಸುವಿನ ಸಂದೇಶ" ಮತ್ತು "ದ್ವಂದ್ವಾತ್ಮಕ ಭೌತಿಕವಾದ".

## 17

ಆಚಾರ್ಯ ಗುರು ಕಾಶಿಯಿಂದ ಬಂದರು.

ಎಲ್ಲಾ ಮಠಗಳಿಗೂ ಆಚಾರ್ಯ ಗುರುಗಳೇ ಅಧಿಕಾರಿಗಳು. ಜೊತೆಗೆ ಮೂವತ್ತು ಜನ ಸಾಧುಗಳೂ ಬಂದಿದ್ದಾರೆ. ಭಂಡಾರಿ, ಅಧಿಕಾರಿ, ಸೇವಕ, ಆಪ್ತ ಸೇವಕ, ಭಂಗಿ ತಯಾರಿಸುವವನೂ, ಅಮೀನ, ಗುಮಾಸ್ತೆ ಮತ್ತು ಸಂಗೀತಗಾರ. ಸಾಧುಗಳ ಗುಂಪಿನಲ್ಲಿ ಒಬ್ಬ ನಾಗಾ ಸಾಧುವೂ ಇದ್ದಾನೆ. ಅವನು ಬೇರೆ ಮತದವನಾದರೂ ಆಚಾರ್ಯರು ಅವನನ್ನು ತಮ್ಮ ಜೊತೆಯಲ್ಲೇ ಇಟ್ಟು ಕೊಂಡಿರುತ್ತಾರೆ. ಅವನು ತುಂಬಾ ಕೋಪಿಷ್ಠ. ಕೈಯಲ್ಲಿ ಚಿಕ್ಕದೊಂದು ಕೊಡಲಿ ಬೇರೆ ಇಟ್ಟುಕೊಂಡಿರುತ್ತಾನೆ. ಉದ್ದವಾದ ಗಡ್ಡ, ಜಟೆ ಇಡೀ ದೇಹಕ್ಕೆ ವಿಭೂತಿ ಸವರಿಕೊಂಡಿರುತ್ತಾನೆ. ಸೊಂಟದಲ್ಲಿ ಬೆಳ್ಳಿಯ ಒಂದು ಉಡಿದಾರ ಮಾತ್ರ; ನಗ್ನನಾಗಿರುತ್ತಾನೆ. ಮಹಂತರ ಜೊತೆ ಅವನು ಹೋದ ಕಡೆಗಳಲ್ಲೆಲ್ಲಾ ಆ ಮಠದ ಜನರನ್ನು ಅವನು ಹಣ್ಣುಗಾಯಿ ನೀರುಗಾಯಿ ಮಾಡಿಬಿಡುತ್ತಿದ್ದ

ಸೇವೆಯಲ್ಲಿ ಕಿಂಚಿತ್ ಲೋಪ ಕಂಡುಬಂದರೂ ಮುಗಿಯಿತು ಕಥೆ. ಆದ್ದ ರಿಂದಲೇ ಆಚಾರ್ಯರು ಅವನನ್ನು ತಮ್ಮ ಜೊತೆಯಲ್ಲೇ ಎಲ್ಲಾ ಕಡೆ ಕರೆದು ಕೊಂಡು ಹೋಗುತ್ತಾರೆ.

ಆ ನಾಗಾ ಸಾಧು ಸಿಟ್ಟುಗೊಂಡಾಗ ಅವನ ಬಾಯಿಂದ ಅಶ್ಲೀಲ ಬೈಗಳ ಬಿರುಮಳೆಯೇ ಸುರಿಯುತ್ತದೆ. ಬಂದಕೂಡಲೇ ಲಕ್ಷ್ಮಿಯ ಮೇಲೆ ರೇಗಿಬಿದ್ದ:

"ಥೂ ನೀಚ ಜಾತಿಯವಳೇ, ಊರು ಸುತ್ತುವವಳೇ, ವೇಶ್ಯೆ, ಏನಂತ ತಿಳ್ಕೊಂಡಿದೀ! ನೀನು ಇಡೀ ಪ್ರಪಂಚಾನೇ ಕುರುಡು ಅಂದ್ಕೊಂಡ್ಯೇನು? ಮಾತಾಡೇ··· ಮೆಣಸಿನಕಾಯಿಪುಡಿ ಕಣ್ಣಿಗೆ ಎರಚಿಬಿಡ್ತೀನಿ. ಚಿನಾಲಿ, ಆಚಾರ್ಯ ಗುರುಗಳನ್ನು ಬೈಯ್ಯೊ ಅಷ್ಟು ಸೊಕ್ಕೇನೇ ನಿನಗೆ? ನಿನ್ನ ಮುಖವನ್ನು ಕೊಡಲಿಯಿಂದ ಕೆತ್ತಲೇನು? ನಾಯಿ. ಸಾಧುಗಳ ರಕ್ತ ಹರಿಸಿ, ಬಾಬುಗಳ ಜೊತೆ ಮೆರೆದಾಡ್ತೀಯೇನು? ಕೆನ್ನೆಗೆ ಎರಡು ಬಿಗೀಲೇನು? ಹುಚ್ಚಿ."

ಲಕ್ಷ್ಮಿ ಕೈ ಜೋಡಿಸಿಕೊಂಡು ಕುಳಿತುಬಿಟ್ಟಳು. ನಾಗಾ ಸಾಧುವಿನ ಬೈಗಳಿಗೆ ಯಾರು ಗಮನ ಕೊಡುವುದಿಲ್ಲ. ಅದನ್ನು ತಪ್ಪಾಗಿಯೂ ತಿಳಿಯುವು ದಿಲ್ಲ. ಅದು ಆಶೀರ್ವಾದ. ಅವಳು ನಾಗಾ ಸಾಧುವಿನ ಪಾದಗಳನ್ನು ಹಿಡಿದು ಕೇಳಿಕೊಂಡಳು:

"ಪ್ರಭೂ ದಾಸಿಯ ಅಪರಾಧಗಳನ್ನು ಕ್ಷಮಿಸಿ."

ರಾಮದಾಸನಿಗಂತೂ ಚಡಾವಿನಿಂದ ಹೊಡೆದೂ ಹೊಡೆದೂ ಮೈ ಚರ್ಮ ವನ್ನೇ ಸುಲಿದುಬಿಟ್ಟ: "ಹಂದಿ, ನಾಯಿ, ನೀನು ಮಹಂತನಾಗ್ತೀಯಾ? ಈಕಡೆ ಬಾ. ನಿನಗೆ ಈ ಚಪ್ಪಲಿಯಿಂದಾನೇ ಮಹಂತ ಪಟ್ಟದ ತಿಲಕವನ್ನಿಡ್ತೀನಿ. ನಿನ್ನಮ್ಮನ····ನ ಮೇಯಿಸೋನೇ····ನಡಿ ನಡಿ ಒಲೆ ಹಚ್ಚು."

ಲಡಸಿಂಘದಾಸ ಖುಷಿಯಾಗಿದ್ದ. ಅದಕ್ಕೇ ತಾನೇ ಅವನು ಎಲ್ಲರನ್ನೂ ಸ್ವಾಗತಿಸಲು ಶಿಷನ್ನಿನವರೆಗೆ ಹೋಗಿದ್ದ. ವಿಚಾರವನ್ನೆಲ್ಲಾ ಕೇಳಿ ಆಚಾರ್ಯರೂ ಸಿಟ್ಟಾಗಿದ್ದರು····ಈ ದಾಸೀನ ಮಠದಿಂದಾನೇ ಓಡಿಸಿಬಿಡ ಬೇಕು. ಲಡಸಿಂದಾಸ ನಾಗಾ ಸಾಧುವಿಗಂತೂ ಐದು ಸೇರಿನಷ್ಟು ಅಫೀಮು ಕೊಡಿಸಿದ್ದ. ಅಧಿಕಾರಿಗೆ ನೂರು ರೂಪಾಯಿ ಬಹುಮಾನ ಕೊಟ್ಟಿದ್ದ···· ಮಹಂತ ಸ್ಥಾನ ಅವನಿಗೇ ಮೀಸಲಾದದ್ದು ಸದ್ಗುರುವಿನ ದಯೆ!

ಆಚಾರ್ಯ ಗುರುಗಳು ಲಕ್ಷ್ಮಿಗೆ ಸ್ಪಷ್ಟವಾಗಿ ಹೇಳಿಬಿಟ್ಟರು. "ರಾಮದಾಸನಿಗೆ ಮಹಂತ ಸ್ಥಾನ ಸಿಗುವುದಿಲ್ಲ. ಅವನು ಮಹಂತ ಸೇವಾದಾಸನ

ಶಿಷ್ಯನೆನ್ನುವುದಕ್ಕೆ ಏನು ಸಾಕ್ಷಿಯಿದೆ? ಎಲ್ಲಾದರೂ ಬರೆದಿದೆಯೇನು? ಯಾವುದಾವರೂ ಉಯಿಲು ಇದೆಯೇನು? ಪಂಥದ ನಿಯಮದ ಪ್ರಕಾರ ಶಿಷ್ಯನಿಲ್ಲದ ಮಠದ ಮಹಂತನನ್ನು ಆಚಾರ್ಯರೇ ನೇಮಿಸಬಹುದು. ನೀನು ಮಠದಲ್ಲಿ ಇರಕೂಡದು. ಸೇವಾದಾಸ ನಿನ್ನನ್ನು ಉಪಪತ್ನಿಯಾಗಿ ಇಟ್ಟುಕೊಂಡಿದ್ದ. ಈಗ ಸೇವಾದಾಸನಿಲ್ಲ. ನೀನು ನಿನ್ನ ದಾರಿ ಹಿಡಿದುಹೋಗು.''

''ಪ್ರಭುಗಳ ಇಚ್ಛೆಯಂತೆ ನಡೀತೀನಿ.''

ಪ್ರಭುಗಳ ಇಚ್ಛೆ....ಅವರೆ ನಾಗಾ ಸಾಧುವಿನ ಇಚ್ಛೆ.

ನಾಗಾ ಸಾಧು ರಾತ್ರಿಯಲ್ಲಿ ಎದ್ದು ಒಮ್ಮೆ ಸುತ್ತ ನೋಡಿ. ಆಮೇಲೆ ಲಕ್ಷ್ಮಿಯ ಕೊಠಡಿಯ ಕಡೆ ಬರಿಗಾಲಲ್ಲಿ ನಡೆದ. ಚಡಾವು ಇದ್ದರೆ ಖಟ ಖಟ ಶಬ್ದವಾಗುತ್ತದೆ.

....ನೀತಿಗೆಟ್ಟವಳು ಚಿಲಕ ಹಾಕ್ಕೊಂಡು ಮಲಗಿದ್ದಾಳೆ....ಇಲ್ಲಿ ಮಲಗಿರೋರು ಯಾರು? ಅವನೇ ನಾಯಿ ರಾಮದಾಸ....'' ಏಳು ಏಳು. ನಿನ್ನ ಮನೆ ಹಾಳಾಯ್ತು. ಆ ದಾಸೀನ ಎಬ್ಬಿಸು. ಗಾಂಜಾದ ನಗೆ ಎಲ್ಲಿಟ್ಟಿದ್ದಾಳಂತೆ? ಏಳು ತೆಗೆದುಕೊಡು.''

''ಸ್ವಾಮೀ, ಅರ್ಧ ರಾತ್ರಿಯಲ್ಲಿ ಗಾಂಜಾನೇ....''

''ಬಾಯ್ಮುಚ್ಚು ವೇಶ್ಯೆ ಮಗನೇ. ದಾಸೀನ ಎಬ್ಬಿಸು.''

''ಅಪ್ಪಣೆ ಪ್ರಭು.''—ಲಕ್ಷ್ಮಿ ಬಾಗಿಲು ತೆರೆದು ಹೊರಗಡೆ ಬಂದಳು.

''ಗಾಂಜಾ ಎಲ್ಲಿದೆ?''

''ತಂದುಕೊಡ್ತೀನಿ ಸ್ವಾಮಿ,'' ಎನ್ನುತ್ತಾ ಲಕ್ಷ್ಮಿ ಒಂದು ದೊಡ್ಡ ಪೊಟ್ಟಣವನ್ನು ಸಾಧುವಿನ ಕೈಗಿಟ್ಟಳು.

....''ಓ ಈ ಊರು ಸುತ್ತುವವಳ ಹತ್ತಿರ ಇಷ್ಟೊಂದು ಅಫೀಮು ಎಲ್ಲಿಂದ ಬಂತೋ? ನೂರು ಸಲಕ್ಕೆ ಪೂರ್ತಿ ಸಾಕಾಗುತ್ತೆ...ಈ ಸುಡುಗಾಡು ರಾಮದಾಸ ಇಲ್ಲೇ ನಿಂತುಕೊಂಡು ಏನು ಮಾಡ್ತಿದಾನೋ?...''

''ಏ ಹಂದಿ. ಇಲ್ಲಿ ನಿಂತ್ಕೊಂಡು ಏನುಮಾಡ್ತಿದೀಯೋ''

ಕಟ್....ಎನ್ನುತ್ತಾ ಲಕ್ಷ್ಮಿ ಬಾಗಿಲನ್ನು ಮುಚ್ಚಿಕೊಂಡಳು.

''ಹೂಂ. ಒಳ್ಳೇದು. ನಾಳೆ ನೋಡಿಕೊಳ್ತೀನಿ. ಕೂದಲು ಹಿಡಿದು ಮಠದಿಂದ ಹೊರಕ್ಕೆ ಎಳೆದುಹಾಕದಿದ್ದರೆ ಗುರು ಮತ್ಸ್ಯೇಂದ್ರನಾಥನೋಲಾಣೆ.''

ಲಡಸಿಂಘದಾಸ ಒಂದು ಬಾರಿ ಲಕ್ಷ್ಮಿಯೊಡನೆ ಏಕಾಂತದಲ್ಲಿ ಮಾತನಾಡಬೇಕೆಂದು ಯೋಚಿಸುತ್ತಿದ್ದ: "ನೀನೇನೂ ಯೋಚಿಸಬೇಡ ಲಕ್ಷ್ಮಿ. ಮಹಂತನಾಗುವುದು ನಾನೇ. ನೀನು ಮಠದಲ್ಲೇ ಇರುವೆಯಂತೆ. ನಿನ್ನನ್ನು ಈ ಮಠದಿಂದ ಯಾರೂ ಹೊರಗಡೆ ಕಳುಹಿಸಲಾರರು. ನೀನು ನಿರಾಶಳಾಗಬೇಡ." ಆದರೆ ಅವಳೊಡನೆ ಮಾತನಾಡುವುದಕ್ಕೆ ಅವನಿಗೆ ಸಮಯವೇ ಸಿಗುತ್ತಿಲ್ಲ. ಬಹುಶಃ ಬೆಳಗ್ಗಿನ ಹೊತ್ತಿಗೆ ಲಕ್ಷ್ಮಿ ಹೊರಟೇಹೋಗುತ್ತಾಳೇನೋ?

ಆಚಾರ್ಯ ಗುರುಗಳ ಯುವಕ ಅಧಿಕಾರಿಗೂ ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ. "ಪೂರ್ಣಿಯಾ ಜಿಲ್ಲೆಯಲ್ಲಿ ಕಂಬಳಿಯ ಕೆಳಗೂ ನುಗ್ಗಿ ಸೊಳ್ಳೆಗಳು ಕಡಿಯುತ್ತವೆ."

ಬೆಳಗಾಗುತ್ತಲೇ ಲಕ್ಷ್ಮಿ ಬಾಲದೇವನ ಹತ್ತಿರ ಹೋದಳು. ಬಾಲದೇವ ಬಟ್ಟೆ ಹಂಚುತ್ತಿದ್ದ. ಎಲ್ಲ ವಿಚಾರಗಳನ್ನೂ ಕೇಳಿ ಅವನೆಂದ: "ಕೊಠಾರಿನ್ ಆಚಾರ್ಯ ಗುರು ಎಲ್ಲ ಮಠಗಳಿಗೂ ನಾಯಕರು. ಅವರ ಮನಸ್ಸಿಗೆ ಬಂದದ್ದೆ ನಡೆಯುತ್ತದೆ. ಹೀಗಿರುವಾಗ ನಾವೇನು ಮಾಡಬಲ್ಲೆವು? ದೊಡ್ಡ ಧರ್ಮ ಸಂಕಟ. ಬೇರೆಯವರ ಧರ್ಮದಲ್ಲಿ ಮೂಗು ಹಾಕೋದು ಸರಿಯಲ್ಲ. ಮೂರನೇ ಜಾವದಲ್ಲಿ ಪಟ್ಟಾಭಿಷೇಕ ಸಮಾರಂಭ ನಡೆಯುತ್ತದಲ್ಲವೇ. ಆಗ ನಾನೂ ಬರುತ್ತೇನೆ."

ಲಕ್ಷ್ಮಿಗೆ ಬಾಲದೇವನ ವಿಚಾರದಲ್ಲಿ ತುಂಬಾ ನಂಬಿಕೆಯಿತ್ತು. ತಹಸೀಲ್ದಾರರೂ ಮನೆಯಲ್ಲಿರಲಿಲ್ಲ. ಡಾಕ್ಟರು ಈ ಪಂಚಾಯಿತಿಗಳಿಗೆಲ್ಲಾ ಬರುವುದಿಲ್ಲ. ಸಿಂಘಜೀ ವಿಚಾರವನ್ನು ಕೇಳಿ ಸುಮ್ಮನಾದರು. ಖೇಲಾವನ್ ಬಾಲದೇವನ ಮೇಲೆ ಜವಾಬ್ದಾರಿ ಹೊರಿಸಿದ: "ಇದೆಲ್ಲಾ ಬಾಲದೇವನಿಗೇ ಗೊತ್ತು. ಸದ್ಗುರುವಿನ ದಯೆ ಇದ್ದಹಾಗೆ ಆಗಲಿ. ಅನ್ಯ ಉಪಾಯವೂ ಇಲ್ಲ."

"ನಮಸ್ಕಾರ ಕೊಠಾರಿನ್‌ಜೀ."

"ಯಾರು? ಕಾಳೀಚರಣ? ಸದ್ಗುರು ನಿಮಗೆ ಒಳ್ಳೆಯದನ್ನು ಮಾಡಲಿ."

"ಅಂದಹಾಗೆ 'ಪಟ್ಟಾಭಿಷೇಕ' ಸಮಾರಂಭ ಎಷ್ಟು ಹೊತ್ತಿಗೆ? ಕೀರ್ತನೆ ಮಾಡಿಸೋದಿಲ್ವೇನು?"

ಲಕ್ಷ್ಮಿ ಅಳುತ್ತಾ ಅಳುತ್ತಾ ಕಾಳೀಚರಣನಿಗೆ ಹೇಳಿದಳು: "ಕಾಳೀ ಬಾಬು, ಎಂಥ ಕೆಟ್ಟ ಕೆಟ್ಟ ಮಾತುಗಳನ್ನು ಅನ್ನಾರೆ. ಓಹ್ ಸದ್ಗುರು! ಇನ್ನು ನಾನು ಎಲ್ಲಿಗೆ ಹೋಗಲಿ? ನನಗೆ ಯಾರು ದಿಕ್ಕು?"

"ಒಳ್ಳೇದು ನೀವೇನೂ ಯೋಚನೆ ಮಾಡಬೇಡಿ····ಬಾಲದೇವ ಏನು ಮಾಡ್ತಾನೆ. ಅವನು ಬೂಜ್ವಾರ್····ನೀವು ಅಳಬೇಡಿ."

ಲಕ್ಷ್ಮಿ ಕಾಳೀಚರಣನನ್ನು ನೋಡಿದಳು····ಹಿಂದೆ ಪ್ರಯಾಣದಲ್ಲಿ ಒಬ್ಬ ಮಂತ್ರವಾದಿ ಸಾಧುವನ್ನೂ ನೋಡಿದ್ದಳು. ಕಾಳೀಚರಣ ಹಾಗೆಯೇ ಕಾಣುತ್ತಿದ್ದ.

ಮಠದಲ್ಲಿ ಎಲ್ಲಾ ಸಾಧುಗಳೂ, ಗೃಹಸ್ಥರೂ, ಸೇವಕರೂ ಶಾಮಿಯಾನದಲ್ಲಿ ಕುಳಿತಿದ್ದರು. ಲಡಸಿಂಘದಾಸ ತಲೆಯ ಕೂದಲನ್ನೆಲ್ಲಾ ಕತ್ತರಿಸಿಕೊಂಡಿದ್ದ. ಅರ್ಧ ಕತ್ತರಿಸಿದ್ದ ಮೀಸೆಯನ್ನೂ ಪೂರ್ತಿಯಾಗಿ ಕತ್ತರಿಸಿಕೊಂಡು, ಬಿಳಿಯ ಮಲ್ ಬಟ್ಟೆಯ ಹೊಸ ಲಂಗೋಟಿ ಧರಿಸಿದ್ದ. ದೇಹದ ಮೇಲೆ ಚದ್ದರೂ ಇರಲಿಲ್ಲ. ····ಚದ್ದರನ್ನು ಆಚಾರ್ಯರು ಹೊದಿಸುತ್ತಾರೆ. ಆಚಾರ್ಯರ ಗುಮಾಸ್ತೆ ನಿಬಂಧನೆಗಳನ್ನು ಬರೆಯುತ್ತಿದ್ದ. ಲಕ್ಷ್ಮಿ ಒಂದು ಮೂಲೆಯಲ್ಲಿ ನೆಲದ ಮೇಲೆ ಸುಮ್ಮನೆ ಕುಳಿತಿದ್ದಳು. ರಾಮದಾಸನ ದೇಹಕ್ಕೆಲ್ಲಾ ಅರಿಶಿನ ವನ್ನೂ, ಸುಣ್ಣವನ್ನೂ ಬಳಿದಿದ್ದರು. ಬಾಲದೇವನಿಗೆ ಲಕ್ಷ್ಮಿಯ ಬಗ್ಗೆ ತುಂಬಾ ಮರುಕವೆನಿಸಿತು. ಆದರೆ ಏನುಮಾಡುವುದು?

"ಎಲ್ಲಾ ಸಾಧು ಸಂತರೂ ಸೇವಕರೂ ಕೇಳಿ...."

—ಆಚಾರ್ಯರ ಗುಮಾಸ್ತೆ ನಿಬಂಧನೆಗಳನ್ನು ಓದಲಾರಂಭಿಸಿದ: "ಲಡಸಿಂಘದಾಸ, ಗೋವರ್ಧನದಾಸನ ಶಿಷ್ಯ. ಬೈರಾಗೀ ಜಾತಿ···· ····ನೀವೆಲ್ಲಾ ಈ ಪುಸ್ತಕದಲ್ಲಿ ಸಹಿ ಮಾಡಿ."

ಲಕ್ಷ್ಮಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು 'ಸದ್ಗುರು'.

"ಏ ಸುಮ್ಮನಿರೇ ಬೀದಿಯವಳೇ. ಸುಮ್ಮನಾಗ್ತೀಯೋ ಇಲ್ಲಾ, ದೊಣ್ಣೆ ಯಿಂದ ಕೊಡಲೋ?"—ನಾಗಾ ಸಾಧು ಅಬ್ಬರಿಸಿದ.

ಹಸ್ತಾಕ್ಷರ ಮಾಡುವುದಕ್ಕೆ ಮುಂದೆ ಬಂದವರು ಹಸ್ತಾಕ್ಷರ ಹಾಕಿದರು. ಬಾಲದೇವನೂ ಸಹಿ ಹಾಕಿದ. ಅವನ ಕೈ ಸ್ವಲ್ಪವೂ ನಡುಗಲಿಲ್ಲ. ಕಾಳೀಚರಣ ಪುಸ್ತಕವನ್ನು ಕೈಗೆತ್ತಿಕೊಂಡು ಎದ್ದು ನಿಂತ: "ಆಚಾರ್ಯರೇ, ಸೇವಾದಾಸ ಶಿಷ್ಯನಿಲ್ಲದೆ ಸತ್ತುಹೋದನೆಂದು ನೀವು ಬರೆದಿದ್ದೀರಲ್ಲಾ ಈ ಹಳ್ಳಿಯವರನ್ನೆಲ್ಲಾ ನೀವು ಮಂಕರು ಅಂತ ಅಂದುಕೊಂಡಿರೇನು?"

ಬಾಲದೇವ ಅವನನ್ನು ತಡೆದ:

"ಕಾಳೀಚರಣ, ಕೂತ್ಕೋ."

"ಕಾಳೀಚರಣ" ಖೇಲಾವನ ಗದರಿಸಿದ. ಆದರೆ ಕಾಳೀಚರಣ ಸುಮ್ಮನಾಗಲಿಲ್ಲ. ಯಾರು ಬೇಕಾದರೂ ಹಿಂಸಾವಾದ ಅನ್ನಲಿ, ಅಥವಾ ಅನಶನ ವ್ರತವನ್ನೇ ಆಚರಿಸಲಿ. ಅವನೂ ಭಾಷಣ ಮಾಡಬಲ್ಲ.

"....ನಮಗೆಲ್ಲಾ ಚೆನ್ನಾಗಿ ಗೊತ್ತು....ರಾಮದಾಸ ಈ ಮಠದ ಶಿಷ್ಯ. ಅವನನ್ನು ಮಹಂತನನ್ನಾಗಿ ಮಾಡುವ ಬದಲು, ಈ ಮೊದಲನೇ ದರ್ಜೆಯ ಬದ್ಮಾಷನನ್ನು ಮಹಂತನನ್ನಾಗಿ ಮಾಡ್ತೀರೇನು?....ಮಠಕ್ಕೆ ನಮ್ಮ ಪೂರ್ವಿಕರೂ ಜಮೀನು ಕೊಟ್ಟಿದ್ದಾರೆ. ಇದು ಯಾರ ಪಿತ್ರಾರ್ಜಿತ ಆಸ್ತಿಯೂ ಅಲ್ಲ...."

"ನಿನ್ನ ವಂಶ ಹಾಳಾಗ. ಬಾಯ್ಮುಚ್ಕೋ ಮೂರ್ಖ. ಶ್ವಾನ, ಈಗಲೇ ನಿನ್ನ ತಲೆ ಒಡೆದೇನು....ಯಾರು ನಿನ್ನ ಹೆತ್ತವಳು?"

"ಬಾಯ್ಮುಚ್ಚು" ಎನ್ನುತ್ತಾ ಕಾಮ್ರೇಡ್ ವಾಸುದೇವ ಹಾರಿ ನಿಂತ.

"ರಾಕ್ಷಸನನ್ನು ಹಿಡಿಗುಕೋ" ಕಾಮ್ರೇಡ್ ಸುಂದರ ಕೂಗಿದ.

"ತಪ್ಪಿಸಿಕೊಂಡು ಹೋಗಲು ಬಿಡಬೇಡ."

"ಬಾರಿಸಿ ನಾಲ್ಕೇಟು."

ಹೂಂ....ಒದ್ದು....ಹೊಡಿ.....ಹೋ ಸ್ವಲ್ಪ ತಡೀರಿ. ಏ ವಾಸುದೇವ, ಏ ಸುಂದರ....

ನಾಗಾ ಸಾಧು ಗಡ್ಡ ಬಿಡಿಸಿಕೊಂಡ, ಜಟೆ ಬಿಡಿಸಿಕೊಂಡ, ಮೈಮೇಲೆ ಬಿದ್ದ ಏಟುಗಳಿಂದ ಕಣ್ಣು ಕತ್ತಲೆಗಟ್ಟಿದವು. ಅಫೀಮಿನ ಅಮಲೆಲ್ಲಾ ಇಳಿದು ಹೋಯಿತು....ಕೊನೆಗೆ ಗಡ್ಡ, ಕೂದಲುಗಳನ್ನು ಬಿಡಿಸಿಕೊಂಡು, ಕೈಯ ಕೊಡಲಿಯನ್ನು ಅಲ್ಲೇ ಹಾಕಿ ಓಡಿಹೋದ...."ಹಿಡೀರಿ ಹಿಡೀರಿ, ಬಿಡಬೇಡಿ....ಹೋಗಲಿ ಬಿಡಿ, ಇನ್ನು ಹೊಡೀ ಬೇಡಿ...."ನಾಗಾ ಸಾಧು ಓಡಿಹೋಗುತ್ತಿದ್ದ. ವಿಭೂತಿ ಬಳಿದುಕೊಂಡಿದ್ದ ನಗ್ನ ದೇಹ, ಕೆದರಿದ ಜಟೆ, ಓಡುವಾಗಲಂತೂ ಅವನ ರೂಪ ಮತ್ತಷ್ಟು ಭಯಂಕರವಾಗಿ ಕಾಣುತ್ತಿತ್ತು. ಹಳ್ಳಿಯ ಹುಚ್ಚುನಾಯಿಯಂತೆ ಓಡುತ್ತಿದ್ದ ಲಡಸಿಂಘದಾಸ ನಾಲ್ಕು ಏಟು ತಿನ್ನುವಷ್ಟರಲ್ಲಿ ಬೇಡಿಕೊಳ್ಳಲಾರಂಭಿಸಿದ "ಮಹಂತ ಪದವಿ ತೊಗೊಳ್ಳೋದಿಲ್ಲ. ನನ್ನ ಬಿಟ್ಬಿಡಿ."

"ಬಿಟ್ಟುಬಿಡಿ ಹೋಗಲಿ" ಕಾಳೀಚರಣ ಅಪ್ಪಣೆ ಮಾಡಿದ. ಲಡಸಿಂಘ ದಾಸನೂ ಓಡಿದ.

ಪಂಚರಿಗೆ ಲಕ್ವ ಹೊಡೆದಂತಾಗಿತ್ತು. ಸಾಧುಗಳ ಸ್ಥಿತಿ ಚಿಂತಾಜನಕ ವಾಗಿತ್ತು. ಪಂಚರ ಮುಖದಿಂದ ಬೆವರು ಸುರಿಯುತ್ತಿತ್ತು. ಎಲ್ಲರ ಮಧ್ಯೆ ಕಾಳೀಚರಣ ಕೈಯಲ್ಲಿ ಪುಸ್ತಕ ಹಿಡಿದು ಸಿಕಂದರಷಾಹನಂತೆ ನಿಂತಿದ್ದ. ರೆಪ್ಪೆ ಹೊಡೆಯುವಷ್ಟರಲ್ಲಿ ಏನಾಗುತ್ತಿದ್ದುದು ಏನಾಗಿ ಹೋಯಿತು?.... ರಾಮಲೀಲೆ ಹೋಗಿ ಧನುರ್ಯಜ್ಞ ಆರಂಭವಾಗಿತ್ತು....

"ಆಚಾರ್ಯರೇ, ನಾವು ಪ್ರಾರ್ಥನೆ ಮಾಡುತ್ತಿದ್ದೇವೆ. ಈಗ ಪುಸ್ತಕದಲ್ಲಿ ರಾಮದಾಸನ ಹೆಸರು ಬರೆಸಿ, ಅವನಿಗೆ ಮಹಂತ ಪಟ್ಟವನ್ನು ಕಟ್ಟಿ...."

ಆಚಾರ್ಯರು ನಡುಗುವ ಧ್ವನಿಯಲ್ಲಿ ಹೇಳಿದರು: "ಯಜಮಾನರೇ, ನಾವು ಸದ್ಗುರುವಿನ ದಯೆಯಿಂದ....ನಾವು—ನಿಮಗೆ ಸೇವಾದಾಸನಿಗೆ ಯಾರೂ ಶಿಷ್ಯರೇ ಇಲ್ಲಾ ಅಂತ ಜನ ಹೇಳಿದರು. ರಾಮದಾಸ ಅವರ ಶಿಷ್ಯ ಅಂದಮೇಲೆ ಅವನೇ ಮಹಂತನಾಗ್ತಾನೆ. ಗುಮಾಸ್ತರೇ, ರಿಜಿಸ್ಟರಿನಲ್ಲಿ ಬರೀರಿ. ಚಪ್ಪರನ್ನು, ಮೊಸರಿನ ಪಾತ್ರೆಯನ್ನು ತನ್ನಿ...."

ರಾಮದಾಸ ಮತ್ತೆ ಸ್ನಾನ ಮಾಡಿ ಮೈಮೇಲಿದ್ದ ಅರಶಿನ, ಸುಣ್ಣದ ಕಲೆಗಳನ್ನು ತೊಳೆದುಕೊಂಡಿದ್ದ.

ಮೊಸರಿನ ಅಭಿಷೇಕ ತಲೆಯ ಮೇಲೆ ಬಿದ್ದಕೂಡಲೇ ಅವನಿಗೆ ದೇಹದ ಉಷ್ಣವೆಲ್ಲಾ ಇಳಿದಂತಾಯಿತು. ಸದ್ಗುರು, ಸದ್ಗುರು.

ಪೂಜೆಗೆ ಮೊದಲೇ ಆಚಾರ್ಯರು ಆಸನ ಬಿಟ್ಟಿದ್ದರು. ಪಂಚಾಯತಿಯ ಜನರೂ ತಮ್ಮ ತಮ್ಮ ಮನೆಗಳ ಕಡೆಗೆ ಹೊರಟರು. ಲಕ್ಷ್ಮಿ ಪೂಜೆಯ ಸಾಮಗ್ರಿಗಳನ್ನು ತಟ್ಟೆಯಲ್ಲಿಟ್ಟುಕೊಂಡು ಬಂದಳು: "ದಯವಿಟ್ಟು ಸ್ವೀಕರಿಸಿ ಪ್ರಭೂ. ದಾಸಿಯ ಅಪರಾಧವನ್ನು ಕ್ಷಮಿಸಿ."

"ಕಾಳೀ ಬಾಬು."

ಬಾಲದೇವ ತಿರುಗಿ ನೋಡಿದ. ಲಕ್ಷ್ಮಿಯು ಕಾಳೀಚರಣನನ್ನು ಒಳಗಡೆ ಕರೆದುಕೊಂಡು ಹೋಗುತ್ತಿದ್ದಳು....ಕಾಳೀಚರಣ ಅನ್ಯಾಯ—ಘೋರ ಅನ್ಯಾಯ ಮಾಡಿದ್ದಾನೆ. ಹಿಂಸಾಚರಣೆ ನಡೆಸಿದ್ದಾನೆ. ಈಬಾರಿ ಎರಡು ದಿನ ಉಪವಾಸ ಮಾಡಬೇಕು.

ಖೇಲಾವನ ಜಾತಿಯವರನ್ನೆಲ್ಲಾ ಕರೆಸಿ ಪಂಚಾಯತಿ ಸೇರಿಸಿ ಎಲ್ಲ ಮೂರ್ಖರಿಗೂ ಬುದ್ಧಿ ಕಲಿಸುತ್ತಾನೆ. ಹೇ ಭಗವಾನ್ ಸಾಧುಗಳ ಶರೀರವನ್ನು ಮುಟ್ಟುವುದೇ....

"ಕಾಳೀ ಬಾಬು, ನೀವೊಬ್ಬ ದೇವತೆ."

ಕಾಳೀಚರಣ ಕುಸ್ತಿ ಮಾಡುವವನು. ಕುಸ್ತಿ ಮಾಡುವವರು ಹೆಂಗಸರಿಂದ ಐದು ಕೈಯಳತೆ ದೂರದಲ್ಲಿರಬೇಕೆಂದು ಉಸ್ತಾದರು ಹೇಳಿದ್ದಾರೆ....ಅವನು ಐದು ಕೈಯಳತೆಗಿಂತ ಹೆಚ್ಚು ದೂರದಲ್ಲಿ ನಿಂತಿದ್ದಾನೆ.

## 18

"ಹೆಸರೇನು?"

"ಸನಿಚ್ಚರ ಮಹತೋ."

"ಎಷ್ಟು ದಿನಗಳಿಂದ ಕೆಮ್ಮಿದೆ? ಔಷಧಿ ಏನಾದರೂ ತೆಗೋತಿದ್ದ್ಯೋ ಇಲ್ವೋ?....ಏನಂದಿರಿ, ಉಗುಳಿನಲ್ಲಿ ರಕ್ತ ಬರುತ್ತೇ? ಯಾವಾಗಿನಿಂದ? ....ಒಂದೊಂದು ಸಲ ಮಾತ್ರಾನೇ....ಚೊಕ್ಕಟವಾಗಿರೋ ಒಂದು ಡಬ್ಬೀಲಿ ರಾತ್ರಿಯೆಲ್ಲಾ ಉಗುಳಿದ್ದನ್ನ ಸೇರಿಸಿಟ್ಟು ತೊಗೊಂಡು ಬನ್ನಿ. ಈ ಕಡೆ ಬನ್ನಿ ....ಜೋರಾಗಿ ಉಸಿರು ಬಿಡಿ....ಒಂದು ಎರಡು ಮೂರು ಎಣಿಸಿ— ಜೋರಾಗಿ. ಆಂ....ಹಾಗೇ...."

"ಹೆಸರೇನಪ್ಪಾ?"

"ದಾಸೂ ಗೋಪ್."

"ಎಲ್ಲಿ ಹೊಟ್ಟೆ ನೋಡೋಣ....ಹೂಂ....ಜ್ವರದ ಗೆಡ್ಡೆ ಇದೆ. ಇಂಜಕ್ಷನ್ ಕೊಡಬೇಕು. ಇಂಜಕ್ಷನ್ ಕೊಡೋ ದಿನ ಚೀಟಿ ತೊಗೊಂಡು ಬಾಪ್ಪ. ನಾಳೆ ರಕ್ತ ಪರೀಕ್ಷೆಗೆ ಕೊಡೋವಕ್ಕೆ ಬೆಳಿಗ್ಗೇನೇ ಬರಬೇಕು. ಗೊತ್ತಾಯ್ತೇನು?"

"ಹೆಸರೇನಮ್ಮಾ?"

"ನಿರ್ಮಲಾ."

"ಡಾಕ್ಟರ್"—ಮುದುಕನೊಬ್ಬ ಕೈಜೋಡಿಸಿಕೊಂಡು ಮುಂದೆ ಬಂದು ನಿಂತ. ದೀನನಾಗಿ ಪ್ರಾರ್ಥಿಸಿಕೊಂಡ: "ಈವತ್ತಿಗೆ ಒಂದು ವರ್ಷದ ಹಿಂದೆ, ದುಂಬಿ ನನ್ನ ಮಗಳ ಒಂದು ಕಣ್ಣನ್ನು ಚುಚ್ಚಿಬಿಟ್ಟಿತು. ಆಮೇಲೆ ಇನ್ನೊಂದು ಕಣ್ಣು ಮಂಕಾಗಿಹೋಯ್ತು. ಎಷ್ಟೋ ಮೂಲಿಕೆಗಳನ್ನು ಹಾಕಿ ಆಯ್ತು. ಆದರೆ ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ಈಗಂತೂ ಸ್ವಲ್ಪಾನೂ ಕಾಣೋದಿಲ್ಲ."

ಅಪೂರ್ವ ಸುಂದರಿ ಈ ನಿರ್ಮಲಾ. ಮುಖದ ಬಣ್ಣ ಹಾಲಿನಂತೆ ಬೆಳ್ಳಗಿತ್ತು. ವಿಶುದ್ಧ ಮೈಥಿಲೀ ಸೌಂದರ್ಯ:····ದುಂಬಿ ತಪ್ಪನ್ನೇನೂ ಮಾಡಿಲ್ಲ! ಕಣ್ಣು ನೋಡೋಣ····ಇನ್ನೂ ಸ್ವಲ್ಪ ಮುಂದೆ ಬನ್ನಿ····ಓಹ್ ಒಂದು ತೊಟ್ಟು ಐಡ್ರಾಪ್ ಇಲ್ಲದೆ ಎರಡು ಸುಂದರ ಕಣ್ಣುಗಳು ಸಂಪೂರ್ಣವಾಗಿ ಬೆಳಕನ್ನೇ ಕಳೆದುಕೊಂಡಿದ್ದವು····ಈಗ ಕೈಮೀರಿಹೋಗಿದೆ····ಡಾಕ್ಟರ್ ಕಣ್ಣುಗಳ ರೆಪ್ಪೆ ಹೊರಳಿಸಿ ಬೆಳಕಿನ ಸಣ್ಣ ಕಿರಣವಾದರೂ ಕಾಣುತ್ತದೇನೋ ಎಂದು ನೋಡಲು ಪ್ರಯತ್ನಪಟ್ಟರು····ಊಹುಂ····ಕಣ್ಣಿನ ಪಾಪೆಗಳು ಬೆಳ್ಳಗಾಗಿ ಹೋಗಿದ್ದವು····ಡಾಕ್ಟರ್ ಯೋಚಿಸಿದರು: ಕುಂಚದಿಂದ ಯಾರಾದರೂ ಚಿತ್ರಗಾರ ಈ ಕಣ್ಣುಗಳಿಗೆ ಬಣ್ಣ ತುಂಬುವುದು ಸಾಧ್ಯವಾದರೆ! ಹೌದು, ಯಾವನಾದರೂ ಚಿತ್ರಗಾರ ಮಾತ್ರ ಈ ಕಣ್ಣುಗಳನ್ನು ಸುಂದರವಾಗಿ ಮಾಡಬಲ್ಲ. ಬೆಳಕನ್ನು ಕೊಡಬಲ್ಲ.

"ಡಾಕ್ಟರ್" ಎಂದು ಕರೆದಳು. ಧ್ವನಿ ಎಷ್ಟೊಂದು ಮಧುರವಾಗಿದೆ:

"ನಿಮ್ಮ ಕೀರ್ತಿ ಕೇಳಿ, ತುಂಬಾ ನಂಬಿಕೆ ಹೊತ್ತು ಬಂದಿದೀನಿ. ಇಪ್ಪತ್ತೆರಡು ಹರಿದಾರಿ ದೂರದಿಂದ ಬಂದಿದೀನಿ. ದೇವರು ನಿಮಗೆ ಒಳ್ಳೇದು ಮಾಡಲಿ."

ಬೆಳಕನ್ನು ಕೊಡು! ಬೆಳಕನ್ನು ಕೊಡು! ಕತ್ತಲಲ್ಲಿ ನರಳುತ್ತಿರುವ ಜೀವ ಬೆಳಕಿಗಾಗಿ ಚಡಪಡಿಸುತ್ತಿದೆ. ಆತ್ಮ ವಿಕಲಗೊಂಡಿದೆ ಬೆಳಕು ಕೊಡು. ಆದರೆ ಡಾಕ್ಟರ್ ಏನು ಮಾಡಬಲ್ಲರು····ಊಹುಂ····ಡಾಕ್ಟರ್ ಅಂತಹ ಭಾವುಕತೆಗೆ ಒಳಗಾಗಬಾರದು.

"ಗಾಬರಿಯಾಗಬೇಡಿ. ಔಷಧಿ ಕೊಡ್ತೀನಿ. ಇಲ್ಲೇನಾದರೂ ವಾಸಿ ಆಗದಿದ್ದರೆ ಪಾಟ್ನಾಗೆ ಹೋಗಬೇಕಾಗುತ್ತೆ."

"ಬೇರೆಯವರು ಬನ್ನಿ. ....ಹೆಸರೇನು?"

"ರಾಮಚಲಿತ್ತರ ಸಹ."

"ನಿಮಗೇನಾಗಿದೆ ತೊಂದರೆ?"

"ಏನಾದರೂ ತಿಂದ ಕೂಡಲೇ ವಾಂತಿಯಾಗಿಬಿಡುತ್ತೆ. ನೀರು ಕುಡಿದರೂ...."

"ಯಾವಾಗಿನಿಂದ?"

"ಏಳು ದಿನಗಳಿಂದ."

"ಏನು? ಏಳು ದಿನಗಳಿಂದಾನೇ? ಸ್ವಲ್ಪ ಈಕಡೆ ಬನ್ನಿ."

"ಅಂ? ....ರೋಗಿ ಮನೇಲಿದ್ದಾನೆ."

"ಮನೆ ಎಲ್ಲಿದೆ?"

"ಸರಸೋನಿ ಬಿಜಲಿಯಲ್ಲಿ. ಇಲ್ಲಿಂದ ಒಂದು ಹರಿದಾರಿ ದೂರ ಆಗಬಹುದು."

ತಟಕ್ಕನೆ ಎಲ್ಲ ರೋಗಿಗಳೂ ಒಂದು ಪಕ್ಕಕ್ಕೆ ಸರಿದು ನಿಂತರು. ರಕ್ತ ಪಿಪಾಸಿಯಾದ ಭಯಂಕರ ಮೃಗವನ್ನು ಕಂಡು ಹಸುಕರುಗಳ ಗುಂಪು ಚೆದುರಿ ನಿಲ್ಲುವಂತೆ ಎಲ್ಲರೂ ದೂರ ಸರಿದರು. ಎಲ್ಲರ ಮುಖದ ಬಣ್ಣವೂ ಹಾರಿ ಹೋಯಿತು. ಹೆಂಗಸರೆಲ್ಲಾ ತಮ್ಮ ಮಕ್ಕಳನ್ನು ಸೆರಗಿನ ಮರೆಯಲ್ಲಿ ಸಿಕ್ಕಿಸಿ ಕೊಂಡರು. ಎಲ್ಲರ ಬೆದರಿದ ದೃಷ್ಟಿ ಒಂದೇ ಕಡೆ ನೆಟ್ಟಿತು.

ಡಾಕ್ಟರ್ ಹಿಂದಿರುಗಿ ನೋಡಿದರು—ಮಧ್ಯ ವಯಸ್ಸಿನ ಹೆಂಗಸು.... ಕುಲೀನ ಸ್ತ್ರೀ.

"ಏನಾಗಬೇಕಾಗಿತ್ತು?"

"ಡಾಕ್ಟರ್ ಇವನು ನನ್ನ ಮೊಮ್ಮಗ. ಒಬ್ಬನೇ ಒಬ್ಬ ಮೊಮ್ಮಗ. ನನ್ನ ಕಣ್ಮಣಿ. ಒಂದು ವರ್ಷದಿಂದ ಕಕ್ಕಸಿಗೆ ಹೋಗುವಾಗ ರಕ್ತ ಹೋಗುತ್ತೆ. ಇವನನ್ನು ಉಳಿಸಿಕೊಡಿ ಡಾಕ್ಟರ್...."

"ಗಾಬರಿಯಾಗಬೇಡಿ....ಈ ಕಡೆ ಬಾ ಮಗೂ. ಹೆಸರೇನಪ್ಪಾ?.... ಗಣೇಶ್. ಭೇಷ್: ಎಲ್ಲಪ್ಪಾ ಸ್ವಲ್ಪ ಹೊಟ್ಟೆ ತೋರಿಸು."

ಗಣೇಶನ ಅಜ್ಜಿ ಔಷಧಿ ತೆಗೆದುಕೊಂಡು ಹೊರಟುಹೋದಳು. ರೋಗಿಗಳ ಗುಂಪು ಮತ್ತೆ ಡಾಕ್ಟರ ಟೇಬಲ್ಲನ್ನು ಸುತ್ತುಗಟ್ಟಿತು.

ಚಿಚಾಯಿಯ ತಾಯಿ ಹೇಳಿದಳು: "ಅವಳು ಪಾರ್ವತಿಯ ತಾಯಿ. ಡಾಕಿನಿ! ಮೂರು ವಂಶದಲ್ಲೂ ಒಬ್ಬರನ್ನು ಉಳಿಸಲಿಲ್ಲ. ಎಲ್ಲರನ್ನೂ ನುಂಗಿ ಕೂತಳು. ಮೊದಲು ಗಂಡನ್ನ, ಆಮೇಲೆ ಮೈದುನನ ವಾರಗಿತ್ತಿಯರು, ಮಗ ಮಗಳು ಎಲ್ಲರನ್ನೂ ಮುಗಿಸಿಬಿಟ್ಟಳು. ಈಗ ಆ ಮೊಮ್ಮಗನೊಬ್ಬ ಉಳಿದಿದ್ದಾನೆ. ಅವನನ್ನೂ ನುಂಗಿ ಮುಗಿಸಿಬಿಡ್ತಾಳೆ."

ತಾನೇ ಏನನ್ನೋ ಆಗಿಯುತ್ತಿರುವಂತೆ ಚಿಚಾಯಿಯ ತಾಯಿ ಮುಖ ಮಾಡಿದಳು. ಡಾಕ್ಟರ್ ಅವಳ ಮುಖವನ್ನು ನೋಡಿದರು—ಕಪ್ಪನೆಯ ದಪ್ಪ ಹೆಂಗಸು. ಕೊಳಕಿ, ಜಗಳಗಂಟಿ, ಈ ಚಿಚಾಯಿಯ ತಾಯಿ. ಕಾರಣವಿಲ್ಲದೆ ಸದಾ ಬಡಬಡಿಸುತ್ತಿರುತ್ತಾಳೆ, ಕಿರುಚುತ್ತಿರುತ್ತಾಳೆ····ಇವಳು ಡಾಕಿನಿ ಅಲ್ಲ ವೇನು? ಒಂದು ದಿನ ಸುಮರಿತದಾಸ ಹೇಳಿದ್ದ: "ಚಿಚಾಯಿಯ ತಾಯಿ ಹೆಂಗಸರ ಡಾಕ್ಟರು: ಐದು ತಿಂಗಳು ತುಂಬಿದ್ದರೂ ಒಬ್ಬರಿಗೂ ಸುಳಿವು ತಿಳೀದಹಾಗೆ ಗರ್ಭಪಾತ ಮಾಡಿಬಿಡ್ತಾಳೆ." ಇವಳು ಡಾಕಿನಿ ಅಲ್ಲ. ಆದರೆ ಗಣೇಶನ ಅಜ್ಜಿ ಡಾಕಿನಿ! ಆಶ್ಚರ್ಯ.

····ಗಣೇಶನ ಅಜ್ಜಿ: ಮುಪ್ಪಿನಲ್ಲೂ ಅವಳ ಸೌಂದರ್ಯ ನಷ್ಟ ವಾಗಿರಲಿಲ್ಲ. ಸುಕ್ಕುಗಳೂ ಆ ಮುಖಕ್ಕೆ ಒಂದು ಸೌಂದರ್ಯವನ್ನೇ ತಂದು ಕೊಟ್ಟಿದ್ದವು. ಬಿಳಿಯ ಗುಂಗುರು ಮುಂಗುರುಳುಗಳು, ತುಟಿಯ ಕೆಂಪು ಹಾಗೆಯೇ ಇತ್ತು. ಗಲ್ಲದಲ್ಲಿ ಒಂದು ಸಣ್ಣ ಹಳ್ಳ. ಮೂಗಿನ ಪಕ್ಕದಿಂದ ಒಂದು ರೇಖೆ ಹೊರಟು ಕೆಳಗೆ ಗಲ್ಲವನ್ನು ಸೇರುತ್ತದೆ. ಸುಂದರವಾದ ದಂತ ಪಂಕ್ತಿಗಳು····ಯೌವ್ವನದ ಸೌಂದರ್ಯ ಬೆಂಕಿ ಸುರಿಸುತ್ತದೆ. ಮುಪ್ಪಿನ ಸೌಂದರ್ಯ ಸ್ನೇಹವನ್ನು ಸುರಿಸುತ್ತದೆ. ಆದರೆ ಜನ ಇವಳನ್ನು ಡಾಕಿನಿ ಎನ್ನುತ್ತಾರೆ. ಆಶ್ಚರ್ಯ.

"ಇರೋದೆಲ್ಲಿ?"

"ಇದೇ ಹಳ್ಳೀಲಿ. ಕಾಳೀಚರಣನ ಮನೆ ಗೊತ್ತಲ್ಲಾ. ಅದರ ಹತ್ತಿರಾನೇ. ವೈಶ್ಯರು····ಇವಳನ್ನು ವಶಪಡಿಸಿಕೊಳ್ಳೋದಕ್ಕೆ ಬೇಕಾದಷ್ಟು ಜನ ಮಂತ್ರ ವಾದಿಗಳು ಪ್ರಯತ್ನಪಟ್ಟರು. ಆದರೆ ಸಾಧ್ಯವಾಗಲಿಲ್ಲ. ಅಷ್ಟಮಿಯ ದಿನ ಎಷ್ಟೋ ಸಲ ಇವಳು ಕಾಡಿನಲ್ಲಿ ಮಗೂನ ಎತ್ತಿಕೊಂಡು ಜೆತ್ತಲೆ ಕುಣಿ

ಯೋದನ್ನ ಜನ ನೋಡಿದ್ದಾರೆ. ಒಂದು ಸಲ ಗೈನೂ ಹಿಡಿದುಕೊಳ್ಳೋದಕ್ಕೆ ಪ್ರಯತ್ನಪಟ್ಟನಂತೆ. ಆಗ ಅವನ ಮೇಲೆ ಅಗ್ನಿಬಾಣಗಳನ್ನೇ ಸುರಿಸಿಬಿಟ್ಟಳಂತೆ. ಅವನಿಗೆ ದೇಹದಲ್ಲೆಲ್ಲಾ ಬೊಬ್ಬೆ ಬಂದುಬಿಟ್ಟಿತು. ಮೂರನೆಯ ದಿನವೇ ಗೈನೂ ಸತ್ತುಹೋದ.

ಪ್ರತಿದಿನ ರಾತ್ರಿ ಡಾಕ್ಟರ್ ಕೇಸ್ ಹಿಸ್ಟರಿ ಬರೆಯುತ್ತಾರೆ....ಈಗ ಕರಿಜ್ವರಕ್ಕೆ ಬಲಿಯಾದ ಐವತ್ತು ಜನ ರೋಗಿಗಳಿದ್ದಾರೆ. ಅವರ ಲಕ್ಷಣಗಳು ಮಲೇರಿಯಾ ರೋಗದ ಚಿಕಿತ್ಸೆ ಕಂಡುಹಿಡಿಯುವಲ್ಲಿ ಸಮಸ್ಯೆಗಳನ್ನು ತಂದೊಡ್ಡುತ್ತಿವೆ.

ಒಂದು: (ಕ) ಸೇಬೀ ಮಂಡಲ, ವಯಸ್ಸು 35, ಹಿಂದೂ (ಗಂಡಸು) ಹಳ್ಳಿ: ಮೇರೀಗಂಜ್, ಪೋಲಿಯಾ ಪಂಗಡದವನು.

ರೋಗ: ಹಲ್ಲು ಮತ್ತು ವಸಡುಗಳಲ್ಲಿ ನೋವು. ಹಲ್ಲುಜ್ಜುವ ಸಮಯದಲ್ಲಿ ರಕ್ತ ಸುರಿಯುತ್ತದೆ. ಬಾಯಲ್ಲಿ ವಾಸನೆ. ಶರೀರವೆಲ್ಲಾ ಕಡಿತ. ಹಸಿವಿಲ್ಲ. ಜ್ವರ ಇಲ್ಲ. ರೋಗ ಲಕ್ಷಣ: ಪಯೋರಿಯಾ. ಔಷಧಿ: ಕಾರ್‌ಬಾಲಿಕ್ ಪಿಲ್ಸ್, ವಿಟಮಿನ್ ಸಿ. ಇಂಜಕ್ಷನ್.

(ಖ) ಹದಿನೈದು ದಿನಗಳ ನಂತರ ತಲೆನೋವಿನ ದೂರು. ಜ್ವರ: 99·5 ಡಿಗ್ರಿ. ರಾತ್ರಿ ಬೆವರುತ್ತದೆ....ಕ್ಯಾಲ್ಸಿಯಂ ಪೌಡರ್.

(ಗ) ಐದು ದಿನಗಳ ನಂತರ ಹೊಟ್ಟೆ ಕೆಟ್ಟುಹೋಗಿದೆ. ಜ್ವರ: 100 ಡಿಗ್ರಿ. ಕಾರ್ಬನೇಟಿವ್ ಮಿಕ್ಚರ್. ರಕ್ತ ಪರೀಕ್ಷೆಗೆ ರಕ್ತ ತೆಗೆದುಕೊಳ್ಳಲಾಯಿತು.

(ಘ) ಅಲ್ಡೆಹಾಯಿಟ್. ಫಲಿತಾಂಶ: (+ +). ಕರಿಜ್ವರ: ನಿಯೋಸ್ಟಬೋಸನ ಇಂಜಕ್ಷನ್.

ಎರಡು: (ಕ) ತೇತರೀ, ವಯಸ್ಸು 15. ಹಿಂದೂ (ಸ್ತ್ರೀ). ಹಳ್ಳಿ: ಮೇರೀಗಂಜ್. ಪಾಸ್ವಾನ್ ಪಂಗಡ. ತೊಂದರೆ: ಮೂಳೆಗಳ ಪ್ರತಿ ಕೀಲುಗಳಲ್ಲೂ ನೋವು. ಆಗಾಗ ಮೂಗಿನಿಂದ ರಕ್ತ ಸುರಿಯುತ್ತದೆ. ಜ್ವರ: ಇಲ್ಲ (ಥರ್ಮಾಮಿಟರ್ 99·5 ಡಿಗ್ರಿಗಳನ್ನು ತೋರಿಸಿತು). ಹಸಿವು: ಇಲ್ಲ. ರೋಗ: ಸಂಧಿ ವಾತ, ವಾಯು. ಔಷಧಿ: ವಿಟಮಿನ್ ಸಿ ಇಂಜಕ್ಷನ್. ಸವರಿಕೊಳ್ಳಲು ಎಣ್ಣೆ. ಡಬ್ಲ್ಯೂ. ಆರ್. ಗೋಸ್ಕರ ರಕ್ತ ತೆಗೆದುಕೊಳ್ಳಲಾಯಿತು.

(ಖ) ಡಬ್ಲ್ಯೂ. ಆರ್. (ಶಾಖ); (—) ಶಾಖ ಇಲ್ಲ.

(ಗ) ಒಂದು ವಾರದ ನಂತರ ರಕ್ತ ಬಿದ್ದಿತು····ಹೊಟ್ಟೆ ಕೆಟ್ಟಿದೆ. ಕರಿಜ್ವರದ ಪರೀಕ್ಷೆಗಾಗಿ ರಕ್ತ ತೆಗೆದುಕೊಳ್ಳಲಾಯಿತು.

(ಘ) ಆಲ್ಡೆಹಾಯಿಟ್ ಟೆಸ್ಟ್‌ನ ಫಲಿತಾಂಶ: ಸಂದೇಹಾಸ್ಪದ. ಮತ್ತೆ ರಕ್ತ ತೆಗೆದುಕೊಳ್ಳಲಾಯಿತು.

(ಙ) ಮಲ ಪರೀಕ್ಷೆಯ ಫಲ: (+). ಚಿಕಿತ್ಸೆ: ಯೂರಿಯಾ ಸ್ಟಿಬಾಮಾಯಿನ್.

ಮೂರು: (ಕ) ರಾಮೇಶ್ವರನ ಮಗು. ವಯಸ್ಸು: ಎರಡು ತಿಂಗಳು ಹೊಕ್ಕುಳಲ್ಲಿ ಗಾಯ. ರಾತ್ರಿಯೆಲ್ಲಾ ಅಳುತ್ತದೆ. ಹಾಲು ಕುಡಿಯುವುದಿಲ್ಲ. ····ತಾಯಿಗೆ ಕ್ಯಾಲ್ಸಿಯಂ ಪೌಡರ್.

(ಖ) ಒಂದು ವಾರದನಂತರ ದೇಹದಲ್ಲೆಲ್ಲಾ ಗುಳ್ಳೆಗಳು, ರೋಗ: ಅಲರ್ಜೀ.

(ಗ) ನಾಲ್ಕು ದಿನಗಳ ನಂತರ ಗುಳ್ಳೆಗಳಲ್ಲಿ ನೀರು ತುಂಬಿಕೊಂಡಿತು. ಡಬ್ಲ್ಯೂ. ಆರ್. ಗೋಸ್ಕರ ರಕ್ತ ತೆಗೆದುಕೊಳ್ಳಲಾಯಿತು. ಪರಿಣಾಮ : (—) ನೆಗೆಟಿವ್.

(ಘ) ಕರಿಜ್ವರದ ಪರೀಕ್ಷೆ ಮಾಡಲು ತಾಯಿಯ ರಕ್ತ ತೆಗೆದುಕೊಳ್ಳಲಾಯಿತು. ಫಲ: (—) ಇಲ್ಲ. ಕರಿಜ್ವರದ ಪರೀಕ್ಷೆಗೆ ಮಗುವಿನ ರಕ್ತ ತೆಗೆದುಕೊಂಡೆ. ರಿಸಲ್ಟ್: (+ + +). ಕರಿಜ್ವರ.

ಈ ಮಗು ಸತ್ತರೆ ಆ ದೋಷವನ್ನು ಯಾರಾದರೂ ಡಾಕಿನಿಯ ತಲೆಗೆ ಕಟ್ಟುತ್ತಾರೆ! ದೇಹದಲ್ಲೆಲ್ಲಾ ಗುಳ್ಳೆಗಳು: ಬಹುಶಃ ಗಣೇಶನ ಅಜ್ಜಿಯ ಮೇಲೆ ಸಂಶಯ ಬರಬಹುದು. ಗಣೇಶನ ಅಜ್ಜಿ: ಅದ್ಯಾಕೋ ಗಣೇಶನ ಅಜ್ಜಿಯೊಡನೆ ಪ್ರೀತಿಯ ಸಂಬಂಧ ಬೆಳೆಸಬೇಕೆಂದು ಮನಸ್ಸು ಚಡಪಡಿಸುತ್ತದೆ. ಕಮಲಿ ಹೇಳುತ್ತಾಳೆ: "ಚಿಕ್ಕಮ್ಮ: ಚಿಕ್ಕಮ್ಮನಲ್ಲಿ ತುಂಬಾ ಗುಣಗಳಿವೆ. ಬೆತ್ತದಿಂದ ತುಂಬಾ ಚೆನ್ನಾಗಿರುವ ವಸ್ತುಗಳನ್ನು ಮಾಡುತ್ತಾಳೆ—ಹೂಕುಂಡ. ಬುಟ್ಟಿ, ಬೀಸಣಿಗೆ. ಕಸೂತಿ ಕೆಲಸವನ್ನೂ ತುಂಬಾ ಚೆನ್ನಾಗಿ ಮಾಡುತ್ತಾಳೆ. ಹಬ್ಬ ಹುಣ್ಣಿಮೆಗಳಲ್ಲಿ, ಮದುವೆಗಳಲ್ಲಿ ಗೋಡೆಗಳ ಮೇಲೆಲ್ಲಾ ಎಷ್ಟೋ ಸುಂದರ ವಾಗಿ ಚಿತ್ರಗಳನ್ನು ಬರೆಯುತ್ತಾಳೆ—ಕಮಲದ ಹೂವು. ಎಲೆ, ನವಿಲು····

ಜಗಲಿಯ ಮೇಲೆ ಹಸೆಗಳನ್ನೂ ತುಂಬಾ ಚೆನ್ನಾಗಿ ಬರೆಯುತ್ತಾಳೆ."···· ಡಾಕ್ಟರೂ ಅವಳನ್ನು ಚಿಕ್ಕಮ್ಮ ಎಂದೇ ಕರೆಯುತ್ತಾರೆ.

"ಚಿಕ್ಕಮ್ಮಾ."

"ಯಾರು ?"

"ನಾನು ಡಾಕ್ಟರ್. ಗಣೇಶ ಎಲ್ಲಿ ?"

"ಓ ಡಾಕ್ಟರ್ ನೀವು? ಬನ್ನಿ, ಕೂತ್ಕೊಳ್ಳಿ. ಗಣೇಶ ಮಲಗಿದ್ದಾನೆ ····ನನ್ನ ಚಿಕ್ಕಮ್ಮಾ ಅಂತ ಕರೆಯೋರು ಯಾರು ಅಂತ ಆಶ್ಚರ್ಯ ಆಯಿತು." ಮುದುಕಿಯ ಕಣ್ಣುಗಳಲ್ಲಿ ನೀರು ತುಂಬಿತು.

"ಚಿಕ್ಕಮ್ಮ. ನೀವು ಒಂಥರಾ ಹಲ್ವಾ ಮಾಡ್ತೀರಂತೆ ?"
ಚಿಕ್ಕಮ್ಮ ನಕ್ಕಳು :

"ಸರಿ, ಯಾರು ಹೇಳಿದರು ? ಆ ಹುಚ್ಚಿ ಕಮಲಿ ಹೇಳಿರಬೇಕು···· ಅಂದಹಾಗೆ ಕಮಲಿ ಈಗ ಹೇಗಿದ್ದಾಳೆ ? ತುಂಬಾ ದಿನಗಳಿಂದ ಈಕಡೆ ಬರಲೇ ಇಲ್ಲ ಮೊದಲು ಪ್ರತಿದಿನ ಬರ್ತಿದ್ಲು."

"ಚೆನ್ನಾಗಿದ್ದಾಳೆ······ಚಿಕ್ಕಮ್ಮಾ. ಒಂದು ಮಾತು ಕೇಳಲೆ ?.... ನಿಮ್ಮ ತಂಗಿ ಮಗಳು ಅಥವಾ ಇನ್ಯಾರಾದರೂ ಸಹರಸಾ ಜಿಲ್ಲೆಯ ಹನುಮಾನ ಗಂಜಿನ ಹತ್ತಿರ ಇದಾರೇನು ?"

ತಮ್ಮ ತಲೆಬುಡವಿಲ್ಲದ ಪ್ರಶ್ನೆಗೆ ಡಾಕ್ಟರಿಗೇ ನಗು.

"ಸಹರಸಾ ಜಿಲ್ಲೆಯ ಹನುಮಾನಗಂಜದ ಹತ್ತಿರವೇ ?····ಸ್ವಲ್ಪ ಇರಿ. ಜ್ಞಾಪಿಸಿಕೊಳ್ತೀನಿ......ಉಹುಂ······ಇಲ್ಲವಲ್ಲ. ಯಾಕೆ ? ಏನ್ಸಮಾಚಾರ ?"

"ಸುಮ್ಮನೆ ಕೇಳಿದೆ. ನಿಮ್ಮ ಹಾಗೇ ಇನ್ನೊಬ್ಬ ಚಿಕ್ಕಮ್ಮ ಅಲ್ಲಿದ್ದಾರೆ." ಮಾತು ಬದಲಾಯಿಸುತ್ತಾ ಡಾಕ್ಟರ್ ಹೇಳಿದರು : "ನನಗೊಂದು ಹೂಕುಂಡ ಕೊಡುವುದಿಲ್ಲವೆ ಚಿಕ್ಕಮ್ಮಾ ?"

ಓಹ್····ನಿಜವಾಗಲೂ ಈ ಚಿಕ್ಕಮ್ಮ ಡಾಕಿಣಿಯೇ. ಈ ಮುಗುಳ್ನಗೆಯಲ್ಲೇ ಮಂತ್ರ ಶಕ್ತಿ ಇದೆ. ಸ್ನೇಹ ಹರ್ಷವನ್ನು ಸುರಿಸಿಬಿಡುತ್ತಾಳೆ. ಎಂತಹ ಆಕರ್ಷಕ ಮುಗುಳ್ನಗೆ !

ಗಣೇಶ ತುಂಬಾ ಮುದ್ದು ಹುಡುಗ. ತುಂಬಾ ಚೆನ್ನಾಗಿದ್ದ. ಬಿಳಿಯ ಮೈಬಣ್ಣ, ಕೆಂಪು ತುಟಿಗಳು, ಗುಂಗುರು ಕೂದಲು. ಅವನು ಅಜ್ಜಿಯನ್ನು ತುಂಬಾ ಹೋಲುತ್ತಾನೆ····ಒಬ್ಬನೇ ಹುಡುಗನೆಂದು ತೋರುತ್ತದೆ···· ಚಿಕ್ಕಮ್ಮ ಕೇಳಿದಳು : "ಅವನು ಯಾರ ಜೊತೆ ಆಡಬೇಕು? ಹಳ್ಳಿಯ ಹುಡುಗರು ಅವನನ್ನು ತಮ್ಮ ಜೊತೆ ಸೇರಿಸಿಕೊಳ್ಳುವುದಿಲ್ಲ. ನನ್ನ ಜೊತೆಯೇ ಆಡುತ್ತಿರುತ್ತಾನೆ······"

"ಗಣೇಶ, ಸ್ವಲ್ಪ ಹೊಟ್ಟೆ ತೋರಿಸಯ್ಯಾ····ಚಿಕ್ಕಮ್ಮ····ನಾಳೆ ಬೆಳಗ್ಗೆ ಇವನನ್ನು ಕರ್‍ಕೊಂಡು ಬನ್ನಿ. ರಕ್ತ ತೊಗೋತೀನಿ. ತುಟಿ ಒಣಗೇ ಇರುತ್ತೆ····"

ಗಣೇಶನಿಗೆ ಈಗ ಒಬ್ಬ ಮಾವ ಸಿಕ್ಕಿದಂತಾಯಿತು. "ನಿಜವಾಗಲೂ ಇಂಥ ಹಲ್ವ, ನಾನೆಂದೂ ತಿಂದೇ ಇಲ್ಲ ಚಿಕ್ಕಮ್ಮ····ಖಂಡಿತ ಹೇಳ್ತೀನಿ. ಗಣೇಶನಿಗೂ ಕೊಡಿ. ಪರವಾಗಿಲ್ಲ."

"ಮಾವಾ ಇಲ್ಲಿ ನೋಡಿ." ಗಣೇಶ ಕೊರಳಿಗೆ ಸ್ಟೆತಾಸ್ಕೋಪ್ ಹಾಕಿಕೊಂಡು ನಗುತ್ತಾ ತೋರಿಸಿದ.

"ಭೇಷ್ ನನ್ನ ಅಳಿಯ ಡಾಕ್ಟರಾಗ್ತಾನೆ."

ಡಾಕ್ಟರ್ ಚಿಕ್ಕಮ್ಮನ ಮನೆಯಿಂದ ಹೊರಟಾಗ ಕಾಳೀಚರಣನ ಮನೆಯ ಬಾವಿಯ ಬಳಿಯಲ್ಲಿ ನೀರು ತುಂಬುವ ಹೆಂಗಸರ ಗುಂಪೇ ನಿಂತಿದ್ದುದು ಅವರ ಗಮನಕ್ಕೆ ಬಂತು. ಎಲ್ಲರೂ ಕಣ್ಣರಳಿಸಿ, ಬಾಯಿ ಬಿಟ್ಟುಕೊಂಡು ಆಶ್ಚರ್ಯದಿಂದ ಡಾಕ್ಟರನ್ನೇ ನೋಡುತ್ತಿದ್ದರು : "ಈ ಡಾಕ್ಟರಿಗೇನೋ ಗ್ರಹಚಾರ ಕಾಲ ಬಂದಿದೆ." "ಕೆಂಪು ಸಲಾಂ ಸಾಬ್"—"ಕಾಳೀಚರಣ ಮುಂದೆ ಬಂದು ಸಲಾಂ ಮಾಡಿದ. ಡಾಕ್ಟರಿಗೆ ಒಂದು ಕೆಂಪು ಚೀಟಿ ಕೊಟ್ಟು ಹೇಳಿದ : "ಕಾಮ್ರೇಡ್ ಮಂತ್ರಿಗಳಿಗೆ ನಿಮ್ಮ ಪರಿಚಯವಿದೆ ಡಾಕ್ಟರ್···· ಹೌದು ಕೃಷ್ಣಕಾಂತ ಮಿಶ್ರ."

ಬನ್ನಿ, ಬನ್ನಿ, ಖಂಡಿತ ಬನ್ನಿ.

ಸಂಪಾದಿಸಿದವನು ತಿನ್ನುತ್ತಾನೆ.

ರೈತರ ರಾಜ್ಯ : ಚಿರಾಯುವಾಗಲಿ :

ಕಾರ್ಮಿಕರ ರಾಜ್ಯ : ಚಿರಾಯುವಾಗಲಿ :

"ಪ್ರೀತಿಯ ಸೋದರರೇ, ತಾ....ಮೇರೀಗಂಜಿನ ಕೋಠಿಯ ತೋಟದಲ್ಲಿ ರೈತರ ಸಭೆ ನಡೆಯಲಿದೆ. ಸೋಷಲಿಸ್ಟ್ ಪಾರ್ಟಿಯ ಪೂರ್ಣಿಯಾದ ಸಹಾಯಕ ಕಾರ್ಯದರ್ಶಿ ಕಾಮ್ರೇಡ್ ಗಂಗಾಪ್ರಸಾದಸಿಂಹ ಯಾದವ ಸೈನಿಕರು...."

"ನಾಡಿದ್ದು ಸಭೆಗೆ ಬನ್ನಿ....ಕೆಂಪು ಸಲಾಂ."

## 19

ನಡೀರಿ: ನಡೀರಿ: ಸಭೆಗೆ ಹೋಗೋಣ ನಡೀರಿ.

ಸೋಷಲಿಸ್ಟ್ ಪಾರ್ಟಿಯ ಸಭೆಯ ವಿಚಾರ ವಿಶೇಷವಾಗಿ ಸಂಥಾಲ ಪಂಗಡದವರನ್ನು ಚಂಚಲಗೊಳಿಸಿದೆ. ಹಳ್ಳಿಯಲ್ಲಿ ಆಸ್ಪತ್ರೆ ತೆರೆಯುವ ಸಂತೋಷ ಸಮಾಚಾರವೂ ಸಂಥಾಲರ ಮೇಲೆ ಯಾವ ಪ್ರಭಾವವನ್ನೂ ಬೀರಿರ ಲಿಲ್ಲ. ಹಳ್ಳಿಯ ಜಗಳ–ಕದನ, ಲೇವಾದೇವಿಯಲ್ಲೂ ಅವರಿಗೆ ವಿಶೇಷ ಆಸಕ್ತಿ ಯೇನೂ ಇಲ್ಲ. ಆದರೆ ಈ ಸಭೆ? ಜಮೀನು ಉಳುವವರ ಸಭೆ?....ಕರ್ತವ್ಯ ನಿಷ್ಠರಾದ, ಶ್ರಮಜೀವಿ ಸಂಥಾಲ ರೈತರ ತಲೆಯಲ್ಲಿ ಅನೇಕ ವರ್ಷಗಳಿಂದ ಹೆಪ್ಪು ಗಟ್ಟಿದ್ದ ಸಿಕ್ಕುಗಳಿಗೆಲ್ಲಾ ಪರಿಹಾರ, ಜಮೀನು ಉಳುವವರ ಸಭೆ.

"ಜಮೀನು ಯಾರದ್ದು?....ಉಳುವವರದ್ದು. ಯಾರು ಉಳು ತ್ತಾನೋ ಅವನು ಬೆಳೆಯುತ್ತಾನೆ. ಯಾರು ಉಳುತ್ತಾನೋ, ಕತ್ತರಿಸುವವನೂ ಅವನೇ! ಸಂಪಾದಿಸಿದವನು ತಿನ್ನುತ್ತಾನೆ." ಕಾಳೀಚರಣ ಎಲ್ಲರಿಗೂ ಇದನ್ನೇ ಹೇಳುತ್ತಿದ್ದ.

ಸುತ್ತಲೂ ಆರೋಗ್ಯವಂತರಾದ, ದೃಢಕಾಯರಾದ, ಸ್ವಚ್ಛ, ಸರಳ ರೈತರ ಗುಂಪು. ಶ್ಯಾಮಲ ಮುಖದಲ್ಲಿ ಬಿಳಿಯ ಮುಗುಳ್ನಗೆ ಕರಿಮೋಡಗಳ ನಡುವಿನ ತದಿಗೆಯ ಚಂದ್ರನಂತೆ ಬೆಳಗುತ್ತಿತ್ತು. ಬಿರಸಾ ಮಾಂಜಿಯ ಯುವಕ ಪುತ್ರ ಮಂಗಳ ಮಾಂಜಿ ಕಾಳೀಚರಣನ ವಾಕ್ಯಗಳನ್ನೇ ಗೀತೆಯಾಗಿ ರಚಿಸುವ ಪ್ರಯತ್ನ ಮಾಡುತ್ತಿದ್ದ....

**ಚೋಹಿರೆ ಜೋತಬೆ ಸೋಹಿರೆ ಬೋಯ ಬೇ**

(ಉತ್ತವನೇ ಬಿತ್ತುತ್ತಾನೆ)

ಸನಿಯಾ ಕಾಳೀಚರಣನ ಪ್ರತಿ ಮಾತಿಗೂ ಕಿಲಕಿಲನೆ ನಗುತ್ತಾಳೆ.... ಹಿ ಹಿ ಹಿ....ಸರಿಗಮದ ಸ್ವರಗಳಂತಿರುತ್ತದೆ ಸನಿಯಾಳ ನಗು. ತಿತ್ತಿರಿ ಹಕ್ಕಿಯ ಕೂಗಿನಂತೆ ಕೇಳಿಸುತ್ತದೆ ಅವಳ ನಗು. ಹಿಂದುಗಡೆ ತೂಗಾಡುವ ಬಣ್ಣದ ಸೆರಗು ಚಂಚಲವಾಗಿ ಓಲಾಡುವಾಗ, ನವಿಲು ರೆಕ್ಕೆ ಹರಡಿ ಕುಣಿಯುವಂತೆ ಭಾಸವಾಗುತ್ತದೆ. ಅವಳ ಕಾಲುಗಳು ಕುಣಿಯುವುದಕ್ಕೆ ಆತುರಗೊಳ್ಳುತ್ತವೆ. ವಾದ್ಯದ ಮಂದ ಸ್ವರ—ರಿಂಗ್ ರಿಂಗ್ ತಾಧಿನ್—ತಾ, ಢಕ್ಕೆಯ ನಿರಂತರ ತಾಳ—ಡಾ ಡಿಗ್ಗಾ, ಡಾ ಡಿಗ್ಗಾ, ಉನ್ಮುಕ್ತ ಸ್ವರ ಲಹರಿ—ಉತ್ತವನೇ ಬಿತ್ತುತ್ತಾನೆ, ಮುರಳಿಯ ಸ್ವರದೊಂದಿಗೆ ಮಿಳಿತವಾದ ಕಾಲುಗೆಜ್ಜೆಗಳ ಮಂಜುಳ ಧ್ವನಿ ಛಮ್, ಛಮ್, ಛನ್ನ ಛನ್ನಾ.

ಡಾ ಡಿಗ್ಗಾ ಡಾ ಡಿಗ್ಗಾ

ರಿಂಗ್ ರಿಂಗ್ ತಾ ಧಿನ್—ತಾ

ನಡೀರಿ ನಡೀರಿ ಸಭೇಗೆ ನಡೀರಿ.

ನಾಲ್ಕು ತಲೆಮಾರಿನ ಹಿಂದಿನ ಮಾತು. ಸಂಥಾಲದ ಮೂರು ಪರ್ವತಗಳ ಗುಡ್ಡಗಾಡಿನ ಅಂಚಿನ ಮೋಹ ತೊರೆದು. ಏರುತಗ್ಗಿನ ಪರ್ವತದ ರಸ್ತೆಗಳನ್ನು ದಾಟಿ, ಇವರ ಪೂರ್ವಿಕರು ಈ ಹಳ್ಳಿಯ ಮೃದು ಭೂಮಿಯಲ್ಲಿ ಬಂದು ನೆಲಸಿದಾಗ, ಹಳ್ಳಿಯವರೆಲ್ಲಾ ಜಮೀನ್ದಾರರ ಹತ್ತಿರ ದೂರು ಕೊಟ್ಟಿದ್ದರು:

"ತಂದೆ, ಇವರು ಕಾಡುಜನರು. ಬಿಲ್ಲು ಬಾಣಗಳಿಂದ ಪ್ರಾಣ ತೆಗೆದರೂ ಸರ್ಕಾರ ಇವರಿಗೆ ಏನೂ ಮಾಡಲಾಗಲಿಲ್ಲವಂತೆ. ಇಲ್ಲಿ ನೆಲೆಸಲು ಇವರಿಗೆ ಖಂಡಿತ ಅವಕಾಶ ಕೊಡಬಾರದು ಸ್ವಾಮಿ."

ಆದರೆ ಜಮೀನ್ದಾರರು ಜನರನ್ನು ಸಮಾಧಾನಗೊಳಿಸಿದ್ದರು:

"ಹಾಗೇನಿಲ್ಲ, ಅವರು ತುಂಬಾ ಪರಿಶ್ರಮಿಗಳು. ಧರಮಪುರ ಇಲಾಖೆಗೆ ಹೋಗಿ ನೋಡಿ. ರಾಜಾ ಲಕ್ಷ್ಮೀನಾಥಸಿಂಹ ಇವರಿಂದ ನೂರಾರು ಎಕರೆ ಬಂಜರು ಭೂಮಿಯನ್ನು ಫಲವತ್ತಾಗಿ ಮಾಡಿಸಿದ್ದಾರೆ. ಬೀಳುಗದ್ದೆಗಳಲ್ಲಿ,

ಏರಿಗಳಲ್ಲಿ ಕೂಡ ಕೆಲಸ ಮಾಡಿ ಈ ಸಂಥಾಲರು ಎರಡು ಸಾವಿರ ಮಣ ಗೋಧಿಯನ್ನು ಬೆಳೆದು ತೇಜೂಬಾಬುವಿಗೆ ಕೊಟ್ಟಿದ್ದಾರೆ. ಗೊತ್ತೇನು?''

ಹಳ್ಳಿಯಲ್ಲಿ ಇವರ ವಸತಿಯನ್ನು ಬೇರೆಯಾಗೇ ಏರ್ಪಡಿಸುತ್ತೇನೆಂದು ಹಳ್ಳಿಯವರಿಗೆ ಜಮೀನ್ದಾರರೂ ಭರವಸೆ ಕೊಟ್ಟಿದ್ದರು. ಎಲ್ಲಾ ಜಮೀನ್ದಾರರೂ ಇವರನ್ನು ಕಾಡಿನಲ್ಲೇ ಇರಲು ಬಿಟ್ಟಿದ್ದಾರೆ.

ಆಗಿನಿಂದ ಜಾಲಿ ಬೇಲ ಮುಂತಾದ ಮರಗಳಿಂದ ತುಂಬಿದ್ದ ಕಾಡು ಪ್ರತಿ ವರ್ಷ ಕಡಿಮೆಯಾಗಿ ಜನವಸತಿ ಬೆಳೆಯಿತು. ಈಗ ಯಾವ ಮುತ್ತಿನಂತಹ ಧಾನ್ಯಗಳನ್ನು ಬೆಳೆಯುವ ಗೋಧಿಯ ತೆನೆಗಳು ಗಾಳಿಯಲ್ಲಿ ತೂಗಾಡುತ್ತಿವೆಯೋ ಆ ನೂರಾರು ಎಕರೆ ಜಮೀನನ್ನು ಸರ್ವೆಯ ಕಾಗದದಲ್ಲಿ, ಭೂಪಟದಲ್ಲಿ, ಕಾಡೆಂದೇ ನಮೂದಿಸಲಾಗಿದೆ. ಹಿಂದೆ ಇದೇ ಕಾಡಿನಲ್ಲಿ ಹುಲಿ ಬೇಟೆಯಾಡಲು ಜಿಲ್ಲೆಯ ಎಲ್ಲ ರಾಜರೂ ಜಮೀನ್ದಾರರೂ ಒಂದಾಗಿ ಸೇರುತ್ತಿದ್ದರೆಂದು ಹೇಳಿದರೆ ಈಚೆಗೆ ಹುಟ್ಟಿದ ಹಳ್ಳಿಯ ಯುವಕರು ನಂಬುವುದೂ ಇಲ್ಲ.

ವಜ್ರ ವ್ಯಾಪಾರಿಯ ವಜ್ರದ ಪೆಟ್ಟಿಗೆಗಳ ಭಾರ ಹೊತ್ತು ಬೆವರು ಸುರಿಸಿದವರೂ ಈ ಮೂಕ ಕರಿಯ ಮನುಷ್ಯರೇ!

ಸಾಹೇಬರ ಚಿತ್ತದ ಏಟುಗಳನ್ನು ತಿಂದು, ಜಮೀನ್ದಾರರ ಕಛೇರಿಗಳಲ್ಲಿ ದಿನವೆಲ್ಲಾ ಶಿಕ್ಷೆ ಅನುಭವಿಸಿದ ಮೇಲೆ ಈ ಜನ ಸಂಜೆ ಮೋಹನನ ಮರುಳು ಗೊಳಿಸುವ ಮುರಳಿ ನಾದವನ್ನು ಕೇಳಿ ಎಲ್ಲ ಕಷ್ಟವನ್ನೂ ಮರೆಯುತ್ತಿದ್ದರು.

ರಿಂಗ್ ರಿಂಗ್ ತಾ ಧಿನ್—ತಾ

ಡಾ ಡಿಗ್ಗಾ ಡಾ ಡಿಗ್ಗಾ····

ಚಿನ್ನವನ್ನು ತುಂಬಿಕೊಂಡಿದ್ದ ಭೂಮಿಯ ಗುಪ್ತ ಭಂಡಾರವನ್ನು ಹೊರ ತೆಗೆಯುವವರ ಮೇಲೆ ಭೂಮಿದೇವಿಗೆ ಕೋಪವಿರುವುದು ಸಹಜವೇ. ಆದ್ದರಿಂದಲೇ ಇಂದು ಜಮೀನಿನ ಮಾಲೀಕರು, ಭೂಮಿಯ ವ್ಯವಸ್ಥಾಪಕರು ಜೊತೆಗೆ ಭೂಮಿಯ ನ್ಯಾಯ ಇವರಿಗೆ ಯಾವ ಹಕ್ಕನ್ನೂ ಕೊಡಲು ಸಿದ್ಧರಾಗಿಲ್ಲ. ಯಾವ ನೆಲದ ಮೇಲೆ ಅವರ ಗುಡಿಸಲುಗಳಿವೆಯೋ, ಅದೂ ಅವರದಲ್ಲ. ನೇಗಿಲಿಗೆ ಕಟ್ಟಿದ ಎತ್ತುಗಳು ದಿನವೆಲ್ಲಾ ಗದ್ದೆಯನ್ನು ಉಳುತ್ತವೆ ಅಂದ ಮಾತ್ರಕ್ಕೇ ಎತ್ತುಗಳನ್ನೂ ಭೂಮಿಯ ಹಕ್ಕುದಾರರೆಂದು ಪರಿಗಣಿಸಲು ಸಾಧ್ಯವೇ? ಇದೆಂತಹ ನ್ಯಾಯ?

1947 ರ ಕಾಂಗ್ರೆಸ್ ಮಂತ್ರಿಮಂಡಲ ರಾಜ್ಯಭಾರ ಮಾಡುತ್ತಿದ್ದ ಕಾಲವಲ್ಲಿ ಈ ಜಿಲ್ಲೆಗೆ ಒಬ್ಬ ಇಂಗ್ಲೀಷ್‌ರವನು ಕಲೆಕ್ಟರ್‌ನಾದ. ಈ ವ್ಯವಸ್ಥೆ ಅನ್ಯಾಯವೆಂದು ತಿಳಿದು ಅದನ್ನು ಸುಧಾರಿಸಲು ಪ್ರಯತ್ನಪಟ್ಟ. ಜಿಲ್ಲೆಯ ಎಲ್ಲ ಭೂಮಾಲೀಕರೂ ಜಮೀನ್ದಾರರೂ ರಾಜರೂ ಗಾಬರಿಯಾದರು. ಜಿಲ್ಲೆಯ ಬಹುಮಂದಿ ನಾಯಕರು ಜಮೀನ್ದಾರರು ಅಥವಾ ಭೂಮಾಲೀಕರು. ಇಂಗ್ಲೀಷ್ ಕಲೆಕ್ಟರನ ಮೇಲೆ ತಕ್ಷಣ ಅಪವಾದ ಹೊರಿಸಲಾಯಿತು: 'ಇವನು ಸಂಥಾಲ ರನ್ನು ಎತ್ತಿಕಟ್ಟಿ, ಜಿಲ್ಲೆಯಲ್ಲಿ ಅಶಾಂತಿ ಹಬ್ಬಿಸಿ, ಕಾಂಗ್ರೆಸ್ ಮಂತ್ರಿಮಂಡಲ ವನ್ನು ವಿಫಲಮಾಡುವ ಸಂಚು ಹೂಡಿದ್ದಾನೆ' ಎಂದು. 'ಕಾಂಗ್ರೆಸ್ ಸಂದೇಶ' ಪತ್ರಿಕೆಯ ಸಂಪಾದಕೀಯದಲ್ಲಿ ಸಂಥಾಲರ ಬಗ್ಗೆ ಸ್ವಲ್ಪ ಸಹಾನುಭೂತಿ ತೋರಿಸ ಲಾಗಿತ್ತು. ಬಡಪಾಯಿ ಸಂಪಾದಕ ವಿದ್ಯಾಲಂಕಾರನಿಗೆ ಅದೇ ದಿನ ವಿದ್ಯೆಯ ಅಲಂಕಾರ ಎಷ್ಟು ಅರ್ಥಹೀನವಾದದ್ದು ಎನ್ನುವ ಅನುಭವವಾಯಿತು. ಜಿಲ್ಲಾಧಿ ಕಾರಿ ಕಣ್ಣು ಕೆಂಪಗೆ ಮಾಡಿಕೊಂಡು ಅವನನ್ನು ಗದರಿಸಿದ್ದರು: "ವಿದ್ಯಾಪೀಠದ ಶಾಸ್ತ್ರ ಇಲ್ಲಿ ಪ್ರಯೋಜನಕ್ಕೆ ಬರುವುದಿಲ್ಲ. ವಿದ್ಯಾಪೀಠದಲ್ಲೂ ಕತ್ತೆಯ ತಲೆಯ ಮೇಲೆ ಕೊಂಬು ಹುಟ್ಟಲಾರದು."

ಜಮೀನ್ದಾರರು ಹಣ ಕೊಟ್ಟು ಹೋರಾಟಗಾರರನ್ನು ನೇಮಿಸಿ, ಓಲಾಡು ತ್ತಿದ್ದ ಸಂಥಾಲರ ಜಮೀನುಗಳ ಮೇಲೆ ದಾಳಿ ಮಾಡಿಸಿ, ಸಂಥಾಲ ಪಂಗಡದ ಮೇಲೆ ಆಕ್ರಮಣ ಮಾಡಿಸಿ, ಬಾಣದ ಪೆಟ್ಟು ತಿನ್ನಿಸಿ, ಅವರು ಹೀಗೆ ಹೆಚ್ಚಿ ಕೊಂಡಿರುವುದಕ್ಕೆ ಇಂಗ್ಲೀಷ್ ಕಲೆಕ್ಟರನೇ ಕಾರಣವೆಂದು ಪ್ರಬಲ ಸಾಕ್ಷ್ಯ ಒದಗಿಸಿಬಿಟ್ಟರು.

ಇಂಗ್ಲೀಷ್ ಕಲೆಕ್ಟರನಿಗೆ ತಕ್ಷಣ ವರ್ಗವಾಯಿತು. ಅನೇಕ ಜನ ಸಂಥಾಲರು ಸರ್ಕಾರಿ ಗುಂಡಿನ ಪೆಟ್ಟಿನಿಂದ ಗಾಯಗೊಂಡರು. ನೂರಾರು ಜನ ಬಿಹಾರದ ಬೇರೆ ಬೇರೆ ಜೈಲುಗಳಲ್ಲಿ ಶಿಕ್ಷೆ ಅನುಭವಿಸುತ್ತಾ ತಮ್ಮ ಜೀವ ಮಾನವನ್ನೆಲ್ಲಾ ಕಳೆದರು. ಇಷ್ಟೆಲ್ಲಾ ಆದಮೇಲೆ ಉಸಿರೆತ್ತುವ ಧೈರ್ಯ ಯಾರಿಗಿದೆ? ಆದರೆ ವಾದ್ಯದ ಮತ್ತು ಢಕ್ಕೆಯ ಧ್ವನಿ ಮಾತ್ರ ಎಂದೂ ನಿಲ್ಲಲಿಲ್ಲ. ಕೊಳಲಿನ ಧ್ವನಿ ಮಂದವಾಗಲಿಲ್ಲ. ಅಲ್ಲದೆ ಅವರ ಬಾಣಗಳಿಗೂ ತುಕ್ಕು ಹಿಡಿಯಲಿಲ್ಲ. ಈಗಲೂ ಒಂದೊಂದು ಬಾರಿ ಕಾಡಿನ ಮೃಗಗಳ ಬೇಟೆಯಾಡು ವಾಗ ಅವರ ಬಿಲ್ಲಿನಿಂದ ಹೊರಟ ಬಾಣಗಳು ಸೂರ್ಯನ ಕಿರಣಗಳ ಬೆಳಕಿನಲ್ಲಿ ಹೊಳೆದು ಕಣ್ಣು ಕತ್ತಲೆ ಕಟ್ಟುತ್ತದೆ.

ಮಲೇರಿಯಾ ಮತ್ತು ಕರಿಜ್ವರದ ಈ ಕ್ರೀಡಾಭೂಮಿಯಲ್ಲೂ ಅವರು ಶಕ್ತಿಶಾಲಿಗಳಾಗಿ ಆರೋಗ್ಯವಾಗಿ ಆಟವಾಡುತ್ತಾರೆ. ಶಿಲ್ಪಿಯ ವಿಗ್ರಹದಂತಿದ್ದ ದೇಹದ ಮೂಳೆಗಳ ಮೇಲೆ ಮಾಂಸಖಂಡಗಳು ಕಲಾಪೂರ್ಣವಾಗಿ ಬೆಳೆದಿವೆ. ತಾಜಾ ಹೂವಿನ ದಳಗಳಂತೆ ಅವರ ತುಟಿಗಳು ಸದಾ ಕೆಂಪಾಗಿರುತ್ತವೆ. ಯಾವ ಸಂಥಾಲನ ಹೊಟ್ಟೆಯಲ್ಲೂ ಎಂದೂ ಜ್ವರದ ಗೆಡ್ಡೆ ಬೆಳೆದಿದೆ ಎಂಬ ಮಾತೇ ಇಲ್ಲ. ಆಸ್ಪತ್ರೆ ತೆರೆಯುವುದರಿಂದ ಅವರಿಗೇನು ಪ್ರಯೋಜನ? ಆದರೆ ಭೂಮಿ.... ಉಳುವವರಿಗೆ....?

ನಡೀರಿ, ನಡೀರಿ, ಸಭೇಗೆ ನಡೀರಿ

ರೈತರ ರಾಜ್ಯ ಚಿರಾಯುವಾಗಲಿ

ಕಾರ್ಮಿಕರ ರಾಜ್ಯ ಚಿರಾಯುವಾಗಲಿ

ಬಡವರ ಪಾರ್ಟಿ ಸೋಷಲಿಸ್ಟ್ ಪಾರ್ಟಿ

ಸೋಷಲಿಸ್ಟ್ ಪಾರ್ಟಿ ಜಿಂದಾಬಾದ್.

"....ಇದು ಕೆಂಪು ಬಾವುಟ. ನಿಮ್ಮ ಬಾವುಟ. ಜನರ ಬಾವುಟ. ಸಾಮಾನ್ಯ ಜನತೆಯ ಬಾವುಟ. ಇದರ ಕೆಂಪು, ಉದಯಿಸುತ್ತಿರುವ ಸೂರ್ಯನ ಕೆಂಪು. ಸ್ವತಃ ಇದೇ ಸೂರ್ಯ. ಇದರ ಕೆಂಪು, ಇದರ ಕೆಂಪು ಬಣ್ಣ ಯಾವುದು?....ಇದು ಬಣ್ಣವಲ್ಲ. ಬಡವರ, ಅಸಹಾಯಕರ, ಕಾರ್ಮಿಕರ, ದಲಿತರ ರಕ್ತದಿಂದ ಕೆಂಪಗಾದ ಬಾವುಟ."

—ಕಾಮ್ರೇಡ್ ಸೈನಿಕಜೀ ಭಾಷಣ ಕೊಟ್ಟರು. 'ಅಂ? ರಕ್ತಸಿಕ್ತ ಬಾವುಟ?'

ಕಾಳೀಚರಣನ ಮಾತಿನಂತೆ ಬಾದರದಾಸ ಕೈಯಲ್ಲಿ ಬಾವುಟ ಹಿಡಿದಿದ್ದ. ಬಾದರದಾಸ ವೈಷ್ಣವ. ಮಾಂಸವನ್ನೂ ಮೀನನ್ನೂ ಕೈಯಿಂದಲೂ ಮುಟ್ಟು ವುದಿಲ್ಲ....ಈ ಬಾವುಟ ಮನುಷ್ಯನ ರಕ್ತದಿಂದ ತೋಯ್ದಿದೆಯಂತೆ! ಈ ಕಾಳೀ ಚರಣ ಅವನ ಧರ್ಮವನ್ನೇ ಭ್ರಷ್ಟಗೊಳಿಸಿಬಿಟ್ಟ. ಛೇ ಛೇ ಅವನು ಕೈಯಲ್ಲಿ ಬಾವುಟದ ಕೋಲನ್ನು ಹಿಡಿದಿದ್ದ. ....ತಕ್ಷಣ ಬಾವುಟವನ್ನು ಕೆಳಗೆ ಬೀಳಿಸಿಬಿಟ್ಟ....ಮನುಷ್ಯನ ರಕ್ತದಿಂದ ತೋಯ್ದ ಬಾವುಟ!

ಜೋಯಿಸರು ಹೇಳಿದರು: "ಬಾವುಟ ಬಿದ್ದುಹೋಯಿತು. ಅಶುಭ, ಅಮಂಗಳ, ಅನಿಷ್ಟದ ಸೂಚನೆ."

ಸೈನಿಕಜೀ ಭಾಷಣ ಮುಂದುವರಿಸಿದ. ಮಧ್ಯದಲ್ಲಿ ನಿಂತುಹೋದಾಗ ಮೊದಲಿನಿಂದ ಆರಂಭಿಸುತ್ತಿದ್ದ: "ಸೂರ್ಯ ಮುಳುಗುವುದು ಎಷ್ಟು ಸತ್ಯವೋ ಪೂಂಜೀವಾದದ ನಾಶವೂ ಅಷ್ಟೇ ಸತ್ಯಸಂಗತಿ. ಕಾರ್ಖಾನೆಗಳ ಚಿಮಣಿಯಿಂದ ಹೊಗೆಯ ಬದಲು ಬೆಂಕಿಯ ಕಿಡಿಗಳು ಸುರಿಯುತ್ತವೆ. ಕಾರ್ಮಿಕರು ಆ ಕಾರ್ಖಾನೆಗಳ ಒಡೆತನವನ್ನು ಸಂಪಾದಿಸುತ್ತಾರೆ. ಜಮೀನುಗಳ ಮೇಲೆ ರೈತರ ಅಧಿಕಾರ ಸ್ಥಾಪಿತವಾಗುತ್ತದೆ. ಸುತ್ತಲೂ ಕೆಂಪು ಹೊಗೆ ಹುಟ್ಟಿದೆ. ಏಳಿ, ರೈತರ ಸುಪುತ್ರರೇ, ಭೂಮಿಯ ನಿಜವಾದ ಮಾಲೀಕರೇ ಏಳಿ, ಕ್ರಾಂತಿಯ ದೀವಟಿಗೆ ಹಿಡಿದು ಮುಂದೆ ಬನ್ನಿ."

ಒಂದು ಬಾರಿ ಶ್ರದ್ಧೆಯಿಂದ ಎಲ್ಲರೂ ಕೂಗಿ: "ಸೋಷಲಿಸ್ಟ್ ಪಾರ್ಟಿಗೆ ಜಯವಾಗಲಿ. ಇದೇ ನಿಜವಾದ ಪಾರ್ಟಿ. ರೈತರ ಪಾರ್ಟಿ, ಬಡವರ ಪಾರ್ಟಿ."

ಆಗಿಂದಾಗಲೇ ಮುನ್ನೂರು ಜನ ಸದಸ್ಯರಾದರು. ಸಂಥಾಲ ಪಂಗಡದ ಒಬ್ಬನೂ ಸದಸ್ಯನಾಗದೇ ಇರಲಿಲ್ಲ. ಎಲ್ಲರೂ ಕೆಂಪು! ಸರದಾರ ಟುಡ್ಡೂವಿನ ಮಗನೊಬ್ಬನೇ ಉಳಿದಿರುವುದು. ಅವನು ಅಳುತ್ತಿದ್ದ. ಸರದಾರ ಟುಡ್ಡೂ ಸೈನಿಕಜೀಯ ಹತ್ತಿರ ಹೋಗಿ ಕೇಳಿಕೊಂಡ: "ಇವನ ಹೆಸರನ್ನು ಸದಸ್ಯ ಪಟ್ಟಿಯಲ್ಲಿ ಸೇರಿಸೋದಿಲ್ವೇನು? ಯಾಕೆ? ವಯಸ್ಸು ಕಡಿಮೆಯೆ? ಇಲ್ಲ. ನೋಡಿ ಇವನಿಗೆ ಆಗಲೇ ಮೀಸೆ ಬೆಳೆಯೋದಕ್ಕೆ ಶುರುವಾಗಿದೆ."

ಬಾಲದೇವ ಮಾತನಾಡಲೆಂದು ಎದ್ದುನಿಂತ. ವಾಸುದೇವ ತಕ್ಷಣ ಅವನನ್ನು ತಡೆದ: "ಬಾಲದೇವಜೀ, ನಿಮ್ಮ ಭಾಷಣವನ್ನು ನಾವು ಬೇಕಾದಷ್ಟು ಕೇಳಿದೀವಿ. ನೀವು ಪೂಂಜೀವಾದಿ. ಈ ಸಭೇಲಿ ನೀವು ಮಾತನಾಡುವ ಆವಶ್ಯಕತೆಯೇನಿದೆ?"

ಜನರೂ ವಿರೋಧಿಸಿದರು:

"ಕೂತ್ಕೊಳಿ, ಕೂತ್ಕೊಳಿ ಬಾಲದೇವಜೀ. ಅಥವಾ ಹೋಗಿ ಬಟ್ಟೆ ಹಂಚಿ. ಸಕ್ಕರೆಯನ್ನು ಬ್ಲಾಕ್‌ನಲ್ಲಿ ಮಾರಿ."

....ಅಬ್ಬಾ ಎಷ್ಟು ಟನ್ ಕಬ್ಬಿನ ಎಲೆ ಅಂತ ಹೇಳಿದರು? ನಾಯಕರು ಒಂದು ಸಾವಿರ ಟನ್ ಕಬ್ಬಿನ ಎಲೇನ ಈ ಕಾಂಗ್ರೆಸ್ ಮಂತ್ರಿಮಂಡಲ ಬ್ಲಾಕ್ ಮಾಡಿಬಿಟ್ಟದ್ಯೇ? ಆದ್ದರಿಂದಲೇ ಹಳ್ಳಿಗಳಲ್ಲಿ ಹುಕ್ಕಾನೂ ಸಿಗ್ತಿಲ್ಲ. ಜನ ಬೀಡೀನೂ ಸೇದದೆ ಏನು ಮಾಡಬೇಕು? ಹುಕ್ಕಾದ ತಂಬಾಕಿಗೆ ಕಬ್ಬಿನ ಎಲೆ, ಬೆಲ್ಲ ಎಲ್ಲಿಂದ ಬರುತ್ತೆ? ಎಲ್ಲಾ ಬ್ಲಾಕ್ ಮಾರ್ಕೆಟ್ ಆಗಿಹೋಯ್ತು. ಅನ್ಯಾಯ!

ತಹಸೀಲ್ದಾರರನ್ನಂತೂ ನಾಯಕರು ತುಂಬಿದ ಸಭೆಯಲ್ಲಿ ಅಪಮಾನ ಗೊಳಿಸಿದರು, ನಿಂದಿಸಿದರು. ಈ ತಹಸೀಲ್ದಾರರೆಲ್ಲಾ ಜಮೀನ್ದಾರರ ಬಾಲ, ಲಂಚಕೋರರು!

ಆದರೆ ತಹಸೀಲ್ದಾರರು ನಗುತ್ತಲೇ ಇದ್ದರು. ವಿದ್ಯಾಪತಿ ನಾಟ್ಯದ ದಿನ ವಿದೂಷಕನ ಮಾತುಗಳನ್ನು ಕೇಳಿದಾಗ ನಗುತ್ತಿದ್ದ ಹಾಗೆ ಮಂದಹಾಸ ಅವರ ತುಟಿಗಳ ಮೇಲೆ ನಲಿಯುತ್ತಿತ್ತು.

ಸಿಪಾಯಿ ಪಂಗಡದ ಒಂದು ಮಗುವೂ ಈ ಸಭೆಗೆ ಬಂದಿರಲಿಲ್ಲ. ಅವರ ಗುಂಪಿಗೆ ಕಟಿಹಾರದಿಂದ ಕಪ್ಪುಟೋಪಿಯ ದಳದ ಸಂಚಾಲಕರು ಬಂದಿದ್ದಾರೆ. ಲಾಠಿ, ಭರ್ಜಿಗಳನ್ನು ಪ್ರಯೋಗಿಸುವುದನ್ನು ಹೇಳಿಕೊಡುತ್ತಿದ್ದಾರೆ. ಕೀಳು ಜಾತಿಯವರ ಸಭೆಗೆ ಅವರು ಹೋಗುವುದಿಲ್ಲ. ಕಾಳೀಚರಣ ಈಗ ಖೇಲಾವನ ಸಿಂಹನ ಹಿಡಿತದಿಂದ ದೂರವಿದ್ದಾನೆ. ಕಾಳೀಚರಣ ಯಾದವ ಕುಲಕ್ಕೆ ಹೊರಗಾದ ವನು. ಮುದುಕ ಕುಕರೂ ಮುಪ್ಪಿನಲ್ಲೂ ಖೇಲಾವನನ ದನಗಳನ್ನು ಮೇಯಿಸುತ್ತಿದ್ದ. ಅಂತಹವನ ಮಗ ಲೀಡರ್ ಆಗಿಬಿಟ್ಟಿದ್ದಾನೆ. ಇವನನ್ನು ಹಿಡಿತದಲ್ಲಿಟ್ಟುಕೊಳ್ಳಬಲ್ಲ ಯಾವ ಸಾಧನವೂ ಇಲ್ಲ. ಎಂದೂ ಹೆಬ್ಬೆರಳಿನ ಗುರುತನ್ನೂ ಹಾಕಿದ್ದಾನೋ ಇಲ್ಲವೋ.

ಕಾಳೀಚರಣ ಸೈನಿಕಜೀಯವರನ್ನು ಮಠದಲ್ಲೇ ಇಳಿಸುವ ವ್ಯವಸ್ಥೆ ಮಾಡಿದ್ದಾನೆ. ಮಹಂತ ರಾಮದಾಸ ಹೆಸರಿಗೆ ಮಹಂತ. ಮಠದ ನಿಜವಾದ ಯಜಮಾನಿ ಲಕ್ಷ್ಮಿಯೇ.

ಹದಿನೈದು ಸೇರು ಹಾಲನ್ನು ಕುದಿಸಿ ಖೋವಾ ಮಾಡಿದ್ದಾಗಿದೆ. ಹೋಳಿಗೆಯ ಸುಗಂಧ ಗಾಳಿಯಲ್ಲಿ ಸುತ್ತಲೂ ಹರಡಿದೆ.

ಲಕ್ಷ್ಮಿ ಕೇಳಿದಳು:

"ಕಾಳೀ ಬಾಬು ನಾಯಕಜೀ ಹೊರಗಡೆ ಸುತ್ತಿ ಬಂದಮೇಲೆ ಸ್ನಾನ ಮಾಡುವುದಿಲ್ಲವೇನು?"

ಸೈನಿಕಜೀಯ ಜೊತೆ 'ಲಾಲ್‌ಪತಾಕಾ' ಪತ್ರಿಕೆಯ ಸಂಪಾದಕ ಶ್ರೀ ಚಿನಗಾರಿಯವರೂ ಬಂದಿದ್ದಾರೆ. ಅಷ್ಟೇನೂ ದಪ್ಪವಲ್ಲದ ಮನುಷ್ಯ. ದಿನ ವೆಲ್ಲಾ ಕೆಮ್ಮುತ್ತಿರುತ್ತಾರೆ. ಕಣ್ಣಿಗೆ ಫ್ರೇಮಿಲ್ಲದ ಕನ್ನಡಕ ಹಾಕಿಕೊಳ್ಳುತ್ತಾರೆ. ದಿನವೆಲ್ಲಾ ಸಿಗರೇಟ್ ಸೇದುತ್ತಲೇ ಇರುತ್ತಾರೆ. ಆದ್ದರಿಂದಲೇ ಚಿನಗಾರಿ (ಕಿಡಿ) ಎನ್ನುವ ಹೆಸರು ಬಂದಿದೆಯೇನೋ. ಡಾಕ್ಟರು ಮೊಟ್ಟೆ ಸೇವಿಸುವಂತೆ

ಹೇಳಿದ್ದಾರೆ. ಮೊಟ್ಟೆ ಸೇವಿಸದೆ ಇಂತಹ ಬಿಸಿ ಪತ್ರಿಕೆಯನ್ನು ನಡೆಸುವುದು ಹೇಗೆ ಸಾಧ್ಯ?····ಆದರೆ ಮಠದಲ್ಲಿ ಮೊಟ್ಟೆಯನ್ನು ತರುವುದು ಹೇಗೆ?

ಲಕ್ಷ್ಮಿಯು ಅತಿಥಿ ಸತ್ಕಾರವನ್ನು ಮರೆಯುವುದು ಅಸಂಭವ. ಚಿನಗಾರಿ ಮಲಗುವ ಸಮಯದಲ್ಲಿ ಸೈನಿಕಜೀಯವರ ಹತ್ತಿರ ಹೇಳಿದರು: "ಲಕ್ಷ್ಮಿಯ ಮೇಲೆ ಒಂದು ಕವಿತೆ ಬರೆಯಬೇಕೆಂದಿದ್ದೇನೆ...."

"....ಓ ಮಹಾನ್ ಸದ್ಗುರು ಕೀ ಸೇವಿಕಾ,
ಗಾಯಿಕಾ ಪವಿತ್ರ ಧರ್ಮಗ್ರಂಥ ಕೀ,
ಜೋ ಮಹಾನ್ ಮಾರ್ಕ್ಸ್ ಕೆ ದರ್ಶನ್ ಕೀ ದರ್ಶಿಕಾ.
ಸುದರ್ಶನೆ, ಪ್ರಿಯದರ್ಶಿನೀ,
ತುಮ್ ಸ್ವಯಂ ದ್ವಂದ್ವಯುಕ್ತ ಭೌತಿಕವಾದ ಕೀ ಸಿನಿಥಿಸಿಸ್ ಹೋ"

ಓ ಮಹಾಸದ್ಗುರುವಿನ ಸೇವಿಕೆ, ಪವಿತ್ರ ಧರ್ಮಗ್ರಂಥದ ಗಾಯಕಿ; ಮಹಾನ್ ಮಾರ್ಕ್ಸ್‌ವಾದದ ದರ್ಶಕಿ ಸುದರ್ಶನೆ, ಪ್ರಿಯದರ್ಶಿನೀ, ಸ್ವತಃ ನೀನೇ ಒಂದು ದ್ವಂದ್ವಯುಕ್ತ ಭೌತಿಕವಾದದ ಸಿಂಥಿಸಿಸ್.

## 20

ಕಮಲಿ ಡಾಕ್ಟರಿಗೆ ಪತ್ರ ಬರೆಯುತ್ತಿದ್ದಳು—

"ಪ್ರಾಣನಾಥ—ನೀವು ನಿನ್ನೆ ಬರಲಿಲ್ಲ. ಯಾಕೆ ಬರಲಿಲ್ಲ? ನಾನು ಕೇಳಿದೆ ನೀವು ರಾತ್ರಿ····"

ಕಮಲಿ ಡಾಕ್ಟರಿಗೆ ಪ್ರತಿದಿನ ಪತ್ರ ಬರೆಯುತ್ತಿದ್ದಳು. ಬರೆದು ಐದಾರು ಬಾರಿ ಓದುತ್ತಿದ್ದಳು. ಅನಂತರ ಹರಿದು ಹಾಕಿಬಿಡುತ್ತಿದ್ದಳು. ಅವಳ ಅಲ್ಮಾರದ ಒಂದು ಮೂಲೆಯಲ್ಲಿ ಹೀಗೆ ಬರೆದೂ ಬರೆದೂ ಹರಿದು ಹಾಕಿದ್ದ ಕಾಗದದ ಚೂರು ಗಳ ರಾಶಿಯೇ ಬಿದ್ದಿತ್ತು. ಪತ್ರ ಬರೆದು, ಬರೆದದ್ದನ್ನು ಓದಿದ ಮೇಲೆ ಅವಳ ಮನಸ್ಸಿಗೆ ತುಂಬಾ ಸಮಾಧಾನವಾಗುತ್ತಿತ್ತು. ಆಗ ನಿದ್ದೆಯೂ ಚೆನ್ನಾಗಿ ಬರುತ್ತಿತ್ತು.

"ರಾತ್ರಿ ನೀವು ಗೋಧಿಹಾವಿನಿಂದ ಸ್ವಲ್ಪದರಲ್ಲಿ ತಪ್ಪಿಸಿಕೊಂಡಿರೆಂದು ಕೇಳಿದೆ. ಇದಕ್ಕಾಗಿ ಭಗವಂತನಿಗೆ ಲಕ್ಷ ಲಕ್ಷ ಪ್ರಣಾಮಗಳು."

ರಾತ್ರಿ ಡಾಕ್ಟರು ಗೋಧಿಹಾವಿನಿಂದ ಸ್ವಲ್ಪದರಲ್ಲಿ ತಪ್ಪಿಸಿಕೊಂಡಿದ್ದರು. ಅದು ಗೋಧಿಹಾವಲ್ಲ: ಕುದುರೆಹಾವು—ಗೋಧಿಹಾವು—ನಾಗರಹಾವುಗಳ ಸಂಕರದಿಂದ ಹುಟ್ಟಿದ ಹಾವು. ಅದು ಕುದುರೆಗಿಂತ ವೇಗವಾಗಿ ಓಡಬಲ್ಲದು. ಕುದುರೆಹಾವು ಕಚ್ಚಿದ ಮನುಷ್ಯ 'ಮಂತ್ರಗಾರ'ನ ಮನೆಯವರೆಗೆ ಬರುವುದೂ ಸಾಧ್ಯವಿಲ್ಲ. ಅರ್ಧರಾತ್ರಿಯಲ್ಲಿ ಮೊಲ, ಇಲಿಗಳು ಬೆದರಿ ತಮ್ಮ ತಮ್ಮ ಪಂಜರಗಳಲ್ಲಿ ಅತ್ತಿಂದಿತ್ತ ಓಡಲಾರಂಭಿಸಿದವು. ಡಾಕ್ಟರ್ ಪ್ಯಾರುವನ್ನು ಕರೆದರು. ಆದರೆ ಪ್ಯಾರು ನಿದ್ದೆಯಿಂದ ಏಳಲಿಲ್ಲ. ಪ್ರಾಣಿಗಳಿದ್ದ ಕೊಠಡಿಯ ಬಾಗಿಲನ್ನು ತೆರೆದು ಡಾಕ್ಟರ್ ಟಾರ್ಚ್ ಬಿಟ್ಟು ನೋಡಿದವರೇ ಬೆದರಿ ಹಿಂದೆ ಸರಿದರು—ಹಾವು ಬಾಗಿಲಿನ ಹತ್ತಿರವೇ ಬಾಲದ ಮೇಲೆ ಇಡೀ ದೇಹದ ಭಾರವನ್ನು ಬಿಟ್ಟು ನಿಂತು ಬುಸುಗುಟ್ಟುತ್ತಿತ್ತು. ಅಷ್ಟರಲ್ಲಿ ಪ್ಯಾರುವಿಗೂ ಎಚ್ಚರವಾಯಿತು. ಎದ್ದ ಕೂಡಲೇ ಅವನು ಎಡಗೈಯಿಂದ ಹಾವಿಗೆ ದೊಣ್ಣೆ ಯಿಂದ ಬಡಿದ. ಕೂಡಲೇ ಇದ್ದ ಜಾಗದಲ್ಲೇ ಹಾವು ಸತ್ತುಬಿದ್ದಿತು. ಎರಡೂವರೆ ಕೈಗಳಷ್ಟು ದಪ್ಪಗಿದ್ದ ಹಾವು. ಡಾಕಿಣಿಯ ಮಂತ್ರ ಎರಡೂವರೆ ಅಕ್ಷರದ್ದು. ಅವಳು ಕಳುಹಿಸಿದ ಹಾವೂ ಎರಡೂವರೆ ಕೈ ಗಾತ್ರದ್ದು. ಬೆಳಗ್ಗೆ ಈ ಮಾತು ಕೇಳಿದವರೆಲ್ಲಾ ಏಕಮಾತ್ರ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

"ಹೀಗೆ ಆಗುತ್ತೆ ಅಂತ ಮೊದಲೇ ಗೊತ್ತಿತ್ತು. ಪಾರ್ವತಿಯ ತಾಯಿ ಜೊತೆ ಹೆಚ್ಚು ಸಂಪರ್ಕ ಬೆಳೆಸಬೇಡಿ ಅಂತ ಡಾಕ್ಟರಿಗೆ ಎಷ್ಟೋ ಬುದ್ಧಿ ಹೇಳಿದ್ದಾಯಿತು. ಕೇಳಲಿಲ್ಲ. ಈಗ ತಿಳೀತಲ್ಲ. ಆ ರಾಕ್ಷಸಿ ಯಾರನ್ನು ಬಿಡುತ್ತಾಳೆ? ಯಾರನ್ನು ಪ್ರೀತಿಸಿದರೆ ಅವರನ್ನೇ ತಿಂದು ಮುಗಿಸುತ್ತಾಳೆ. ಬಡಪಾಯಿ ಡಾಕ್ಟರ್ ತಾನೇ ಏನು ಮಾಡುತ್ತಾರೆ? ಅವರೇನೂ ತಮ್ಮ ಇಷ್ಟದ ಪ್ರಕಾರ ಮಾಡ್ತಾರೇನು? ಪಾರ್ವತಿಯ ತಾಯಿ ಅವರಿಗೂ ಮಾಟ ಮಾಡಿಬಿಟ್ಟಿದ್ದಾಳೆ. ಅವರು ತಮ್ಮ ವಶದಲ್ಲೇ ಇಲ್ಲ. ಅನ್ಯಾಯವಾಗಿ ಬಡಪಾಯಿಯ ಪ್ರಾಣ ಒಂದು ದಿನ ಹೊರಟುಹೋಗುತ್ತೆ. ಛೇ ಛೇ...."

ಕಮಲಿಗೆ ಈ ಡಾಕಿಣಿ, ಭೂತ-ಪ್ರೇತಗಳಲ್ಲಿ ನಂಬಿಕೆಯಿರಲಿಲ್ಲ. ತಹಸೀಲ್ದಾರರೂ ಇಂತಹ ಮಾತನ್ನು ಮೂರ್ಖತೆಯೆಂದೇ ಭಾವಿಸುತ್ತಿದ್ದರು. ಕಾಳೀ ಚರಣನಂತೂ ಮನುಷ್ಯನಿಗಿಂತ ಶಕ್ತಿಶಾಲಿಯಾದ ದೇವತೆಯಿದೆಯೆಂದೇ ನಂಬು

ತ್ತಿರಲಿಲ್ಲ. ಅಂದಮೇಲೆ ಡಾಕಿಣಿ, ಭೂತ, ಮಂತ್ರವಾದಿ ಇವರೆಲ್ಲಾ ಯಾವ ಲೆಕ್ಕ? ಇಷ್ಟು ಜನ ಬಿಟ್ಟು ಹಳ್ಳಿಯ ಮಿಕ್ಕ ಜನರೆಲ್ಲಾ ಡಾಕಿಣಿಯ ಬಗ್ಗೆ ಏಕ ಮತದಿಂದಿದ್ದರು. ಬಾಲದೇವನಂತೂ ಭೂತವನ್ನು ಅನೇಕ ಬಾರಿ ತನ್ನ ಕಣ್ಣು ಗಳಿಂದಲೇ ಕಂಡಿದ್ದಾನಂತೆ. ಭೂತ ಎಮ್ಮೆಯ ಹಿಂದೆ ಹಿಂದೆ ನಡೆದು ಹೊಗೆ ಸೊಪ್ಪಿನಪುಡಿಯನ್ನು, ತಂಬಾಕನ್ನು ಬೇಡುತ್ತದಂತೆ. ಡಾಕಿಣಿಯ ಕಾಲುಗಳು ಹಿಂದು ಮುಂದಾಗಿರುತ್ತವೆ. ಅದು ಮರದ ರೆಂಬೆಗೆ ತಗುಲಿಕೊಂಡು ತೂಗಾಡುತ್ತಿರುತ್ತದೆ. ಭೂತ-ಪ್ರೇತ ಸುಳ್ಳೇ? ಹಾಗಾದರೆ ಕಮಲಾನದಿಯ ದಡದಲ್ಲಿ ಕೋಟೆಯ ಕಾಡಿನ ಹತ್ತಿರ ರಾತ್ರಿಯಲ್ಲಿ ಬೆಂಕಿಯ ದೆವ್ವ ಇದ್ದ ಕ್ಕಿದ್ದಂತೆ ಹತ್ತಿಕೊಂಡು ಓಡುವುದು, ನೋಡ ನೋಡುತ್ತಿದ್ದಹಾಗೆಯೇ ಒಂದು ಹತ್ತಾಗುವುದು ಆಗುತ್ತದಲ್ಲಾ ಅದು ಹೇಗೆ?

"ಇತ್ತೀಚೆಗೆ ಡಾಕ್ಟರ್ ಪ್ರತಿದಿನ ಚಿಕ್ಕಮ್ಮನ ಮನೆಗೆ ಹೋಗ್ತಾರೆ. ದಿನಕ್ಕೆ ಒಂದು ಸಲವಾದರೂ ಅಲ್ಲಿಗೆ ಹೋಗದೆ ಇದ್ದರೆ ಅವರ ಮನಸ್ಸಿಗೆ ಶಾಂತಿ ಯಿರೋಲ್ಲ."

ಪ್ಯಾರೂ ಹೇಳಿದ ಈ ಮಾತನ್ನು ಕೇಳಿ ಕಮಲಿ ನಕ್ಕಳು.

"ಡಾಕ್ಟರು ಗಣೇಶನ್ನ ನೋಡೋದಕ್ಕೆ ಹೋಗ್ತಾರೆ ಪ್ಯಾರು."

"ಆ ಹುಡುಗ ಈಗ ಆರೋಗ್ಯವಾಗಿದ್ದಾನೆ. ದಪ್ಪಗೆ ಕೊಬ್ಬಿದಾನೆ. ಅವನನ್ನು ಏನು ನೋಡೋದು?"

"ಬಿಡು ಪ್ಯಾರು, ಡಾಕ್ಟರ್ ಬಾಬು ಇಲ್ಲಿಗೂ ದಿನಾ ಬರ್‍ತಾರಲ್ಲಾ."

"ಇಲ್ಲಿಗೆ ಬರೋದು ಬೇರೆ ವಿಚಾರ ಅಕ್ಕ."

"ಯಾಕೆ? ಅದ್ಯಾಕೆ ಬೇರೆ ವಿಚಾರ?"

ಡಾಕ್ಟರ್ ನಗುತ್ತಾ ಒಳಗೆ ಬಂದರು: "ಓಹೋ ಪ್ಯಾರೂ ಮಹಾರಾಜರು ಇಲ್ಲಿ ದರ್ಬಾರು ಮಾಡ್ತಿದಾರೋ? ಜ್ವರ ಬಂದಿದ್ದ ಮೊಲ ಹೇಗೆ ಓಡಿ ಹೋಯಿತು?"

"ಮಧ್ಯಾಹ್ನ ಊಟ ಹಾಕೋದಕ್ಕೆ ಹೋಗಿ ನೋಡಿದಾಗ ಪಂಜರದಲ್ಲಿ ಇರಲಿಲ್ಲ."

"ಬೆಳಿಗ್ಗೆ ಇಂಜಕ್ಷನ್ ಕೊಟ್ಟಮೇಲೆ ನಾನು ಬಾಗಿಲು ಹಾಕ್ಕೊಂಡು ಬಂದಿದ್ದೆನಲ್ಲಾ. ನೀನು ನೀರು ಕುಡಿಸಿದ ಮೇಲೆ ಬಾಗಿಲು ಹಾಕಲಿಲ್ಲಾ ಅಂತ ಕಾಣುತ್ತೆ. ಇಡೀ ತಿಂಗಳ ಪರಿಶ್ರಮವೆಲ್ಲಾ ಹಾಳಾಯಿತು."

ಪ್ಯಾರುವಿಗೆ ಈ ಮೊಲ, ಇಲಿಗಳನ್ನು ಕಂಡರೆ ತುಂಬಾ ತಿರಸ್ಕಾರ.... ಮನುಷ್ಯರಿಗೆ ಚಿಕಿತ್ಸೆ ಮಾಡಿ ಬೇಜಾರಾದ್ರೆ ಈ ಡಾಕ್ಟರು ಪ್ರಾಣಿಗಳಿಗೆ ಚಿಕಿತ್ಸೆ ಆರಂಭಿಸುತ್ತಾರೆ. ದಿನವೆಲ್ಲಾ ಪಂಜರಗಳನ್ನು ಹಿಡ್ಕೊಂಡು ಕೂತಿರುತ್ತಾರೆ. ಜ್ವರ ನೋಡೋದು, ಸೂಜಿ ಚುಚ್ಚೋದು, ರಕ್ತ ಪರೀಕ್ಷೆ ಮಾಡೋದು.... ಈ ಪ್ರಾಣಿಗಳು ಬಂದಾಗಿನಿಂದ ಡಾಕ್ಟರಿಗೆ ಪ್ಯಾರುವಿನ ಜೊತೆ ಮಾತನಾಡೋದಕ್ಕೂ ಬಿಡುವಿಲ್ಲ....ಈಗ ಭಾಂಗಡ ಗುಂಪಿನವರಿಗೆ ಹೇಳಿದ್ದಾರೆ: "ಎರಡು ಮೂರು ನರಿ ಮರಿಗಳು ಬೇಕಾಗಿದೆ." ಹಿಂದೆ ಒಂದಿನ ಕೋತಿ ಕುಣಿಸುವವನ ಹತ್ತಿರ ಕೋತಿ ಕೇಳ್ತಿದ್ರು....ವಿಚಿತ್ರ ಮನುಷ್ಯ.

ಪ್ಯಾರೂ ಸುಮ್ಮನೆ ಹೊರಟುಹೋದ. ತಾಯಿ ನಗುತ್ತಾ ಬಂದಳು:

"ಡಾಕ್ಟರ್ ಬಾಬೂ, ವಿಷಹಾರೀ ಅಣ್ಣನಿಗಾಗಿ ನಾನು ಒಂದು ಜೊತೆ ಪಾರಿವಾಳ, ಹಾಲು ತಂದುಕೊಡ್ತೀನಿ."

"ವಿಷಹಾರಿ ಔಷಧೀ ?"

"ಹೌದು, 'ಏಂಟಿವೇನಮ್' ಅಂತ ಒಂದು ಔಷಧಿ ಇದೆ. ಅದರಿಂದ ಹಾವು ಕಚ್ಚಿದವರಿಗೆ ಚಿಕಿತ್ಸೆ ಮಾಡಬಹುದು. ನಾನು ಅದಕ್ಕಿಂತಲೂ ಪ್ರಭಾವಶಾಲಿಯಾದ ಅಗ್ಗವಾದ ಔಷಧಿ ತಯಾರಿಸಬೇಕೆಂದಿದ್ದೇನೆ. ರೌತಹಟ್ ಸ್ಟೇಷನ್ನಿನ ಹತ್ತಿರ ಹಾವಾಡಿಗರ ಒಂದು ಗುಂಪಿದೆ ಅಂತ ಕೇಳಿದೆ. ಹಾವು ಹಿಡಿದು ಇಟ್ಕೊಬೇಕು."

"ಹಾಗೆ ಮಾಡಿದ್ರೆ ನೀವು ಮಣ್ಣಿನ ಮಹಾದೇವ ಅಲ್ಲ, ನಿಜವಾದ ಮಹಾದೇವ ಆಗಿಬಿಡ್ತೀರಿ."

ಕಮಲಿಗೆ ವ್ಯಂಗ್ಯ ಮಾತುಗಳನ್ನಾಡುವುದೂ ಗೊತ್ತು.

ಡಾಕ್ಟರ್ ನಕ್ಕರು. ಕಮಲಿಯ ತಾಯಿ ನಗುವನ್ನು ತಡೆದುಕೊಳ್ಳುತ್ತಾ ಮಗಳನ್ನು ಗದರಿಸಿದರು:

"ನೀನು ಬಾಯಿಗೆ ಬಂದದ್ದನ್ನು ಮಾತನಾಡಬೇಡ. ಸ್ವಲ್ಪವಾದರೂ ನಾಚಿಕೆ ಸಂಕೋಚ ಒಂದೂ ಇಲ್ಲ. ಇವಳ ಅಪ್ಪಾನೇ ಇವಳನ್ನು ವಿಪರೀತ ಹೆಚ್ಚಿಸಿ ಕೂರಿಸಿದಾರೆ. ನೀನು ಸ್ವಲ್ಪ ಸುಮ್ಮನೇ ಕೂತಿರು. ನಾನು ಚಹಾ ಮಾಡ್ಕೊಂಡು ಬರ್ತೀನಿ." ಡಾಕ್ಟರ್ ಕೇಳಿದರು: ತಹಸೀಲ್ದಾರರು ಎಲ್ಲಿಗೆ ಹೋಗಿದ್ದಾರೆ ?"

"ಕಟಿಹಾರ್‌ಗೆ ಸರ್ಕಲ್ ಮ್ಯಾನೇಜರ್‌ನ ಕ್ಯಾಂಪಿಗೆ ಹೋಗಿದ್ದಾರೆ." ಕಮಲಿ ಉತ್ತರ ಕೊಟ್ಟಳು. ಇಂದು ಮೊದಲ ಬಾರಿಗೆ ಕಮಲಿ ಒಬ್ಬಳೇ ಡಾಕ್ಟರರಿಗೆ ಇಷ್ಟು ಸಮೀಪ ಕುಳಿತಿರುವುದು. ಅವಳಿಗೆ ಅವರ ಮುಖವನ್ನು ನೋಡುವುದಕ್ಕೂ ಆಗಲಿಲ್ಲ. ನಿಧಾನವಾಗಿ ತನ್ನ ಮುಖ ಕೆಂಪಗಾಗುತ್ತಿದೆ ಎಂದು ಅವಳಿಗನ್ನಿಸಿತು. ಕಣ್ಣಿನ ರೆಪ್ಪೆಗಳು ಭಾರವಾದವು. ಕಿವಿಯ ವರ್ತುಲ ಗಳು ನಡುಗಲಾರಂಭಿಸಿದವು. ಇಡೀ ದೇಹದಲ್ಲಿ ಮಿಂಚು ಸಂಚರಿಸಿದಂತಾಯಿತು. ದೇಹ ಹಗುರವಾದಂತೆ ಅನ್ನಿಸಿತು.... ಜ್ಞಾನ ತಪ್ಪುವುದೇನು? ಜ್ಞಾನ ತಪ್ಪು ವುದು ಅವಳಿಗಿಷ್ಟವಿಲ್ಲ, ಇಲ್ಲ, ಇಲ್ಲ, ಡಾ....ಡಾಕ್ಟರ್

"ಕಮಲಾ"

"ಆಂ?"

"ಕಮಲಾ, ಈಕಡೆ ನೋಡು ಕಮಲಾ."

"ಡಾಕ್ಟರ್, ನನ್ನ ಉಳಿಸಿ."

"ಕಮಲಾ, ಕಣ್ಣು ತೆಗೆ."

ಕಮಲಾ ಕಣ್ಣು ತೆರೆದಳು. ಅವಳ ತಲೆ ಡಾಕ್ಟರರ ಮಡಿಲಿನಲ್ಲಿತ್ತು. ತಾಯಿ ಕೈಯ್ಯಲ್ಲಿ ಚಮಚ ಹಿಡಿದು ನಿಂತಿದ್ದಳು. ಭಯದಿಂದ ತಾಯಿಯ ಮುಖ ಹಳದಿಯಾಗಿತ್ತು. ಆದರೆ ಡಾಕ್ಟರ್ ನಗುತ್ತಲೇ ಇದ್ದರು. "ಡಾಕ್ಟರ್, ಇವಳ ಖಾಯಿಲೆಯೇನೆಂದೇ ಗೊತ್ತಾಗುವುದಿಲ್ಲ."

"ಆದರೆ ರೋಗ ನಿಧಾನವಾಗಿ ಕಡಿಮೆಯಾಗ್ತಿದೆ. ಜ್ಞಾನ ತಪ್ಪಿತು. ಐದೇ ನಿಮಿಷದಲ್ಲಿ ಸರಿಯಾಗಿಬಿಟ್ಟಳಲ್ಲಾ. ಹೀಗೇ ಒಂದಿನ ಪೂರ್ತಿಯಾಗಿ ವಾಸಿಯಾಗಿಬಿಡುತ್ತೆ.... ಕಮಲಾನೇ ಈಗ ಚಹಾ ಮಾಡ್ತಾಳೆ.... ಹೋಗು ಕಮಲಾ...."

ಕಮಲಾ ಎದ್ದು, ಏನೂ ಆಗೇ ಇರಲಿಲ್ಲ ಎನ್ನುವಂತೆ ಒಳಗಡೆ ಓಡಿ ಹೋದಳು. ಡಾಕ್ಟರ್ ಕಮಲಿಯ ಪುಸ್ತಕವನ್ನು ತೆಗೆದು ಹಾಳೆಗಳನ್ನು ತಿರುವಿ ಹಾಕಿದರು: ನಳ-ದಮಯಂತಿ ವಿವಾಹ ಯೋಗ್ಯ ಕುಮಾರಿ ಕಮಲಾದೇವಿ....' ಮತ್ತೊಂದು ಕಡೆ 'ಕುಮಾರಿ'ಯನ್ನು ಹೊಡೆದು ಕೊನೆಗೆ 'ಬ್ಯಾನರ್ಜಿ ಎಂದು ಸೇರಿಸಿದೆ—ಕಮಲಾದೇವಿ ಬ್ಯಾನರ್ಜಿ. ಡಾಕ್ಟರ್ ಬೇಗ ಬೇಗ ಹಾಳೆಗಳನ್ನು ಮಗುಚಿದರು. ಆರ್ಟ್ ಪೇಪರಿನ ಮೇಲೆ ನಳ-ದಮಯಂತಿಯರ ಚಿತ್ರ. ನಳನ

ಕೆಳಗೆ ನೀಲಿ ಪೆನ್ಸಿಲಿನಿಂದ 'ಪ್ರಶಾಂತ' ಎಂದು ಬರೆದಿದೆ. ದಮಯಂತಿಯ ಕೆಳಗೆ ಕೆಂಪು ಪೆನ್ಸಿಲಿನಲ್ಲಿ 'ಕಮಲಾ' ಎಂದು ಬರೆದಿದೆ. ಡಾಕ್ಟರ ಹಣೆಯ ಮೇಲೆ ಚಿಕ್ಕ ಚಿಕ್ಕ ಬೆವರ ಹನಿಗಳು ಕಾಣಿಸಿಕೊಂಡವು. ಅವರಿಗೆ ತಟ್ಟನೆ ನೆನಪಾಯಿತು: ಹಿಂದೆ ಒಂದು ಬಾರಿ ಮಮತೆಯ ಜೊತೆ ಬಾಂಕೀಪುರ ಸ್ಟೇಷನ್ನಿನಿಂದ ಹಿಂತಿರುಗುತ್ತಿದ್ದರು. ರಿಕ್ಷಾದಲ್ಲಿ ಕುಳಿತುಕೊಳ್ಳುತ್ತಿದ್ದಾಗ ಒಬ್ಬ ಭಿಕಾರಿ ಮುಂದೆ ಬಂದ—ರಾಧಾಕೃಷ್ಣರ ಜೋಡಿ ಬಹುಕಾಲ ಬಾಳಿ. ತಾಯಿಯವರ ಸೌಭಾಗ್ಯ ಸದಾ ಇರಲಿ. ಮಕ್ಕಳಾಗಿ ಬದುಕಿ ಬಾಳಲಿ. ಮಮತಾ ಬ್ಯಾಗಿನಿಂದ ಒಂದಾಣೆ ತೆಗೆದುಕೊಟ್ಟು, ಡಾಕ್ಟರ್ ಕಡೆ ತಿರುಗಿ ನೋಡಿ ಕಿಲಕಿಲನೆ ನಕ್ಕಳು. ಆಗಲೂ ಡಾಕ್ಟರ ಹಣೆಯ ಮೇಲೆ ಹೀಗೆಯೇ ಬೆವರು ಹನಿಗಳು ಮೂಡಿದ್ದವು.

"ಡಾಕ್ಟರ್....ಕಮಲಿಗೆ ಒಂದು ಒಳ್ಳೆ ಗಂಡು ನೋಡಿಕೊಡಿ. ನಿಮ್ಮ ಊರಿನಲ್ಲಿ ಯಾರಾದರೂ....ನಿಮ್ಮ ಸ್ನೇಹಿತರು, ನೆಂಟರು...."—ತಾಯಿ ಮಾತನ್ನು ನಿಲ್ಲಿಸಿ ತಲೆಯ ಮೇಲೆ ಸೆರಗು ಹೊದ್ದುಕೊಂಡಳು. ತಹಸೀಲ್ದಾರರು ಬಂದರು. ರಣಜೀತನ ಕೈಯ್ಯಲ್ಲಿ ಒಂದು ದೊಡ್ಡ ಮೀನಿತ್ತು.

"ಈ ಬಹುಮಾನ ಎಲ್ಲಿ ಸಿಕ್ಕಿತು?" ಡಾಕ್ಟರ್ ನಗುತ್ತಾ ಕೇಳಿದರು. ಮೋಡಾದ ಮೇಲೆ ಕುಳಿತುಕೊಳ್ಳುತ್ತಾ ತಹಸೀಲ್ದಾರರು ಉತ್ತರ ಕೊಟ್ಟರು: "ಪಕರೀ ಘಟ್ಟದಲ್ಲಿ ಮೀನುಗಾರರು ಮೀನು ಹಿಡೀತಿದ್ರು. ಅಲ್ಲಿಂದ ತಂದೆ."

ಕಮಲಾ ಚಹ ತಂದಳು.

ತಹಸೀಲ್ದಾರರು ಚಹವನ್ನು ಒಂದು ಗುಟುಕು ಕುಡಿದು ಹೇಳಿದರು: "ಡಾಕ್ಟರ್. ಈದಿನ ದೊಡ್ಡ ಪಾಪದ ಹೊರೆ ಇಳಿಸಿ ಬಂದುಬಿಟ್ಟೆ."

"ಅಂದರೆ?"

"ಈ ತಹಸೀಲ್ದಾರ ಪದವಿ ಪಾಪದ ಹೊರೆಯೇ ಅಲ್ಲವೇ? ಹೊಸ ಸರ್ಕಲ್ ಮ್ಯಾನೇಜರ್ ಹೋದಕೂಡಲೇ ಬೆಂಕಿ ಉಗುಳೋದಕ್ಕೆ ಆರಂಭಿಸಿಬಿಟ್ಟರು. 'ಲಾಲ್ ಪತಾಕ' ಪತ್ರಿಕೆಯಲ್ಲಿ ಬರೆದಿರೋದು ಸರಿಯಾಗೇ ಇದೆ. 'ಪಾರಬಂಗಾ ರಾಜ್ಯದ ಮೀನಾಪುರ ಸರ್ಕಲ್‌ನ ಹೊಸ ಮ್ಯಾನೇಜರ್ ನಾದಿರಶಾಹನ ಅಣ್ಣನ ಮಗ.' ನೀವೇ ಹೇಳಿ ಡಾಕ್ಟರ್, ಒಂದೇ ಒಂದು ವರ್ಷ ಕಂದಾಯ ಬಾಕಿ ಇರೋ ರೈತರ ಮೇಲೆಲ್ಲಾ ಮೊಕದ್ದಮೆ ಹೂಡೋದು ಹೇಗೆ? ಸುಮ್ಮನೇ ಡಿಕ್ರಿ ಜಾರಿಗೆ ತಂದುಬಿಟ್ಟು ಭೂಮೀನ ಹರಾಜು ಹಾಕಿಬಿಡಬೇಕಂತೆ. ಇಷ್ಟೊಂದು ದೊಡ್ಡ ಅನ್ಯಾಯ ನನ್ನಿಂದ ಸಾಧ್ಯವಿಲ್ಲ. ಕಾಲ ಎಷ್ಟು ಸೂಕ್ಷ್ಮವಾಗಿದೆ

ಅನ್ನೋದನ್ನ ಅರ್ಥಮಾಡಿಕೊಳ್ಳೋಲ್ಲ. ನಾನು ಸರಿಯಾಗಿಯೇ ವಿರೋಧಿಸಿದೆ. ಕೂಡಲೇ ರೇಗಿ, "ನಾನು ಹೇಳಿದ ಹಾಗೆ ಮಾಡೋದಕ್ಕೆ ಆಗದಿದ್ರೆ ರಾಜೀನಾಮೆ ಕೊಟ್ಟುಬಿಡಿ" ಅಂದರು. ಗಂಗಾಸ್ನಾನಕ್ಕಿಂತ ಪುಣ್ಯತರವಾದ ಇಂಥ ಅವಕಾಶ ಪದೆ ಪದೆ ಸಿಗುತ್ತೇನು? ತಕ್ಷಣ ರಾಜೀನಾಮೆ ಕೊಟ್ಟು ಬಂದುಬಿಟ್ಟೆ. ಇಡೀ ಆಯುಸ್ಸು ಸೇವೆ ಮಾಡೋದ್ರಲ್ಲೇ ಕಳೆದುಹೋಯಿತು····ಹಾ ಈವತ್ತು ಮತ್ಸ್ಯ ಭಗವಾನರು ಆಗಮಿಸಿದ್ದಾರೆ. ಡಾಕ್ಟರಿಗೂ ಆಮಂತ್ರಣ ಇದೆ ಅಂತ ಕಮಲೆಗೆ ಹೇಳು."

ತಹಸೀಲ್ದಾರರ ರಸಿಕತೆ ಡಾಕ್ಟರಿಗೆ ಮತ್ತೊಮ್ಮೆ ನಳ-ದಮಯಂತಿಯರನ್ನು ನೆನಪಿಗೆ ತಂದುಕೊಟ್ಟಿತು. ಕಮಲಿ ನಕ್ಕಳು. ತಾಯಿ ಹೇಳಿದಳು: "ಖಾರ ಹುಳಿ ಹಾಕದೆ ಮೀನಿನ ಅಡಿಗೆ ಮಾಡೋದಕ್ಕೆ ಕಮಲಿನೇ ಸರಿ."

ಕಮಲಿಯ ಆಹ್ವಾನವನ್ನು ತಿರಸ್ಕರಿಸುವ ಸಾಮರ್ಥ್ಯ ತಮ್ಮಲ್ಲಿಲ್ಲ ಎಂದು ಡಾಕ್ಟರಿಗೆ ಅನ್ನಿಸುತ್ತಿದೆ......ಕಮಲಾ ಬ್ಯಾನರ್ಜಿ......ಕಮಲಿಯ ಕಣ್ಣುಗಳು.. ..

ಚಾಂದ್ ಬಯರಿ ಭೇಲ ಬಾದಲ್,
ಮಛಲೀ ಬಯರಿ ಮಹಾಜಾಲ್,
ತಿರಿಯಾ ಬಯರಿ ದುಹು ಲೋಚನ್......

ಚಂದ್ರನಿಗೆ ಮೋಡವೇ ವೈರಿ. ಮೀನಿಗೆ ಜಾಲವೇ ವೈರಿ. ಸ್ತ್ರೀಗೆ ಅವಳ ಎರಡು ಕಣ್ಣುಗಳೇ ವೈರಿಗಳು.

## 21

ರಾತ್ರಿ ತಂತ್ರಿಮಾ ಪಂಗಡದಲ್ಲಿ ಸಹದೇವ ಸೆರೆ ಸಿಕ್ಕಿದ.

ಇದೆಲ್ಲಾ ಕಲಾಸಿಯ ಕೆಲಸವೇ. ಹೊರಗಿನ ಮನುಷ್ಯನಲ್ಲದೆ ಇಂಥ ಮೋಸ ವಂಚನೆಗಳನ್ನು ಹಳ್ಳಿಯಲ್ಲಿ ಮತ್ಯಾರು ಮಾಡಬಲ್ಲರು? ತಲೆ-ತಲಾಂತರಗಳಿಂದ ಮೇಲುಜಾತಿಯ ಜನ ಕೆಳಜಾತಿಯವರ ಮನೆಗಳಿಗೆ ಬರುತ್ತಾರೆ. ಗದ್ದೆಯ

ಕೆಲಸವಿದ್ದಾಗ ಸಂಜೆಯ ಹೊತ್ತಿಗೇ ಕೂಲಿಗಾರರನ್ನು ನೇಮಿಸಿರಬೇಕಾಗುತ್ತದೆ. ಸೂರ್ಯ ಹುಟ್ಟುವುದಕ್ಕೆ ಒಂದು ಗಂಟೆ ಮುಂಚಿತವಾಗಿಯೇ ಗದ್ದೆಯಲ್ಲಿ ಕೆಲಸಗಾರರು ಕೆಲಸ ಆರಂಭಿಸಿರಬೇಕಾಗುತ್ತದೆ. ಆದ್ದರಿಂದ ದೊಡ್ಡ ದೊಡ್ಡ ರೈತರು ಹಿಂದಿನ ಸಂಜೆ ಅಥವಾ ರಾತ್ರಿಯೇ ತಮ್ಮ ತಮ್ಮ ಕೆಲಸಗಾರರಿಗೆ ಹೇಳಿರುತ್ತಿದ್ದರು. ತಂತ್ರಿಮ ಪಂಗಡದಲ್ಲಿ ಕಲಾಸಿ ಬಂದು–ಹೋಗಿ ಮಾಡುವುದಕ್ಕೆ ಆರಂಭಿಸಿದ ಮೇಲೆ ಹೊಸ ಹೊಸ ವಿಚಾರಗಳು ಕೇಳಿಬರಲಾರಂಭಿಸಿದ್ದವು. ನೋಡ ನೋಡುತ್ತಿದ್ದ ಹಾಗೇ ಬೇರೆ ಪಂಗಡಗಳಲ್ಲೂ ನಿಯಮ, ಕಾನೂನು, ಪಂಚಾಯತಿ ನಿರ್ಬಂಧಗಳು ಏರ್ಪಟ್ಟವು. ಬಡಪಾಯಿ ಸಹದೇವ ಮಿಶ್ರನನ್ನು ತಂತ್ರಿಮಾ ಪಂಗಡದವರು ರಾತ್ರಿಯೆಲ್ಲಾ ಬಂಧಿಸಿಟ್ಟಿದ್ದರು.... ಅವನು ಫುಲಿಯಾಳ ಮನೆಗೆ ನುಗ್ಗಿದ್ದರೆ ಫುಲಿಯಾ ಯಾಕೆ ಕೂಗಿಕೊಳ್ಳಲಿಲ್ಲ? ಯಾರ ಮನೆಗೆ ನುಗ್ಗಿದ್ದನೋ ಅವರಿಗೆ ಎಚ್ಚರ ಕೂಡಾ ಆಗಲಿಲ್ಲ. ತಂದೆತಾಯಿಯರಿಗೂ ಸುಳಿವು ಸಿಗಲಿಲ್ಲ. ಅವರ ಮನೆಯ ನಾಯಿಯಂತೂ ಬಗುಳಲಿಲ್ಲ.... ಆದರೆ ಹಳ್ಳಿಯವರಿಗೆಲ್ಲಾ ಸಮಾಚಾರ ತಿಳಿದುಹೋಯಿತು. ಇದೆಲ್ಲಾ ಆ ಕಲಾಸಿಯ ನೀಚತನ. ಇದೇ ಸ್ಥಿತಿ ಮುಂದುವರಿದರೆ ಕೆಳಜಾತಿಯವರ ಮನೆಗೆ ಕೆಲಸಗಾರರನ್ನು ಹುಡುಕಿಕೊಂಡು ಹೋಗುವುದೂ ಕಷ್ಟವಾಗುತ್ತದೆ. ಯಾರಿಗೆ ಗೊತ್ತು, ಯಾರ ಮೇಲೆ ಯಾವಾಗ ಸುಳ್ಳು ಅಪವಾದ ಹೊರಿಸುತ್ತಾರೋ! ಪಂಚಾಯತಿ ನಡೆಯಬೇಕು. ಈ ಪಂಚಾಯತಿಯಲ್ಲಿ ರಾಜಪೂತರು ಬ್ರಾಹ್ಮಣರ ಪಕ್ಷ ವಹಿಸದಿದ್ದರೆ ಬ್ರಾಹ್ಮಣರು ಗೊಲ್ಲರನ್ನೂ ರಾಜಪೂತರೆಂದೇ ಮಾನ್ಯ ಮಾಡುತ್ತಾರೆ.

"ನನಗೆ ಏನೂ ಗೊತ್ತಿಲ್ಲ."

—ಫುಲಿಯಾ ಪಂಚರ ಮಧ್ಯೆ ಕೈಜೋಡಿಸಿ ನಿಂತು ಹೇಳಿದಳು: "ಅಂಗಳದಲ್ಲಿ ಗಲಾಟೆ ಆರಂಭವಾದ ಮೇಲೆ ನನಗೆ ಎಚ್ಚರವಾದದ್ದು."

ಸಹದೇವ ಮಿಶ್ರನ ಹತ್ತಿರ ಮುಹಂಗೂದಾಸನ ಹೆಬ್ಬೆಟ್ಟಿನ ಗುರುತಿರುವ ಕಾಗದವಿದೆ—ಖಾಲಿ ಕಾಗದದ ಮೇಲೆ ಹೆಬ್ಬೆಟ್ಟಿನ ಗುರುತು. ಆದ್ದರಿಂದ ಈಗ ಮುಹಂಗೂವಿನ ಜುಟ್ಟು ಸಹದೇವನ ಕೈಯ್ಯಲ್ಲಿದೆ. ಸಹದೇವ ತನ್ನ ಮನಸ್ಸಿಗೆ ಬಂದದ್ದನ್ನು ಮಾಡಬಲ್ಲ. ಎರಡು ಹಸುಗಳನ್ನೂ ನಾಲ್ಕು ಕರುಗಳನ್ನೂ ನಾಳೆಯೇ ಬಿಚ್ಚಿಕೊಂಡು ಹೋಗುತ್ತಾನೆ. ಅದೂ ಅಲ್ಲದೆ ವರ್ಷ ಪೂರ್ತಿ ಮನೆ ಖರ್ಚನ್ನೆಲ್ಲಾ ಸಹದೇವನೇ ನೋಡಿಕೊಂಡಿದ್ದಾನೆ. ಒಬ್ಬ ಮನುಷ್ಯನ ಕೂಲಿಯಿಂದ ಒಬ್ಬನ ಹೊಟ್ಟೆಯೂ ತುಂಬುವುದಿಲ್ಲ.... ಆದರೆ ಈಗ ಫುಲಿಯಾಳ ಕೈಯ್ಯಲ್ಲೇ

ಸಹದೇವ ಮಿಶ್ರನ ಮರ್ಯಾದೆ ಮತ್ತು ತಂದೆಯ ಭವಿಷ್ಯ ಇತ್ತು. ಅವಳ ಮಾತಿನಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಸಹದೇವನ ಮರ್ಯಾದೆ ಮಣ್ಣುಗೂಡು ತ್ತದೆ. ತಂದೆಯ ಜೀವನವು ಹಾಳಾಗುತ್ತದೆ.

ಪಂಚಾಯತಿಗೆ ಹಳ್ಳಿಯ ಕಿರಿಯ ಹಿರಿಯರೆಲ್ಲಾ ಬಂದಿದ್ದರು. ತಹಸೀಲ್ದಾರರು ಪೂರ್ಣಿಯಾಗೆ ಹೋಗಿದ್ದರು. ಆದ್ದರಿಂದ ಪಂಚಾಯತಿಯಲ್ಲಿ ಸಿಂಘಜೀ ಒಬ್ಬರೇ ಮಾತನಾಡುತ್ತಿದ್ದರು. ಕಪ್ಪು ಟೋಪಿಯ ಸಂಚಾಲಕರೂ ಬಂದಿದ್ದರು. ಬಾಲದೇವನೂ ಇದ್ದ. ಕರೆಯದಿದ್ದರೂ ಕಾಳೀಚರಣ ಕೂಡ ಬಂದಿದ್ದ. ಸಿಂಘಜೀ ಒಬ್ಬರೇ ಪ್ರಶ್ನೆ ಮಾಡುತ್ತಿದ್ದರು. ತಹಸೀಲ್ದಾರರಿದ್ದಿದ್ದರೆ ಸಿಂಘಜೀಗೆ ಸ್ವಲ್ಪ ಸುಲಭವಾಗುತ್ತಿತ್ತು.

“ಪ್ರಶ್ನೆ ಕೇಳಿದರೆ ಒಂದು ಗಂಟೆ ಮೇಲೆ ಉತ್ತರ ಹೇಳ್ತೀಯಲ್ಲಾ ····ಹೂಂ ಹೇಳು. ಅಂಗಳದಲ್ಲಿ ಗಲಾಟೆಯಾದಾಗ ನಿನಗೆ ಎಚ್ಚರ ವಾಯ್ತಾ ?····ಎಲ್ಲಾ ಪಂಚರೂ ಕೇಳಿಸ್ಕೊಳ್ಳಿ····ನಿನಗೆ ಎಚ್ಚರವಾದಾಗ ನೀನೇನು ನೋಡಿದೆ ?”

“ಸಹದೇವ ಬಾಬುವನ್ನು ಸುತ್ತುಗಟ್ಟಿ ಎಲ್ಲರೂ ಗಲಭೆ ಮಾಡು ತ್ತಿದ್ದರು.”

“ಸರಿ ನೀನು ಕುಳಿತುಕೋ. ಸಹದೇವ ಮಿಶ್ರ. ಈಗ ನೀವು ಹೇಳಿ. ಮಹಂಗೂದಾಸನ ಮನೆಗೆ ಅಷ್ಟು ಕತ್ತಲಾದ ಮೇಲೆ ಯಾಕೆ ಹೋಗಿದ್ದಿರಿ?”

“ರಾತ್ರಿ ನನಗೆ ಸ್ವಲ್ಪ ಹೊಟ್ಟೆನೋವು ಪ್ರಾರಂಭವಾಯ್ತು. ಚೊಂಬು ಹಿಡಿದುಕೊಂಡು ಹೊರಗಡೆ ಹೊರಟೆ. ಮೈದಾನದಿಂದ ಹಿಂದಿರುಗುತ್ತಿದ್ದಾಗ ಕಮಲಾನದಿಯ ತೀರದ ಗದ್ದೆಯಲ್ಲಿ ಯಾರದೋ ಎತ್ತು ಮೇಯುತ್ತಿದ್ದುದನ್ನು ನೋಡಿದೆ. ಆದ್ದರಿಂದ ಮಹಂಗೂನ ಎಬ್ಬಿಸೋದಕ್ಕೆ ಹೋದೆ.”

“ಯಾಕೇ ?”

“ಕಮಲಾನದಿಯ ತೀರದ ಭೂಮಿಯನ್ನು ನೋಡಿಕೊಳ್ಳಲು ಮಹಂಗೂ ದಾಸನನ್ನೇ ನೇಮಿಸಿರೋದು.”

“ಸರಿ, ಆಮೇಲೆ ?”

“ನಾನು ಹೋಗುತ್ತಿದ್ದಾಗ, ರಬಿಯಾ, ಸೋನವಾ ಇಬ್ಬರೂ ನಿಮ್ಮ ಗದ್ದೆಯಲ್ಲಿ ಕಬ್ಬು ಕೀಳುತ್ತಿದ್ದುದನ್ನು ನೋಡಿದೆ. ಇಬ್ಬರನ್ನೂ ಗದರಿಸಿದೆ.

ಮಹಂಗೂದಾಸನನ್ನು ಎಬ್ಬಿಸಿ, ಅವನ ಮನೆಯಿಂದ ಹೊರಟ ಕೂಡಲೇ ರಬಿಯಾ, ಸೋನಮಾ, ತೇತರ ನಕಛೋದಿಯಾ ಎಲ್ಲರೂ ನನ್ನ ಹಿಡಿದುಕೊಂಡರು."

"ಏನು ಮಾಡೋದು, ನನ್ನ ಐದು ಬೀಘ ಜಮೀನಿನ ಕಬ್ಬನ್ನೆಲ್ಲಾ ಈ ಬದ್ಮಾಷರೇ ಕದ್ದು ಮುಗಿಸಿಬಿಟ್ಟರು.... ನೀವು ಕೂತ್ಕೊಳ್ಳಿ.... ಮಹಂಗೂ ಎಲ್ಲಿ?"

"ಇಲ್ಲಿದೀನಿ ಸ್ವಾಮಿ."

ಮುದುಕ ಮಹಂಗೂ ಕೈ ಜೋಡಿಸಿ ಎದ್ದು ನಿಂತ.

"ಸಹದೇವ ಮಿಶ್ರರು ನಿನ್ನ ಎಬ್ಬಿಸಿದರೇನು?"

"ಹೌದು ಸ್ವಾಮಿ."

"ಈಗ ನಿಜವಾದ ನ್ಯಾಯವನ್ನು ಪಂಚರೇ ತೀರ್ಮಾನಿಸಲಿ."

ಆದರೆ ಕಾಳೀಚರಣ ಹೇಗೆ ಸುಮ್ಮನಿರುತ್ತಾನೆ? ಪಂಚಾಯತಿಯಲ್ಲಿ ಒಂದು ಪಕ್ಷದ ಮಾತು ನಡೆಯಬಾರದು. ಅಲ್ಲದೆ ರಬಿಯಾ ಮತ್ತು ಸೋನಮಾ ಪಾರ್ಟಿಯ ಸದಸ್ಯರು. ಇದು ಪಂಚಾಯತಿಯಲ್ಲ. ದಾಕ್ಷಿಣ್ಯದ ತೀರ್ಮಾನ. ಕಾಳೀಚರಣ ತಾನೇ ಹೇಗೆ ಸುಮ್ಮನಿರುತ್ತಾನೆ?

"ಸಿಂಘಜೀಯವರೇ. ನಾನೂ ಕೆಲವು ಪ್ರಶ್ನೆಗಳನ್ನು ಕೇಳೋದಕ್ಕೆ ಅವಕಾಶ ಕೊಡಿ."

"ಪಂಚಾಯತಿಯ ಎಲ್ಲರ ದೃಷ್ಟಿಯೂ ತಕ್ಷಣ ಕಾಳೀಚರಣನ ಕಡೆ ಹೊರಳಿತು. ಸಿಂಘಜೀ ಕೋಪದಿಂದ ಕೆಂಪಗಾದರು. ಆದರೆ ಪಂಚಾಯತಿಯಲ್ಲಿ ಸಿಟ್ಟನ್ನು ತೋರಿಸಬಾರದು. ರಾಜಪೂತ ಸಂಗಡದ ಯುವಕರು ತಮ್ಮ ತಮ್ಮಲ್ಲೇ ಪಿಸುಮಾತುಗಳನ್ನು ಆಡಿಕೊಂಡರು. ಸಂಚಾಲಕರು ಸೀಟಿ ತರುವುದನ್ನು ಮರೆತಿಲ್ಲ ತಾನೇ ಎಂದು ಜೇಬನ್ನು ಹುಡುಕಿಕೊಂಡರು. ಜೋಯಿಸರು ಕಾಳೀಚರಣನನ್ನು ತಡೆದರು:

"ಕಾಳೀಚರಣನನ್ನು ನಾವು ಪಂಚರೆಂದು ತಿಳಿದಿಲ್ಲ."

"ಹಾಗಾದರೆ ಅದೇ ಮೊದಲು ನಿರ್ಧಾರವಾಗಲಿ. ಪಂಚಾಯತಿಯಲ್ಲಿ ಎಷ್ಟು ಜನ ನನ್ನನ್ನು ಪಂಚನೆಂದು ಒಪ್ಪಿಕೊಳ್ಳುತ್ತೀರಿ, ಎಷ್ಟು ಜನ ಒಪ್ಪಿಕೊಳ್ಳುವುದಿಲ್ಲ? ಯಾಕೆಂದರೆ ಒಬ್ಬ ಮನುಷ್ಯನಿಗೆ ಇಷ್ಟವಾಗುವುದೂ ಬಿಡುವುದೂ ಮುಖ್ಯವಲ್ಲ. ಪಂಚಪರಮೇಶ್ವರರೇ, ನೀವೇ ಹೇಳಿ, ಈ ಪಂಚಾಯತಿ

ಯಲ್ಲಿ ಕುಳಿತುಕೊಳ್ಳಲು, ಮಾತನಾಡಲು, ಅಭಿಪ್ರಾಯ ಕೊಡಲು ನನಗ ಅಧಿಕಾರ ಇದೆಯೋ ಇಲ್ಲವೋ. ನಾನು ಈ ಗ್ರಾಮದವನಲ್ಲವೇನು?"

"ಕಾಳೀಚರಣ ಎದ್ದು ನಿಂತ: "ನೀವೆಲ್ಲಾ ನನ್ನನ್ನು ಪಂಚನೆಂದು ಒಪ್ಪುವುದಾದರೆ ಕೈಯೆತ್ತಿ."

ಸುಮ್ಮನೆ ಕುಳಿತಿದ್ದ ನೂರಾರು ಜನ ಮೂಕಜೀವಿಗಳ ತಲೆಯ ಮೇಲೆ ಇದ್ದಕ್ಕಿದ್ದಂತೆ ಕಾಡುಕೋಣದ ಕೊಂಬು ಮೂಡಿದಂತಾಯಿತು. ನೂರಾರು ಜನ ಕೈಯೆತ್ತಿದರು. "ಎರಡು ಕೈಯನ್ನೂ ಅಲ್ಲ, ಒಂದೇ ಕೈ. ಹಾಗೇ ಇರಿ ಎಣಿಸ್ತೀನಿ. ಒಂದು, ಎರಡು, ಮೂರು. ನಾಲ್ಕು, ಐದು....ನೂರಐದು."

ಬಾಲದೇವ ಕೈಯೆತ್ತಲಿಲ್ಲ.

"ನೂರಐದು. ನನ್ನನ್ನು ಪಂಚನೆಂದು ಒಪ್ಪದಿರುವವರು ಈಗ ಕೈಯೆತ್ತಿ....ಒಂದು, ಎರಡು, ಮೂರು, ನಾಲ್ಕು, ಐದು....ಹದಿನೈದು."

"ಕೇವಲ ಹದಿನೈದು." ಸಿಂಘಜೀಗೆ ನಂಬಿಕೆಯೇ ಬರಲಿಲ್ಲ. ಅವರೇ ಒಮ್ಮೆ ಎಣಿಸಿದರು. ರಾಜಪೂತರು, ಬ್ರಾಹ್ಮಣರು ಎಲ್ಲಿ ಹೋದರು? ಜೋಯಿಸರ ಮಗ ನಾಮಲಕ್ಕೈನನೂ ಕಾಳೀಚರಣನ ಪರವಾಗಿಯೇ ಕೈಯೆತ್ತಿದ್ದ.

"ಫುಲಿಯಾ"

ಕಾಳೀಚರಣನ ಧ್ವನಿ ಕೇಳಿ ಬೆದರಿದ ಫುಲಿಯಾ ಮತ್ತೆ ಎದ್ದು ನಿಂತಳು.

"ನೋಡು. ಇದು ಪಂಚಾಯತಿ. ಪಂಚಾಯತಿಯಲ್ಲಿ ಪರಮೇಶ್ವರ ಇರುತ್ತಾನೆ. ಪಂಚಾಯತಿಯಲ್ಲಿ ಸುಳ್ಳು ಹೇಳಿದರೆ ತಕ್ಷಣ ಅದರ ಫಲ ಅನುಭವಿಸಬೇಕಾಗುತ್ತದೆ. ನಿಜ ಹೇಳು."

"ಮಾತಾಡು."

"ಸಹದೇವ ಮಿಶ್ರರು ನಮ್ಮ ಮನೆಗೆ ಬಂದಿದ್ದರು."

"ನೀನು ಯಾಕೆ ಕೂಗಿಕೊಳ್ಳಲಿಲ್ಲ?"

"......"

"ಹೇಳು. ಹೆದರಬೇಕಾದ್ದೇನೂ ಇಲ್ಲ."

"ತಂದೆಯವರ ಭಯದಿಂದ."

"ಹೌದು ಅಪ್ಪ ಸಹದೇವಮಿಶ್ರರ ಸಾಲಗಾರ."

"ಕೂತ್ಕೋ....ಮಹಂಗೂ." ಮಹಂಗೂ ಕೈ ಜೋಡಿಸಿಕೊಂಡು ಮತ್ತೆ ಎದ್ದು ನಿಂತ.

"ಎನ್ನಸಮಾಚಾರ?"

"............."

"ಫುಲಿಯಾ ಹೇಳ್ತಿರೋದು ಸರಿಯೇ?"

".........."

"ಹೆದರಬೇಡ, ಮಾತನಾಡು."

"ಗಾಳಿ ಬೀಸಿ ಎಲೆ ಉದರುವಂತಹ ಮರ ಯಾವುದಾದರೂ ಇರುತ್ತೇನು?"

"ಬೇರೆಯವರ ವಿಚಾರ ಬೇಡ. ನಿನ್ನ ವಿಚಾರ ಹೇಳು."

"ನನ್ನೊಬ್ಬನ ಮೇಲೇ ದೋಷ ಯಾಕೆ ಹೊರಿಸುತ್ತೀರಿ? ಇಡೀ ಹಳ್ಳಿಯ ಸ್ಥಿತಿ ಇದೇ. ಯಾವ ಮನೆ······"

"ನಾನು ಕೇಳ್ತಿರೋದು ನಿನ್ನ····"

"ಮೊದಲು ನೀನು ನಿಮ್ಮ ಅಮ್ಮನ ಹತ್ತಿರ ಹೋಗಿ ನೀನು ಯಾರ ಮಗಾ ಅಂತ ಕೇಳ್ಕೊಂಡು ಬಾ."

—ಧೈರ್ಯ ಮಾಡಿ ಜೋಯಿಸರು ಕೇಳಿದರು. ಕೋಪದಿಂದ ಅವರ ಕಣ್ಣುಗಳು ಕೆಂಪಗಾಗಿದ್ದವು.

"ಜೋಯಿಸ ಚಿಕ್ಕಪ್ಪ. ನನಗೆ ನನ್ನ ತಂದೆ ಯಾರು ಅನ್ನೋದು ಗೊತ್ತು."

"ಜೋಯಿಸರು ಮೊದಲು ಅವರ ಹೆಂಡತೀನ ಕೇಳಲಿ. ಅವರ ಹೊಟ್ಟೇಲಿರೋದು ಯಾರ ಮಗುವಂತೆ?······" ವಾಸುದೇವ ಕಿರುಚಿದ.

"ಯಾರಿಗೆ ಗೊತ್ತಿಲ್ಲ····ಜೋಯಿಸರ ನೌಕರ····" "ಸುಮ್ಮನಿರು ಸುಂದರ್." ಕಾಳೀಚರಣ ಜನರನ್ನು ಶಾಂತಗೊಳಿಸಿದ. "ಎಲ್ಲರೂ ಸುಮ್ಮನಿರಿ ಶಾಂತಿ, ಶಾಂತಿ····"

ಸಂಚಾಲಕರು ಸೀಟಿ ಊದಿದರು.

ಒಂದು ಡಜನ್ನಿಗಿಂತಲೂ ಹೆಚ್ಚು ಜನ ಯುವಕರು ಲಾಠಿಗಳನ್ನು ಹಿಡಿದು ಕೊಂಡು ಬಂದು ಪಂಚಾಯಿತಿಯ ಸುತ್ತಲೂ ನಿಂತರು.

"ಸಿಂಘಜೀ. ಲಾಠೀ ಹಿಡಿದ ಈ ಜನವನ್ನು ನೀವು ಕರೆಸಿದಿರೇನು?.... ಹಾಗಾದರೆ ನೀವು ಪಂಚಾಯಿತಿಯಲ್ಲೆಲ್ಲಾ ದಂಗೆ ನಡೆಸಲು ಇಷ್ಟಪಡುತ್ತಿದ್ದೀರಿ."

ಸಿಂಘಜೀ ಹೇಳಿದರು :

"ಇನ್ನು ಪಂಚಾಯಿತಿ ನಡೆಯೋಲ್ಲ. ಪಾರ್ಟಿವಾದಿಗಳಿಂದ ನ್ಯಾಯ ತೀರ್ಮಾನ ಸಾಧ್ಯವೇನು?"

ಸಿಂಘಜೀ ರಾಜಪೂತ ಸಂಗಡದ ಪಂಚರೊಂದಿಗೆ ಎದ್ದು ಹೊರಟರು. ಕಪ್ಪು ಟೋಪಿಯ ಯುವಕರು. ಸಿಂಘರನ್ನು, ಸಂಚಾಲಕರನ್ನು, ರಾಜಪೂತ ಸಂಗಡದ ಪಂಚರನ್ನು ಸುತ್ತುಗಟ್ಟಿ ಅವರನ್ನು ರಕ್ಷಣೆ ಮಾಡುತ್ತಾ ಹೊರಟುಹೋದರು.

ಜೋಯಿಸರ ಜೊತೆ ಬ್ರಾಹ್ಮಣ ಸಂಗಡದ ಪಂಚರೂ ಇಲಿ ಬೋನಿನಲ್ಲಿ ಸಿಕ್ಕಿಕೊಂಡಿದ್ದರು. ಖೇಲಾವನಬಾಬುವಿನ ಬೆಂಬಲವೇನೋ ಇತ್ತು. ಬಾಲದೇವನೂ ಇದ್ದ. ಆದರೂ ಕಾಳೀಚರಣನ ಕೋಪ?......

"ಪಂಚಾಯಿತಿಯ ತೀರ್ಮಾನ ಇದು : ಮಹಂಗೂದಾಸ ತನ್ನ ಮಗಳು ಫುಲಿಯಾಳ ಕೂಡಿಕೆಯನ್ನು ಕಲಾಸಿಯೊಂದಿಗೆ ಮುಗಿಸಿಬಿಡಲಿ. ಅಲ್ಲದೆ ಇಂದಿನಿಂದ ಎಲ್ಲಾ ಸಂಗಡದ ಜನರೂ ಬಾಬೂ ಜನರ ಮೇಲೆ ಕಣ್ಣಿಟ್ಟಿರಲಿ."

ಪಂಚಾಯಿತಿಯ ಎಲ್ಲರೂ ಒಂದಾಗಿ ಕಾಳೀಚರಣನ ಮಾತನ್ನು ಸಮರ್ಥಿಸಿದರು. ಜೋಯಿಸರೂ ಕೈಯೆತ್ತಿದರು, ಬಾಲದೇವನೂ.... ಇದು ನ್ಯಾಯವಾದ ಮಾತು, ಇದರಲ್ಲಿ ಆಕ್ಷೇಪವೆತ್ತುವುದು ಸರಿಯಲ್ಲ.

"ಸಹದೇವಮಿಶ್ರರ ಹತ್ತಿರವಿರುವ ಖಾಲಿ ಕಾಗದದಲ್ಲಿ ನನ್ನ ಹೆಬ್ಬೆಟ್ಟಿನ ಗುರುತಿದೆ. ಅದನ್ನು ತುಂಬಿಸಿ, ಅವರು ನನ್ನ ಮೇಲೆ ಮೊಕದ್ದಮೆ ಹೂಡಿದರೆ ಆಗೇನು ಮಾಡುವುದು?" ಮಹಂಗೂದಾಸ ಅಂಗಲಾಚಿ ಬೇಡಿಕೊಂಡ.

"ಸಹದೇವಮಿಶ್ರರು ಮೊಕದ್ದಮೆ ಹೂಡಿದರೆ, ಎಲ್ಲ ಪಂಚರೂ ನಿನ್ನ ಪರವಾಗಿ ಸಾಕ್ಷಿ ಹೇಳುತ್ತೇವೆ. ಅವರು ನಿನ್ನಿಂದ ಒಂದು ಕಾಸೂ ಸಹ ತೆಗೆದು ಕೊಳ್ಳಲಾರರು.

## 22

ಸದ್ಗುರು! ಸದ್ಗುರು!

ಮಹಂತ ರಾಮದಾಸನೂ ನೀಸುವಾಗ, ಕೆಮ್ಮುವಾಗ ಆಕಳಿಸುವಾಗ ಮಹಂತ ಸೇವಾದಾಸರಂತೆಯೇ ಕೈಯಿಂದ ಚಿಟಿಕಿ ಹೊಡೆದು 'ಸದ್ಗುರು ಸದ್ಗುರು!' ಎನ್ನುತ್ತಿದ್ದ.

ಭಜನೆ, ಸತ್ಸಂಗ, ಬೀಜಕ ಪಠಣವನ್ನು ಈಗ ಲಕ್ಷ್ಮಿಯೇ ನೋಡಿಕೊಳ್ಳುತ್ತಿದ್ದಳು. ಮಹಂತ ರಾಮದಾಸನಿಗೆ ಓದುವುದೂ ಬರೆಯುವುದೂ ಬರುತ್ತಿರಲಿಲ್ಲ. ಸದ್ಗುರು ವಚನದ ಗಾಂಭೀರ್ಯವನ್ನು, ಆಳವನ್ನು, ಅರ್ಥಮಾಡಿಕೊಳ್ಳುವುದೂ ಅವನಿಂದ ಸಾಧ್ಯವಿರಲಿಲ್ಲ. ಆದರೆ ಖಂಜರ ನುಡಿಸುವುದರಲ್ಲಿ ಮಾತ್ರ ಅವನಿಗೆ ಸಮಾನರಿರಲಿಲ್ಲ. ಖಂಜರವನ್ನು ಮಠದ ಮೇಲ್ವಿಚಾರಕ ಭಂಡಾರಿಯೂ ನುಡಿಸುತ್ತಿದ್ದ. ಆದರೆ ಅವನ ತಾಳದ ಜೊತೆಗೆ ಹಾಡುವುದಕ್ಕೆ ಲಕ್ಷ್ಮಿದಾಸಿಗೆ ಆಗುತ್ತಿರಲಿಲ್ಲ. ಆಗ ಮಹಂತ ರಾಮದಾಸನೇ ಭಂಡಾರಿಯ ಕೈಯಿಂದ ಖಂಜರ ತೆಗೆದುಕೊಂಡು ನುಡಿಸಲಾರಂಭಿಸುತ್ತಿದ್ದ. ಲಕ್ಷ್ಮಿ ಮುಗಳ್ನಕ್ಕು ಹಾಡುತ್ತಿದ್ದಳು:

**ಸಂತೋ ಹೋ, ಕರೂಂ ಬಹಿಯಾಂ ಬಲ**
**ಆಪನೀ ಛಡೂಂ ಬಿರಾನೀ ಆಸ್**
**ಸಂತೋ ಹೋ, ಜಿಹಿ ಅಂಗನಾ ನದಿಯಾ ಬಹೈ,**
**ಸೋ ಕಸ ಮರೈ ಪಿಯಾಸ್**
**ಹೋ ಸಂತೋ, ಸೋ ಕಸ್ ಮರೆ ಪಿಯಾಸ್**

(ಹೇ ಸಂತರೇ, ಹೊರಗಿನ ಆಧಾರದ ಆಸೆಯನ್ನು ಬಿಟ್ಟುಬಿಡಿ. ತಮ್ಮ ಮನೆಯ ಅಂಗಳದಲ್ಲೇ ನದಿ ಹರಿಯುತ್ತಿರುವಾಗ ಬಾಯಾರಿಕೆಯಿಂದ ಸಾಯುವುದೇಕೆ?)

ಸೋ ಕಸ್ ಮರೈ ಪಿಯಾಸ್? (ಬಾಯಾರಿಕೆಯಿಂದ ಯಾಕೆ ಸಾಯಬೇಕು)? ಮಹಂತ ರಾಮದಾಸನ ಅಂಗಳದಲ್ಲಿ ನದಿಯೇನೋ ಹರಿಯುತ್ತಿದೆ. ಆದರೂ ಅವನು ಬಾಯಾರಿಕೆಯಿಂದ ಸಾಯುತ್ತಿದ್ದಾನೆ ··· ಸದ್ಗುರು ತಮ್ಮ ವಚನದಲ್ಲಿ ಹೇಳಿದ್ದಾರೆ.

"ಜಸ್ ಖರ ಚಂದನ ಲಾದೆ ಭಾರಾ, ಪರಮಿಲ ಬಾಸ್‌ನ ಜಾನು ಸವಾರ" (ಮೂರ್ಖ ಕತ್ತೆ ತನ್ನ ಬೆನ್ನಿನ ಮೇಲೇ ಚಂದನವನ್ನು ಹೊತ್ತಿದ್ದರೂ ಅದರ ಪರಿಮಳವನ್ನು ಅರಿಯಲಾರದು). ಚಂದನದ ಪರಿಮಳ ರಾಮದಾಸನ ಅನುಭವಕ್ಕೆ ಬರುತ್ತಿಲ್ಲ ಎಂದಲ್ಲ. ಪರಿಮಳದಿಂದ ಅವನ ಮನಸ್ಸು ಮತ್ತಾಗಿದೆ. ಆದರೆ ಅವನು ಏನು ಮಾಡಬಲ್ಲ ? ಒಂದು ದಿನ ಬಾಯಿಂದ ಮಾತೇನೋ ಹೊರ ಬಿತ್ತು: "ಲಕ್ಷ್ಮಿ ಸ್ವಲ್ಪ ಈ ಕಡೆ ಬಾ." ಅಷ್ಟಕ್ಕೇ ಕೊಠಾರಿನ್ ಸದ್ಗುರು ವಚನಾಮೃತ ಮಳೆಯನ್ನೇ ಸುರಿಸಿಬಿಟ್ಟಿದ್ದಳು:

'ಅಂತರ ಜೋತಿ ಸಬದ್ ಇಕ್ ನಾರೀ
ಹರಿ ಬ್ರಹ್ಮಾ ತಾಕೆ ತ್ರಿಪುರಾರೀ
ತೇ ತಿರಿಯೆ ಭಂಗಲಿಂಗ ಅನಂತಾ,
ತೇಉ ನ ಜಾನೆ ಆದಿನ ಅಂತಾ'

(ಅಂತರ್ಜ್ಯೋತಿಗೆ ನಾರೀ ಶಬ್ದರೂಪಳು. ಹರಿಹರ ಬ್ರಹ್ಮರೇ ಆವಳ ಆದಿ ಅಂತ್ಯವನ್ನು ಅರಿತವರಲ್ಲ.)

"ಮಹಂತರೇ, ನೀವು ನಿಮ್ಮ ಚಿತ್ತವನ್ನು ಚಂಚಲಗೊಳಿಸಬೇಡಿ. ನಿಮ್ಮ ಪೂರ್ವಜನ್ಮದ ಪುಣ್ಯದಿಂದ ನಿಮಗೆ ಈ ಜನ್ಮದಲ್ಲಿ ಮಹಂತ ಪದವಿ ಸಿಕ್ಕಿದೆ. ಇಲ್ಲದಿದ್ದರೆ ನಿಮ್ಮಂತಹವರಿಗೆ ದನ ಮೇಯಿಸೋದನ್ನು ಬಿಟ್ಟು ಬೇರೆ ಯಾವ ಕೆಲಸವೂ ಸಿಗ್ತಿರಲಿಲ್ಲ. ನೀವು ಗುರುಪುತ್ರರು, ನಾನು ನಿಮಗೆ ಗುರು ಸೋದರಿ."

ಒಂದು, ಒಂದೂವರೆ ತಿಂಗಳಲ್ಲೇ ಮಹಂತ ರಾಮದಾಸನ ಶರೀರ ಸ್ಥಿತಿಯೇ ಬದಲಾಗಿಹೋಯಿತು. ಲಕ್ಷ್ಮಿ ಬಹಳ ಎಚ್ಚರಿಕೆಯಿಂದ ಅವನ ಸೇವೆಯನ್ನು ಮಾಡುತ್ತಿದ್ದಳು. ಹಾಲು, ಬೆಣ್ಣೆ, ಹಣ್ಣುಗಳ ಸೇವನೆಯಿಂದ ಮಹಂತ ಸಾಹೇಬರ ಶ್ಯಾಮಲ ಮುಖಮಂಡಲದಲ್ಲೂ ಕೆಂಪು ಮೂಡತೊಡಗಿತ್ತು. ಹೊಟ್ಟೆ ಸ್ವಲ್ಪ ಮುಂದೆ ಬಂದಿತ್ತು. ಜೊತೆಗೆ ದೇಹದ ತಾಪವೂ ಮನಸ್ಸನ್ನು ತುಂಬಾ ಅಶಾಂತವನ್ನಾಗಿ ಮಾಡುತ್ತಿತ್ತು! ಲಕ್ಷ್ಮಿಯೇನೋ ಸದ್ಗುರು ವಚನಾಮೃತವನ್ನು ಹರಿಸಿ ಅವನ ದೇಹವನ್ನು ತಣ್ಣಗೆ ಮಾಡಲು ಪ್ರಯತ್ನಿಸುತ್ತಿದಳು. ಸದ್ಗುರು ವಚನಾಮೃತಕ್ಕಿಂತ ಹೆಚ್ಚಾಗಿ ಕಾಳೀಚರಣನ ನೆನಪು ದೇಹದ ತಾಪವನ್ನು ತಂಪುಗೊಳಿಸುತ್ತಿತ್ತು. ಕಾಳೀಚರಣ ಪ್ರತಿದಿನ, ಸ್ವಲ್ಪ ಸಮಯದ ಮಟ್ಟಿಗಾದರೂ, ಮಠಕ್ಕೆ ಬಂದೇ ಬರುತ್ತಿದ್ದ. ಒಂದು ದಿನ ಪಾರ್ಟಿಗಾಗಿ ಚಂದಾ ವಸೂಲು ಮಾಡಲೆಂದು, ಮತ್ತೊಂದು ದಿನ ಆಫೀಸನ್ನು ಕಟ್ಟಲು ಬೊಂಬು ಕಟ್ಟಿಗೆ ಬೇಡಲು, ಹೀಗೇ ಏನೋ ಒಂದು ಕಾರಣ. ಲಕ್ಷ್ಮಿ ಅನ್ನುತ್ತಿದ್ದಳು:

"ನಿಜವಾಗಿ ನ್ಯಾಯವಾದಿ ಮನುಷ್ಯನೆಂದರೆ ಕಾಳೀಚರಣನೇ. ಹಳ್ಳಿಯ ದೊಡ್ಡ ಮನುಷ್ಯರೆಲ್ಲಾ ಹೆಸರಿಗೆ ಮಾತ್ರ ದೊಡ್ಡ ಮನುಷ್ಯರು ಅಷ್ಟೇ. ಕಾಳಿಬಾಬೂವಿನ ಸ್ವಭಾವ ಸ್ವಲ್ಪ ತೀಕ್ಷ್ಣವಾದದ್ದು. ಆದರೆ ಪ್ರಪಂಚದ ಜನಗಳ ಸ್ವಭಾವ ಇತ್ತೀಚೆಗೆ ಎಷ್ಟೊಂದು ವಂಚನೆಯದಾಗಿದೆ ಎಂದರೆ, ನೇರವಾದ ಬುದ್ಧಿಯುಳ್ಳ ಮನುಷ್ಯರಿಗೆ ಇಲ್ಲಿ ಸ್ಥಳವೇ ಇಲ್ಲ. ಅದೂ ಅಲ್ಲದೆ, ಸ್ವಭಾವದಲ್ಲಿ ಸ್ವಲ್ಪ ಕಾಠಿಣ್ಯವಿರುವುದು ಸುಪುರುಷರ ಲಕ್ಷಣವೇ····"

ಮಹಂತ ರಾಮದಾಸನಿಗೆ ಮೊದಲಿನಿಂದಲೂ ಕಾಳೀಚರಣನ ಮೇಲೆ ಸಂದೇಹ. ಅವನು ಮಠಕ್ಕೆ ಬಂದಾಗಲೆಲ್ಲಾ ಮಹಂತ ಮರೆಯಲ್ಲಿ ನಿಂತು ಲಕ್ಷ್ಮಿ ಮತ್ತು ಕಾಳೀಚರಣನ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದ. ಬೊಂಬಿನ ಚಪ್ಪರದಲ್ಲಿ ತೂತು ಮಾಡಿಕೊಂಡು ನೋಡುತ್ತಿರುತ್ತಿದ್ದ. ಆದರೆ ಕಾಳೀಚರಣ ಯಾವಾಗಲೂ ಲಕ್ಷ್ಮಿಯಿಂದ ನಾಲ್ಕು ಮಾರು ದೂರದಲ್ಲೇ ನಿಂತಿರುತ್ತಿದ್ದ. ಅವನ ಮಾತಿನಲ್ಲಿ ಮಾಯೆ ಇರುತ್ತಿರಲಿಲ್ಲ. ಲಕ್ಷ್ಮಿಯೊಡನೆ ಮಾತನಾಡುವಾಗ ಲಜ್ಜೆಯಿಂದ ಅವನ ರೆಪ್ಪೆಗಳು ಎಂದೂ ಕೆಳಗೆ ನೋಡುತ್ತಿರಲಿಲ್ಲ. ಇಂಥ ಮನುಷ್ಯರನ್ನು ರಾಮದಾಸ ಕಂಡಿರುವುದು ತುಂಬಾ ಕಡಿಮೆ. ಕಾಳೀಚರಣನಿಗೆ ಸದಾ ತನ್ನ ಸೋಷಲಿಸ್ಟ್ ಪಾರ್ಟಿಯದೇ ಚಿಂತೆ. ಕೆಂಪು ಬಾವುಟ ಮತ್ತು ಸೋಷಲಿಸ್ಟ್ ಪಾರ್ಟಿಯನ್ನು ಅವನು ಹೆಣ್ಣಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ ····ಅವನ ಮೇಲೆ ಸಂಶಯಪಡುವುದು ವ್ಯರ್ಥ, ಆದರೆ ಬಾಲದೇವ? ಅವನು ಈ ನಡುವೆ ಮಠಕ್ಕೆ ಬರುತ್ತಲೇ ಇಲ್ಲ. ಅವನ ದೃಷ್ಟಿಯಲ್ಲಿ ಖಂಡಿತ ದೋಷವಿದೆ.

ಲಕ್ಷ್ಮಿಯೂ ಬಾಲದೇವನನ್ನು ಮರೆತಿರಲಿಲ್ಲ. ಅವಳ ದೃಷ್ಟಿಯಲ್ಲಿ ಅವನು ಸಾಧುಸ್ವಭಾವದ ಮನುಷ್ಯ. ಯಾರ ಮನಸ್ಸನ್ನು ನೋಯಿಸುವುದೂ ಅವನಿಗಿಷ್ಟವಿಲ್ಲ. ಬಾಲದೇವ ಮಠಕ್ಕೆ ಬರುತ್ತಿಲ್ಲ. ಲಕ್ಷ್ಮಿದಾಸಿ ಮಠದಲ್ಲಿ ಹಿಂಸಾವಾದವನ್ನು ಮಾಡಿಬಿಟ್ಟಳು ಎನ್ನುವುದು ಅವನ ಆಕ್ಷೇಪಣೆ....ತುಂಬಾ ಸೀದಾ ಮನುಷ್ಯ ಬಾಲದೇವ. ನಿಜವಾದ ಸಾಧು ಅವನಲ್ಲಿ ಕ್ಷಮೆ ಕೇಳಬೇಕು.

ಮಹಂತ ರಾಮದಾಸ ಯೋಚಿಸಿ ನಿರ್ಧಾರಕ್ಕೆ ಬಂದ: ಅವನು ಸುಮ್ಮನಿರುವುದಕ್ಕೆ ಕಾಳೀಚರಣನ ಭಯವೇ ಕಾರಣ. ಏನಾದರೂ ಹೆಚ್ಚುಕಡಿಮೆ ಆದರೆ ಲಕ್ಷ್ಮಿ ಅವನ ಹತ್ತಿರ ಹೇಳಿಬಿಡುತ್ತಾಳೆ. ಆಮೇಲೆ? ಆ ಮಹಂತ ಪಟ್ಟಾಭಿಷೇಕದ ದಿನ ಕಾಳೀಚರಣ ಮತ್ತು ಅವನ ಗುಂಪಿನ ಜನ ಮಾಡಿದ ಗಲಾಟೆಯನ್ನು ಅವನೆಂದೂ ಮರೆಯಲಾರ. ....ಅವನಿಂದ ತಾನೇ ರಾಮದಾಸ ಮಹಂತನಾದುದು?

ಕಾಳೀಚರಣನ ಶಕ್ತಿಯಿಂದಲೇ ಅವನಿಗೆ ಮಹಂತ ಪದವಿ ಸಿಕ್ಕಿತು ಎನ್ನುವುದೇನೋ ನಿಜವೇ. ಅಂದ ಮಾತ್ರಕ್ಕೆ ಕಾಳೀಚರಣ ಮಠದ ಪ್ರತಿ ವಿಚಾರದಲ್ಲೂ ಕೈ ಹಾಕಬೇಕೆಂಬ ನಿಯಮವೇನೂ ಇಲ್ಲ. ನ್ಯಾಯವಾಗಿ ಮಹಂತ ಸ್ಥಾನ ದೊರೆಯಬೇಕಾಗಿದ್ದದ್ದು ಅವನಿಗೇ. ಒಂದು ವೇಳೆ ನಾಳೆ ಕಾಳೀಚರಣನೇ, ಮಠದ ಮೇಲೆ ನಿನಗೆ ಹಕ್ಕಿಲ್ಲಾ ಎಂದರೆ ಒಪ್ಪಲಾದೀತೆ?····ಮಹಂತ ರಾಮದಾಸ ನಿಧಾನವಾಗಿ ಮೇಲೆದ್ದ. ಸದ್ದಿಲ್ಲದಂತೆ ಲಕ್ಷ್ಮಿಯ ಕೊಠಡಿಯ ಕಡೆ ನಡೆದ. ಬಾಗಿಲು ತೆಗೆದಿದೆಯೇನು? ಇಲ್ಲ. ಮುಚ್ಚಿದೆ. ಹೊರಗಡೆಯಿಂದಲೂ ಚಿಲಕ ತೆಗೆಯುವುದು ಮಹಂತನಿಗೆ ಗೊತ್ತು. ಸಣ್ಣ ಕಟ್ಟಿಗೆಯನ್ನು ಒಳಗೆ ಹಾಕಿ ತೆಗೆದರಾಯಿತು····ಲಕ್ಷ್ಮಿ ಈಗ ಬಾಗಿಲಿಗೆ ಬರಳನ್ನು ಒರಗಿಸಿಡು ವುದಿಲ್ಲ····ಲಕ್ಷ್ಮಿ ಮಲಗಿದ್ದಾಳೆ. ಅವಳ ಬಟ್ಟೆಗಳು ಅಸ್ತವ್ಯಸ್ತವಾಗಿವೆ. ಲಾಟೀನಿನ ಮಂದ ಪ್ರಕಾಶದಲ್ಲಿ ಅವಳ ಮುಖ ಹೊಳೆಯುತ್ತಿದೆ....

"ಯಾರು?"

"........"

"ರಾಮದಾಸ್"

"........"

"ರಾಮದಾಸ, ಕೈ ಬಿಡು. ಕೂತ್ಕೋ. ಕೊನೆಗೂ ನಿನಗೆ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳುವುದಕ್ಕೆ ಆಗಲಿಲ್ಲ. ಮಾಯೆ ನಿನ್ನನ್ನು ಕುರುಡನನ್ನಾಗಿ ಮಾಡಿಬಿಟ್ಟಿತು."

"ಮಾಯೆಯಿಂದ ಯಾರೂ ಮುಕ್ತರಲ್ಲ ಲಕ್ಷ್ಮಿ. ಮಾಯೆಯನ್ನು ಯಾರೂ ಜಯಿಸಲಾರರು."

—ಮಹಂತ ಇಂದು ಲಕ್ಷ್ಮಿಯ ಪ್ರತಿ ಮಾತಿಗೂ ಉತ್ತರ ಕೊಡುವುದೆಂದು ನಿರ್ಧರಿಸಿದ್ದ.

"ನೀನು ನರಕದ ಕಡೆ ನಡೆಯುತ್ತಿದ್ದೀ. ಈಗಲೂ ಸ್ವಲ್ಪ ಯೋಚನೆ ಮಾಡು."

"ಇನ್ನು ಯೋಚನೆ ಮಾಡುವುದರಿಂದ ಪ್ರಯೋಜನವಿಲ್ಲ. ಲಕ್ಷ್ಮಿ, ನನಗೆ ಸ್ವರ್ಗ ಬೇಡ····ಈ ನರಕಕ್ಕೆ ನಾನು ಬರುತ್ತಿರುವುದು ಮೊದಲ ಬಾರಿಯೇನೂ ಅಲ್ಲ."

ಲಕ್ಷ್ಮಿಗೆ ಬಾಲ್ಯದ ವಿಚಾರಗಳನ್ನು ಜ್ಞಾಪಕಕ್ಕೆ ತರಲು ರಾಮದಾಸ ಪ್ರಯತ್ನಿಸಿದ. ಲಕ್ಷ್ಮಿ ಕೈ ಬಿಡಿಸಿಕೊಂಡು ಹಾಸಿಗೆಯಿಂದ ಮೇಲೇಳಲು ಪ್ರಯತ್ನಿಸುತ್ತಿದ್ದಳು. ಆದರೆ ಮಹಂತ ಹತ್ತು ನಿಮಿಷಕ್ಕೆ ಹಿಂದೆ ನಾಲ್ಕು ಬಾರಿ ಗಾಂಜಾ ಸೇವಿಸಿ ಬಂದಿದ್ದ!

"ನಾನು ನಿನ್ನ ಗುರು ಸೋದರಿ ರಾಮದಾಸ್." "ಎಂಥ ಗುರು ಸೋದರಿ? ನೀನು ಮಠದ ದಾಸಿ. ಒಬ್ಬ ಮಹಂತ ಸತ್ತರೆ, ಇನ್ನೊಬ್ಬ ಮಹಂತನಿಗೂ ನೀನು ದಾಸಿಯಾಗಿರಬೇಕು, ನೀನು ನನ್ನ ದಾಸಿ."

'ಬಾಯಿ ಮುಚ್ಚು' ಲಕ್ಷ್ಮಿ ಕೈ ಬಿಡಿಸಿಕೊಂಡು ರಾಮದಾಸನ ಕಪಾಲಕ್ಕೆ ಜೋರಾಗಿ ಹೊಡೆದಳು. ಎರಡು ಪಾದಗಳನ್ನು ಸ್ವಲ್ಪ ಹೊರಳಿಸಿ, ಶಕ್ತಿಯನ್ನೆಲ್ಲಾ ಬಿಟ್ಟು ರಾಮದಾಸನ ಎದೆಗೆ ಗುದ್ದಿದಳು. ರಾಮದಾಸ ಕೆಳಗೆ ಬಿದ್ದುಬಿಟ್ಟ....ಸದ್ಗುರು!

**ಸಂತೋ ಅಚರಜ್ ಥೀ ಏಕ ಭಾರೀ**
**ಪುತ್ರ ಧಯಲ ಮಹತಾರೀ**
**ಏಕೆ ಪುರುಷ ಏಕ ಹಿ ನಾರೀ**
**ತಾಕೆ ದೇಖು ಬಿಚಾರೀ**

"ಭಂಡಾರೀ ಭಂಡಾರೀ"

"ಅಮ್ಮಾ"

"ಸ್ವಲ್ಪ ನೀರು ತೊಗೊಂಡು ಬನ್ನಿ."

ಲಕ್ಷ್ಮಿ ಥರ ಥರ ನಡುಗಿದಳು. ಮಹಂತ ಸೇವಾದಾಸ ಕೊನೆಯುಸಿರೆಳೆಯುತ್ತಿದ್ದ ದೃಶ್ಯ ಅವಳ ಕಣ್ಣ ಮುಂದೆ ಕಟ್ಟಿತು. ಇಲ್ಲ,—ಸತ್ತಿಲ್ಲ, ಭಂಡಾರಿ ಹೇಳಿದ: "ಮಹಂತರಿಗೆ ಮತ್ತೆ ಅಪಸ್ಮಾರ ರೋಗ ಆರಂಭವಾಗಿದೇ ಅಂತ ಕಾಣುತ್ತೆ. ನಿನ್ನೆ ರಾಮಪುರದ ಮಠದಿಂದ ಒಬ್ಬ ಸಾಧು ಬಂದಿದಾನಲ್ಲ, ಅವನಿಗೆ ಅಪಸ್ಮಾರ ರೋಗಕ್ಕೆ ಔಷಧಿ ಗೊತ್ತು, ನಾಳೆಯೇ ಕೊಡಿಸಿ."

ಸದ್ಗುರು!

ಮಹಂತನಿಗೆ ಜ್ವರ. ಎದೆಯಲ್ಲಿ ನೋವು. ಹಚ್ಚಲು ಡಾಕ್ಟರು ಎಣ್ಣೆಯನ್ನು ಕಳುಹಿಸಿದ್ದಾರೆ. ಲಕ್ಷ್ಮಿ ಮಹಂತನ ಎದೆಗೆ ಎಣ್ಣೆ ಸವರುತ್ತಿದ್ದಳು. ಮಹಂತ ನರಳುತ್ತಿದ್ದ:

"ಸದ್ಗುರು ಇನ್ನು ನಾನು ಉಳಿಯೋದಿಲ್ಲ. ನನ್ನ ಕಾಶೀಗೆ ಕಳುಹಿಸಿಬಿಡು, ಕೊಠಾರಿನ್. ಅಲ್ಲಿ ನನ್ನ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ತೀನಿ····ನನ್ನನ್ನು ಸಂಪೂರ್ಣ ಸಾಯಿಸಿಬಿಟ್ಟಿದ್ದರೇ ಚೆನ್ನಾಗಿತ್ತು?····ಅಯ್ಯೋ ಸದ್ಗುರು····"

"ಜೈ ಹಿಂದ್, ಕೊಠಾರಿನ್‌ಜೀ."

"ಜೈ ಹಿಂದ್, ಬನ್ನಿ ಬಾಲದೇವಜೀ, ತುಂಬಾ ದಿನ ಆಯ್ತಲ್ಲಾ ?"

"ರಾಮುದಾಸ····ಮಹಂತರಿಗೆ ಏನಾಗಿದೆ?"

"ಜ್ವರ ಇದೆ. ಎದೆಯಲ್ಲಿ ನೋವು."

"ನೋವಿದ್ಯೇ? ಹಳೀ ಹಸುವಿನ ಹಾಲಿನ ಬೆಣ್ಣೆಯಿಂದ ಮಾಲೀಶ್ ಮಾಡಿ."

ಹಳೀ ಹಸುವಿನ ಹಾಲು ಅಂದರೆ ಹಸುವಿನ ಹಳೆಯ ಹಾಲು ಕೆಟ್ಟು ಹೋಗಿರೋ ಹಾಲು. ಅದನ್ನು ಕೇಳಿಯೇ ಲಕ್ಷ್ಮಿಗೆ ವಾಕರಿಕೆ ಬಂದ ಹಾಗಾಯಿತು. ಮಹಂತ ಸೇವಾದಾಸರೂ ಉಬ್ಬಸ ಹೆಚ್ಚಾಗಿ ಬಂದಾಗ ಹಸುವಿನ ಬೆಣ್ಣೆಯಿಂದಲೇ ಮಾಲೀಶ್ ಮಾಡಿಸಿಕೊಳ್ಳುತ್ತಿದ್ದರು.

"ಕೊಠಾರಿನ್‌ಜೀ. ಶಿವನಾಥ ಬಾಬೂ ಬರ್‍ತಾರೆ. ಇಲ್ಲಿ ಒಂದು ಚರಖಾ ಕೇಂದ್ರ ತೆಗೆಯಬೇಕಂತೆ. ನೀವೂ ಏನಾದರೂ ಸಹಾಯ ಮಾಡಿ."

"ಚರಖಾ ಕೇಂದ್ರ? ಅದರಲ್ಲಿ ಏನು ಮಾಡ್ತಾರೆ?"

"ಚರಖಾ ಕೇಂದ್ರದಲ್ಲೇ? ಅಲ್ಲಿ ಚರಖಾ ತಕಲಿಗಳಲ್ಲಿ ದಾರ ತೆಗೆಯೋದೂ, ಹತ್ತಿ ಸ್ವಚ್ಛಪಡಿಸಿ, ಬಟ್ಟೆ ನೇಯೋದೂ ಹೇಳಿಕೊಡ್ತಾರೆ."

"ಹಳ್ಳಿಯಲ್ಲಿ ಪ್ರತಿದಿನ ಒಂದೊಂದು ಕೇಂದ್ರ ಆರಂಭವಾಗ್ತಾನೇ ಇರುತ್ತೆ. —ಮಲೇರಿಯಾ ಕೇಂದ್ರ, ಕಪ್ಪು ಟೋಪಿ ಕೇಂದ್ರ, ಕೆಂಪು ಬಾವುಟದ ಕೇಂದ್ರ....ಈಗ ಈ ಚರಖಾ ಕೇಂದ್ರ."

"ಹೌದು, ಹೊಸ ಕಾಲದಲ್ಲಿ ಪ್ರತಿದಿನ ಹೊಸ ಹೊಸ ವಿಚಾರಗಳು ನಡೆಯುತ್ತಲೇ ಇರುತ್ತವೆ. ಸೋಷಲಿಸ್ಟ್ ಪಾರ್ಟಿಗೆ ನೀವು ತುಂಬಾ ಸಹಾಯ ಮಾಡಿದೀರಂತೆ....ಆದರೆ ಕೊಠಾರಿನ್‌ಜೀ, ಗಾಂಧಿಮಹಾತ್ಮರ ದಾರಿಯೇ ಎಲ್ಲದಕ್ಕಿಂತ ಹಳೆಯದಾದ ಮತ್ತು ಸರಿಯಾದ ಮಾರ್ಗ. ಹೊಸ ಹೊಸ ಪಾರ್ಟಿಗಳೇನೋ ಷುರುವಾಗ್ತಿವೆ. ಆದರೆ ಯಾವುದರ ಮಾರ್ಗವೂ ಸರಿಯಿಲ್ಲ. ಎಲ್ಲಾ ಹಿಂಸಾ ಮಾರ್ಗಗಳು."

"ಸದ್ಗುರು! ಸದ್ಗುರು! ಕೊಠಾರಿನ್ ಇವರಿಗೆ ಕೊಡಬೇಕಾದ ಚಂದಾ ಕೊಟ್ಟು ಕಳುಹಿಸು, ಸದ್ಗುರು!"

ಮಹಂತ ನೋವಿನಿಂದ ಚಡಪಡಿಸುತ್ತಿದ್ದ....ಬಾಲದೇವನ ದೃಷ್ಟಿಯಲ್ಲಿ ದೋಷವಿದೆ. ಹತ್ತು ರೂಪಾಯಿನ ಒಂದು ನೋಟನ್ನು ತೆಗೆದು ಬಾಲದೇವನಿಗೆ ಕೊಡುತ್ತಾ ಲಕ್ಷ್ಮಿ ಹೇಳಿದಳು: "ಇತ್ತೀಚೆಗೆ ಕೈಯ್ಯಲ್ಲಿ ಹಣವೇ ಇಲ್ಲ.... ನೀವಂತೂ ಈಗೀಗ ಮಠದ ದಾರಿಯನ್ನೇ ಮರೆತು ಬಿಟ್ಟಿದೀರಿ. ನನ್ನಿಂದೇನಾದರೂ ಅಪರಾಧ ಆಗಿದ್ರೆ ದಯವಿಟ್ಟು ಕ್ಷಮಿಸಿಬಿಡಿ."

"ಹಾಗೇನಿಲ್ಲ ಕೊಠಾರಿನ್‌ಜೀ, ಈಗೀಗ ನನಗೆ ಬಿಡುವೇ ಆಗ್ತಿಲ್ಲ. ಈ ಬಟ್ಟೆ ಹಂಚೋ ಕೆಲಸ ಸಿಕ್ಕಿರೋದು ದೊಡ್ಡ ಆಪತ್ತು ಬಂದ ಹಾಗೆ ಆಗಿದೆ. ಕಾಂಗ್ರೆಸ್ಸಿನ ಕೆಲಸ ಮಾಡೋದಕ್ಕೆ ಕೂಡ ಆಗ್ತಿಲ್ಲ. ಅದಕ್ಕೇ ಬೇರೆ ಪಾರ್ಟಿಯವರಿಗೆ ಒಳ್ಳೇ ಅವಕಾಶ ಸಿಕ್ಕಿಬಿಟ್ಟಿದೆ. ಕಾಳೀಚರಣ ಹಗಲೂ-ರಾತ್ರಿ ಓಡಾಡ್ತಿರ್ತಾನೆ. ನಮ್ಮ ಕಾಂಗ್ರೆಸ್ ಸದಸ್ಯರನ್ನೂ ಸೋಷಲಿಸ್ಟ್ ಪಾರ್ಟಿಗೆ ಸೇರಿಸ್ಕೊಂಡುಬಿಟ್ಟಿದ್ದಾನೆ. ಆದ್ದರಿಂದಾನೇ ವಿಶ್ವನಾಥಬಾಬುವನ್ನು ಕರೆಸ್ತಿರೋದು. ಚರಖಾ ಕೇಂದ್ರ ಆರಂಭವಾಗುತ್ತೆ. ಹಳೆಯ ಕಾರ್ಯಕರ್ತ ಬಾವನದಾಸನೂ ಬರ್ತಾನೆ. ....ಹಳೆಯ ಕಾರ್ಯಕರ್ತ ಅಂದರೆ ತುಂಬಾ ವಯಸ್ಸಿನವನಲ್ಲ, ನನ್ನ ಜೊತೇನೇ ಕಾಂಗ್ರೆಸ್ಸಿಗೆ ಸೇರಿದ....ಬಾವನದಾಸ ಕುಳ್ಳ, ಬರೀ ಮೂರಡಿ ಉದ್ದ ಇದ್ದಾನೆ. ವೈಷ್ಣವ ಬಂದ ಮೇಲೆ ಇಲ್ಲಿಗೂ ಕರ್ಕೊಂಡು ಬರ್ತೀನಿ. ಜೈ ಹಿಂದ್."

"ಜೈ ಹಿಂದ್."

ಬಾಲದೇವನಿಗೆ ಮತ್ತೆ ಲಕ್ಷ್ಮಿಯ ಮೈಯ್ಯಿಂದ ಸುಗಂಧ ಬರುತ್ತಿದೆ. ಎಷ್ಟು ಹಿತವಾದ ಸುಗಂಧ!

ಇತ್ತೀಚೆಗೆ ಬಾಲದೇವ ತುಂಬಾ ತೆಳುವಾಗಿದ್ದಾನೆ ಎಂದು ಲಕ್ಷ್ಮಿಗೆ ಅನ್ನಿಸಿತು. ಬಾಲದೇವನ ಮನಸ್ಸಿನಲ್ಲಿ ಸ್ವಲ್ಪವೂ ಕೊಳಕೆಂಬುದೇ ಇಲ್ಲ. ಎಂಥ ಸರಳ ಮನುಷ್ಯ....ಯಾಕೋ ಇಂದು ಬಾಲದೇವನನ್ನು ನೋಡಿ ಲಕ್ಷ್ಮಿಯ ಮನಸ್ಸು ಚಂಚಲವಾಯಿತು....ಬಾಲದೇವ ನಿಜವಾದ ಸಾಧು.

ಬಿರಹ ಕೀ ಓದೀ ಲಾಕಡೀ
ಸಪುಜೈ ಔರ್ ಧುಧು ಆಯೆ
ದುಖ ಸೆ ತಬಹಿಂ ಬಾಚಿಹೌಂ
ಜಬ್ ಸಕಲೋ ಜರಿ ಜಾಯೆ

(ವಿರಹದಿಂದ ತೋಯ್ದು ಸೌದೆ ಉರಿಯುವುದಕ್ಕೆ ಆತುರಗೊಳ್ಳುತ್ತಿದೆ. ಎಲ್ಲವೂ ಉರಿದುಹೋದಮೇಲೇ ಜ್ಞಾನೋದಯವಾಗುವುದು.)

## 23

ಹಳ್ಳಿಯ ಜನ ಅರ್ಥಶಾಸ್ತ್ರದ ಸಾಧಾರಣ ಸಿದ್ಧಾಂತವನ್ನೂ ಅರಿತಿಲ್ಲ. 'ಸಪ್ಲೈಯ್' ಮತ್ತು 'ಡಿಮಾಂಡ್'ನಂತಹ ತೊಡಕಿನ ವ್ಯವಹಾರಕ್ಕಾಗಿ ಅವರೆಂದೂ ತಲೆ ಕೆಡಿಸಿಕೊಂಡವರಲ್ಲ. ಧಾನ್ಯದ ಬೆಲೆ ಹೆಚ್ಚುತ್ತಿದೆ, ಸಂತೋಷದ ವಿಚಾರ. ರೇಷ್ಮೆ ಬೆಲೆ ಹೆಚ್ಚಿದೆ, ಹೆಚ್ಚುತ್ತಲೇ ಇದೆ. ಮತ್ತೂ ಸಂತೋಷ. ಸೀರೆಯ ಬೆಲೆ ಹದಿನೈದು ರೂಪಾಯಿ ಆಗಿದೆ. ಜೊತೆಗೆ ಬತ್ತದ ಬೆಲೆಯೂ ಹನ್ನೆರಡು ರೂಪಾಯಿಗೆ ಮಣ ಆಗಿದೆಯಲ್ಲಾ. ನೇಗಿಲಿನ ಗುಳ ಐದು ರೂಪಾಯಿಗೆ ಸಿಕ್ಕುತ್ತೆ, ಹತ್ತು ರೂಪಾಯಿಗೆ ಕಡಾಯಿ ಸಿಗುತ್ತೆ. ಸರಿಯಾಗಿದೆಯಲ್ಲಾ. ಸೆಣಬಿನ ಬೆಲೆಯೂ ಮಣಕ್ಕೆ ಇಪ್ಪತ್ತು ರೂಪಾಯಾಗಿದೆ. ಇದು ಸಂತೋಷದ ವಿಚಾರವೇ.

ಧಾನ್ಯಗಳ ಬೆಲೆ ಹೆಚ್ಚಿದ್ದರಿಂದ ಲಾಭ ಗಳಿಸಿದ್ದು ಮೂರು ವ್ಯಕ್ತಿಗಳು ಮಾತ್ರ—ತಹಸೀಲ್ದಾರರು, ಸಿಂಘಜೀ ಮತ್ತು ಕೇಲಾವನಸಿಂಹ ಯಾದವ. ಚಿಕ್ಕಪುಟ್ಟ ರೈತರ ಭೂಮಿ ಕವಡೆಯ ಬೆಲೆಗೆ ಮಾರಾಟವಾಗುತ್ತಿದೆ. ಕೂಲಿಗಾರರಿಗೆ ದಿನಕ್ಕೆ ಒಂದೂಕಾಲು ರೂಪಾಯಿ ಕೂಲಿ ಸಿಗುತ್ತದೆ. ಅದರೂ ಒಬ್ಬ ಮನುಷ್ಯನ ಹೊಟ್ಟೆಯೂ ತುಂಬುವುದಿಲ್ಲ. ಐದು ವರ್ಷಗಳ ಕೆಳಗೆ ಪ್ರತಿದಿನ ಐದು ಆಣೆ ಮಾತ್ರ ಕೂಲಿ ಸಿಗುತ್ತಿತ್ತು. ಅಷ್ಟರಲ್ಲೇ ಮನೆಯವರೆಲ್ಲಾ ಊಟ ಮಾಡಬಹುದಾಗಿತ್ತು.

ತಹಸೀಲ್ದಾರರು ಬತ್ತ ಸಿದ ವಾದ ಕೂಡಲೇ ಅದೆಲ್ಲಿ ಬಚ್ಚಿಟ್ಟರೋ ಯಾರಿಗೂ ಗೊತ್ತಿಲ್ಲ. ಬಾಗಿಲಲ್ಲಿ ಡಜನ್ನುಗಟ್ಟಲೆ ಕಣಜಗಳಿವೆ. ಆದರೆ ಎಲ್ಲವೂ ಖಾಲಿ. ತೊಗಲು ಬಾವಲಿಗಳು ತೂಗಾಡುತ್ತಿದ್ದುವು. ....ಬಹುಶಃ ಸರ್ಕಾರ ಧಾನ್ಯವನ್ನು ಜಪ್ತಿ ಮಾಡುವ ಕಾನೂನು ಮಾಡುತ್ತಿದೆಯೋನೋ!

ಬಟ್ಟೆಯಿಲ್ಲದೆ ಹಳ್ಳಿಯ ಜನರೆಲ್ಲಾ ಅರ್ಧ ನಗ್ನರಾಗಿದ್ದಾರೆ. ಗಂಡಸರು ಪ್ಯಾಂಟ್ ಹಾಕಿಕೊಳ್ಳಲು ಶುರುಮಾಡಿದ್ದಾರೆ. ಹೆಂಗಸರು ಅಂಗಳದಲ್ಲಿ ಕೆಲಸ ಮಾಡುವಾಗ ಸೊಂಟದಿಂದ ಕೆಳಗೆ ಒಂದು ಬಟ್ಟೆಯನ್ನು ಕಟ್ಟಿಕೊಂಡು ಅಷ್ಟರಲ್ಲೇ ನಿಭಾಯಿಸುತ್ತಿದ್ದರು. ಹನ್ನೆರಡು ವರ್ಷಗಳ ಕೆಳಗಿನ ಮಕ್ಕಳಂತೂ ನಗ್ನರಾಗೇ ಇರುತ್ತಿದ್ದರು.

ಶಿವನಾಥ ಚೌಧರೀ ಸಭೆಯಲ್ಲಿ ಖಾದಿಯ ಅರ್ಥಶಾಸ್ತ್ರದ ಬಗ್ಗೆ ಮಾತ ನಾಡುತ್ತಿದ್ದರು. ಅಂಕಿಅಂಶಗಳ ಸಮೇತ ಸಿದ್ಧಮಾಡಿ ತೋರಿಸಿದರು. ಮನೆ ಮನೆಯ ಪ್ರತಿ ವ್ಯಕ್ತಿಯೂ ಚರಖಾ ತಿರುಗಿಸಲಾರಂಭಿಸಿದರೆ ಹಳ್ಳಿಯ ಬಡತನ ದೂರವಾಗುತ್ತದೆ. ಅನ್ನ–ವಸ್ತ್ರದ ಕೊರತೆ ಇರುವುದಿಲ್ಲ.

ಚರಖಾ ಕೇಂದ್ರ ಆರಂಭವಾಯಿತು. ಇನ್ನು ಹಳ್ಳಿಯಲ್ಲಿ ಬಡತನವೇ ಇರುವುದಿಲ್ಲ. ಪಾಟ್ನಾದಿಂದ ಇಬ್ಬರು ಉಪಾಧ್ಯಾಯರೂ ಬಂದಿದ್ದಾರೆ. ಚರಖಾ ಮಾಸ್ಟರು ಮತ್ತು ತಕಲಿ ಮಾಸ್ಟರ್. ಒಬ್ಬ ಉಪಾಧ್ಯಾಯನಿಯೂ ಬಂದಿದ್ದಾಳೆ. —ಹೆಂಗಸರಿಗೆ ಚರಖಾ ತಿರುಗಿಸುವುದನ್ನು ಹೇಳಿಕೊಡಲು. ಅವಳು ಹೆಂಗಸರಿಗೆ ಹೇಳುತ್ತಾಳೆ:

ಚರಖಾ ಹಮಾರಾ ಭತಾರ್ ಪೂತ್,

ಚರಖಾ ಹಮಾರಾ ನಾತೀ,

ಚರಖಾ ಕೆ ಬದೌಲತ್ ಮೋರಾದುವಾರ್ ಝೂಲೆ ಹಾಥೀ (ನಮ್ಮ ಪತಿ, ಪುತ್ರ, ಮೊಮ್ಮಗ ಎಲ್ಲವೂ ಚರಖವೇ. ಚರಖಾದಿಂದಾಗಿ ನಮ್ಮ ಮನೆಯ ಮುಂದೆ ಆನೆ ನಿಲ್ಲುತ್ತದೆ.) ಚರಖಾದಿಂದಾಗಿ ಆನೆಯೇ? ಜೈ—ಗಾಂಧೀಜಿಗೆ ಜಯವಾಗಲಿ.

ಸೈನಿಕಜೀ ಮತ್ತು ಚಿನಗಾರೀ ಬಾಬುವಿನಂತೆ. ವಿಶ್ವನಾಥ ಚೌಧರೀ ಬಿಸಿ ಬಿಸಿ ಭಾಷಣವನ್ನು ಕೊಡುತ್ತಿರಲಿಲ್ಲ. ಆದರೆ ಹೇಳುವ ಮಾತನ್ನು ದೃಢವಾಗಿ ಹೇಳುತ್ತಿದ್ದರು. ಲೆಕ್ಕಾಚಾರವಾಗಿ ಮಾತನಾಡುತ್ತಾರೆ. ತಿಳುವಳಿಕೆಯಿಂದ ಮಾತನಾಡುತ್ತಾರೆ. ಹಿಂದಿನ ದಿನ ಬೇಸಿದ ಹಿಟ್ಟನ್ನು ತಿನ್ನುವುದಿಲ್ಲ. ಸಕ್ಕರೆ ಉಪಯೋಗಿಸುವುದಿಲ್ಲ. ಬರಿ ಬೆಲ್ಲವನ್ನೇ ಉಪಯೋಗಿಸುತ್ತಾರೆ. ತ್ಯಾಗೀ ಮನುಷ್ಯ. ಚೌಧರಿಯವರ ಜೊತೆ ದರಬಂಗಾ ಜಿಲ್ಲೆಯ ತಮೋಡಿಯಾ ಸ್ಟೇಷನ್ನಿನಿಂದ ರಾಮಲಗೀನ ಬಾಬುವೂ ಬಂದಿದ್ದಾರೆ. ನೀರಿನಿಂದಲೇ ಎಲ್ಲ ರೋಗ ಗಳಿಗೂ ಚಿಕಿತ್ಸೆ ಮಾಡುತ್ತಾರಂತೆ! ಅವರು ಬೇಯಿಸಿದ ಪದಾರ್ಥಗಳನ್ನು

ತಿನ್ನುವುದಿಲ್ಲ. ಹಸಿ ಸೊಪ್ಪನ್ನೇ ತಿಂದುಬಿಡುತ್ತಾರೆ. ಅದರಲ್ಲಿ ಬಹಳ ಶಕ್ತಿಯಿದೆ ಎನ್ನುತ್ತಾರೆ. ಅವರು ನಿಜವಾದ ತ್ಯಾಗಿ. ದೇಹದಲ್ಲಿ ಮೂಳೆಗಳು ಮಾತ್ರ ಉಳಿದುಕೊಂಡಿವೆ. ಮಾಂಸವು ಲೇಶಮಾತ್ರವೂ ಇಲ್ಲ. ದಿನಕ್ಕೆ ಸುಮಾರು ಹದಿನೈದು ಬಾರಿ ಚಂಬು ಹಿಡಿದುಕೊಂಡು ಹಿತ್ತಲಿಗೆ ಹೋಗಿ ಬರುತ್ತಾರೆ.

ಸಾದಾ ಕಾಗದದ ಒಂದು ಅರ್ಜಿ ಫಾರಂ ಅನ್ನು ಎಲ್ಲರಿಗೂ ಹಂಚಿದರು. ಫಾರಂನಲ್ಲಿ ಮಹಾತ್ಮಾ ಗಾಂಧಿಯ ಫೋಟೋ ಅಚ್ಚಾಗಿತ್ತು. ಫೋಟೋದ ಕೆಳಗೆ ಬರೆದಿದ್ದರು: ಬಾಪೂವಾಣಿ: ಬಟ್ಟೆ ಧರಿಸುವವರು ನೂಲು ತೆಗೆಯಬೇಕು!

ನೂಲು ತೆಗೆಯುವವರು ಧರಿಸುತ್ತಾರೆ:

ಸೋಷಲಿಸ್ಟ್ ಪಾರ್ಟಿಯವರೂ ಫಾರಂ ಹಂಚುತ್ತಿದ್ದರು. ಆದರೆ ಅದು ಕೆಂಪು ಬಣ್ಣದ್ದು. ಅಲ್ಲದೆ ಅದರಲ್ಲಿ ಇನ್ನೊಂದು ಪದ್ಯವೂ ಹೆಚ್ಚಾಗಿತ್ತು—

ಬಿತ್ತಿದವನು ಬೆಳೆಯುತ್ತಾನೆ.

ಬೆಳೆದವನು ಕುಯಿಲು ಮಾಡುತ್ತಾನೆ.

ಕುಯಿಲು ಮಾಡಿದವನು ಹಂಚುತ್ತಾನೆ.

ಬಾಲದೇವನ ಸ್ಥಾನಕ್ಕೆ ಬಾವನದಾಸ ಬಂದಿದ್ದಾನೆ. ಪೂರ್ಣಿಯಾ ಸಭೆಯಲ್ಲಿ ರಾಜೇಂದ್ರ ಬಾಬೂವಿನ ಮುಂದೆ ಮಾತನಾಡುತ್ತಿದ್ದವನು ಅವನೇ. ಬಾಲದೇವನಿಗೆ ಬಟ್ಟೆ ಹಂಚುವ ಕೆಲಸದಿಂದ ಬಿಡುವು ಸಿಕ್ಕುವುದಿಲ್ಲ. ಆದ್ದರಿಂದ ಪಬ್ಲಿಕ್ ಕೆಲಸಕ್ಕೆ ಬಾವನದಾಸನನ್ನು ಕಳುಹಿಸಿದ್ದಾರೆ. ಬಾವನದಾಸ ತುಂಬಾ ಸಾಹಸಿ....ನಲವತ್ತೆರಡನೆ ಇಸವಿಯಲ್ಲಿ ಆಫೀಸಿನ ಮೇಲೆ ಬಾವುಟ ಏರಿಸಲು ಹೋಗುತ್ತಿದ್ದಾಗ ಸೈನಿಕರು ಆಫೀಸನ್ನು ಸುತ್ತುಗಟ್ಟಿದ್ದರು. ಬಾವನದಾಸ ಒಬ್ಬ ಸೈನಿಕನ ಕಾಲಿನಡಿ ತೂರಿ ಆ ಭಾಗವನ್ನು ತಲುಪಿದ. ಆಫೀಸಿನ ಅಂಗಳದಲ್ಲಿ ಬಾವುಟ ನೆಟ್ಟು ಬಂದುಬಿಟ್ಟ. ರಾಮಾಯಣದಲ್ಲಿ ಹನುಮಂತ ಸೊಳ್ಳೆಯಷ್ಟು ಸಣ್ಣ ಶರೀರ ಧರಿಸಿ ಸುರಮೆಯನ್ನು ವಂಚಿಸಿದ ಹಾಗೆ ಬಾವನದಾಸನೂ ಮಿಲಿಟರಿಯವರಿಗೆ ಕೈಕೊಟ್ಟಿದ್ದ!....

"ಈ ಆರ್ಯಾವರ್ತದಲ್ಲಿ ಕೇವಲ ಆರ್ಯರು, ಅರ್ಥಾತ್ ಶುದ್ಧ ಹಿಂದುಗಳು, ಮಾತ್ರವೇ ಇರಬಲ್ಲರು."

—ಕಪ್ಪು ಟೋಪಿಯ ಸಂಯೋಜಕ ಬೌದ್ಧಿಕ ತರಗತಿಯಲ್ಲಿ ಪ್ರತಿದಿನ ಹೇಳುತ್ತಿದ್ದ. "ಯವನರು ನಮ್ಮ ಆರ್ಯಾವರ್ತದ ಸಂಸ್ಕೃತಿ, ಧರ್ಮ,

ಕಲಾ-ಕೌಶಲಗಳನ್ನೆಲ್ಲಾ ನಷ್ಟಪಡಿಸಿದ್ದಾರೆ. ಈಗ ಹಿಂದೂ ಸಂತಾನ, ಮ್ಲೇಚ್ಛ ಸಂಸ್ಕೃತಿಯ ಆರಾಧಕವಾಗಿದೆ. ಶಿವಾಜಿ, ಮಹಾರಾಣಾ ಪ್ರತಾಪ್. . . .''

ಬೌದ್ಧಿಕ ತರಗತಿ! ಸೋಷಲಿಸ್ಟ್ ಪಾರ್ಟಿಯ ವಾಸುದೇವ ಅನ್ನುತ್ತಾನೆ: ''ಅದು ಬುದ್ಧಿಹೀನರ ತರಗತಿ!'' ವಾಸುದೇವ ಮಾತ್ರವಲ್ಲ ಕಪ್ಪುಟೋಪಿಯ ಅನೇಕ ಜನ ಯುವಕರೂ ಅದೇ ರೀತಿ ಕರೆಯುತ್ತಾರೆ.

ಲಾಠೀ, ಭರ್ಜಿ ಮತ್ತು ಕತ್ತಿಗಳನ್ನು ಕೈಯ್ಯಲ್ಲಿ ಎತ್ತಿಕೊಂಡ ಕೂಡಲೇ ರಾಜಪೂತ ಯುವಕರ ಮೈ ಬಿಸಿಯೇರುತ್ತದೆ. ಒಂದು ದಿನ ಹರಗೌರಿ ಹೇಳಿದ:

''ಸಂಚಾಲಕರೇ, ನನಗೆ ಯವನರ ಮೇಲೆ ಸಿಟ್ಟು ಬರುವುದಿಲ್ಲ. ಯವನರ ಪಕ್ಷ ವಹಿಸುವ ಹಿಂದೂಗಳ ಕೊರಳು ತಿರುವಿಹಾಕೋಣ ಎನ್ನಿಸುತ್ತದೆ.''

ಸಂಚಾಲಕರು ದೂರ ಸರಿದರು. ಇಲ್ಲದಿದ್ದರೆ ಹರಗೌರಿ ಕತ್ತಿ ಬೀಸಿದ ರಭಸಕ್ಕೆ ಸಂಚಾಲಕರ ಕತ್ತು ದೇಹದಿಂದ ಕಳಚಿಬಿದ್ದಿರುತ್ತಿತ್ತು.—ಆರ್ಯಾವರ್ತ . . . .ಮೇರೀಗಂಜದ ಹೆಸರೇ ಬಹುಶಃ ಈಗ ಆರ್ಯಾವರ್ತ ಎಂದಾಗಿದೆ. ಆದರೆ ಈ ಹಳ್ಳಿಯಲ್ಲಿ ಒಬ್ಬ ಮುಸಲ್ಮಾನನೂ ಇಲ್ಲ. . . . . .

ಹಳ್ಳಿಯ ಎಲ್ಲ ಮಿಠಾಯಿವಾಲಾಗಳ, ದನಗಾಹಿಗಳ ಮತ್ತು ಕೂಲಿಗಾರರ ನಾಯಕ ಕಾಳೀಚರಣ. ಚಿಕ್ಕ ನಾಯಕ ವಾಸುದೇವ ಅವರೆಲ್ಲರಿಗೂ ತಿಳುವಳಿಕೆ ಹೇಳುತ್ತಾನೆ:

''ನೋಡಣ್ಣಾ, ಮನುಷ್ಯನಿಗೆ ಒಂದು ಬಣ್ಣ ಇರಬೇಕು. ಈ ಮೂರು ಬಣ್ಣದ ಬಾವುಟ· · · ·ಸ್ವಲ್ಪ ಭಾಗ ಬಿಳಿ, ಸ್ವಲ್ಪ ಭಾಗ ಕೆಂಪು, ಇನ್ನು ಸ್ವಲ್ಪ ಭಾಗ ಹಸಿರು. ಇದು ಖಚಡಾ ಪಾರ್ಟಿಯ ಬಾವುಟ. ಕಾಂಗ್ರೆಸ್ ಖಚಡಾ ಪಾರ್ಟಿನೆ. ಯಾಕೆಂದರೆ ಇದರಲ್ಲಿ ಜಮೀನ್ದಾರರೂ ಇದ್ದಾರೆ, ಸೇಠರೂ ಇದ್ದಾರೆ, ಭಾಷಣ ಕೇಳೋದಕ್ಕೆ ಇರಲೀ ಅಂತ ಸ್ವಲ್ಪ ಜನ ರೈತರನ್ನೂ, ಕಾರ್ಮಿಕರನ್ನೂ ಸದಸ್ಯರನ್ನಾಗಿ ಮಾಡಿಕೊಂಡಿದ್ದಾರೆ. ಬಡವರು ಯಾವಾಗಲೂ ಒಂದೇ ಬಣ್ಣದ ಬಾವುಟದ ಪಾರ್ಟಿಯಲ್ಲಿರಬೇಕು.''

ತಹಸೀಲ್ದಾರರು ಕಾಂಗ್ರೆಸಿನ ಸದಸ್ಯರಾದರು.

ಅವರು ಚರಖಾ ಕೇಂದ್ರಕ್ಕಾಗಿ ತಮ್ಮದೊಂದು ಮನೆಯನ್ನೇ ಬಿಟ್ಟು ಕೊಟ್ಟರು. ಖದ್ದರ್ ಬಟ್ಟೆ ಧರಿಸುವುದಕ್ಕೆ ಆರಂಭಿಸಿದ್ದಾರೆ. ಇಡೀ ಜೀವನ

ಸುಳ್ಳು ವಂಚನೆಯಲ್ಲೇ ಕಳೆಯಿತು. ಉಳಿದ ಆಯುಸ್ಸನ್ನಾದರೂ ಪುಣ್ಯ ಕೆಲಸದಲ್ಲಿ ಕಳೆಯುತ್ತೇನೆ ಎನ್ನುತ್ತಾರೆ. ····ತಹಸೀಲ್ದಾರರು ನಾಲ್ಕಾಣೆ ಸದಸ್ಯರಾಗಿಲ್ಲ. ನಾಲ್ಕಾಣೆ ಸದಸ್ಯರೇನು ಯಾರು ಬೇಕಾದರೂ ಆಗುತ್ತಾರೆ. ತಹಸೀಲ್ದಾರರು ನಾಲ್ಕು ನೂರು ರೂಪಾಯಿ ಟಿಕೆಟ್ಟಿನ ಸದಸ್ಯರಾಗಿದ್ದಾರೆ. ನೋಡಲಿಲ್ವೇನು? ವಿಶ್ವನಾಥಬಾಬೂ ರಸೀತಿ ಹರಿದು ಕೊಟ್ಟರು. ತಹಸೀಲ್ದಾರರು ತಕ್ಷಣ ಹೊಗೆಸೊಪ್ಪಿನ ಹಾಗೆ ಗರಿಗರಿಯಾಗಿದ್ದ ನಾಲ್ಕು ನೂರು ರೂಪಾಯಿಗಳ ನೋಟನ್ನು ತೆಗೆದುಕೊಟ್ಟರು.... ಇನ್ನು ಸೋಷಲಿಸ್ಟ್ ಪಾರ್ಟಿ ಮುಂದುವರಿಯೋದು ಕಷ್ಟ. ಆ ಪಾರ್ಟಿಯಲ್ಲಿ ಒಬ್ಬನಾದರೂ ಶ್ರೀಮಂತನಿಲ್ಲ. ಸುಠದ ಕೊರಾರಿನ್ ಎಷ್ಟು ದಿನಾ ಅಂತ ಪಾರ್ಟಿ ನಡೆಸೋದಕ್ಕಾಗುತ್ತೆ?

ಸೆಕ್ಷನ್ ನಂ. 40 ರ ನೋಟೀಸ್ ಬಂದಿದೆ. ಜಿಲ್ಲಾ ಕಾಂಗ್ರೆಸ್ಸಿನ ಮಂತ್ರಿಯವರು ನೋಟೀಸ್ ಕಳಿಸಿದ್ದಾರೆ. ಸೋಷಲಿಸ್ಟ್ ಪಾರ್ಟಿ ಬಲವಂತವಾಗಿ ಭೂಮಿಯನ್ನು ವಶಪಡಿಸಿಕೊಳ್ಳಬೇಕೆನ್ನುತ್ತದೆ. ಕಾಂಗ್ರೆಸ್ ಮಂತ್ರಿಯವರು 40ನೇ ಸೆಕ್ಷನ್ ಜಾರಿಗೆ ತಂದು ನೋಟೀಸ್ ಕಳುಹಿಸಿದ್ದಾರೆ. ಬಾಲದೇವ ಸಂತೆಯಲ್ಲಿ ನೋಟೀಸ್ ಹಂಚುತ್ತಿದ್ದಾನೆ. ವಾರದ ಸಾಗುವಳಿ ಮಾಡುವ ರೈತರು ಜಮೀನಿಗೆ ದುಡ್ಡು ಕಟ್ಟಿ, ಹರಿಯುತ್ತಿರುವ ಗಂಗೆಯಲ್ಲಿ ಕೈತೊಳೆದುಕೊಳ್ಳಿ. ಹೊಸ ಕಾನೂನು ಜಾರಿಗೆ ಬಂದಿದೆ. ಹಿಂಸಾವಾದದ ಅವಶ್ಯಕತೆಯೇ ಇಲ್ಲ. ಪೂರ್ಣಿಯ ಕಛೇರಿಗೆ ನಲವತ್ತನೇ ಸೆಕ್ಷನ್ನಿನ ಆಫೀಸರ್ ಬಂದಿದ್ದಾನೆ. ದರಖಾಸ್ತು ಕೊಟ್ಟರೆ ಆಯಿತು. ಜಮೀನು ನಿಮ್ಮದೇ ಆಗುತ್ತೆ.

ಬಾಲದೇವ ಉಚಿತವಾದ ಮಾತನ್ನೇ ಆಡುತ್ತಾನೆ. ಎಳೆದಾಟ ಜಗ್ಗಾಟ ಇಲ್ಲದೇನೇ ಭೂಮಿ ಸ್ವಂತದ್ದು ಆಗೋವಾಗ ಸೋಷಲಿಸ್ಟ್ ಪಾರ್ಟಿಗೆ ಸೇರೋದು ಏನು ಅವಶ್ಯಕ? ಕಾಂಗ್ರೆಸ್ ರಾಜ್ಯ ಏನು ಬೇಕಾದರೂ ಕಾಂಗ್ರೆಸ್ಸಿನ ಮಂತ್ರಿಗಳನ್ನು ಕೇಳಿಕೊಂಡರೆ ಆಯ್ತು. ಕಾನೂನೇ ಮಾಡಿಬಿಡ್ತಾರೆ. ಆದರೆ ಒಂದು ವಿಚಾರ, ಹೀಗೆ ಬಾಯಿಗೆ ಬಂದದ್ದು ಹೇಳಿದರೆ ಕಾಂಗ್ರೆಸ್ ಮಂತ್ರಿಗಳೂ ಏನೂ ಮಾಡಲಾರರು. ಎಲ್ಲರೂ ಒಂದೇ ಕಡೆ ಸೇರಬೇಕು. ಸೇರಿ, ಎಲ್ಲರೂ ಒಂದೇ ಮಾತನ್ನು ಹೇಳಬೇಕು. ಹತ್ತು ಜನ ಸೇರಿಕೊಂಡು ಕೆಲಸ ಮಾಡಿದರೆ, ಸೋಲೋ ಗೆಲುವೋ ಏನು ಬಂದರೂ ಪರವಾಗಿಲ್ಲ····ತಪ್ಪು ಇರೋದು ಪಬ್ಲಿಕ್‌ನಲ್ಲೇ. ಕೆಲವರು ಕಾಂಗ್ರೆಸ್ ಸೇರ್ತಾರೆ, ಇನ್ನು ಕೆಲವರು ಸೋಷಲಿಸ್ಟ್ ಪಾರ್ಟಿಗೆ, ಮತ್ತೆ ಕೆಲವರು ಕಪ್ಪು ಟೋಪಿ ಪಾರ್ಟಿಗೆ····ಹೀಗೆ

ಹರಿದು ಹಂಚಿ ಹೋದರೆ ಪಬ್ಲಿಕ್ಕಿಗೆ ಯಾವ ಒಳ್ಳೇದೂ ಆಗಲಾರದು. ಬಾಲದೇವ ಹೇಳೋದೂ ಸರೀನೇ.

"ನಲವತ್ತನೇ ಸೆಕ್ಷನ್ ಕಾನೂನೇ?"—ಸೋಷಲಿಸ್ಟ್ ಪಾರ್ಟಿಯ ಜಿಲ್ಲಾ ಕಾರ್ಯದರ್ಶಿ ಕಾಮ್ರೇಡ್ ಕಾಳೀಚರಣನಿಗೆ ತಿಳಿಯಹೇಳಿದರು: "ಅದೇನೂ ಹೊಸ ಕಾನೂನಲ್ಲ. ಅದು ಹಳೆಯ ಕಾನೂನೇ. ಕಾಂಗ್ರೆಸ್ಸಿನ ಜನ ಕಾಗದ ಹಂಚಿದ್ದಾರೆ ತಾನೇ? ಸರಿ, ನೀವೂ ಹಂಚಿ. ಹಳ್ಳಿಯ ರೈತರಿಗೆಲ್ಲಾ ಹೇಳಿ. ದೊಡ್ಡ ದೊಡ್ಡ ರೈತರ ಭೂಮಿಯ ಮೇಲೆ ಆಕ್ರಮಣ ಮಾಡಲಿ. ಯಾರೂ ಯಾರ ವಿರುದ್ಧವೂ ಸಾಕ್ಷಿ ಕೊಡಬಾರದು. ಕಾನೂನಿಂದ ಏನಾಗುತ್ತದೆ? ಸಾಕ್ಷಿಯೇ ನಿಜವಾದದ್ದು. ಸಾಕ್ಷಿ ಬಲವಾಗಿರಬೇಕು. ಸಾಕ್ಷಿಗಳ ಹೇಳಿಕೆಯಲ್ಲೂ ಸ್ವಲ್ಪ ವ್ಯತ್ಯಾಸವೂ ಇರಬಾರದು. ಬಡವರೆಲ್ಲಾ ಒಂದು ಬಾವುಟದ ಕೆಳಗೆ, ಒಂದು ಸೂತ್ರದಲ್ಲಿ ಬಂಧಿತರಾದಾಗಲೇ ಇದು ಸಾಧ್ಯ. ತಹಸೀಲ್ದಾರರು ಕಾಂಗ್ರೆಸ್ ಪಕ್ಷಕ್ಕೆ ಸೇರಿದರಲ್ಲವೇ? ಹಾಗಾದರೆ ಅವರ ಜಮೀನಿನ ಮೇಲೆ ರೈತರು ಮೊದಲು ಆಕ್ರಮಣ ಹೂಡಲಿ. ಆಗ ನಿಜವಾದ ಬಣ್ಣ ಬಯಲಾಗುತ್ತದೆ. ಕಾಂಗ್ರೆಸ್ಸಿನ ಕಾರ್ಯದರ್ಶಿಯ ನೋಟೀಸಿಗೆ ಏನು ಬೆಲೆ ಎಂಬುದು ಆಗ ತಿಳಿಯುತ್ತದೆ...... 'ಲಾಲ್‌ಪತಾಕ'ದಲ್ಲಿ ಈ ಬಾರಿಯ ಸಂಚಿಕೆಯಲ್ಲಿ ಈ ಸಂಬಂಧವಾಗಿ ಚಿನಗಾರಿಯವರು ಬರೆದ ಒಂದು ವಿಶೇಷ ಲೇಖನವಿದೆ. ಹೆಚ್ಚು ಕಾಪಿಗಳನ್ನು ತೆಗೆದುಕೊಂಡು ಹೋಗಿ ಎಲ್ಲರಿಗೂ ಕೊಡಿ."

"....ನಲವತ್ತನೇ ಸೆಕ್ಷನ್, ಗುತ್ತಿಗೆದಾರರ ಮತ್ತು ಭೂಮಿಯಲ್ಲಿ ಬಾಡಿಗೆಗೆ ಸಾಗುವಳಿ ಮಾಡುವವರಿಗೆ ಭೂಮಿಯ ಮೇಲೆ ಅಧಿಕಾರ ಕೊಡುವ ಕಾನೂನು. ಆದರೆ ಕಾನೂನಿನಲ್ಲಿ ಒಂದು ಸಣ್ಣ ತೂತಿದ್ದರೂ ಅದರೊಳಗಿಂದಲೇ ಆನೆ ತೂರಿ ಹೋಗಬಲ್ಲದು....ನಲವತ್ತನೇ ಸೆಕ್ಷನ್ನಿಗೆಂದು ನಿಯುಕ್ತರಾಗಿರುವ ಅಧಿಕಾರಿಗಳೆಲ್ಲಾ ಜಮೀನ್ದಾರರ ಅಥವಾ ದೊಡ್ಡ ದೊಡ್ಡ ರೈತರ ಮಕ್ಕಳೇ. ಅವರಿಂದ ಬಡವರ ಹಿತ ಸಾಧನೆಯಾಗುವುದೆಂದು ಯೋಚಿಸುವುದು ವ್ಯರ್ಥ. ಆದರೆ ಒಗ್ಗಟ್ಟಿನ ಶಕ್ತಿ ಕಾನೂನಿಗಿಂತ ಬಲವತ್ತರವಾದುದು. ಸೋಷಲಿಸ್ಟ್ ಪಕ್ಷದ ಬಾವುಟದ ಕೆಳಗೆ ನಿಂತು. ಜಮೀನ್ದಾರರು ಮತ್ತು ದೊಡ್ಡ ದೊಡ್ಡ ರೈತರ ಪರವಾಗಿ ಹಳ್ಳಿಯ ಒಬ್ಬನೂ ಸಾಕ್ಷಿ ಹೇಳುವುದಿಲ್ಲವೆಂದು ಪ್ರತಿಜ್ಞೆ ಮಾಡೋಣ. 'ಲಾಲ್‌ಪತಾಕೆ' ಅಧಿಕಾರಿಗಳಿಗೆ ಭರವಸೆ ಕೊಡುತ್ತದೆ...."

ಹೇಳಿಕೆ ಸರಿಯಾಗಿಯೇ ಇದೆ "ಇಲ್ಲ. ಸರಿಯಾಗಿಲ್ಲ. ಇದೆಲ್ಲಾ ಮಾತುಗಳ ಮಾಯಾಜಾಲ."

—ಜೋಯಿಸರು ಎಲ್ಲ ಮಾತುಗಳಲ್ಲೂ ಮೀನಾ ಮೇಷ ಎಣಿಸುತ್ತಾರೆ. 'ಗಂಡ ಹೆಂಡರ ಜಗಳದಲ್ಲಿ ಕೂಸು ಬಡವಾಯಿತು.' ಅನ್ನೋಹಾಗೆ, ಕಾಂಗ್ರೆಸ್. ಸೋಷಲಿಸ್ಟ್ ಪಾರ್ಟಿಗಳು ತಮ್ಮ ತಮ್ಮಲ್ಲೇ ಜಗಳವಾಡುತ್ತಿವೆ. ಇಬ್ಬರಿಗೂ ತಮ್ಮ ಪಾರ್ಟಿಗೆ ಸದಸ್ಯರನ್ನು ಮಾಡುವುದರಲ್ಲಿ ಆಸಕ್ತಿ. ಬೀಸುಕಲ್ಲಿನಲ್ಲಿ ಸಿಕ್ಕಿ ನರಳುವವರು ಬಡವರು!''

ಬಡವರು ನರಳೋದಿಲ್ಲ. ಬಡವರಿಗೆ ಒಳ್ಳೆಯದಾಗುತ್ತೆ. ಒಂದೇ ಪಾರ್ಟಿ ಇದ್ದರೆ ಜನರಿಗೆ ಒಳ್ಳೇದಾಗೋದಿಲ್ಲ. ಎರಡು ದಳಗಳಲ್ಲಿ ಸ್ಪರ್ಧೆ, ಚರ್ಚೆ ಇದ್ದರೆ ಮಾತ್ರವೇ ಪಬ್ಲಿಕ್ಕಿಗೆ ಉಪಯೋಗವಾಗೋದು. ಒಂದು ಸಾರಿ ರೌತಹಟ್‌ನ ಜಾತ್ರೆಗೆ ವಿದೇಶಿ ನರ್ತಕರು ಬಂದಿದ್ದರು. ಚೆನ್ನಾಗಿ ನೃತ್ಯ ಮಾಡುತ್ತಿದ್ದರು. ಹಾಡನ್ನೂ ಚೆನ್ನಾಗಿಯೇ ಹೇಳುತ್ತಿದ್ದರು. ಮೂರನೆಯ ದಿನ ಬಲವಾಹಿ ನೃತ್ಯ ತಂಡದವರೂ ಬಂದರು. ಇಬ್ಬರಿಗೂ ಸ್ಪರ್ಧೆ ಆರಂಭವಾಯಿತು. ಪೈಪೋಟಿ ಯಿಂದಲೇ ಎರಡು ಗುಂಪಿನವರೂ ನಾಟ್ಯ ಪ್ರಾರಂಭಮಾಡಿದರು. ಎಷ್ಟು ಗಜಲ್‌ಗಳು, ಕವ್ವಾಲಿಗಳು, ಕೇಳಿಬಂದವೋ ಲೆಕ್ಕವೇ ಇಲ್ಲ! ಸೂರ್ಯ ಹುಟ್ಟುವವರೆಗೂ ಎರಡು ಗುಂಪಿನವರೂ ಕುಣಿಯುತ್ತಲೇ ಇದ್ದರು. ಆಗ ಜಾತ್ರೆಯ ಮ್ಯಾನೇಜರೇ ಬಂದು ಎರಡು ಗುಂಪಿನವರಿಗೂ ಸಮಾಧಾನ ಹೇಳಿ ನಾಟ್ಯವನ್ನು ನಿಲ್ಲಿಸಿದ್ದರು.''

ಚಲಿತ್ತರ ಕಮ್ಮಾರ ಬಂದಿದ್ದಾನೆ.

ಚಲಿತ್ತರ ಕಮ್ಮಾರ ಕ್ರಾಂತಿಕಾರಿ. ಮನೆ ಇರುವುದು ಸೇಮಾಪುರದಲ್ಲಿ. ಚಳವಳಿಯ ಸಮಯದಲ್ಲಿ ಸೈನಿಕರು ಇವನ ಹೆಸರನ್ನು ಕೇಳಿದರೇ ಮೂತ್ರ ವಿಸರ್ಜಿಸುತ್ತಿದ್ದರಂತೆ. ಬಾಂಬ್, ಪಿಸ್ತೂಲು, ಬಂದೂಕುಗಳನ್ನು ಹಾರಿಸು ವುದರಲ್ಲಿ ಪ್ರವೀಣ. ಚಳವಳಿಯಲ್ಲಿ ಸರ್ಕಾರದ ಪರವಾಗಿ ಸಾಕ್ಷಿ ಹೇಳಿದ ಎಲ್ಲರ ಮೂಗನ್ನೂ ಕತ್ತರಿಸಿದ್ದ ಚಲಿತ್ತರ. ದೊಡ್ಡ ವೀರ. ಒಂದು ಬಾರಿಯೂ ಸೆರೆ ಸಿಕ್ಕಲಿಲ್ಲ. ಎಷ್ಟೋ ಜನ ಸಿ.ಐ.ಡಿ. ಗಳನ್ನು ಕೊಂದುಹಾಕಿದ್ದ. ಧರ್ಮಪುರದ ದೊಡ್ಡ ದೊಡ್ಡ ವ್ಯಕ್ತಿಗಳೆಲ್ಲಾ ಇವನ ಹೆಸರನ್ನು ಕೇಳಿದರೇ ಗಡಗಡ ನಡುಗು ತ್ತಾರೆ. ಚಲಿತ್ತರನ ಕುದುರೆಯ ಕಾಲಿನ ಸಪ್ಪಳ ಕೇಳಿಬಂದರೆ ಸಾಕು, ಚಂದಾ ಕೊಟ್ಟುಬಿಡಬೇಕು····ಐವತ್ತು ರೂಪಾಯಿ ಅಲ್ಲ. ಐನೂರು ರೂಪಾಯಿಗಳಿ ಗಿಂತ ಒಂದು ಕಾಸನ್ನೂ ಕಡಿಮೆ ತೆಗೆದುಕೊಳ್ಳುವುದಿಲ್ಲ. ಹಾಗೇನು? ಪೆಟ್ಟಿಗೆಯ ಬೀಗದ ಕೈ ಈ ಕಡೆ ಕೊಡಿ. ಇಲ್ಲವೇ?····ಹತ್ತು ಕೊಲೆ ಕೇಸುಗಳು ಅವನ

ಮೇಲಿವೆ. ಆದರೆ ಒಂದು ಬಾರಿಯೂ ಸಿಕ್ಕಿಕೊಂಡಿಲ್ಲ. ಕೊನೆಗೆ ಸೋತು ಸರ್ಕಾರವೇ ಅವನ ಮೇಲಿನ ಮೊಕದ್ದಮೆಯನ್ನು ಹಿಂದಕ್ಕೆ ತೆಗೆದುಕೊಂಡಿತು. ಕ್ರಾಂತಿಕಾರಿ ಚಲಿತ್ತ್ರ ಕರ್ಮಾಕರ ಕಾಳೀಚರಣನ ಮನೆಗೆ ಬಂದಿದ್ದಾನೆಯೇ? ಸರಿ, 'ಇನ್ನೇನು? ಜೇವಿನ ಜೊತೆ ಹಾಗಲಕಾಯಿ ಸೇರಿದ ಹಾಗಾಯಿತು. ಚಲಿತ್ತ್ರನೂ ಸೋಷಲಿಸ್ಟ್ ಪಾರ್ಟಿಯವನೇ ಏನು? ಹಾಗಾದರೆ ಖಂಡಿತ, ಬಾಂಬು. ಪಿಸ್ತೂಲುಗಳ ಪ್ರಯೋಗ ಕಲಿಸಲು, ಟ್ರೈನಿಂಗ್ ಕೊಡಲು ಬಂದಿದ್ದಾನೆ. ಬಾಂಬು, ಪಿಸ್ತೂಲುಗಳ ಮುಂದೆ ಕಪ್ಪು ಟೋಪಿಯವರ ಲಾಠಿಗಳು ಹೇಗೆ ನಿಲ್ಲಬಲ್ಲವು? ಆನೆಯ ಮುಂದೆ ಗುಬ್ಬಚ್ಚಿ ಮರಿ!

ಚರಖಾ–ತಕಲಿ, ಲಾಠೀ–ಭರ್ಜಿ. ಬಾಂಬ್–ಪಿಸ್ತೂಲ್ ಮೂರರ ಟ್ರೈನಿಂಗ್.

## 24

ಹಾಂ ರೆ, ಅಬ ನಾ ಜೀಯಬಾ ರೇ ಸೈಯಾಂ,
ಛತಿಯಾ ಪರ ಲೌಟಲ್ ಕೇಶ್,
ಅಬ ನಾ ಜೀಯಬ ರೇ ಸೈಯಾಂ

(ಹೇ ಪ್ರಿಯತಮ, ಇನ್ನು ನಾನು ಜೀವಿಸಲಾರೆ. ಕೂದಲೆಲ್ಲಾ ಎದೆಯ ಮೇಲೆ ಹರಡಿದೆ. ಇನ್ನು ನಾನು ಬದುಕಿರಲಾರೆ.)

ಬೆಲೆ ಜಾಸ್ತಿಯಾಗಲಿ ಅಥವಾ ಕ್ಷಾಮವೇ ಬರಲಿ, ಹಬ್ಬವನ್ನು ಆಚರಿಸಲೇ ಬೇಕು. ಆದರಲ್ಲೂ ಹೋಲಿ! ಫಾಲ್ಗುಣ ಮಾಸದ ಗಾಳಿಯಲ್ಲೇ ಅಮಲೇರಿಸುವ ಶಕ್ತಿ ಇದೆ. ಆಶ್ವಯುಜ ಕಾರ್ತಿಕ ಮಾಸಗಳಲ್ಲಿ ಮಲೇರಿಯಾ ಮತ್ತು ಕರಿಜ್ವರಗಳಿಂದ ಸೋತ ದೇಹಕ್ಕೆ ಫಾಲ್ಗುಣ ಮಾಸದ ಗಾಳಿ ಸಂಜೀವಿನಿಯಾಗುತ್ತದೆ. ಅಳುವುದಕ್ಕೆ ನರಳುವುದಕ್ಕೆ ಬಾಕಿ ಹನ್ನೊಂದು ತಿಂಗಳು ಇದ್ದೇ ಇವೆ. ಫಾಲ್ಗುಣ ಒಂದು ತಿಂಗಳಲ್ಲಾದರೂ ನಗೋಣ, ಹಾಡೋಣ. "ಜೋ ಜೀಯೈ ಸೋ ಖೇಲೈ ಫಾಗ್." (ಬದುಕಿರುವವರೆಲ್ಲಾ ಹೋಲಿಯನ್ನು ಆಡಲೇಬೇಕು.) .... ಬೇರೆ ಹಬ್ಬ ಉತ್ಸವಗಳನ್ನಾದರೆ ಬಿಟ್ಟರೂ ಬಿಡಬಹುದು. ದೀಪಾವಳಿಯಲ್ಲಿ

ಒಂದೆರಡು ದೀಪಗಳನ್ನೂ ಹಚ್ಚಿ ಮುಗಿಸಿಬಿಡಬಹುದು. ಆದರೆ, ಹೋಲಿಯೆಂದರೆ ಮೃತ ಹೃದಯದಲ್ಲೂ ಜೀವ ಸಂಚಾರವಾಗುತ್ತದೆ. ಮಾವಿನ ಹೀಚು ತುಂಬಿದ ತೋಪಿನ ಮೇಲಿನಿಂದ ಬೀಸಿದ ಗಾಳಿಯನ್ನು ಸೇವಿಸಿ ಹುಡುಗರು ಮುದುಕರು ಎಲ್ಲರೂ ಮತ್ತರಾಗುತ್ತಾರೆ. ....ಅಕ್ಕಿ ಹಿಟ್ಟು, ಬೆಲ್ಲ, ಎಣ್ಣೆ—ಪೂಜೆಗೆ, ಹಬ್ಬದಡಿಗೆಗೆ ಬೇಕಾಗುವ ಈ ಚಿಕ್ಕ ಸಾಮಾನುಗಳನ್ನು ಪಡೆಯಲು ಮಾಲಿಕರ ಮನೆಯ ಮುಂದೆ ಐದು ದಿನ ಮುಂಚಿನಿಂದಲೂ ಗುಂಪು ಸೇರಿರುತ್ತದೆ. ಹಗೇವಿನ ಬಾಗಿಲು ತೆಗೆದೇ ಇರುತ್ತದೆ. ಮಾಲಿಕರು ರಿಜಿಸ್ಟರ್ ಪುಸ್ತಕವನ್ನು ತೆಗೆದಿಟ್ಟುಕೊಂಡು ಕುಳಿತುಬಿಡುತ್ತಾರೆ. ಹತ್ತಿರದಲ್ಲಿ ಕಾಡಿಗೆಯ ಡಬ್ಬಿ ತೆರೆದಿರುತ್ತದೆ. ಬತ್ತ ಅಳೆಯುವವರು ಬತ್ತದ ರಾಶಿಯಿಂದ ಬತ್ತ ಅಳೆಯುತ್ತಿರುತ್ತಾರೆ ....ಬಾವನದಾಸ ಒಂದು ಮಣ....ಸೋನ ತತಮಾ ಮೂರು ವೀಸೆ,.... ಖಾಲಿ ಕಾಗದದ ಮೇಲೆ ಹೆಬ್ಬೆಟ್ಟಿನ ಗುರುತು ಹಾಕಿ ಹೋಗಿ....ಭಾದ್ರಪದ ಮಾಸದ ಹೊತ್ತಿಗೆ ಈಗ ಕೊಟ್ಟ ಭತ್ತವನ್ನು ತೀರಿಸಿದರೆ ಒಂದು ಮಣಕ್ಕೆ ಒಂದೂವರೆ ಮಣ, ಮುಂದಿನ ಸುಗ್ಗಿಯಲ್ಲೇ ತೀರಿಸಿದರೆ ಒಂದೂವರೆ ಮಣಕ್ಕೆ ಮೂರು ಮಣ, ಸರಳವಾದ ಲೆಕ್ಕ!

ಹಳ್ಳಿಯ ಎಲ್ಲ ದೊಡ್ಡ ದೊಡ್ಡ ರೈತರಿಗೂ ಅವರವರ ಕೂಲಿಗಾರರ ಗುಂಪಿದೆ. ಸಿಂಘಜಿಯವರಿಗೆ ತತಮಾ ಮತ್ತು ಪಾಸ್ವಾನ ಪಂಗಡ. ತಹಸೀಲ್ದಾರರಿಗೆ ಪೋಲಿಯಾ ಪಂಗಡ, ಧನುಷ್ ಪಂಗಡ, ಕುರ್ಮೀ ಮತ್ತು ಕಿಯೋಟೋ ಪಂಗಡದವರು, ಖೇಲಾವನ ಯಾದವನಿಗೆ ಗುಆರ್ ಮತ್ತು ಕೋಯರೀ ಪಂಗಡದವರು. ಸಂಥಾಲ ಪಂಗಡದವರ ಮೇಲೆ ಯಾರಿಗೂ ಪೂರ್ಣ ಅಧಿಕಾರವಿಲ್ಲ.

ಈ ಬಾರಿ ತಹಸೀಲ್ದಾರರನ್ನು ಬಿಟ್ಟರೆ ಬೇರೆ ಯಾರೂ ಕೂಲಿಗಾರರಿಗೆ ಬತ್ತವನ್ನು ಕೊಡಲಿಲ್ಲ....ಹೆಬ್ಬೆಟ್ಟಿನ ಗುರುತು ಹಾಕದೆ ಬತ್ತ ಕೊಡುವುದು ಹೇಗೆ? ತಾತ ಮುತ್ತಾತರ ಕಾಲದಿಂದ ಹೆಬ್ಬೆಟ್ಟಿನ ಗುರುತು ಹಾಕುತ್ತಲೇ ಬಂದಿದ್ದಾರೆ. ಯಾರಿಗೂ ಮೋಸ ಮಾಡಿಲ್ಲ. ಈ ವರ್ಷ ಇದ್ದಕ್ಕಿದ್ದ ಹಾಗೆ ಮೋಸ ಮಾಡುತ್ತಾರೇನು? ಕಾಳೀಚರಣ ಹೆಬ್ಬೆಟ್ಟಿನ ಗುರುತು ಹಾಕುವುದಕ್ಕೆ ಬೇಡವೆಂದಿದ್ದರೆ ಅವನ ಹತ್ತಿರವೇ ಬತ್ತ ತೆಗೆದುಕೊಳ್ಳಲಿ.

ತಹಸೀಲ್ದಾರರಿಗೆ ಹೊಸದಾಗಿ ಹೆಬ್ಬೆಟ್ಟಿನ ಗುರುತು ಹಾಕಿಸಿಕೊಳ್ಳುವ ಅವಶ್ಯಕತೆಯೇ ಇಲ್ಲ. ಹಿಂದಿನ ಗುರುತುಗಳೇ ಬೇಕಾದಷ್ಟಿವೆ. ಯಾರೂ ಯಾವುದೇ ವಿಧವಾದ ತಂಟೆ ಮಾಡುವ ಹಾಗೇ ಇಲ್ಲ. ಬೇರೆ ಕೂಲಿಗಾರರಿಗೂ

ಈ ಬಾರಿ ತಹಸೀಲ್ದಾರರೇ ಕಾಳೀಚರಣನನ್ನು ಜಾಮೀನಾಗಿಟ್ಟುಕೊಂಡು ಬತ್ತ ಕೊಟ್ಟಿದ್ದಾರೆ. ಬತ್ತ ವಸೂಲಿ ಮಾಡಿಕೊಡುವುದು ಕಾಳೀಚರಣನ ಕೆಲಸ · ಏನೇ ಆಗಲಿ ತಹಸೀಲ್ದಾರರ ಹೃದಯದಲ್ಲಿ ದಯೆ-ಧರ್ಮ ಇದೆ. ಬಾಕಿ ಮಾಲಿಕರು ಪಿಶಾಚಿಗಳು ಪಿಶಾಚಿಗಳು!

'ಏಕ್ ಒರ ಲೌಟಸ್ ಬಾರೀ ರೇ ಬಿಹಲು ಬಾ....'

(ಹೃದಯದಲ್ಲಿ ತಳಮಳವಾಗುತ್ತಿದೆ.)

ಹೋಲಿಯ ಪ್ರತಿ ಗೀತೆಯೂ ದೇಹದಲ್ಲಿ ಕಂಪನವನ್ನುಂಟುಮಾಡುತ್ತದೆ. ಕಲಾಸಿಯ ಜೊತೆ ಫುಲಿಯಾಳ ಕೂಡಿಕೆ ಆಯಿತು....ಹೆಂಡತಿಯನ್ನು ಕರೆದುಕೊಂಡು ಹೋಗಲು ಅವನು ಬಂದಿದ್ದಾನೆ. ಆದರೆ ಫುಲಿಯಾ ಹೋಗುವುದಕ್ಕೆ ಸಿದ್ಧವಾಗಿಲ್ಲ. ಅವನಿಗಾದರೋ ತುಂಬಾ ಸಿಟ್ಟು ಬಂದಿತ್ತು. ಆದರೆ ಫುಲಿಯಾ ರಮಜೂವಿನ ಹೆಂಡತಿಯ ಅಂಗಳದಲ್ಲಿ ಅವನನ್ನು ಭೇಟಿಯಾಗಿ ಹೇಳಿದಳು: "ಈ ಸಲ ಮಾತ್ರ ತವರು ಮನೆಯಲ್ಲೇ ಹೋಳಿ ಹಬ್ಬ. ಮುಂದಿನ ವರ್ಷ....

ನಯನಾ ಮಿಲಾನೀ ಕರೀ ಲೇ ರೇ ಸೈಯಾಂ,
ನಯನಾ ಮಿಲಾನೀ ಕರೋಲೇ,
ಅಬಕೀ ಬೇರ್ ಹಮು ನೈಹರ ರೈಹಬೋ,
ಜೋ ದಿಲಾ ಚಾಹೆ ಸೆ ಕರೋಲೇ.

(ಹೇ ಪ್ರಿಯತನು, ಪ್ರೀತಿಯಿಂದ ನೋಡು. ಈ ಬಾರಿ ನಾನು ತವರುಮನೆಯಲ್ಲೇ ಇರುತ್ತೇನೆ. ನಿನಗೆ ಇಷ್ಟಬಂದಂತೆ ಮಾಡು.)

ಮಧ್ಯಾಹ್ನದಿಂದ ಸಂಜೆಯವರೆಗೆ ರಮಜೂದಾಸ ಹೆಂಡತಿಯ ಮನೆಯಲ್ಲೇ ಇದ್ದ. ಫುಲಿಯಾ ಗಂಡನನ್ನು ಒಪ್ಪಿಸಿದಳು. ಹೋಳಿ ಹಬ್ಬಕ್ಕಾಗಿ ಅವನು ಒಂದು ರೂಪಾಯಿಯನ್ನೂ ಕೊಟ್ಟ....ಬಡಪಾಯಿ ಸಹದೇವ ಮಿಶ್ರ ಈ ಬಾರಿ ಯಾರೊಡನೆ ಹೋಲಿ ಆಡುತ್ತಾನೋ! ಹಿಂದಿನ ವರ್ಷದ ನೆನಪು ಬಂದಕೂಡಲೇ ಫುಲಿಯಾಳ ದೇಹವೆಲ್ಲಾ ಕಂಪಿಸಿತು. ಅಫೀಮು ಸೇವಿಸಿ ಮತ್ತನಾಗಿದ್ದ ಸಹದೇವ ಮಿಶ್ರ. ಒಂದೇ ಕಜ್ಜಾಯವನ್ನು ಒಬ್ಬರಾಗುತ್ತಲೊಬ್ಬರಂತೆ ಇಬ್ಬರೂ ಕಚ್ಚಿ ತಿಂದಿದ್ದರು....ಜಾತಿ, ಧರ್ಮ: "ಫುಲಿಯಾ, ನೀನು ನನ್ನ ರಾಣಿ, ನನ್ನ ಧರ್ಮ, ಜಾತಿ ಎಲ್ಲಾ ನೀನೇ"....ಹೆಂಡ ಕುಡಿಯುವುದಕ್ಕೆ ಅಪ್ಪನಿಗೆ ಒಂದೂವರೆ ರೂಪಾಯಿ, ಅಮ್ಮನಿಗೆ ಎಂಟಾಣೆ ಕೊಟ್ಟಿದ್ದ.... ರಾತ್ರಿಯೆಲ್ಲಾ ಸಹದೇವ ಮಿಶ್ರ ಎಚ್ಚರವಾಗಿಯೇ ಇದ್ದ.

ಪುಲಿಯಾಳ ದೇಹದ ಭಾಗ ಭಾಗಸಲ್ಲೂ ಮಧುರ ಯಾತನೆ ಹರಡಿತು. ಕೀಲು ಕೀಲುಗಳಲ್ಲಿ ನೋವಿನ ಅನುಭವವಾಯಿತು. ಯಾರಾದರೂ ತಮ್ಮ ಬಾಹುಗಳಲ್ಲಿ ಭದ್ರವಾಗಿ ತನ್ನನ್ನು ತಬ್ಬಿಕೊಂಡು ಮೂಳೆಯನ್ನು ಚಟಪಟನೆ ನೆಟ್ಟಗೆ ಮುರಿಯಲಿ ಎಂದು ಅನ್ನಿಸತೊಡಗಿತು. ಆಗಲಾದರೂ ಈ ನೋವು ದೂರವಾಗಬಹುದೇನೋ. ಸಹದೇವ ಮಿಶ್ರನಿಗೆ ಹೇಳಿಕಳುಹಿಸಲೇ?.... ಹಳ್ಳಿಯವರು?··· ಊಹೂಂ····ಹೋಲಿಯ ದಿನ ಎಲ್ಲ ಅಪರಾಧಗಳಿಗೂ ಕ್ಷಮೆ ಇದೆ·····ಆದರೆ ಅವನು. ಬರುತ್ತಾನೆಯೇ! ಕೋಪ ಬಂದಿರಬಹುದು.

ಅರೆ ಬಹಿಯಾಂ ಪಕಡಿ ಝುಕ ಝೋರೆ ಶ್ಯಾಮು ರೇ
ಫೂಟಲ್ ರೇಸಮ್ ಜೋಡಿ ಚೂಡೀ
ಮಸಕಿ ಗಯೀ ಚೋಲೀ, ಜೀಂಗಾವಲ್ ಗಾಡೀ
ಆಂಚಲ್ ಉಡಿ ಜಾಯ ಹೋ
ಐಸೋ ಹೋರೀ ಮಚಾಯೋ ಶ್ಯಾಮು ರೇ. ..

(ಶ್ಯಾಮ ಕೈಹಿಡಿದು ಎಳೆದ ರಭಸಕ್ಕೆ ರೇಷ್ಮೆ ಸೀರೆ ಹರಿದು ಹೋಯಿತು. ರವಿಕೆ ಸುಕ್ಕಾಯಿತು. ಬಟ್ಟೆಯೆಲ್ಲಾ ಒದ್ದೆಯಾಯಿತು. ಶ್ಯಾಮ ಹೀಗೆ ಹೋಳಿಯನ್ನು ಆಡಿದ.)

ಕಮಲಿಯ ಕಣ್ಣುಗಳು ಕೆಂಪಗಾಗುತ್ತಿದ್ದವು. ಕಳೆದ ವರ್ಷ ಹೋಲಿಯ ದಿನವೇ ಅವಳು ಜ್ಞಾನ ತಪ್ಪಿದ್ದಳು. ಈ ಬಾರಿ ಏನಾಗುತ್ತದೆ? ಈ ಬಾರಿ ಅವಳು ಜ್ಞಾನ ತಪ್ಪುವುದಿಲ್ಲ. ಡಾಕ್ಟರ್ ಇದ್ದಾರೆ, ಅವಳು ಜ್ಞಾನ ತಪ್ಪಲು ಅವರು ಅವಕಾಶ ಕೊಡುವುದಿಲ್ಲ····ಆದರೆ, ಇಂದು ಬೆಳಗ್ಗಿನಿಂದಲೂ ಡಾಕ್ಟರ್ ಬಂದೇ ಇಲ್ಲ. ರಾಮಪುರಕ್ಕೆ ರೋಗಿಗಳನ್ನು ನೋಡಲು ಹೋಗಿದ್ದಾರೆ. ಅವರು ಈವತ್ತು ಬರದೇ ಇದ್ದುಬಿಟ್ಟರೆ?....ಇಲ್ಲ, ಅವರು ಖಂಡಿತ ಬರುತ್ತಾರೆ.... ತಾಯಿ ಒಂದು ವಾರದ ಹಿಂದೆಯೇ ಆಮಂತ್ರಣ ಕೊಟ್ಟಿದ್ದಾಳೆ. ಬಣ್ಣ, ರಂಗಿನ ಪುಡಿ, ಗುಲಾಲ್ ಪಿಚಕಾರೀ!

"ಅಮ್ಮಾ."

"ಏನಮ್ಮಾ ಕಮಲಾ?"

"ನಿನ್ನ ಡಾಕ್ಟರ್ ಈವತ್ತು ಬರೋದಿಲ್ವೇನು?"

"ಯಾಕೆ? ಏನು ಸಮಾಚಾರ ಕಮಲಾ?"

ನನಗ್ಯಾಕೋ ಮೈಗೆ ಸರಿಯಾಗಿಲ್ಲ."

"ಹಾಗನ್ನಬೇಡ ಕಮಲ. ಮನಸ್ಸು ಗಟ್ಟಿಮಾಡ್ಕೋ ಏನೂ ಆಗೋಲ್ಲ."

....ಆಜು ಬ್ರಜ ಮೇಂ ಚಹುದಿಶ್ ಉದತ ಗುಲಾಲ್ (ಇಂದು ವಜ್ರದಲ್ಲಿ ಎಲ್ಲ ಕಡೆಯೂ ಬಣ್ಣದ ಪುಡಿ ಚೆಲ್ಲಾಡುತ್ತದೆ).

ಎಲ್ಲೆಲ್ಲೂ ಬಣ್ಣ ಎರಚಾಡುತ್ತಿದೆ. ಆದರೆ ಡಾಕ್ಟರಿಗೆ ಯಾರೂ ಬಣ್ಣ ಹಾಕಲಿಲ್ಲ. ರಾಮಪುರದಲ್ಲೂ ಯಾರೂ ಬಣ್ಣ ಹಾಕಲಿಲ್ಲ. ರಸ್ತೆಯಲ್ಲಿ ಕೆಲವು ಹುಡುಗರು ಪಿಚಕಾರಿ ಕೈಯಲ್ಲಿ ಹಿಡಿದು ನಿಂತಿದ್ದರು. ಆದರೆ ಡಾಕ್ಟರನ್ನು ನೋಡಿದ ಕೂಡಲೇ ಹೆದರಿಬಿಟ್ಟರು....ಅದು ಬಣ್ಣವೂ ಅಲ್ಲ. ಸಗಣಿ ನೀರು. ಬಣ್ಣ ಕೊಳ್ಳುವುದಕ್ಕೆ ಅವರ ಹತ್ತಿರ ಹಣವೆಲ್ಲಿಂದ ಬರಬೇಕು? ಡಾಕ್ಟರ ಮೇಲೆ ಜನ ಬಣ್ಣ ಹಾಕುವುದಿಲ್ಲ. ಅವರು ಸರ್ಕಾರಿ ಅಧಿಕಾರಿ. ಸರ್ಕಾರಿ ಉಡುಪು ಧರಿಸುತ್ತಾರೆ. ಸರ್ಕಾರಿ ಉಡುಪಿನ ಮೇಲೆ ಬಣ್ಣ ಹಾಕಿದರೆ ಜೈಲಿನ ಶಿಕ್ಷೆ ಆಗುತ್ತದೆ. ಡಾಕ್ಟರು, ಹೊರಗಿನ ಮನುಷ್ಯ. ಆ ಹಳ್ಳಿಯ ಸಮಾಜಕ್ಕೆ ಸೇರಿದವನಲ್ಲ....ಅದು ಡಾಕ್ಟರದೇ ತಪ್ಪು. ಪ್ರಾರಂಭದಿಂದಲೂ ಅವರು ಹಳ್ಳಿಯಿಂದ, ಹಳ್ಳಿಯ ಜನರಿಂದ ದೂರ ದೂರವೇ ಇರುತ್ತಾರೆ. ಅವರಿಗೆ ಸಂಬಂಧವಿರುವುದು ಕೇವಲ ರೋಗಿಗಳೊಂದಿಗೆ. ಅವರು ಹಳ್ಳಿಯ ಜೀವನದೊಂದಿಗೆ ಸೇರಲು ಎಂದೂ ಪ್ರಯತ್ನಪಡಲಿಲ್ಲ. ಆದರೆ ಡಾಕ್ಟರಿಗೆ ಈಗೀಗ ಹಳ್ಳಿಯ ಜೀವನ ಹಿಡಿಸುತ್ತಿದೆ. ಹಳ್ಳಿ, ಹಳ್ಳಿಯ ಜನ ಅವರಿಗೆ ಮೆಚ್ಚುಗೆಯಾಗುತ್ತಿದ್ದಾರೆ. ಅವರು ಹಳ್ಳಿಯನ್ನು ಪ್ರೀತಿಸುತ್ತಾರೆ. ಆದರೂ ಅವರ ಮೇಲೆ ಯಾರೂ ಬಣ್ಣವನ್ನು ಹಾಕುವುದೇ ಇಲ್ಲವಲ್ಲ. ಬಣ್ಣದಲ್ಲಿ, ಸಗಣಿಯಲ್ಲಿ, ಕೊಚ್ಚೆಯಲ್ಲಿ ಲೀನವಾಗಲು ಅವರು ಇಷ್ಟ ಪಡುತ್ತಾರೆ.

"....ಯಾರೂ ತಪ್ಪು ತಿಳಿಯಬಾರದು. ಈವತ್ತು ಹೋಲಿ." ಡಾಕ್ಟರ ಬಿಳಿಯ ಷರಟಿನ ಮೇಲೆ ಕೆಂಪು-ಗುಲಾಬಿಯ ಕಲೆಗಳು ಸಿಡಿದವು.

"ಓ ಕಾಳೀಚರಣ"

"ತಪ್ಪು ತಿಳೀಬೇಡಿ ಡಾಕ್ಟರ್ ಬಾಬು, ಈವತ್ತು ಹೋಲಿ."

ಡಾಕ್ಟರ್ ಪರ್ಸಿನಿಂದ ಹತ್ತು ರೂಪಾಯಿ ನೋಟನ್ನು ತೆಗೆದು ಕಾಳೀಚರಣನಿಗೆ ಕೊಟ್ಟರು. ಹೋಲಿಯ ಚಂದ. ಬಣ್ಣ ಗುಲಾಲುಗಳ ಚಂದಾ.

ಹೋಲೀ! ಹೋಲೀ! ಹೋಲೀ!

ಗಣೇಶ ಕೈಯ್ಯಲ್ಲಿ ಪಿಚಕಾರಿ ಹಿಡಿದು ಚಿಕ್ಕಮ್ಮನ ಸೆರಗು ಹಿಡಿದು ನಿಂತಿದ್ದ ಚಿಕ್ಕಮ್ಮ ನಕ್ಕು ಹೇಳಿದಳು.

"ಬೆಳಗ್ಗಿನಿಂದ ಹೋಲಿ ಆಡಬೇಕೆಂದು ಹಠ ಮಾಡುತ್ತಿದ್ದಾನೆ. ನನ್ನ ಒಂದು ಸೀರೆಗೆ ಪೂರ್ತಿ ಬಣ್ಣ ಹಾಕಿಬಿಟ್ಟ. ಈಗ ಹಳ್ಳಿಯ ಹುಡುಗರ ಜೊತೆ ಹೋಲಿ ಆಡಬೇಕೆಂದು ಹಠ ಮಾಡ್ತಿದಾನೆ."

"ಬಾರಯ್ಯಾ ಗಣೇಶ." ಕಾಳೀಚರಣ ಗಣೇಶನ ಕೈ ಹಿಡಿದುಕೊಂಡು ನಡೆದ. ಗಣೇಶ ಆನಂದವಾಗಿ ಡಾಕ್ಟರರ ಮೇಲೆ ಪಿಚಕಾರಿಯಿಂದ ಬಣ್ಣ ವನ್ನೆರಚುತ್ತಾ ಕಾಳೀಚರಣನ ಜೊತೆ ಓಡಿಹೋದ. ಚಿಕ್ಕಮ್ಮನಿಗೂ ಆನಂದ ವಾಗಿತ್ತು.

"ಬಹುಕಾಲ ಬಾಳು ಕಾಳೀಚರಣ."

ಡಾಕ್ಟರರೆಂದರು : "ತುಂಬಾ ಉತ್ಸಾಹಶಾಲಿ ಯುವಕ."

"ಡಾಕ್ಟರು ಬಂದರೋ ಇಲ್ಲವೋ ಅಂತ ಕಮಲಿ ಐದು ಬಾರಿ ಕೇಳಿದಳು. ಡಾಕ್ಟರು ಬಂದರೆ ನಿಮ್ಮನೇಲಿ ಊಟ ಹಾಕಬಾರದು. ಈವತ್ತು ಅವರಿಗೆ ನಮ್ಮನೇಲೇ ಊಟ ಅಂತ ಬೆದರಿಸಿ ಹೋಗಿದ್ದಾಳೆ."

> ಢೋಲ್ ಢಾಕ್, ಝಾಂಝು ಮೃದಂಗ ಔರ್ ಡಮ್ಫು
> ಹೋಲೀ, ಫಗುವಾ, ಭಡೋವಾ ಔರ್ ಜೋಗಿಡಾ

(ಹೋಲಿ ಹಾಡುಗಳನ್ನು ಹಾಡಲು, ಢಕ್ಕೆ. ಮೃದಂಗ ಮುಂತಾದ ವಾದ್ಯಗಳನ್ನು ಸಿದ್ಧಗೊಳಿಸಿಕೊಂಡು ಭಡೋವಾ ಮತ್ತು ಜೋಗೀಡಾ (ಹಾಡುವ ಜಾತಿಯವರು) ಹಾಡಲು ಸಿದ್ಧವಾದರು.)

ಕಾಳೀಚರಣನ ಗುಂಪು ತುಂಬಾ ದೊಡ್ಡದು. ಎರಡು ಡೋಲು, ಒಂದು ಢಕ್ಕೆ, ತಾಳಗಳು ಇವೆ. ಚೆನ್ನಾಗಿ ಹಾಡುವವರು ಅನೇಕ ಜನ ಅವನ ಗುಂಪಿನಲ್ಲಿ ದ್ದಾರೆ. ಸುಂದರಲಾಲ, ಮುಖೀಲಾಲ, ದೇವೀದಯಾಲ್, 'ಜೋಗೀಡಾ' (ಒಂದು ರೀತಿಯ ಜಾನಪದ ಗೀತೆ) ಹಾಡುವ ಮಹಂತ. ಮಿಡಲ್ ಸ್ಕೂಲಿ ನಲ್ಲಿ ಓದುತ್ತಿದ್ದಾನೆ, ಓದುವುದರಲ್ಲಿ ತುಂಬಾ ಬುದ್ಧಿವಂತ. 'ದೋಹೆ', ಕವಿತ್ತ'ಗಳನ್ನು ಜೋಡಿಸುವುದರಲ್ಲಿ ಅವನಿಗೆ ವಿಚಿತ್ರ ಶಕ್ತಿಯಿದೆ. ಹಳ್ಳಿಯ ಬೇರೆ ಚಿಕ್ಕ ಪುಟ್ಟ ಗುಂಪುಗಳೂ ಕಾಳೀಚರಣನ ಗುಂಪಿನೊಂದಿಗೇ ಸೇರಿ ಕೊಂಡಿವೆ.

ಜೋಗೀಡಾ ಸರ್....ರ್....ರ್....
ಜೋಗೀಡಾ ಸರ್....ರ್... ರ್....
ಜೋಗೀಜೀ ತಾಲ್ ನ ಟೂಟಿ
ತೀನ್ ತಾಲ್ ಪರ್ ಢೋಲ್‌ಕ್ ಬಾಜಿ.
ತಾಕ್ ಧಿನಾ ಧಿನ್ ಧಿನ್ನಕ್ ತಿನ್ನಕ್

(ಹೇ ಜೋಗೀಡಾ ತಾಳ ತಪ್ಪದಿರಲಿ, ಢೋಲಕ್ ಮೇಲೆ ತೀನ್ ತಾಳವನ್ನು ನುಡಿಸು.)

ಜೋಗೀಜೀ

ಹೋಲಿ ಯಾರೂ ತಪ್ಪು ತಿಳಿಯಬಾರದು. ಇಂದು ಹೋಲಿ.

ಬರಸಾ ಮೇ ಗಡ್ಡೆ ಜಬ್ ಜಾತೆ ಹೈಭರ್
ಬೇಂಗ್ ಹಜಾರೋ ಉಸಮೇಂ ಕರತೆ ಟ್ಯೆಟರ್ರ
ವೈಸೆ ಹೀ ರಾಜ್ ಅಜ್ ಕಾಂಗ್ರೆಸ್ ಕಾ ಹೈ
ಲೀಡರ್ ಬಿನ್ ಹೈ ಸಭೀಕಲ್ ಕೆ ಗೀದಡ್....
ಜೋಗೀಜೀ....ಸರ್ ..ರ್ ರ್....
ಜೋಗೀಜೀ ತಾಲ್ ನಟೂಟಿ
ಜೋಗೀಜೀ, ತೀನ್ ತಾಲ್ ಪರ್ ಢೋಲಕ್ ಬಾಜಿ.
ಜೋಗೀಜೀ, ತಕ್ ಧಿನಾ ಧಿನ್
ಚರ್ಖಾ ಕಾತೋ, ಖದ್ದರ್ ಪಹನೋ, ರಹೆ ಹಾಥ್ ಮೇ ಝೋಲೀ
ದಿನದಹಾಡೆ ಕರೋಡಕೈತೀ ಬೋಲ್ ಸುರಾಜೀ ಬೋಲೀ....
ಜೋಗೀಜೀ ಸರ್....ರ್....ರ್

(ಹಳ್ಳದಲ್ಲಿ ನೀರು ತುಂಬಿದಾಗ ಸಾವಿರಾರು ಕಪ್ಪೆಗಳು ಅದರಲ್ಲಿ ಕೂತು ಒಟಬಟಗುಟ್ಟುತ್ತವೆ. ಇಂದು ಕಾಂಗ್ರೆಸ್ಸಿನ ಸ್ಥಿತಿಯೂ ಹಾಗೆಯೇ ಆಗಿದೆ. ನಿನ್ನೆಯ ನರಿಗಳೆಲ್ಲಾ ಇಂದು ಲೀಡರ್‌ಗಳಾಗಿದ್ದಾರೆ.)

ಹೇ ಜೋಗೀಡಾ ತಾಳ ತಪ್ಪದಿರಲಿ. ಢೋಲಕ್ ಮೇಲೆ ತೀನತಾಳವನ್ನು ನುಡಿಸು. ಚರಖಾದಲ್ಲಿ ದಾರ ತೆಗಿ, ಖದ್ದರ್ ಧರಿಸು, ಕೈಯ್ಯಲ್ಲೊಂದು ಜೋಳಿಗೆ ಇರಲಿ. ಬಾಯಲ್ಲಿ ಸ್ವರಾಜ್ಯ ಮಂತ್ರವನ್ನು ಜಪಿಸುತ್ತಾ ಹಾಡು ಹಗಲೇ ಲೂಟಿ ಮಾಡು.

'ಜೋಗೀಡಾ' ಮಾತ್ರವಲ್ಲದೆ ನುಹಂತ ಹೊಸ ಹೋಲಿ ಗೀತೆಯೊಂದನ್ನು ರಚಿಸಿದ್ದಾನೆ. ಮಾರ್ಗ ಗಮನ ಹೋಲಿ....ರಸ್ತೆಯಲ್ಲಿ ಹೋಗುವಾಗ ಹೇಳುವ ಹಾಡು.

ಆಯಿರೇ ಹೋಲಿಯಾ ಆಯಿ ಫಿರ್ ಸೇ.
ಆಯೀ ರೇ
ಗಾವತ್ ಗಾಂಧೀ ರಾಗ ಮನೋಹರ್
ಚರಖಾ ಚಲಾಬೆ ಬಾಬೂ ರಾಜೇಂದರ್
ಗೂಂಜಲ್ ಭಾರತ ಅಮಹಾಯೀ ರೇ
ಹೋಲಿಯಾ ಆಯೀ ಫಿರ್ ಸೇ
ವೀರ ಜವಾಹಿರ್ ಶಾನ್ ಹಮಾರೋ,
ವಲ್ಲಭ ಹೈ ಅಭಿಮಾನ ಹಮಾರೋ
ಜಯಪ್ರಕಾಶ ಜೈಸೋ ಭಯೀ ರೇ
ಹೋಲಿಯಾ ಆಯೀ ಫಿರ್ ಸೇ
ಹೋಲೀ ಹೋಲೀ ಹೋಲೀ

(ಮತ್ತೆ ಹೋಲಿ ಬಂದಿದೆ. ಗಾಂಧಿಯ ಮನೋಹರ ರಾಗವನ್ನು ಆಲಾಪಿಸಿ ಬಾಬೂರಾಜೇಂದ್ರರ ಚರಖಾ ತಿರುಗಿಸು. ಭಾರತಮಾತೆಯ ಜಯಕಾರ ಪ್ರತಿಧ್ವನಿಸಲಿ. ಮತ್ತೆ ಹೋಲಿ ಬಂದಿದೆ. ವೀರ ಜವಾಹರರು ನಮ್ಮ ಹೆಮ್ಮೆಯ ನಾಯಕರು. ವಲ್ಲಭಾಯಿಪಟೇಲರು ನಮ್ಮ ಅಭಿಮಾನಕ್ಕೆ ಪಾತ್ರರು. ಜೈಪ್ರಕಾಶರು ಹಿರಿಯಣ್ಣನ ಹಾಗೆ. ಮತ್ತೆ ಹೋಲಿ ಬಂದಿದೆ.)

ಕೋಯರೀ ಪಂಗಡದ ವೃದ್ಧ ಕಲರೂಮಹತೋ ಹೇಳುತ್ತಾನೆ. "ಡಾಕ್ಟರ್ ಬಾಬೂ, ಈಗಿನ ಜನ ಏನು ಹೋಲಿ ಆಡ್ತಾರೆ ಹೇಳಿ. ಆ ಕಾಲ ಆಗಿಹೋಯ್ತು. ಒಂದು ಕಾಲದಲ್ಲಿ ಹಳ್ಳಿಯ ವೃದ್ಧರನ್ನು ಬಟ್ಟೆ ಬಿಚ್ಚಿ ಕುಣಿಸುತ್ತಿದ್ದರು. ಒಂದು ಸಲ ರಾಜ್ಯದ ಮ್ಯಾನೇಜರ್ ಜಾನ್‌ಸೇನನ ಜೊತೆ ಮೂರು ನಾಲ್ಕು ಜನ ಕೆಂಪು ಸಾಹೇಬರು ಬಂದಿದ್ದರು. ಕರಿಯ ಪೆಟ್ಟಿಗೇಲಿ ಮುಖ ಮುಚ್ಕೊಂಡು ನೋಡ್ತಾ ಇದ್ದರು. ಆಮೇಲೆ ಅವರ ಅಡಿಗೆಯವನಿಂದ ಗೊತ್ತಾಯ್ತು: ವಿಲಾಯತಿಯ ಗೆಜೆಟ್ಟಿನಲ್ಲಿ ಅದನ್ನು ಅಚ್ಚು ಮಾಡಿದರಂತೆ ಬರಿಯ ಮೈಲಿ ಕುಣಿಸಿದ್ದು...."

ಕಾಮರೇಡ್ ವಾಸುದೇವ 'ಭಡೋವಾ' (ಜಾನಪದ ಗೀತೆ) ಗೀತೆ ಹಾಡುವುದಕ್ಕೆ ಮುಂಚೆ ಹೇಳಿದ:

ಈಗೊಂದು ಹೊಸ 'ಭಡೌವಾ' ಹಾಡೋಣ. ಪೂರಾ ಹೊಸ ಹಾಡು. ಜರ್ಮನರದ್ದು

ಧಾಕ್ ಧಿನ್ನಾ, ಶಾಕ್ ಧಿನ್ನಾ
ಅರೆ ಹೋ ಬುಡಬಕ್ ಬಭನಾ, ಅರೆ ಹೋ ಬುಡ್‌ಬಕ್ ಬಭನಾ.
ಚುಮ್ಮಾ ಲೇವೇ ಮೇಂ ಜಾತ್ ನಹೀಂ ರೇ ಜಾಯೆ,

ಸುಕತಿ ಮಲುನಿಯಾಂ ಲಾಯೆ ಡೋಮನಿಯಾಂ,
ಮಾಂಗೆ ಪಿಯಾಸ್ ಸೆ ಪನಿಯಾಂ.
ಕು ಆಂ ಕೆ ಪಾನೀ ನ ಪಾಯೆ ಬೆಚಾರೀ
ಪಾಡಲ್ ಕಮಲಾ ಕೆ ಕಿನರಿಯಾಂ,
ಸೋಹೀ ಡೊಮನಿಯಾಂ ಜಬ್ ಬನಲೀ ನಟಿನಿಯಾಂ
ಆಂಖೀ ಕೆ ಮಾರೆ ಪಿಪನಿಯಾಂ
ತೀಕರೆ ಖಾತಿರ ಪಾಡಲೇ ಬಾಡಹವಾ,
ಛೋಡಕೆ ಘರ ಮೋಂ ಬಭನಿಯಾ
ಜೋಲಹಾ ಧುನಿಯಾಂ ತೇಲೀ ತೇಲನಿಯಾಂಕೆ
ಪೀಯೆ ನ ಛುಅಲ ಪನಿಯಾಂ
ನಟಿನೀ ಕೆ ಜೋಬನಾ ಕೆ ಗಂಗಾ ಜಮುನುವಾಯೇ
ಡುಬಕೀ ಲಗಾಕೆ ನಹನಿಯಾಂ.
ದಿನ ಭರ್ ಪೂಜಾ ಪರ್ ಆಸನ್ ಲಗಾ ಕೆ
ಪೋಥೋ ಪುರಾನ್ ಬಂಚಸಿಯಾ
ರಾತ್ ಕೆ ತತಮಾಟೋಲೀ ಕೆ ಗಲಿಯಾನ್ ಮೇ,
ಜೋಶಿಜೀ ಪತರಾ ಗನನಿಯಾಂ,
ಛಕುವಾ ಬಭನಾ, ಚುಮ್ಮಾ ಲೇವೆ ಮೇಂ
ಜಾತ್ ನಹೀಂ ರೇ ಜಾಯೆ.

(ಚುಂಬಿಸುವುದರಿಂದ ಜಾತಿಯೇನೂ ಹೋಗುವುದಿಲ್ಲ. ಡೋಮನ ಜಾತಿಯ ಹೆಂಗಸು ಬಾಯಾರಿದ್ದಾಗಲೂ ಅವಳಿಗೆ ಬಾವಿಯ ನೀರು ಸಿಗುವುದಿಲ್ಲ. ಅದೇ ಡೋಮನ ಹೆಂಗಸು ನೃತ್ಯಗಾತಿಯಾಗಿ ಕಣ್ಣು ಹೊಡೆದಳೆಂದರೆ, ಬ್ರಾಹ್ಮಣ, ಮನೆಯ ಹೆಂಡತಿಯನ್ನೂ ಮರೆತು ಅವಳಿಗಾಗಿ ಹುಚ್ಚಾಗುತ್ತಾನೆ. ನೇಯ್ಗೆ ಯವನು ಗಾಣಿಗರ ಮನೆಯಲ್ಲಿ ನೀರು ಕುಡಿಯುವುದಿಲ್ಲ. ಆ ಗಾಣಿಗರವಳು ನಟಿಯಾದಳೆಂದರೆ ಅವಳ ಯೌವ್ವನದ ಗಂಗೆಯಮುನೆಯರಲ್ಲಿ ಅವನು ಮುಳು ಗೇಳುತ್ತಾನೆ. ದಿನವೆಲ್ಲಾ ಪೂಜೆ–ಪಾಠಗಳಲ್ಲಿ ನಿರತರಾಗಿರುವ ಜೋಯಿಸರು, ರಾತ್ರಿಯಾದ ಮೇಲೆ ತತಮ ಪಂಗಡದವರ ಗಲ್ಲಿಯಲ್ಲಿ ಓಡಾಡುತ್ತಾರೆ. ಚುಂಬಿಸು ವುದರಿಂದ ಜಾತಿಯೇನೂ ಹೋಗುವುದಿಲ್ಲ.)

ಯಾರೂ ತಪ್ಪು ತಿಳೀಬಾರದು, ಈವತ್ತು ಹೋಲಿ:

ತಹಸೀಲ್ದಾರರ ಮನೆಯ ಬಾಗಿಲಿಗೆ ಕಾಲಿಟ್ಟ ಕೂಡಲೇ ಮುಖದ ಮೇಲೆ ಗುಲಾಲು ಬಿತ್ತು. ಡಾಕ್ಟರ್ ಕಣ್ಣು ಮುಚ್ಚಿಕೊಂಡರೂ, ತಮ್ಮ ಮೇಲೆ ಬಣ್ಣ ಹಾಕಿದವರು ಯಾರೆಂಬುದು ಅವರಿಗೆ ಅರ್ಥವಾಯಿತು. ಕಮಲಿ:....

ವಸಂತೋತ್ಸವದ ಕಮಲಿ! ಯಾವನೋ ಒಬ್ಬ ಚಿತ್ರಕಾರ, ಯಾವುದೋ ಒಂದು ಪತ್ರಿಕೆಯಲ್ಲಿ ಹಿಂದೆ 'ಮೈಥಿಲಿ' ಎನ್ನುವ ಹೆಸರಿನ ಚಿತ್ರವನ್ನು ಬರೆದಿದ್ದ. ಆ ಚಿತ್ರಕಾರ ಯಾರು ಎಂದು ಡಾಕ್ಟರ್ ಜ್ಞಾಪಿಸಿಕೊಳ್ಳಲು ಪ್ರಯತ್ನಪಟ್ಟರು.

"ಪಾಪ ಡಾಕ್ಟರ ಹತ್ತಿರ ಬಣ್ಣವೂ ಇಲ್ಲ, ಪಿಚಕಾರಿಯೂ ಇಲ್ಲ. ಇದು ಒಂದೇ ಕಡೆಯ ಆಟವಾಯಿತು····ತೆಗೆದುಕೊಳ್ಳಿ ಡಾಕ್ಟರ್, ಬಣ್ಣದ ಪುಡಿ ತೆಗೆದುಕೊಳ್ಳಿ. ಈ ಬಕೀಟಿನಲ್ಲಿ ಬಣ್ಣದ ನೀರಿದೆ."

ತಾಯಿ ಇಂದು ಸಂತೋಷದಿಂದಿದ್ದಳು. ಕಳೆದ ವರ್ಷ ಹೋಲಿಯ ದಿನವೇ ಇವೇ ಅಂಗಳದಲ್ಲಿ ದುಃಖ ಆಚರಿಸಲಾಗುತ್ತಿತ್ತು. ಆದರೆ ಈ ವರ್ಷ ಅವಳ ಮಗಳು ಆನಂದದಿಂದ ಅಂಗಳದಲ್ಲಿ ಕುಣಿದಾಡುತ್ತಿದ್ದಳು····ದೇವರ ದಯೆ!

ಬಡಪಾಯಿ ಡಾಕ್ಟರಿಗೆ ಹೋಲಿ ಆಡುವುದಕ್ಕೂ ಬರುವುದಿಲ್ಲ. ಕೈಯ್ಯಲ್ಲಿ ಬಣ್ಣಹಿಡಿದು ಸುಮ್ಮನೆ ನಿಂತಿದ್ದರು. ಬಣ್ಣ ಎಲ್ಲಿಗೆ ಹಾಕಲಿ ಎಂದು ಯೋಚಿಸುತ್ತಿದ್ದರು.

"ಸ್ವಲ್ಪ ನಿಮ್ಮ ಕೈ ನೀಡಿ."

"ಯಾಕೆ?"

"ಕೈಗೆ ಗುಲಾಲ ಹಾಕ್ತೀನಿ"

"ನೀವೇನು ಹೋಲೀ ಆಡ್ತಿದೀರೋ. ಇಂಜಕ್ಷನ್ ಕೊಡ್ತಿದೀರೋ! ಒಂದು ಚಿಟಕೆ ಗುಲಾಲ್ ಕೈಯ್ಯಲ್ಲಿ ಹಿಡಿದು, ಯಾರದಾದರೂ ಬೈತಲೆಗೆ ಕುಂಕುಮ ಇಡೋರ ಹಾಗೆ ನಿಂತಿದೀರಲ್ಲ."

ಕಮಲ ಕಿಲಕಿಲನೆ ನಕ್ಕಳು. ಆಕರ್ಷಕ ನಗು. ಡಾಕ್ಟರ್ ಈಗ ಹಿಂದಿನಂತೆ ಕಮಲಿಯ ಮಾತನ್ನು ಒಬ್ಬ ರೋಗಿಯ ಮಾತೆಂದು ತಿಳಿದು ನಿಶ್ಚಿಂತೆಯಿಂದಿರುವುದು ಸಾಧ್ಯವಿಲ್ಲ. ಕೊಠಡಿಯಲ್ಲಿ ಲಾಟೀನಿನ ಮಂದ ಪ್ರಕಾಶ ಹರಡಿದೆ. ಎದುರಿಗೆ ನಿಂತು ಕಮಲಿ ನಗುತ್ತಿದ್ದಾಳೆ. ಇಂತಹ ನಗುವನ್ನು ಡಾಕ್ಟರ್ ಎಂದೂ ಕಂಡೇ ಇರಲಿಲ್ಲ. ಆರೋಗ್ಯವಾದ ನಗು—ವಿಕಾರಶೂನ್ಯವಾದ ನಗು. ಕಮಲಿಯ ಅಂಗ ಅಂಗವೂ ನಗುತ್ತಿರುವಂತೆ ತೋರುತ್ತಿತ್ತು. ಡಾಕ್ಟರಿಗೆ ತಮ್ಮ ಹೃದಯದ ಬಡಿತ ಸ್ಪಷ್ಟವಾಗಿ ಕೇಳುತ್ತಿತ್ತು. ಅವರ ಹಣೆಯ ಮೇಲೆ ಇಂದೂ ಬೆವರಿನ ಹನಿಗಳು ಮೂಡಿಸಿಂತವು. ಎದುರಿಗೆ ಗೋಡೆಯ ಮೇಲೆ ಒಂದು ದೊಡ್ಡ ಕನ್ನಡಿ ಇತ್ತು. ಕನ್ನಡಿಯಲ್ಲಿ ಆ ಬೆವರಿನ ಹನಿಗಳು

ವರನ ಹಣೆಯ ಮೇಲಿನ ಚಂದನದ ಚಿಕ್ಕ ಚಿಕ್ಕ ಬಿಂದುಗಳಂತೆ ಕಂಡವು.... ಡಾಕ್ಟರಿಗೆ ಭವಭೂತಿಯ 'ಮಾಧವ-ಮಾಲತಿಯು' ನೆನಪು ಬಂದಿತು. ಹೋಲಿಯನ್ನು ಮೊದಲು ಕರೆಯುತ್ತಿದ್ದುದು ವಸಂತೋತ್ಸವ ಎಂದೇ? ಆಗ ಮಾವಿನ ಚಿಗುರುಗಳಿಂದ ಮದನನ ಪೂಜೆ ಮಾಡುತ್ತಿದ್ದರು. ಇದೇ ಮದ ನೋತ್ಸವದ ದಿನದಂದು ಮಾಧವ-ಮಾಲತಿಯರ ನಾಲ್ಕು ಕಣ್ಣುಗಳೂ ಒಂದಾ ಗಿದ್ದವು. ಇಬ್ಬರೂ ಪರಸ್ಪರ ಪ್ರೇಮದಲ್ಲಿ ಬಂಧಿತರಾಗಿದ್ದರು. ರಾಧೆ ಶ್ಯಾಮರೂ ಹೋಲಿಯನ್ನಾಡಿದ್ದರು.

ಡಾಕ್ಟರ್ ಕೈಯ್ಯಲ್ಲಿದ್ದ ಬಣ್ಣದ ಪುಡಿಯನ್ನೆಲ್ಲಾ ಕಮಲಿಯ ತಲೆಯ ಮೇಲೆ ಚೆಲ್ಲಿದರು. ತಲೆಯ ಮೇಲೆಲ್ಲಾ ಕೆಂಪು ಬಣ್ಣ ಹರಡಿಕೊಂಡಿತು ....ಮುಖದ ಮೇಲೆ, ಕೆನ್ನೆಯ ಮೇಲೆ, ಮೂಗಿನ ಮೇಲೆ ಕೆಂಪು: ....ಕುಂಕುಮವನ್ನು ಇಡುವಾಗ ಮೂಗಿನ ಮೇಲೆ ಕುಂಕುಮ ಬಿದ್ದರೆ, ಆ ಹುಡುಗಿ ತನ್ನ ಪತಿಗೆ ತುಂಬಾ ಪ್ರಿಯಳಾಗುತ್ತಾಳಂತೆ....

> ಐಸೀ ಮಚಾಯೋ ಹೋರೀ ಹೋ,
> ಕನಕ ಭವನ ಮೇಂ ಶ್ಯಾಮ ಮಚಾಯೋ ಹೋರೀ

(ತನ್ನ ಚಿನ್ನದ ಭವನದಲ್ಲಿ ಶ್ಯಾಮಸುಂದರ ಕೃಷ್ಣ ಆಚರಿಸಿದ ಹಾಗೆ ಹೋಲಿಯನ್ನಾಚರಿಸಿಯಾಯಿತು)

## 25

ಕೆಲವು ದಿನಗಳಿಂದ ಬಾವನದಾಸ ಉದಾಸೀನನಾಗಿದ್ದ.

"ದಾಸ್‌ಜೀ, ಚುನ್ನೀ ಗೋಸಾಯಿಯ ಸಮಾಚಾರವೇನು?"

ರಾತ್ರಿ ಮಲಗುವ ಸಮಯದಲ್ಲಿ ಬಾಲದೇವ ಬಾವನದಾಸನನ್ನು ಪ್ರಶ್ನಿಸಿದ:

"ಚುನ್ನೀ ಗೋಸಾಯಿ ಸೋಷಲಿಸ್ಟ್ ಪಾರ್ಟಿಗೆ ಸೇರಿಬಿಟ್ಟ." ಬಾಲದೇವ ಆಶ್ಚರ್ಯದಿಂದ ಬಾಯಿಬಿಟ್ಟುಕೊಂಡು ಕುಳಿತುಬಿಟ್ಟ.

"ಬಾಲದೇವ ಇದರಲ್ಲಿ ಆಶ್ಚರ್ಯವೇನು ಬಂತು? ದೇವರು ಮಾಡೋದೆಲ್ಲಾ ಒಳ್ಳೇದಕ್ಕೇ."

"ದಾಸ್ ಜೀ ಜ್ಞಾಪಕ ಇದ್ಯೇನು? ಚನ್ನಪಟ್ಟಿಯ ಸಭೆಯಲ್ಲಿ ತಿವಾರಿಯವರ ಭಾಷಣ, ತನುಕಲಾಲ ಗೀತೆ. ಜ್ಞಾಪಿಸಿಕೊಂಡರೆ ಈಗಲೂ ರೋಮಾಂಚನವಾಗುತ್ತೆ.

"....ಗಂಗಾ ರೇ ಜಮುನುವಾಂ ಕೀ ಧಾರ್...."

(ಗಂಗಾ ಯಮುನೆಯರ ಪ್ರವಾಹ....)

"ಆದರೆ ಭಾರತಮಾತೆ ಈಗಲೂ ಅಳ್ತಾನೇ ಇದಾಳೆ ಬಾಲದೇವ್."

ಬಾವನದಾಸನಿಗೆ ನಿದ್ರೆ ಬರಲಾರಂಭವಾಗಿತ್ತು. ಬಾಲದೇವ ಚಕಿತನಾದ. ಭಾರತಮಾತೆ ಈಗಲೂ ಅಳುತ್ತಿದ್ದಾಳೆಯೇ?....ಬಾವನದಾಸ ಇದೇನು ಹೇಳುತ್ತಿದ್ದಾನೆ?

ಬಾವನದಾಸ ಮಗ್ಗುಲಿಗೆ ಹೊರಳಿ ಹೇಳಿದ :

"ವಿಲಾಯತಿ ಬಟ್ಟೆಗಳ ಬಹಿಷ್ಕಾರದ ಸಮಯದಲ್ಲಿ ಪಿಕೆಟಿಂಗ್ ಮಾಡುತ್ತಿದ್ದಾಗ, ಜಾನಮಲ್ ಸಾಗರಮಲ್‌ನ ಗೋಡೌನಿನ ಮುಂದೆ ಪಿಕೆಟಿಂಗ್ ಮಾಡ್ತಿದ್ದಾಗ ಒಂದಿನ ಏನಾಯಿತು ಜ್ಞಾಪಕ ಇದೆಯೆ? ಜಾನಮಲ್ ಮಾರ್ವಾಡಿಯ ಮಗ ಸಾಗರಮಲ್ಲ ತನ್ನ ಕೈಯ್ಯಿಂದಲೇ ಸ್ವಯಂಸೇವಕರನ್ನೆಲ್ಲಾ ಹೊಡೆದಿದ್ದ. ಜೈಲಿನಲ್ಲಿ ಸ್ವಯಂಸೇವಕರನ್ನು ಬಂಧಿಸಿಡಲು ಸರ್ಕಾರಕ್ಕೆ ಆಗುವ ವೆಚ್ಚವನ್ನೂ ತಾನೇ ವಹಿಸಿಕೊಂಡಿದ್ದ. ಅದೇ ಸಾಗರಮಲ್ಲ ಇಂದು ನರಪತಿ ನಗರದ ಕಾಂಗ್ರೆಸ್ ವಿಭಾಗದ ಅಧ್ಯಕ್ಷ! ಇನ್ನೂ ಕೇಳ್ತಿಯೇನು?....ದುಲಾರ್ ಚಂದ ಕಾಪರಾ ನಿನಗೆ ಗೊತ್ತಲ್ಲಾ? ಅವನೇ ಜೂಜಿನ ಕಂಪನಿಯವನು, ಒಂದು ಬಾರಿ ನೇಪಾಳಿ ಹುಡುಗಿಯರನ್ನು ಓಡಿಸಿಕೊಂಡು ಬರುತ್ತಿದ್ದಾಗ ಜೋಗಬನದಲ್ಲಿ ಸಿಕ್ಕಿಹಾಕಿಕೊಂಡಿದ್ದನಲ್ಲಾ....ಅವನೀಗ ಕಟಹಾ ವಿಭಾಗದ ಕಾರ್ಯದರ್ಶಿ! ....ಭಾರತಮಾತೆ ಈಗ ಮೊದಲಿಗಿಂತ ಹೆಚ್ಚಾಗಿ ಅಳುತ್ತಿದ್ದಾಳೆ!"

ಬಾಲದೇವನ ಆಶ್ಚರ್ಯಕ್ಕೆ ಮಿತಿಯಿರಲಿಲ್ಲ. ಅವನಿಗೆ ಬಾವನದಾಸನೊಡನೆ ಚರ್ಚೆ ಮಾಡಬೇಕೆನಿಸಿತು....ಆದರೆ ಅಷ್ಟರಲ್ಲಿ ಬಾವನದಾಸ ಗೊರಕೆ ಹೊಡೆಯಲಾರಂಭಿಸಿದ್ದ.... ಬಾಲದೇವನಿಗೆ ಏನೂ ಅರ್ಥವಾಗಲಿಲ್ಲ,.... 'ಭಾರತಮಾತೆ ಈಗ ಮೊದಲಿಗಿಂತ ಇನ್ನೂ ಹೆಚ್ಚು ಅಳುತ್ತಿದ್ದಾಳೆ!'

ಬಾವನದಾಸ, ಚುನ್ನಿ ಗೋಸಾಯಿ ಮತ್ತು ಬಾಲದೇವ ಮೂರು ಜನರೂ ಒಂದೇ ದಿನ ಈ ಪ್ರಪಂಚದ ಮಾಯಾ ಮೋಹವನ್ನು ತ್ಯಜಿಸಿ ಚಳವಳಿಯಲ್ಲಿ ಧುಮುಕಿದ್ದರು.

ಚುನ್ನೀ ಗೋಸಾಯಿ ಆಗಲೇ ಗೃಹಸ್ಥನಾಗಿದ್ದ. ನಾಲ್ಕು ಬೀಘ ಜಮೀನು, ನಾಲ್ಕಾರು ಮಾವು, ಹಲಸಿನ ಮರಗಳು, ಒಂದು ಹಸು ಮತ್ತು ಎರಡು ಚಿಕ್ಕ ಚಿಕ್ಕ ಮಕ್ಕಳ ಏಕಮಾತ್ರ ಯಜಮಾನನಾಗಿದ್ದ. ಧರ್ಮಭೀರು. ಚನ್ನಪಟ್ಟಿಯಲ್ಲಿ ಸಭೆ ನೋಡಲೆಂದು ಹೋದ. ತಿವಾರಿ ಭಾಷಣ ಕೊಡುತ್ತಿದ್ದರು. ತನುಕಲಾಲ ಗೀತೆಗಳನ್ನು ಹಾಡಿದ. ಎಲ್ಲರ ಕಣ್ಣಲ್ಲೂ ನೀರು. ಚುನ್ನೀದಾಸನ ಮನಸ್ಸಿನ ಕೊಳೆಯೆಲ್ಲಾ ಕಣ್ಣೀರಿನ ರೂಪದಲ್ಲಿ ಹರಿದುಹೋಯಿತು. ಅದೇ ದಿನ ಚಳವಳಿಗಾರರ ಪಟ್ಟಿಯಲ್ಲಿ ತನ್ನ ಹೆಸರನ್ನು ಸೇರಿಸಿದ್ದ. ಚರಖಾ–ತಕಲಿ, ಬಾವುಟ–ತ್ರಿವರ್ಣ ಧ್ವಜ, ಮತ್ತು ಖದ್ದರನ್ನು ಬಿಟ್ಟರೆ ಮಿಕ್ಕದ್ದೆಲ್ಲಾ ಅಸತ್ಯ, 'ಸ್ವದೇಶಿ ಪುರಸ್ಕಾರ, ವಿದೇಶಿ ಬಾಯ್‌ಕಾಟ್'.

> ಅರೆ ದೇಸವಾಕೆ ಸಬಧನಧಾನ್ ವಿದೇಸವಾಮೇಂ ಜಾಯೆ ರಹೆ.
> ಮಹಂಗೀ ಪಡತ ಹರಗಾಲ ಕೃಸಕ್ ಆಕುಲಾಯ ರಹೆ.

(ದೇಶದ ಧನ–ಧಾನ್ಯಗಳೆಲ್ಲಾ ವಿದೇಶಕ್ಕೆ ಹೋಗುತ್ತಿದೆ. ಸಾಮಾನುಗಳ ಬೆಲೆ ಹೆಚ್ಚಿದೆ. ಕೃಷಿಕ ದುಃಖಿಸುತ್ತಿದ್ದಾನೆ.) ಗಾಂಧಿಜಿಯೇ ರಕ್ಷಿಸಬೇಕು ····ಒಂಟಿಯಾಗಿ ಅವರು ತಾನೇ ಏನು ಮಾಡಬಲ್ಲರು? ದೇಶದ ಪ್ರತಿಯೊಬ್ಬ ಮನುಷ್ಯನ ಕರ್ತವ್ಯ....

> ಕಾಕರೇಂ ಗಾಂಧೀಜೀ ಅಕೇಲೇ, ತಿಲಕ ಪರಲೋಕ ಬಸೆ
> ಕವನ ಸರೋಜಿನೀ ಕೆ ಆಸ್ ಅಬಹಿಂ ಪರದೇಶ ರಹೀ

(ಗಾಂಧೀಜಿಯವರೊಬ್ಬರೇ ಏನು ಮಾಡುತ್ತಾರೆ? ತಿಲಕರು ಸ್ವರ್ಗವಾಸಿಯಾದರು. ಸರೋಜಿನಿಯವರ ಆಸೆ ಪರದೇಶದಲ್ಲಿ ಕೇಂದ್ರಿತವಾಗಿದೆ.)

ಗಾಂಧೀಜಿಯವರೇ ರಕ್ಷಿಸಬೇಕು. ಚುನ್ನೀಲಾಲನಿಗೂ ಆಶ್ರಯಕೊಡು ತಂದೆ····ವಿದೇಶಿ ಬಟ್ಟೆಗಳಿಗೆ ಬಾಯ್‌ಕಾಟ್····ಉಪ್ಪಿನ ಸತ್ಯಾಗ್ರಹ ····ಜೈಲು····ಅಫೀಮು, ಹೆಂಡ ಬಿಟ್ಟುಬಿಡಿ ಪ್ರೀತಿಯ ಸೋದರರೇ···· ಜೈಲು, ವೈಯಕ್ತಿಕ ಸತ್ಯಾಗ್ರಹ····ಜೈಲು 1942—ಜೈಲು····ಎಲ್ಲಾ ಒಟ್ಟು ಹತ್ತು ಬಾರಿ ಜೈಲು ಯಾತ್ರೆ ಮಾಡಿ ಬಂದಿದ್ದಾನೆ. ಚುನ್ನೀ ಗೋಸಾಯಿ ಅವನೀಗ ಸೋಷಲಿಸ್ಟ್ ಪಾರ್ಟಿಗೆ ಸೇರಿಬಿಟ್ಟನೇ? ಇನ್ನು ಬಾವನದಾಸ.

ಪೂರ್ವಜನ್ಮದ ಫಲವೋ, ಸೃಷ್ಟಿಕರ್ತನ ಲೀಲೆಯೋ, ಪ್ರಕೃತಿಯ ವಂಚನೆಯೋ ಅಥವಾ ಥಾಯರಾಯಿಡ್, ಥಾಯಮಸ್ ಮತ್ತು ಪ್ಯುಟಿಟರೀ ಗ್ರಂಥಗಳ ಅಸ್ತವ್ಯಸ್ತತೆಯೇ? ಮೂರಡಿ ಎತ್ತರ, ಕಪ್ಪು ಬಣ್ಣ, ದಪ್ಪ ತುಟಿ, ಆಶ್ಚರ್ಯ ಹುಟ್ಟಿಸುವ ಗಡ್ಡ, ಗಾಬರಿ ಹುಟ್ಟಿಸುವ ದಪ್ಪ ಒರಟು ಧ್ವನಿ. ಎತ್ತರಕ್ಕೆ ಹೋಲಿಸಿದರೆ ಧ್ವನಿ ಹತ್ತರಷ್ಟು ಭಾರಿ! ಉರುಳುತ್ತಿರುವಂತೆ ಕಾಣುವ ನಡಿಗೆ. ಅಜ್ಞಾತ ಕುಲಶೀಲಗಳು. ಜನ್ಮಜಾತ ಸಾಧು ಪ್ರವೃತ್ತಿ, ಅವನು ಹೋದ ಕಡೆಗಳಲ್ಲೆಲ್ಲಾ ಜನರ ದೃಷ್ಟಿ ಅವನಲ್ಲೇ ನೆಟ್ಟಿರುತ್ತದೆ. ವಿಚಿತ್ರವಾದ ನಗು—ಮುಗುಳ್ನಗೆ. ಅವನ ಹಿಂದೆ ಮಕ್ಕಳ ಗುಂಪು, ವಿನೋದ. ನಾಯಿಗಳು ಬಗುಳುತ್ತವೆ, ಮನುಷ್ಯರು ನಗುತ್ತಾರೆ. ಗರ್ಭಿಣಿ ಹೆಂಗಸರು ಅವಿತಿಟ್ಟುಕೊಳ್ಳುತ್ತಾರೆ. ಇಲ್ಲದಿದ್ದರೆ ಬೇರೆಯವರು ಅವರನ್ನು ಹಾಗೆ ಒತ್ತಾಯಪಡಿಸುತ್ತಾರೆ. ದೇವರು ಅವನನ್ನು ಜೀವಂತ ವಿನೋದದ ವಸ್ತುವನ್ನಾಗಿಯೇ ಮಾಡಿ ಕಳುಹಿಸಿರುವಾಗ, ಜನ ಅವನನ್ನು ನೋಡಿ ಆನಂದಪಡುವಾಗ, ಅದಕ್ಕಾಗಿ ಏಕೆ ಹಣ ಕೇಳಬಾರದು? ....'ಏನಾದರೂ ತಿನ್ನೋದಕ್ಕೆ ಕೊಡಿ ತಾಯೀ, ದೇವರು ನಿಮಗೆ ಒಳ್ಳೇದು ಮಾಡ್ತಾನೆ. ಸೀತಾರಾಂ ಸೀತಾರಾಂ'.

ಚನ್ನಪಟ್ಟಿಯ ಆ ಸಭೆಯಲ್ಲಿ ನಡೆದ ತಿವಾರಿಯವರ ಭಾಷಣ ಮತ್ತು ತನುಕಲಾಲನ ಗೀತೆಗಳು ಈ ಮೂರಡಿ ಮನುಷ್ಯನ ಹೃದಯವನ್ನು ಅಲ್ಲಾಡಿಸಿಬಿಟ್ಟಿತು,....ಹಿಂದಿನ ಜನ್ಮದಲ್ಲಿ ಯಾವ ಪಾಪ ಮಾಡಿ ಈಗ ಅನುಭವಿಸುತ್ತಿದ್ದೇನೋ? ಈ ಶರೀರದಿಂದ ಆಗುವುದಾದರೂ ಏನು? ಗಾಂಧಿಜೀ ಚರಣಗಳಿಗೆ ಇದನ್ನು ಅರ್ಪಿಸಿಬಿಡು. ಭಾರತ ಮಾತೆಗಾಗಿ ಹೋರಾಡು.

ಅರೆ ದೇಸವಾ ಕೆ ಖಾತಿರ್ ಮಜಹರುಲಹಕ್  
ಭಯಿಲೈ ಫಕಿರವಾ ಸೇ.  
ದೀನ ಭಯಿಲೈ ರಾಜೇಂದ್ರ ಪ್ರಸಾದ ದೇನವಾಸಿಯೋ

(ದೇಶಕ್ಕೋಸ್ಕರ ಮಜಹರುಲಹಕರು ಫಕೀರರಾದರು. ರಾಜೇಂದ್ರಪ್ರಸಾದರು ಬಡವರಾದರು.)

ಅಲ್ಲದೆ ಅವನಂತೂ ಫಕೀರನೇ....ಚುನ್ನೀ ಗೋಸಾಯಿಯೂ ಹೆಸರು ಬರೆಸಿದನೇನು? ನನ್ನ ಹೆಸರನ್ನೂ ಬರೆಸಿಬಿಡಬೇಕು. ರಾಮಕಿಶನಬಾಬುವಿನ ಹೆಂಡತಿ ಅವನನ್ನು ನೋಡಿದಕೂಡಲೇ ಕೂಗಿಕೊಂಡಿದ್ದಳು: "ಭಗವಂತ, ವಾಮನ ಭಗವಂತ"—ಪೂರ್ಣಿಯಾಗೆ ಬರುವಂತೆ ಅವನಿಗೆ ಆಹ್ವಾನ ನೀಡಿದ್ದಳು.

ಸೀತಾರಾಮ್! ಸೀತಾರಾವ್! ವಂದೇ ಮಾತರಂ!

ಜಿಲ್ಲೆಯ ರಾಜಕಾರಣದ ಜನಕನೆನ್ನಿಸಿಕೊಂಡಿದ್ದ ರಾಜಕಿಸನನ ಬಂಗಲೆಗೆ ಅವನು ಬಂದಾಗ, ಅವರ ಮನೆಯ ಮುಂದೆ ಪೋಲೀಸ್ ಲಾರಿ ನಿಂತಿತ್ತು. ಪೋಲೀಸ್ ಇನ್ಸ್‌ಪೆಕ್ಟರ್ ಕಾಯುತ್ತಿದ್ದ. ರಾಮಕಿಶನ್‌ಬಾಬು ತಮ್ಮ ಆಭಾರಾಣಿಗೆ ಏನೋ ಸೂಚನೆ ಕೊಡುತ್ತಿರಬಹುದು.

ವಂದೇ ಮಾತರಂ! ವಂದೇ ಮಾತರಂ!

"ನೀವು ಹೋಗಿಬನ್ನಿ, ಯಾರನ್ನಾದರೂ ಕಳುಹಿಸಿ. ನೀವು ಯೋಚಿಸ ಬೇಡಿ"

ಆಭಾರಾಣಿಯ ಕಣ್ಣುಗಳು ಆನಂದದಿಂದ ಹೊಳೆಯುತ್ತಿದ್ದವು.

ಆಭಾರಾಣಿ ಬಾವನದಾಸನನ್ನು 'ಭಗವಾನ್' ಎಂದೇ ಸದಾ ಕರೆಯು ತ್ತಿದ್ದಳು.

ಕೆಲವು ದಿನಗಳಲ್ಲಿ ಆಭಾರಾಣಿಯೂ ಸೆರೆಸಿಕ್ಕಿದಳು. ಬಾವನದಾಸನೂ ಸಿಕ್ಕಿಹಾಕಿಕೊಂಡ. ಪೋಲೀಸಿನವರು ಒಂದೆರಡು ಏಟು ಕೊಟ್ಟು ಅವನನ್ನು ಬಿಡಿಸಬೇಕೆಂದು ಪ್ರಯತ್ನಪಟ್ಟರು. ಆದರೆ ಅವನನ್ನು ಹೊಡೆಯಬೇಕೆಂದು ಎತ್ತಿದ್ದ ದೊಣ್ಣೆಯ ಪೆಟ್ಟನ್ನು ಆಭಾರಾಣಿ ಅಡ್ಡಬಂದು ತಾನೇ ಅನುಭವಿಸಿದಳು. ಪೋಲೀಸಿನವರ ಕಾಲುಕೆಳಗಿನ ಭೂಮಿಯೇ ಕುಸಿದಂತಾಯಿತು. 'ನಮ್ಮ ಭಗವಾನ' ನನ್ನು ಹೊಡೆಯಬೇಡಿ. ರಕ್ತದಲ್ಲಿ ಅದ್ದಿದ್ದ ಬಿಳಿ ಖಾದೀ ಸೀರೆ, ಕಲ್ಲನ್ನು ಕರಗಿ ಸುವ ಕರುಣೆಯಿಂದ ತುಂಬಿದ್ದ ಆ ಮಾತುಗಳು. 'ನಮ್ಮ ಭಗವಾನ್' ಬಾವನನ ಪೂರ್ವಜನ್ಮದ ಪಾಪವೆಲ್ಲಾ ಒಮ್ಮೆಲೇ ಪುಣ್ಯದ ರೂಪ ತಾಳಿದಂತೆ ಭಾಸ ವಾಯಿತು. ಒಣಗಿದ ಕೊಂಬೆಯಲ್ಲಿ ಹೊಸ ಚಿಗುರು ಕಾಣಿಸಿಕೊಂಡಿತು.... ಅವನು ಗಟ್ಟಿಯಾಗಿ ಕೂಗಿಕೊಂಡಿದ್ದ: "ಅಮ್ಮಾ".

ಅಮ್ಮಾ. ಮಹಾತ್ಮ ಗಾಂಧಿಜಿಯವರೂ ಆಭಾರಾಣಿಯನ್ನು 'ಅಮ್ಮಾ' ಎಂದೇ ಕರೆಯುತ್ತಿದ್ದರು. 1934 ರಲ್ಲಿ ಭೂಕಂಪ ಪೀಡಿತ ಕ್ಷೇತ್ರಗಳನ್ನು ನೋಡಲು ಬಂದಿದ್ದಾಗ, ತಮ್ಮೊಡನೆ ರಾಮಕಿಶನಬಾಬು ಮತ್ತು ಆಭಾರಾಣಿ ಯನ್ನು ಕರೆತಂದಿದ್ದರು. ಬಾವನದಾಸನಿಲ್ಲದೆ ಆಭಾರಾಣಿ ಒಂದು ಹೆಜ್ಜೆಯನ್ನೂ ಇಡುತ್ತಿರಲಿಲ್ಲ. ಗಾಂಧೀಜಿ ನಕ್ಕು ಹೇಳಿದರು:

"ಅಮ್ಮಾ, ನಿನ್ನ ಭಗವಾನನನ್ನು ಕಂಡರೆ ನನಗೆ ಅಸೂಯೆಯಾಗುತ್ತದೆ." ಹಲ್ಲಿಲ್ಲದ, ಬಚ್ಚು ಬಾಯಿನ ಆ ಪವಿತ್ರ ನಗು. ಮಕ್ಕಳ ನಗುವಿನ ಹಾಗೆ!

ಫೂಲ್‌ಕಾಹಾ ಪೇಟ್, ಲಕ್ಷಾಂತರ ಜನ, ಎತ್ತರವಾದ ವೇದಿಕೆ.... "ಮಹಾತ್ಮಾ ಗಾಂಧೀಕೀ ಜೈ....." ಧ್ವನಿಯಿಂದ ಆಕಾಶವೇ ಅಲ್ಲಾಡುತ್ತಿರುವಂತೆ ಭಾಸವಾಗುತ್ತಿತ್ತು....ಜೈ....ಮತ್ತೆ ಆಕಾಶ ಕಂಪಿಸಿತು,.... ಪುಷ್ಪವೃಷ್ಟಿ....ಚರಣ ಧೂಲಿ....ಸೀಟಿ—ಸ್ವಯಂಸೇವಕರು....ಕಾರ್ಡನ್ ಹಾಕಿ....ಮುತ್ತಿಗೆ ಮುತ್ತಿಗೆ.

ಮುಂದೆ ರಾಮಕಿಶನಬಾಬು, ಆಭಾರಾಣಿಯರ ಭುಜದ ಮೇಲೆ ಕೈಯ್ಯೂರಿ ಗಾಂಧೀಜೀ ವೇದಿಕೆಗೆ ಬರುತ್ತಿದ್ದರು.—ಅವರೇ ಗಾಂಧೀಜೀ......ಜೈ ಜೈ...... ಆಭಾರಾಣಿ ಕೈಹಿಡಿದು ಮತ್ತೆ ಯಾರನ್ನೋ ವೇದಿಕೆಯ ಮೇಲೆ ಹತ್ತಿಸುತ್ತಿದ್ದಾರಲ್ಲಾ. ಯಾರವರು? ಹಾ. ಬಾವನದಾಸ ಕುಳ್ಳ....ಗಾಂಧೀಜೀ ಬೆರಳಿನಿಂದಲೇ ಎಲ್ಲರನ್ನು ಶಾಂತಗೊಳಿಸಿದರು.....ಲಕ್ಷಾಂತರ ಜನರ ಮುಂದೆ ಬಾವನದಾಸ ಕಂಜರಿ ನುಡಿಸಿಕೊಂಡು ಹಾಡಿದ:

"ಏಕ ರಾಮ—ನಾಮ ಘನ ಸಾಂಚಾ ಜಗಮೇಂ, ಕಛು ನ ಬಾಂಛಾ ಹೋ"

(ಈ ಜಗತ್ತಿನಲ್ಲಿ ರಾಮನಾಮವೊಂದೇ ಸತ್ಯವಾದುದು, ಮಿಕ್ಕ ಯಾವುದೂ ವಾಂಛನೀಯವಲ್ಲ.)

ಅವನ ಧ್ವನಿ ದೂರದವರೆಗೆ ಕೇಳುವುದಿಲ್ಲ. ಆದರೆ ಬಾವನದಾಸ ಮೂರಡಿಯ ಆ ಸಾಮಾನ್ಯ ಮನುಷ್ಯ ಇದ್ದಕ್ಕಿದ್ದಂತೆ ಎಷ್ಟು ದೊಡ್ಡವನಾಗಿಬಿಟ್ಟ! ಮಹಾತ್ಮಾ ಗಾಂಧಿ ಭಿಕ್ಷೆ ಬೇಡುತ್ತಿದ್ದಾರೆ. ಹರಿಜನರಿಗಾಗಿ ಏನಾದರೂ ದಾನ ನೀಡಿ. ರೂಪಾಯಿ ಚೀಲ, ಚಿನ್ನದ ಉಂಗುರ, ಚೈನು, ಬಳೆ, ಹಾರ... ಎಂಟಾಣೆ, ನಾಲ್ಕಾಣೆ, ಎರಡಾಣೆ, ಕಲ್ಲಿನ ಚೂರು—ಆದರೆ ಈ ಎಲ್ಲವನ್ನೂ ಕೊಟ್ಟವರೂ ಬಾವನದಾಸನಿಗಿಂತ ದೊಡ್ಡವರಾಗುವುದು ಸಾಧ್ಯವಿಲ್ಲ.

ಬಾವನದಾಸನಿಗೆ ಕುಬೇರನ ಭಂಡಾರವೇ ಸಿಕ್ಕಿದಂತಾಗಿತ್ತು. ಒಣ ಕೊಂಬೆಯಲ್ಲಿ ಚಿಗುರು ಬಿಟ್ಟಿತ್ತು....ಬಾಪೂಜೀ!

1937 ಪಂಡಿತ ಜವಾಹರಲಾಲ್ ನೇಹರೂ ಬಿರುಗಾಳಿಯಂತೆ ಬಂದಿದ್ದರು. ಬಾವನದಾಸನನ್ನು ನೋಡಿ ಆಶ್ಚರ್ಯದ ಮುಖಮುದ್ರೆಯಿಂದ ಸ್ವಲ್ಪ ಹೊತ್ತು ನೋಡುತ್ತಲೇ ಇದ್ದರು. ಅನಂತರ ಹಣೆಯನ್ನು ಸಿಂಡರಿಸಿ, ಮೂಗಿನ ಮೇಲೆ ಬೆರಳಿಟ್ಟು ಗಾಂಗೂಲಿಯವರನ್ನು ಇಂಗ್ಲೀಷಿನಲ್ಲಿ ಪ್ರಶ್ನಿಸಿದ್ದರು:

"ಐ ಕಾಂಟ್ ರಿಮೆಂಬರ್ ದಿ ನೇಮ್ ಆಫ್ ದಟ್ ಬುಕ್"

(ನನಗೆ ಆ ಪುಸ್ತಕದ ಹೆಸರು ನೆನಪಿಗೆ ಬರುತ್ತಿಲ್ಲ).

"ಕಿಂಗ್ ಆಫ್ ದಿ ಗೋಲ್ಡನ್ ರಿವರ್."

—ಗಾಂಗೂಲಿ ಉತ್ತರ ಕೊಟ್ಟರು. ಅನಂತರ ಇಬ್ಬರೂ ಗಟ್ಟಿಯಾಗಿ ನಕ್ಕು ಬಿಟ್ಟರು.

ಈಗ ಬಾವನದಾಸ ಭಜನೆ ಹಾಡುವುದಲ್ಲದೆ ಭಾಷಣ ಕೊಡುವುದನ್ನೂ ಕಲಿತಿದ್ದಾನೆ. ಅವನು ಮಾತನಾಡಲು ಎದ್ದು ನಿಲ್ಲುತ್ತಾನೆ. ಮೈಕ್ ಸ್ಟ್ಯಾಂಡ್ ಸಾಕಷ್ಟು ಉದ್ದವಾಗಿದೆ. ಆಪರೇಟರ್ ಗಾಬರಿಯಾಗಿದ್ದಾನೆ. ಗಡಿಬಿಡಿಯಲ್ಲಿ ಅವನಿಗೆ ಏನು ಮಾಡಲೂ ತೋರುತ್ತಿಲ್ಲ. ಒಂದು ಸಲ ಮೇಲೆ, ಒಂದು ಸಲ ಕೆಳಗೆ ತಿರುಗಿಸುತ್ತಾನೆ. ಆದರೂ ಬಾವನದಾಸನಿಗಿಂತ ಮೈಕ್ ಸ್ಟ್ಯಾಂಡ್ ತುಂಬಾ ಹತ್ತಿರವಾಗಿಯೇ ಇದೆ. ನೆಹರೂ ತುಂಬಾ ಉತ್ಸಾಹದಿಂದ ಮೇಲೆದ್ದು ಮೈಕನ್ನು ಸ್ಟ್ಯಾಂಡಿನಿಂದ ತೆಗೆದು ಕೈಯಲ್ಲೇ ಹಿಡಿದುಕೊಳ್ಳುತ್ತಾರೆ. ಬಗ್ಗಿ ಬಾವನದಾಸನ ಮುಖದ ಹತ್ತಿರ ಹಿಡಿಯುತ್ತಾರೆ. "ಮಾತನಾಡಿ" ಜನ ನಗುತ್ತಾರೆ. ಬಾವನ ಸ್ವಲ್ಪ ಗಾಬರಿಯಾಗುತ್ತಾನೆ. ನೆಹರೂ ನಗುತ್ತಾ ಅವನ ಕೊರಳಿಗೆ ಮಾಲೆ ಹಾಕುತ್ತಾ 'ಮಾತಾಡಿ' ಎನ್ನುತ್ತಾರೆ. ಪ್ರೆಸ್ ರಿಪೋರ್ಟರುಗಳ ಬೆಲೆಬಾಳುವ ಕ್ಯಾಮರಾಗಳು ಒಮ್ಮೆಲೇ 'ಕ್ಲಿಕ್' ಎನ್ನುತ್ತವೆ. 'ನ್ಯಾಷನಲ್ ಹೆರಾಲ್ಡ್'ನ ಮುಖಪುಟದಲ್ಲಿ ದೊಡ್ಡ ಫೋಟೋ ಪ್ರಕಟವಾಗಿದೆ. ಬಾವನದಾಸನ ಕೊರಳಿನಲ್ಲಿ ಹೂ ಮಾಲೆಯಿದೆ. ನೆಹರೂ ಕೈಯ್ಯಲ್ಲಿ ಮೈಕ್ ಹಿಡಿದು ಬಗ್ಗಿ ಮುಗುಳುನಗುತ್ತಿದ್ದಾರೆ. ಫೋಟೋದ ಮೇಲಿನ ಶೀರ್ಷಿಕೆ: "ಮೈಕ್ ಆಪರೇಟರ್ ನೆಹರೂ!"

ಆಗಸ್ಟ್ 1942. ಕಚೇರಿಯ ಮೇಲೆ ದಾಳಿ. ಪೋಲೀಸಿನವರು ಫೈರ್ ಗ್ಯಾಸ್ ಪ್ರಯೋಗಿಸಿದರು. ಜನ ಓಡಲಾರಂಭಿಸಿದರು. ಬಾವನದಾಸ ಕೂಗಿಕೊಂಡ. ಜನ ಹಿಂತಿರುಗಿ ನೋಡಿದರು. ಮೂರಡಿಯ ಮನುಷ್ಯ ಎದೆ ಹಿಗ್ಗಿಸಿ ನಿಂತಿದ್ದಾನೆ....ಬೊಂಬಾಯಿನಿಂದ ಧ್ವನಿ ಬಂತು....ಜನ ಹಿಂತಿರುಗಿದರು.... ಬಾವನದಾಸ ಪೋಲೀಸಿನವರ ಕಾಲುಗಳ ಮಧ್ಯೆ ತೂರಿಕೊಂಡು ಹೋಗಿ ಆ ಭಾಗಕ್ಕೆ ಹೊರಟುಹೋದ. ವಿಜಯೀ ತ್ರಿವರ್ಣ ಧ್ವಜವನ್ನು ಹೆಮ್ಮೆಯಿಂದ ಹಾರಿಸುತ್ತಾನೆ. ....ಮಹಾತ್ಮಾ ಗಾಂಧಿಗೆ ಜಯವಾಗಲಿ!

ಬಾವನದಾಸ ಗಾಂಧೀಜಿಯವರಿಗೆ ಗೊತ್ತು. ನೆಹರೂ ಅವರಿಗೆ ಗೊ. ರಾಜೇಂದ್ರಬಾಬುವೂ ಅವನನ್ನು ಗುರುತಿಸುತ್ತಾರೆ. ಪ್ರಾಂತ್ಯದ ಎಲ್ಲಾ

ನಾಯಕರೂ, ರಾಜಕೀಯ ಕಾರ್ಯಕರ್ತರೂ ಅವನನ್ನು ಬಲ್ಲರು. ಕ್ಯಾಂಪ್ ಜೈಲಿನಲ್ಲಿ ಸೂಪರಿಂಟೆಂಡೆಂಟನ ನೀಚತನದ ವಿರುದ್ಧ ಕೈದಿಗಳು ಸಾಮೂಹಿಕ ಅನಶನ ಆರಂಭಿಸಿದ್ದರು. ಕೊನೆಯವರೆಗೆ ಬಾವನದಾಸ ಮತ್ತು ಚುನ್ನೀ ಗೋಸಾಯಿ ಉಪವಾಸ ಮಾಡುತ್ತಲೇ ಇದ್ದರು. ಇಪ್ಪತ್ತೈದು ದಿನಗಳ ಉಪವಾಸ. ರದರ್ ಫೋರ್ಡ್ ಮತ್ತು ಆಂಚರ್ ಸಾಹೇಬರು ಇವರಿಬ್ಬರನ್ನು ನೋಡಲು ಬಂದರು. ಗಾಂಧೀಜಿಯ ಕಠೋರ ಅಗ್ನಿಪರೀಕ್ಷೆಯಲ್ಲಿ ಸತ್ಯದ, ಸತ್ಯಾಗ್ರಹದ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಬಂದಿದ್ದರು ಈ ಇಬ್ಬರು ಕುರೂಪಿ ಅಸಹ್ಯ ಮನುಷ್ಯರು!

ಚಳವಳಿಗಾರರ ಲಿಸ್ಟಿನಲ್ಲಿ ಹೆಸರು ಬರೆಸಿದ ಮೇಲೆ ಎರಡು ಬಾರಿ ಮಾತ್ರ ಮಾಯೆ ತನ್ನ ಬಲೆಯಲ್ಲಿ ಸಿಕ್ಕಿಸಿಕೊಳ್ಳಲು ಪ್ರಯತ್ನಪಟ್ಟಳು. ಎರಡು ಬಾರಿಯೂ ಅವನು ಚೇತರಿಸಿಕೊಂಡ. ಮೋಹದ ಬಲೆಯಲ್ಲಿ ಜಾರುತ್ತಾ ಜಾರುತ್ತಾ ತಪ್ಪಿಸಿ ಕೊಂಡ....ಮಹಾತ್ಮರ ಕೃಪೆ!

ಒಂದು ಬಾರಿ ರಾಮಕಿಶನ ಬಾಬು ಸಿಮರಬನಿಯಿಂದ ಭಿಕ್ಷೆಯಿಂದ ಬರುವ ಅಕ್ಕಿಯನ್ನು ತರಲು ಹೇಳಿಕಳುಹಿಸಿದ್ದರು.....ಅಕ್ಕಿ ಮಾರಿ ರೂಪಾಯಿ ತರು ವಂತೆಯೂ ಹೇಳಿದ್ದರು. ಐದು ರೂಪಾಯಿ ಮೂರಾಣೆ....ಹಿಂತಿರುಗುವಾಗ ಸಿಮರಾಹಾ ಸ್ಟೇಷನ್ನಿನಲ್ಲಿ ಜಗಮೋಹನಶಾಹನ ಅಂಗಡಿಗೆ ಮೊಸರವಲಕ್ಕಿ ತಿನ್ನಲು ಬಾವನ ಹೋದ. ಜಗಮೋಹನಶಾಹ ಜಿಲೇಬಿ ಮಾಡುತ್ತಿದ್ದ. ಅವನ ಹೆಂಡತಿ ಜಿಲೇಬಿಯನ್ನು ರಸದಲ್ಲಿ ಅದ್ದುತ್ತಿದ್ದಳು. ಬಾವನದಾಸನ ತಲೆಯಲ್ಲಿ ಬಹಳ ಹೊತ್ತಿನವರೆಗೆ ರಸದಲ್ಲಿ ಅದ್ದಿದ ಜಿಲೇಬಿಯೇ ಸುಳಿಯುತ್ತಿತ್ತು.... ಪಥರಾಹಾದಲ್ಲಿ ಫಾಗೂಬಾಬು ತನ್ನ ತಂದೆಯ ಶ್ರಾದ್ಧದ ದಿನ ಕಂಗಾಳಿಗಳಿಗೆ ಊಟ ಹಾಕಿಸಿದ್ದ. ಆವತ್ತು ಜಿಲೇಬಿ ತಿಂದಿದ್ದು. ಅನಂತರ ಜಿಲೇಬಿಯ ವಾಸನೆ ನೋಡಿ ಕೂಡ ವರ್ಷಗಳೇ ಕಳೆದುಹೋಗಿದ್ದವು. ಕೊನೆಗೆ ಮೊಸರವಲಕ್ಕಿಯ ಜೊತೆಗೆ ಎರಡಾಣೆಯ ಜಿಲೇಬಿಯನ್ನೂ ಕೊಂಡುಕೊಂಡೇಬಿಟ್ಟ.

ಆದರೆ ಜಿಲೇಬಿ ಹೊಟ್ಟೆಯನ್ನು ತಲುಪಿದ ಕೂಡಲೇ ಅವನಿಗೆ ಜ್ಞಾನೋ ದಯವಾಗಿತ್ತು. ಅವನ ದೃಷ್ಟಿಯಿಂದ ಮಾಯೆಯ ಪರದೆ ಜಾರಿಬಿತ್ತು.... ಈ ಕಾಸುಗಳು ಭಿಕ್ಷೆಯಿಂದ ಬಂದದ್ದು....ಅವನ ಕಣ್ಣಮುಂದೆ ಹಳ್ಳಿಯ ಹೆಂಗಸರ ಚಿತ್ರ ಕುಣಿಯಿತು....ಪಾತ್ರೆಗೆ ಅಕ್ಕಿ ಹಾಕುವ ಮೊದಲು, ಪರಮ ಭಕ್ತಿಯಿಂದ, ಶ್ರದ್ಧೆಯಿಂದ ಒಂದು ಮುಷ್ಟಿ ಅಕ್ಕಿಯನ್ನು ಗಾಂಧಿಬಾಬುವಿನ ಹೆಸರಿನಲ್ಲಿ ತೆಗೆದು ಹಾಕುತ್ತಿದ್ದರು. ಕುಟ್ಟಿ ಬೀಸಿ ಸಂಪಾದಿಸಿದ ಕೂಲಿಯಲ್ಲಿ

ಒಂದು ಹಿಡಿ....ಹಸಿದ ಮಕ್ಕಳ ಹೊಟ್ಟೆಗೆ ಕಡಮೆ ಮಾಡಿ ಹಾಕಿದ ಒಂದು ಹಿಡಿ! ಅಂತಹ ಕಾಸಿನಲ್ಲಿ ಬಾವನ ತನ್ನ ನಾಲಿಗೆ ಚಪಲವನ್ನು ತೀರಿಸಿಕೊಳ್ಳು ತ್ತಿದ್ದಾನೆ....ವ್ರತ ಭಂಗ. ತಪೋಭ್ರಷ್ಟತೆ....ಗಾಂಧೀಜಿ ನೀವೇ ಗತಿ.... ಕ್ಷಮಿಸಿ....ಬಾವನ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ. ಕಣ್ಣಿನಿಂದ ನೀರು ಸುರಿಯು ತ್ತಿತ್ತು. ಗಂಟಲಿನೊಳಗೆ ಬೆರಳು ಹಾಕಿ ವಾಂತಿ ಮಾಡಿಕೊಂಡ..... 'ಸೀತಾರಾಮ್, ಸೀತಾರಾಮ್' ಎರಡು ದಿನಗಳ ಉಪವಾಸ, ಆತ್ಮಶುದ್ಧಿ, ಪ್ರಾಯಶ್ಚಿತ್ತ! ರಾಮಕಿಶನಬಾಬು ಎಷ್ಟೋ ಸಮಾಧಾನ ಹೇಳಿದ. ಆಭಾರಾಣಿ ಬಡಿಸಿದ ತಟ್ಟೆಯನ್ನು ಹಿಡಿದು ಮುಂಬೆಯೇ ಕುಳಿತಿದ್ದಳು. ಆದರೆ ಬಾವನ ಉಪವಾಸವನ್ನು ಬಿಡಲಿಲ್ಲ...."ತಾಯಿ ಈ ಅಪವಿತ್ರ ಮನಸ್ಸಿಗೆ ಶಿಕ್ಷೆ ಕೊಡ ದಿರಬೇಡ. ಅಶುದ್ಧ ಆತ್ಮ ನನ್ನನ್ನು ಗಾಂಧಿಬಾಬನ ಮಾರ್ಗದಿಂದ ದೂರ ಸರಿಸುತ್ತದೆ...."

ಮಾಯೆ ಬೀಸಿದ ಎರಡನೆ ಬಲೆ....

ಮನೆಯ ಕಾನೂನು ಮುರಿಯುವ ಸಮಯದಲ್ಲಿ ಶ್ರೀಮತಿ ತಾರಾದೇವಿ ಪಾಟ್ನಾದಿಂದ ಬಂದಿದ್ದಳು. ಅವಳ ವಾಣಿಯಲ್ಲಿ ಜಾದುವೇ ತುಂಬಿತ್ತು. ಅವಳು ಹೋದ ಕಡೆಗಳಿಗೆಲ್ಲಾ ಜನ ಅವಳ ಭಾಷಣ ಕೇಳಲು ಉತ್ಸಾಹದಿಂದ ಒಂದು ಗೂಡುತ್ತಿದ್ದರು....ಯುವತಿ ಹೆಂಗಸು, ತಲೆಯ ಮೇಲೆ ಮುಸುಕಿರಲಿಲ್ಲ. ಭಗವತಿ ದುರ್ಗೆಯಂತೆ ಕಳೆ ಕಳೆಯಾಗಿದ್ದಳು. ಸರ್ಕಾರದ ಮುಖದ ನೀರಿಳಿಸು ತ್ತಿದ್ದಳು....ಮುಷ್ಟಿಯಷ್ಟು ಜನ ಇಂಗ್ಲೀಷಿನವರನ್ನು ನಾವು ಕುಣಿಸಿ ಬಿಡಬಲ್ಲೆವು....ಗುಂಡು, ಫಾಸೀ, ಗಲ್ಲು ಯಾವುದರ ಭಯವೂ ಇಲ್ಲ ...." ಪೋಲೀಸ್ ಇನ್ಸ್‌ಪೆಕ್ಟರ್ ಥರ ಥರ ನಡುಗುತ್ತಿದ್ದರು. "....ಇಂಗ್ಲೀಷಿನವರ ಚಪ್ಪಲಿ ನೆಕ್ಕಿಕೊಂಡು ಜೀವಿಸುವ ಈ ಹಿಂದೂಸ್ತಾನಿ ನಾಯಿಗಳು" ಖಂಡಿತ ಅವಳಲ್ಲಿ ದೇವಿಯ ಅಂಶವಿತ್ತು. ಸಭೆ ಮುಗಿದ ಮೇಲೆ ಅವಳು ವಾಸಮಾಡುವ ಮನೆಯ ಮುಂಮೂ ಗುಂಪು ಸೇರಿರುತ್ತಿತ್ತು. ಅನೇಕ ಜನ ಬಂಜೆಯರೂ, ಮಕ್ಕಳಿಲ್ಲದವರೂ ಅವಳ ಪಾದಧೂಳಿ ತೆಗೆದುಕೊಳ್ಳು ತ್ತಿದ್ದರು. ಭಗವತೀ....ಅವಳು ಊಟ ಮಾಡುವಾಗ, ವಿಶ್ರಾಂತಿ ತೆಗೆದು ಕೊಳ್ಳುವಾಗಲೂ ಜನ ಸುತ್ತಲೂ ಸೇರಿರುತ್ತಿದ್ದರು. ಕೊನೆಗೆ ಸ್ವಯಂಸೇವಕರ ಕಾವಲು ನಿಯಮಿಸಬೇಕಾಯಿತು.

ಒಂದು ದಿನ ಚಂದನಪಟ್ಟಿಯ ಆಶ್ರಮದಲ್ಲಿ ಮಧ್ಯಾಹ್ನ ತಾರಾದೇವಿ ಹಾಸಿಗೆಯ ಮೇಲೆ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಳು. ಎದುರಿಗಿದ್ದ ಬಾಗಿಲಿಗೆ

ಪರದೆ ಹಾಕಿತ್ತು. ಪರದೆಯ ಈಕಡೆ ಬಾವನದಾಸ ಡ್ಯೂಟಿಯ ಮೇಲಿದ್ದ. ಫಾಲ್ಗುಣ ಮಾಸದ ಮಧ್ಯಾಹ್ನ ಮಾವಿನ ಚಿಗುರುಗಳಿಂದ ಸುಗಂಧವನ್ನು ಹೊತ್ತು ತಂದ ಗಾಳಿಯು ಪರದೆಯನ್ನು ಅಲ್ಲಾಡಿಸಿ ಒಳಗೆ ನುಗ್ಗುತ್ತಿತ್ತು. ತಾರಾದೇವಿಗೆ ನಿದ್ದೆ ಹತ್ತಿತ್ತು. ಬಾವನ ಪರದೆ ಒಳಗೆ ಸರಿದಾಗ ಸುಮ್ಮನೆ ಬಗ್ಗಿ ನೋಡಿದ ....ಯಾರೋ ಹಿಂದಿನಿಂದ ತಳ್ಳಿದಂತಾಗಿ ಅವನ ಎದೆ ಧಸಕ್ಕೆಂದಿತು.... ಪರದೆಯನ್ನು ಅಲ್ಲಾಡಿಸುತ್ತಿದ್ದ ಫಾಲ್ಗುಣದ ಗಾಳಿ ಕ್ರಮೇಣ ಅವನ ಹೃದಯ ವನ್ನೂ ಅಲ್ಲಾಡಿಸಲು ಆರಂಭಿಸಿತು. ಬಾವನ ಒಮ್ಮೆ ಸುತ್ತಲೂ ನೋಡಿ ಪರದೆಯ ಹತ್ತಿರ ಸರಿದ. ಮತ್ತೆ ಒಳಗೆ ಬಗ್ಗಿ ನೋಡಿದ. ಸುತ್ತಲೂ ನೋಡಿದ, ಅನಂತರ ಮಂತ್ರಮುಗ್ಧನಾದವನಂತೆ ನೋಡುತ್ತಲೇ ಇದ್ದ....ಮಂಚದ ಮೇಲೆ ಆರಾಮ ವಾಗಿ ಮಲಗಿದ್ದ ಯುವತಿ ಹೆಂಗಸು, ಕೆದರಿದ್ದ ಗುಂಗುರು ಕೂದಲು, ಎದೆಯ ಮೇಲಿನಿಂದ ಜಾರಿದ್ದ ಸೆರಗು, ಖದ್ದರಿನ ರವಿಕೆ....ಖಾದಿಯ ಗುಂಡಿಗಳು .... ಆಶ್ರಮದ ತೋಟದಲ್ಲಿದ್ದ ವಿಲಾಯತಿ ಹೂವುಗಳನ್ನು, ಪಾಂಚೂರಾವುತನ ಕುರಿ ಗಳು ಪ್ರತಿದಿನ ನುಗ್ಗಿ ತಿಂದುಬಿಡುತ್ತಿದ್ದವು....ಬಾವನನ ಕಾಲುಗಳು ನಡುಗ ಲಾರಂಭಿಸಿದವು. ಮುಂದುವರಿಯಬೇಕೆನ್ನಿಸಿತು....ಅವನು. ಈ ಹೆಂಗಸಿನ ಬಟ್ಟೆಗಳನ್ನೆಲ್ಲಾ ಚೂರು ಚೂರು ಮಾಡಿ ಎಸೆಯಬೇಕೆಂದು ಬಯಸುತ್ತಿದ್ದ. ತನ್ನ ಚೂಪಾದ ಉಗುರುಗಳಿಂದ ಅವಳ ದೇಹವನ್ನು ಸೀಳಿಹಾಕಬೇಕೆಂದು ಬಯಸುತ್ತಿದ್ದ....ಅವಳು ಅರಚುವುದನ್ನು ಕೇಳಬೇಕು....ಹಲ್ಲನ್ನು ಕಚ್ಚಿ ಕೊಂಡು ಅವಳನ್ನು ತಳ್ಳಿಹಾಕಬೇಕು....ಆ ಯುವತಿ, ಸುಂದರ ಯುವತಿ ಯನ್ನು ಕೊಂದುಹಾಕಬೇಕು. ಹೌದು ಅವನು ಖೂನಿ ಮಾಡುತ್ತಾನೆ.... ಅಯ್ಯೋ ಎದುರಿನ ಕಿಟಕಿಯಿಂದ ಬಗ್ಗಿ ನೋಡುತ್ತಿರುವವರು ಯಾರು? ಗಾಂಧೀಜಿಯ ಫೋಟೋ. ಗೋಡೆಯ ಮೇಲೆ ಹಾಕಿದ ಗಾಂಧೀಜಿಯ ಫೋಟೋ. ಕೈ ಮುಗಿದುಕೊಂಡು ನಗುತ್ತಿದ್ದಾರೆ ಗಾಂಧೀಜಿ....“ಬಾಬಾ! ಉರಿಯುತ್ತಿದ್ದ ಬೆಂಕಿಗೆ ಒಂದು ಕೊಡ ನೀರು ಸುರಿದಂತಾಯಿತು.” ಬಾಬಾ! ಕ್ಷಮಿಸು ಕ್ಷಮಿಸು ಎರಡು ಕೊಡ ನೀರು! ಆಶ್ರಯ ಕೊಡು ಗಾಂಧೀಜಿ, ನೀರು ನೀರು ನೀರು, ತಣ್ಣನೆಯ ನೀರು, ತಂಪಾದ....

ಬಾವನ ಕಣ್ಣು ತೆರೆದ. ರಾಮಕಿಶನಬಾಬು ತಲೆಗೆ ತಣ್ಣೀರಿನ ಪಟ್ಟಿ ಹಾಕುತ್ತಿದ್ದರು. ತಾಯಿ ಗಾಳಿ ಬೀಸುತ್ತಿದ್ದಳು. ಗಾಂಗೂಲಿ ಸುಮ್ಮನೆ ನಿಂತಿದ್ದರು. ಗಾಬರಿಯಾಗಿದ್ದ ತಾರಾದೇವಿ ಹೇಳುತ್ತಿದ್ದಳು:

"ಕಿರಿಚಿದ್ದನ್ನು ಕೇಳಿ ನನಗೆ ಎಚ್ಚರವಾದಾಗ ನೋಡಿದರೆ ಇವನು ಕೆಳಗೆ ಬಿದ್ದು ಚಡಪಡಿಸುತ್ತಿದ್ದ."

ಮೂರನೆಯ ದಿನ ಆಭಾರಾಣಿ ಒಂದು ಲೋಟ ಟೊಮೇಟೋ ರಸವನ್ನು ತಂದುಕೊಡುತ್ತಾ ಹೇಳಿದಳು ;

"ಭಗವಾನ್, ಈವತ್ತಿನಿಂದ ಪ್ರತಿದಿನ ಒಂದು ಲೋಟ ಟೊಮೇಟೋ ರಸ, ರಾತ್ರಿ ಹಾಲು ಕುಡಿಯಬೇಕು."

ಆದರೆ, ಬಾವನ ಏಳು ದಿನಗಳ ಉಪವಾಸ ವ್ರತ ಹಿಡಿದಿದ್ದ. ಆತ್ಮಶುದ್ಧಿ, ಇಂದ್ರಿಯ ಶುದ್ಧಿ, ಪ್ರಾಯಶ್ಚಿತ್ತ. ಕೊನೆಗೆ ಆಭಾರಾಣಿ ಸೋತು "ಹಾಗಾದರೆ ನಾನೂ ಉಪವಾಸ ಮಾಡುತ್ತೇನೆ" ಎಂದು ಬೆದರಿಸಿ ಹೊರಟುಹೋದಳು. ಆಗ ಬಾವನ ಗಾಂಗೂಲಿಯವರ ಹತ್ತಿರ ಹೋಗಿ ನಿಧಾನವಾಗಿ ಕಥೆಯನ್ನೆಲ್ಲಾ ಹೇಳಿಕೊಂಡ: "ಗಾಂಗೂಲೀಜಿ, ನೀವೇ ಅಮ್ಮನಿಗೆ ತಿಳಿಸಿಬಿಡಿ, ನಾನು ವ್ರತ ಮುರಿಯಲಾರೆ, ನಿನ್ನ ಮಾಯೆ...."

ಗಾಂಗೂಲಿ ನಗುತ್ತಾ ಆಭಾರಾಣಿಗೆ ಹೇಳಿದರು: "ಅವನು ವ್ರತಭಂಗ ಮಾಡುವುದು ಅಸಂಭವ. ಕಾರಣ ಗುರುತರವಾದುದು. ಸೂರದಾಸನ ಕತೆ ಅವನಿಗೆ ಜ್ಞಾಪಕಕ್ಕೆ ಬರದಿದ್ದುದು ನಿನ್ನ ಪುಣ್ಯ. ಇಲ್ಲದಿದ್ದರೆ ಇಷ್ಟರಲ್ಲಿ ತನ್ನ ಕಣ್ಣುಗಳನ್ನೇ ಕಳೆದುಕೊಂಡಿರುತ್ತಿದ್ದ."

ಆಭಾರಾಣಿ ಅವಾಕ್ಕಾಗಿ ಗಾಂಗೂಲಿಯ ಕಡೆ ನೋಡುತ್ತಿದ್ದಳು. "ಏನಾಯಿತು?"

ದೇವತೆಗಳ, ಮಂದಿರಗಳ ನಗರ ಎನಿಸಿಕೊಂಡಿದ್ದ ವಾರಣಾಸಿಯಲ್ಲಿದ್ದಾಗಲೂ ಆಭಾರಾಣಿ ತಮ್ಮ 'ಭಗವಾನ'ನನ್ನು ಜ್ಞಾಪಿಸಿಕೊಳ್ಳುತ್ತಲೇ ಇರುತ್ತಿದ್ದಳು. ಒಂದೊಂದು ಸಲ ಗಾಂಗೂಲಿಯ ಹೆಸರಿಗೆ ಭಗವಾನನಿಂದ ಮನಿ ಆರ್ಡರ್ ಬರುತ್ತಿತ್ತು....

....ಅದೇ ಬಾವನದಾಸ ಹೇಳುತ್ತಿದ್ದಾನೆ: ಭಾರತಮಾತೆ ಮೊದಲಿಗಿಂತ ಗಟ್ಟಿಯಾಗಿ ಅಳುತ್ತಿದ್ದಾಳೆಂದು ಬಾಲದೇವನಿಗೆ ಲಕ್ಷ್ಮಿದಾಸಿಯ ನೆನಪಾಯಿತು. ....ಅವಳೂ ಅಳುತ್ತಿದ್ದಾಳೆ. ಆದರೆ ಕಾಳೀಚರಣ ಸೋಷಲಿಸ್ಟ್ ಪಾರ್ಟಿ.... ಬಾಲದೇವ ನಿರಾಶನಾಗುವುದಿಲ್ಲ. ಅವನಿಗೆ ನಿದ್ದೆ ಬರುತ್ತಿಲ್ಲ. ತುಂಬ ತಿಗಣೆಗಳಿವೆ ··ಹೌದು, ಅವನು ಬಾವನದಾಸನನ್ನು ಪ್ರಶ್ನಿಸುತ್ತಾನೆ: "ಮನೆಯಲ್ಲಿ ತಿಗಣೆಗಳು ಹೆಚ್ಚಿಬಿಟ್ಟರೆ, ಮನೆಗೇ ಬೆಂಕಿ ಹಾಕಬೇಕೇನು?"

# 26

ಬಾಬು ಹರಗೌರಿಸಿಂಹ ರಾಜಪಾರಬಂಗಾದ ಹೊಸ ತಹಸೀಲ್ದಾರರಾಗಿ ನೇಮಕಗೊಂಡರು : 'ವೈರ್‌ಲೆಸ್' ಸುಮರಿತದಾಸ ಎಲ್ಲರಿಗೆ ಹೇಳಿದ : "ನೋಡಿ, ಕಾಯಸ್ಥನ ಎಂಜಲೆಲೆಯಲ್ಲಿ ರಾಜಪೂತ ಊಟ ಮಾಡುತ್ತಿದ್ದಾನೆ. ತಹಸೀಲ್ದಾರ ವಿಶ್ವನಾಥಬಾಬುವನ್ನು ರಾಜಪಾರಬಂಗಾದ ಕುಮಾರ ಸಾಹೇಬರೇ ಕರೆಸಿ ಬೇಕಾದಷ್ಟು ಹೇಳಿದರಂತೆ. ಆದರೆ ಉಗುಳಿದ್ದನ್ನು ನೆಕ್ಕುವವನು ಮನುಷ್ಯನಲ್ಲ ಎಂದು ತಹಸೀಲ್ದಾರರು ತಿರಸ್ಕರಿಸಿಬಿಟ್ಟರಂತೆ··· ಇನ್ನು ತಹಸೀಲ್ದಾರಿಯಲ್ಲಿ ಯಾವ ಹೆಚ್ಚುಗಾರಿಕೆಯಿದೆ? ಈಗಿದು ಒಣಗಿದ ಮೂಳೆಯಂತೆ."

ವಾಸ್ತವವಾಗಿ ಈಗ ತಹಸೀಲ್ದಾರಿಯಲ್ಲಿ ಯಾವ ಹೆಚ್ಚುಗಾರಿಕೆಯೂ ಉಳಿದಿರಲಿಲ್ಲ. ಕಾಲ ಬದಲಾಗಿದೆ. ತಹಸೀಲ್ದಾರರ ತಂದೆ, ದೇವನಾಥ ಮಲ್ಲಿಕರು, ತಿಂಗಳಿಗೆ ಕೇವಲ ಐದು ರೂಪಾಯಿ ಸಂಬಳಕ್ಕೆ ನೇಮಕಗೊಂಡರು. ಆದರೆ ಮೇಲು ಸಂಪಾದನೆ! ಮೂರು ವರ್ಷ ಕಳೆಯುವಷ್ಟರಲ್ಲಿ ಎಂಭತ್ತು ತೊಂಭತ್ತು ಬೀಘ ಫಲವತ್ತಾದ ಜಮೀನಿನ ಮಾಲಿಕರಾಗಿದ್ದರು. ಮೇಲು ಸಂಪಾದನೆಯೇ ನಿಜವಾದ ಸಂಪಾದನೆ. ಇನ್ನು ತಹಸೀಲ್ದಾರಿಯ ಪ್ರಭಾವವೇನು ಕಡಿಮೆಯೆ? ತಹಸೀಲ್ದಾರರ ಜಮೀನಿನಲ್ಲಿ ಕೆಲಸಮಾಡುವವರಿಗೆ ಎಂದೂ ಕೂಲಿ ಸಿಗುತ್ತಿರಲಿಲ್ಲ. ರಾಜಪಾರಬಂಗಾದ ರಾಜ ಇರುತ್ತಿದ್ದುದು ತಿರುಹುತ್‌ನಲ್ಲಿ. ಅವನನ್ನು ಯಾರೂ, ಯಾವಾಗಲೂ ನೋಡೇ ಇರಲಿಲ್ಲ. ನಿಜವಾದ ರಾಜ, ವೃದ್ಧ ದೇವನಾಥ ಮಲ್ಲಿಕರೇ ಆಗಿದ್ದರು. ಆಗ ಕಟಿಹಾರ ಪಟ್ಟಣ ಸರಿಯಾದ ಸ್ಥಿತಿಯಲ್ಲೇ ಇರಲಿಲ್ಲ. ವೃದ್ಧ ತಹಸೀಲ್ದಾರರು ತಮ್ಮ ಬಾದಷಾಹಿಯಲ್ಲಿ ಚಪ್ಪಲಿಯ ತಳದಿಂದಲೇ ಹಳೆಯ ಮುಳ್ಳುಗಳನ್ನೆಲ್ಲಾ ಮುರಿದುಹಾಕಿದರು. ಮೂರೇ ತಿಂಗಳಲ್ಲಿ ಮುಳ್ಳುಗಳೆಲ್ಲಾ ನಾಶವಾದವು. ಅವರು ಮಾತನಾಡುತ್ತಿದ್ದುದು ಬಹಳ ಕಡಿಮೆ. ಕೇಳುತ್ತಿದ್ದುದೂ ಕಡಿಮೆಯೇ. ಬಾಯಿಬಿಟ್ಟರೆ ಹೇಳುತ್ತಿದ್ದದು ಇಷ್ಟೇ....

"ಬಡವನಿಗೆ ಚಪ್ಪಲೀಲಿ ಹತ್ತೇಟು ಹಾಕು." ಕಮಲಾನದಿಯ ಪಕ್ಕ ದಲ್ಲಿದ್ದ ದಿಣ್ಣೆಯಲ್ಲಿ ಜಿಗಣೆಗಳನ್ನು ಸಾಕಿದ್ದರು. ಯಾರಾದರೂ ಹಣ, ಭತ್ಯ ಸಂಭಾವನೆಗಳನ್ನು ಕೊಡುವುದು ತಡ ಮಾಡಿದರೆ, ಅಂತಹವರನ್ನು ನಾಲ್ಕು ಗಂಟೆ ಗಳವರೆಗೆ ಆ ದಿಣ್ಣೆಯ ಮೇಲೆ ನಿಲ್ಲಿಸಿಬಿಡುತ್ತಿದ್ದರು. ಪಾದದ ಹೆಬ್ಬೆರಳಿನಿಂದ

ತೊಡೆಯವರೆಗೆ ದಪ್ಪ ದಪ್ಪ ಜಿಗಣೆಗಳು ಅಂಟಿಬಿಡುತ್ತಿದ್ದವು.····ಆ ಕಾಲ ವೃದ್ಧ ತಹಸೀಲ್ದಾರನೊಂದಿಗೇ ಹೊರಟುಹೋಯಿತು.

ವಜ್ರ ವ್ಯಾಪಾರಿ ಇಂಗ್ಲೀಷ್ ಸಾಹೇಬರ ಹಿಂಸೆಯಿಂದ ಬೇಸರಗೊಂಡು ಅಲ್ಲಲ್ಲಿ ರೈತರು ದಂಗೆಯೇಳಲು ಪ್ರಾರಂಭಿಸಿದಾಗ ಜಮೀನ್ದಾರರು ತಮ್ಮ ತಹಸೀಲ್ದಾರರನ್ನು, ಪಟವಾರಿ (ಶ್ಯಾನುಭೋಗ)ಯನ್ನೂ ಗುಟ್ಟಾಗಿ ಕರೆಸಿ ರೈತರ ಮೇಲೆ ದಬ್ಬಾಳಿಕೆ ಮತ್ತು ಹಿಂಸೆ ಮಾಡಬಾರದೆಂದು ಸೂಚನೆ ಕೊಟ್ಟರು.

ವಿಶ್ವನಾಥಬಾಬುವೂ ಚೆನ್ನಾಗಿಯೇ ಕೆಲಸ ನಿರ್ವಹಿಸಿದರು. ರೈತರ ಮೇಲೆ ಹೆಚ್ಚು ದಬ್ಬಾಳಿಕೆ ಮಾಡಬೇಕಾದ ಅವಶ್ಯಕತೆಯೂ ಬೀಳಲಿಲ್ಲ. ಅವರ ಪೂರ್ವಜರ ಪ್ರಭಾವ ರೈತರ ಹೃದಯದಲ್ಲಿ ಎಷ್ಟು ಆಳವಾಗಿ ಬೇರು ಬಿಟ್ಟಿತ್ತೆಂದರೆ, ಅವರು ಹೊಸದಾಗಿ ಏನೂ ಮಾಡಬೇಕಾಗಲೇ ಇಲ್ಲ. "ಯಮದೂತರಾದರೂ ಸ್ವಲ್ಪ ದಾಕ್ಷಿಣ್ಯ ತೋರಿಸಬಹುದು. ತಹಸೀಲ್ದಾರರು ತೋರಿಸುವುದಿಲ್ಲ." ಎನ್ನುವ ಗಾದೆಯೇ ಪ್ರಚಾರಕ್ಕೆ ಬಂದಿತ್ತು. ಪ್ರತಿ ವರ್ಷವೂ, ವರ್ಷದ ಕೊನೆಯ ಹೊತ್ತಿಗೆ ಜನರಲ್ ಮ್ಯಾನೇಜರ್ ಡಫ್ ಸಾಹೇಬರು ಹಳ್ಳಿಯಲ್ಲಿ ಬಿಡಾರ ಹೂಡುತ್ತಿದ್ದರು. ಅವರು ಬರುವುದಕ್ಕೆ ಮೊದಲೇ ಭೂಮಿ ಉಳದಿರುವವರು ಹಳ್ಳಿಯನ್ನು ಬಿಟ್ಟು ನೇಪಾಳ ಜಿಲ್ಲೆಯ 'ಮೋರಂಗ'ಕ್ಕೆ ಓಡಿಹೋಗುತ್ತಿದ್ದರು····ಮಾಳಿಗೆಯ ತೋಟದಲ್ಲಿ ಐವತ್ತು ಅರವತ್ತು ಚಿಕ್ಕ ದೊಡ್ಡ ಡೇರೆಗಳನ್ನು, ಶಾಮಿಯಾನಗಳನ್ನು ಹಾಕುತ್ತಿದ್ದರು. ಐವತ್ತು ಜನ ಸಿಪಾಯಿಗಳು, ನಾಲ್ಕು ಆನೆಗಳು, ಮೋಟಾರ್, ಬಟ್ಲರ್ ಅಡಿಗೆಯವರು, ಅಗಸರವನು, ಹಜಾಮ ಎಲ್ಲರೂ ಸಿದ್ಧರಾಗಿರುತ್ತಿದ್ದರು. ಐದು ಹಳ್ಳಿಯ ಎತ್ತಿನ ಗಾಡಿಗಳಲ್ಲಿ ಬಿಡಾರಕ್ಕೆ ಬೇಕಾದ ಸಾಮಾನು ಸರಂಜಾಮುಗಳು ಬರುತ್ತಿದ್ದವು.

ಮೊದಲೇ ತಹಸೀಲ್ದಾರರು ಜಿಲ್ಲೆಯ ಎಲ್ಲಾ ಪುಂಡರ, ತಂಟೆಕೋರರ ಬಂದೋಬಸ್ತು ಮಾಡಿರುತ್ತಿದ್ದರು. ಸುಮರಿತದಾಸ ಅವರನ್ನೆಲ್ಲಾ ಏಕಾಂತವಾಗಿ ಕರೆದುಕೊಂಡುಹೋಗಿ ಅವರಿಗೆ ಹೇಳುತ್ತಿದ್ದ: "ನಿನ್ನ ಹೆಸರು ರಿಜಿಸ್ಟರಿನಲ್ಲಿ ಎಲ್ಲರಿಗಿಂತ ಮೊದಲಿದೆ.····" ಅಂ ? ಎಲ್ಲರಿಗಿಂತ ಮೊದಲೇ ?··—ಕೇಳಿದವರಿಗೆ ವಜ್ರಾಘಾತವಾಗುತ್ತಿತ್ತು. ಏನಾದರೂ ಮಾಡಿ ಹೆಸರನ್ನು ಹೊಡೆಸಿ ಹಾಕಲೇಬೇಕು····

ಪಟ್ಟಿಯನ್ನು ಸಿದ್ಧಪಡಿಸುವಾಗ ತಹಸೀಲ್ದಾರರು ಸುಮರಿತದಾಸನ ಸಲಹೆಯನ್ನೂ ತೆಗೆದುಕೊಳ್ಳುತ್ತಿದ್ದರು. ಸುಮರಿತದಾಸ ವರ್ಷದ ಘಟನೆಗಳನ್ನೆಲ್ಲಾ

ಜ್ಞಾಪಿಸಿಕೊಳ್ಳುತ್ತಾ ಹೇಳುತ್ತಿದ್ದ: "ಹೂಂ····ಅನಂತ ಪರ್ವದ ದಿನ ರಣಜೀತ ಹಾಲು ತರಲು ಹೋಗಿದ್ದಾಗ, ಕೂಅರ್ ಪಂಗಡದ ಸತಕೌಡೀ ಎಮ್ಮೆ ಹಾಲು ಕರೆಯಲಿಲ್ಲವೆಂದು ಸುಳ್ಳು ಹೇಳಿ ಪಾತ್ರೆಯನ್ನು ಹಿಂದಕ್ಕೆ ಕಳುಹಿಸಿದ. ಕುಂಜರ ಪಂಗಡದ ಫರ್ಜಿಂಡ್ ಮಿಯಾ ಹಾಗಲಕಾಯಿ ತಂದುಕೊಡಲಿಲ್ಲ····" ರಾಜ್ಯದ ಮೊಕದ್ದಮೆಯಲ್ಲಿ ಸಾಕ್ಷಿ ಹೇಳಲು ನಿರಾಕರಿಸಿದವರನ್ನೂ, ತಹಸೀಲ್ದಾರರಿಗೆ ಕೊಡಬೇಕಾಗಿದ್ದ ಸಂಭಾವನೆಯನ್ನು ಕೊಡದಿರುವವರನ್ನೂ, ಹಣದ ಗರ್ವ ಏರಿರುವವರನ್ನೂ, ರಸ್ತೆಯಲ್ಲಿ ಗರ್ವದಿಂದ ಓಡಾಡುವವರನ್ನೂ, ಪಂಚಾಯಿತಿಯಲ್ಲಿ ಅವರ ಸಿಪಾಯಿಗಳ ವಿರುದ್ಧ ಸಾಕ್ಷಿ ಹೇಳಿದವರನ್ನೂ ತಹಸೀಲ್ದಾರರು ನೆನಪಿಟ್ಟುಕೊಂಡಿರುತ್ತಿದ್ದರು.

ಡಫ್ ಸಾಹೇಬ ವಸೂಲಿಗಿಂತ ಪ್ರಭಾವಕ್ಕೆ ಹೆಚ್ಚು ಮಹತ್ವ ಕೊಡುತ್ತಿದ್ದ. ರಾಜ್ಯದಲ್ಲಿ ಪ್ರಭಾವವೇ ಮುಖ್ಯವಾದುದು. ಅವನು ಹೇಳುತ್ತಿದ್ದ: "ನಮ್ಮ ರಾಜ್ಯದಲ್ಲಿ ಒಬ್ಬ ಪುಂಡನೂ ಇರಕೂಡದು. ನೀನು ನಮ್ಮ ತಹಸೀಲ್ದಾರರ ಮೇಲೆ ಚಾಡಿ ಹೇಳ್ತೀಯಾ? ಅಯೋಗ್ಯ, ನೀನು ಮಾತ್ರ ಸುಳ್ಳುಗಾರನಲ್ವೇನು?"

"ಚಟರೂ ಮಾಂಡಲ್."

"ತಾಯಿ ತಂದೆ" ಎದುರಿಗೆ ಅರ್ಧನಗ್ನನಾಗಿ ಕೈ ಜೋಡಿಸಿ ನಿಂತಿದ್ದ ಮನುಷ್ಯ ಗಡ ಗಡ ನಡುಗುತ್ತಾ ತೊದಲುತ್ತಾನೆ.

"ನೀನು ಮೊಕದ್ದಮೆಯಲ್ಲಿ ಸಾಕ್ಷಿ ಯಾಕೆ ಕೊಡಲಿಲ್ಲ?

"ತಾಯಿ ತಂದೆ"

"ಏ....ಮಗನೇ ಬಾಯ್ಮುಚ್ಚು. ಚಾಟಿಯಿಂದ ಇವನನ್ನು ಬಿಗಿದಟ್ಟು." —ಒಂದೇ ಸಮನೆ ಚಾಟಿಯ ಏಟುಗಳು ಬಿದ್ದವು.

"ನೀನು ಚಟರ್ಜಿಯೋ? ನೀನು ರಾಜಪುಟ್. ನೀನು ನಮ್ಮ ತಹಸೀಲ್ದಾರರ ಮುಂದೆ ನಿಲ್ತೀಯೇನು? ನಾನು ನಿನ್ನನ್ನು ಸುಮ್ಮನೆ ಬಿಡೋಲ್ಲ, ಮೂರ್ಖ."

ಇದರ ನಂತರ ಒಂದು ವರ್ಷ ಇಲಾಖೆಯಲ್ಲಿ ಶಾಂತಿಯ ಸಾಮ್ರಾಜ್ಯ! ತಹಸೀಲ್ದಾರರ ಭಯದಿಂದ ಜನ ಥರ ಥರ ನಡುಗುತ್ತಿರುತ್ತಿದ್ದರು. ಆದರೆ ಈಗ? ಕಾಲ ಬದಲಾಯಿಸಿರೋದು ಮಾತ್ರವಲ್ಲ, ಪೂರಾ ತಲೆಕೆಳಗಾಗಿದೆ.

ಸಿಂಘಜೀ ಬಹಳ ಪ್ರಯತ್ನ ಮಾಡಿ ಹರಗೌರಿಸಿಂಹನಿಗೆ ತಹಸೀಲ್ದಾರಿ ಕೊಡಿಸಿದ್ದರು. ಮ್ಯಾನೇಜರ್ ಸಾಹೇಬರಿಗೆ ನಾಲ್ಕು ನೂರು ರೂಪಾಯಿ ಸಂಭಾವನೆ

ನೀಡಿದ್ದರು. ಕಾಗದ ಪತ್ರ ಕೈಗೆತ್ತಿಕೊಳ್ಳುತ್ತಿರುವಾಗಲೇ ಸೀನು ಬಂತಂತೆ! ಇನ್ನು ಹೊಸ ತಹಸೀಲ್ದಾರರ ಅಧಿಕಾರ ಹೇಗೆ ನಡೆಯುತ್ತದೋ ನೋಡಬೇಕು.

ರಾಜಪೂತ ಪಂಗಡ ಒಂದೊಂದು ಮಗುವಿಗೂ ಆನಂದ. ಶಿವಶಂಕರಸಿಂಹ ಎಲ್ಲರೊಂದಿಗೆ ಹೇಳಿಕೊಳ್ಳುತ್ತಿದ್ದ: "ಹರಗೌರಿ ಇನ್ನೊಂದೇ ಒಂದು ಕ್ಲಾಸ್ ಹೆಚ್ಚಿಗೆ ಓದಿದ್ದರೆ ಅವನಿಗೆ ಮ್ಯಾನೇಜರ್ ಕೆಲಸವೇ ಸಿಗುತ್ತಿತ್ತು."

ಕಪ್ಪು ಟೋಪಿಯ ಸಂಚಾಲಕ ಬೌದ್ಧಿಕ ತರಗತಿಯಲ್ಲಿ ಹೇಳಿದ: "ತಹಸೀಲ್ದಾರಿ ಕಾಯಸ್ಥರ ಕೈಯಿಂದ ರಾಜಪೂತರ ಕೈಗೆ ಬಂದ ಹಾಗೆಯೇ, ಒಂದು ದಿನ, ಇಡೀ ಆರ್ಯಾವರ್ತದ ರಾಜ್ಯಾಡಳಿತ ಹಿಂದುಗಳ ಕೈಗೆ ಬರುತ್ತದೆ. ಆ ದಿನ ಹಿಂದೂಸ್ಥಾನದ ಮೂಲೆ ಮೂಲೆಯಲ್ಲೂ ಹಿಂದೂಗಳ ಆಡಳಿತ ನೆಲಸುತ್ತದೆ."

ಜೋಯಿಸರು ಸಲಹೆ ನೀಡಿದರು:

"ಲಕ್ಷ್ಮೀ ಪೂಜೆ ಮಾಡದೆ ಆಫೀಸಿನ ಕಾಗದ ಪತ್ರಗಳನ್ನು ಮುಟ್ಟಕೂಡದು. ಶುಕ್ರವಾರ ಶುಭದಿನ. ಕಾರ್ಯಾರಂಭ, ಯಾತ್ರೆ ಮತ್ತು ಗೃಹ ನಿರ್ಮಾಣಕ್ಕೆ ಒಳ್ಳೆಯ ದಿನ."

ಬಾಲದೇವನಿಗೆ ಪದೇ ಪದೇ ತನ್ನ ಸ್ವಪ್ನದ ವಿಚಾರವೇ ನೆನಪಿಗೆ ಬರುತ್ತಿದೆ: "ವಿಶಾಲ ಸಭೆ. ಹರಗೌರಿ ಲಕ್ಷ್ಮಿಗೆ ಮಾಲೆ ಹಾಕುತ್ತಿದ್ದಾನೆ."

ಕಾಮ್ರೇಡ್ ಕಾಳೀಚರಣ ಮತ್ತು ವಾಸುದೇವ ತಮ್ಮ ಪಾರ್ಟಿಯ ಸದಸರಿಗೆ ಹೇಳಿದರು:

"ಹಳೆಯ ತಹಸೀಲ್ದಾರ 'ನಾಗರಾಜ'ರಾಗಿದ್ದರೆ ಹೊಸ ತಹಸೀಲ್ದಾರ 'ಸರ್ಪರಾಜ'. ಇಬ್ಬರಲ್ಲೂ ಯಾವ ವ್ಯತ್ಯಾಸವೂ ಇಲ್ಲ. ಇಬ್ಬರೂ ಅತ್ಯಾಚಾರಿ ಜಮೀನ್ದಾರರ ಕೈಗೊಂಬೆಗಳು. ಜನ ಸಂಘರ್ಷಕ್ಕೆ ಸಿದ್ಧರಾಗಿರಬೇಕೆಂದು ಸೋಷಲಿಸ್ಟ್ ಪಾರ್ಟಿಯ ಕಾರ್ಯದರ್ಶಿ ತಿಳಿಸಿದ್ದಾರೆ."

ಬಾವನದಾಸನಿಗೆ ಈ ಹಳ್ಳಿ ಹೊಸದು. ಹಳ್ಳಿಯ ಜನರೂ ಹೊಸಬರು. ಅವನು ಸುಮ್ಮನಿದ್ದ. ಯಾಕೋ ಇಲ್ಲಿ ಅವನ ಮನಸ್ಸಿಗೇ ಸಮಾಧಾನವಿಲ್ಲ.

ಚರಖಾ ಕೇಂದ್ರದಲ್ಲಿ ಚರಖಾ ತಕಲಿಗಳಲ್ಲಿ ದಾರ ತೆಗೆಯುವುದನ್ನು ಹೇಳಿಕೊಡುವುದಷ್ಟೇ ಅಲ್ಲದೆ, ವಯಸ್ಕರಿಗೆ ರಾತ್ರಿಯ ಹೊತ್ತು ಪಾಠವನ್ನೂ ಹೇಳಿಕೊಡುತ್ತಾರೆ. ಹೆಂಗಸರಿಗೆ, ಮಕ್ಕಳಿಗೆ ಅಧ್ಯಾಪಕಿ ಕಲಿಸುತ್ತಾಳೆ. ವಯಸ್ಕ

ಗಂಡಸರಿಗೆ ಮಾಸ್ಟರ್. ಮುದುಕ ಬಿರಂಚೀದಾಸ ಹತ್ತು ದಿನಗಳಿಂದ ಕಲಿಯಲು ಬರುತ್ತಿದ್ದಾನೆ. ಆದರೆ 'ಕ'ಗೆ ಬದಲು 'ಗ'ಯಿಂದಲೇ ಅವನು ಕವರ್ಗವನ್ನು ಆರಂಭಿಸುತ್ತಾನೆ—ಗ ಘ ಕ ಖ ಮಾಸ್ಟರಿಗೆ ಆಶ್ಚರ್ಯ····ಮುದುಕ ತಮಾಷೆ ಯೇನೂ ಮಾಡತ್ತಿಲ್ಲವಷ್ಟೆ ?

## 27

ಭಾಸ್ಕರ ಜೀವನದಲ್ಲಿ ಹೊಸ ಅಧ್ಯಾಯ ಆರಂಭವಾಗಿದೆ. ಅವರು ಪ್ರೇಮ, ಪ್ರೀತಿ, ಸ್ನೇಹ ಮುಂತಾದವುಗಳನ್ನು ಯಾವಾಗಲೂ ಬಯಾಲಜಿಯ ಸಿದ್ಧಾಂತಗಳಿಂದಲೇ ಅಳೆಯಲು ಪ್ರಯತ್ನಿಸುತ್ತಿದ್ದರು. ಅವರು ನಕ್ಕು ಹೇಳುತ್ತಿದ್ದರು: "ಮನಸ್ಸು ಎನ್ನುವ ಒಂದು ವಸ್ತು ಮನುಷ್ಯನ ಶರೀರದಲ್ಲಿ ಇದೆಯೋ ಇಲ್ಲವೋ ನನಗಂತೂ ಗೊತ್ತಿಲ್ಲ. ಶ್ವಾಸಕೋಶಗಳನ್ನೇ ಮನುಷ್ಯ ಮನಸ್ಸು ಎನ್ನುತ್ತಾನೋ ಹೃದಯವನ್ನೇ ಅನ್ನುತ್ತಾನೋ ಗೊತ್ತಿಲ್ಲ. ಏನಾದರೂ 'ಹಾರ್ಟ್' 'ಲಂಗ್ಸ್' ಅಥವಾ 'ಲಿವರ್'ಗೂ ಪ್ರೇಮಕ್ಕೂ ಏನೇನೂ ಸಂಬಂಧವಿಲ್ಲ."

ಆದರೆ ಈಗ ಅವರು ಮನುಷ್ಯನ ಶರೀರದಲ್ಲಿ 'ಮನಸ್ಸು' ಎನ್ನುವ ಒಂದು ವಸ್ತುವಿದೆ. ಶರೀರವನ್ನು ಕತ್ತರಿಸಿ ಅದನ್ನು ಹೊರ ತೋರಿಸುವುದು ಸಾಧ್ಯವಿಲ್ಲ ಎಂದು ಅರಿತಿದ್ದಾರೆ. ಅದು 'ಹಾರ್ಟ್' ಅಲ್ಲ, ಯಾವುದೋ ಅಗಮ್ಯ, ಅಗೋಚರ ವಸ್ತು. ಅದೂ ನೋಯುತ್ತದೆ. ಆದರೆ ಎಡಿಲಿನ್‌ನಿಂದ ಆ ನೋವನ್ನು ವಾಸಿ ಮಾಡುವುದಕ್ಕೆ ಆಗುವುದಿಲ್ಲ. ಆ ನೋವನ್ನು ನಾಶಪಡಿಸಿ ಬಿಟ್ಟರೆ ಮನುಷ್ಯ ಮೃಗವಾಗಿಬಿಡುತ್ತಾನೆ....ಮನಸ್ಸು ಎನ್ನುವುದು ಒಂದು ಮಂದಿರ. ಮನಸ್ಸಿನೊಳಗಿನ ದೇವತೆ ವಾಸಮಾಡುವುದು ಅಲ್ಲೀ.

ಬಾಲ್ಯದಿಂದಲೂ ಅವರು ತಮ್ಮ ಜನ್ಮಕಥೆಯನ್ನು ಎಂದೂ ಮರೆತಿರಲಿಲ್ಲ. ಇತಿಹಾಸವನ್ನು ಗೌರವಿಸುವ ಪ್ರತಿವ್ಯಕ್ತಿಯೂ, ತನ್ನ ವಂಶ ಪ್ರಪಂಚವನ್ನು ಆಶ್ಚರ್ಯಗೊಳಿಸುವ ಪ್ರಭಾವಶಾಲಿ ಕಥೆಯನ್ನು ಹೊಂದಿರಲೆಂದು ಬಯಸು

ತ್ತಾನೆ. ಆದರೆ ಡಾಕ್ಟರ ವಂಶದ ಇತಿಹಾಸದ ಮೇಲೆ ಕಪ್ಪು ಮಸಿ ಬಳಿದಿತ್ತು. ಜೈಲಿನಲ್ಲಿ ಸೆನ್ಸಾರ್ ಮಾಡಿದ ಕಾಗದಗಳಂತೆ. ಮೊದಲು ಬರೆದಿದ್ದ ಅಕ್ಷರಗಳು ಯಾವುದು ಎಂದು ಊಹಿಸುವುದಕ್ಕೂ ಸಾಧ್ಯವಾಗದಂತೆ ಕಪ್ಪು ಮಸಿ ಬಳಿದಿತ್ತು. ....ಜನ್ಮ ಕೊಟ್ಟ ತಾಯಿಯೇ ದೂರಮಾಡಿದ್ದಳು....ಕತ್ತಲೆಯಲ್ಲಿ, ಅಭಾಗಿನಿ ಯಾದ ಒಬ್ಬ ತಾಯಿ ಹೃದಯದ ನೋವನ್ನು ಒತ್ತಿ ಹಿಡಿದು, ಸೆರಗಿನಲ್ಲಿ ತನ್ನ ನವಜಾತ ಶಿಶುವನ್ನು ಮುಚ್ಚಿಕೊಂಡು ನಿಂತಿದ್ದಾಳೆ. ಒಂದು ಭಯಂಕರವಾದ ಕಪ್ಪು ನೆರಳು ಕೈ ಮುಂದೆ ನೀಡುತ್ತಿದೆ. ತಾಯಿ ಕೊನೆಯ ಬಾರಿಗೆ ತನ್ನ ಹೃದಯದ ತುಣುಕಾದ, ರಕ್ತದಿಂದ ಹುಟ್ಟಿದ ಮಗುವನ್ನು ದಿಟ್ಟಿಸಿ ನೋಡು ತ್ತಿದ್ದಾಳೆ, ಮುತ್ತಿಡುತ್ತಿದ್ದಾಳೆ. ಭಯಂಕರ ನೆರಳು ಅವಳ ಕೈಯಿಂದ ಮಗುವನ್ನು ಕಿತ್ತುಕೊಳ್ಳುತ್ತದೆ. ತಾಯಿ ಹಲ್ಲುಗಳಿಂದ ತುಟಿ ಕಚ್ಚಿಕೊಂಡು ಸುಮ್ಮನೇ ನಿಂತಿದ್ದಾಳೆ.

ಡಾಕ್ಟರ್ ತಮ್ಮ ತಾಯಿಯ ಸ್ನೇಹವನ್ನು, ಕತ್ತಲೆಯಲ್ಲಿ ಚಿತ್ರದಂತೆ ನಿಂತಿದ್ದ ತಾಯಿಯ ವಾತ್ಸಲ್ಯದ ಬೆಲೆಯನ್ನು ಅರಿಯಲು ಪ್ರಯತ್ನಿಸುತ್ತಾರೆ. ಅವಳು ಕತ್ತು ತಿರುವಿ ಮಗುವನ್ನು ಕೊಲ್ಲಬಹುದಾಗಿತ್ತು. ತಿಗಣೆಯನ್ನು ಹೊಸಕಿಹಾಕುವುದಕ್ಕೆ ಬೆರಳುಗಳಿಗೆ ಎಷ್ಟು ಶಕ್ತಿ ಬೇಕು? ಹುಟ್ಟಿ ಐದು ಗಂಟೆ ಮಾತ್ರ ಆಗಿದ್ದ ಆ ಮಗು ವನ್ನು ಮುಗಿಸಲು ಅಷ್ಟು ಶಕ್ತಿಯೂ ಬೇಕಾಗಿರಲಿಲ್ಲ. ಆದರೆ ತಾಯಿಗೆ ಹಾಗೆ ಮಾಡಲಾಗಲಿಲ್ಲ....ಬಹುಶಃ ಅವಳು ಆ ಪ್ರಯತ್ನವನ್ನೂ ಮಾಡಿರಬಹುದು. ಕೊರಳಿನ ಮೇಲೆ ಒಂದೆರಡು ಬಾರಿ ಬೆರಳುಗಳು ಓಡಾಡಿರಬಹುದು.. ಅವರು ತಮ್ಮ ವಿವಶ, ಅಭಾಗಿನಿ ತಾಯಿಯ ಮನಸ್ಸಿನಲ್ಲಿ ಎದ್ದಿರಬಹುದಾದ ಬಿರುಗಾಳಿಯ ಹೊಡೆತವನ್ನು ಕಲ್ಪಿಸಿಕೊಳ್ಳುತ್ತಿದ್ದಾರೆ...ಆ ತಾಯಿಯ ಪವಿತ್ರ ಸ್ನೇಹದ ಅಪರಾಜಿತ ಪ್ರೇಮದ ಜೀವಂತ ಸಾಕ್ಷಿಯಾಗಿ ಅವರು ಉಳಿದಿದ್ದಾರೆ.

ಯಾರಾದರೂ ಅಭಾಗಿನಿ ತಾಯಿಯ ಕಥೆಯನ್ನು ಕೇಳಿದಾಗಲೆಲ್ಲಾ ಅವರಿಗೆ ಮನಸ್ಸಿನಲ್ಲೇ ಆಕೆಯ ಬಗ್ಗೆ ಭಕ್ತಿ ಹುಟ್ಟುತ್ತದೆ. ಪತಿತೆ, ಬಹಿಷ್ಕೃತೆ, ಸಮಾಜದ ದೃಷ್ಟಿಯಲ್ಲಿ ಕಳಂಕಿನಿ ಎನ್ನಿಸಿಕೊಂಡ ಆ ತಾಯಿಯ ಮಡಿಲಿನಲ್ಲಿ ಒಂದು ಕ್ಷಣ ವಾದರೂ ತಮ್ಮ ತಲೆಯನ್ನಿಟ್ಟು ಮಲಗಬೇಕೆನ್ನಿಸುತ್ತದೆ. ಯಾವ ಹೆಂಗಸನ್ನೂ 'ಪ್ರಿಯೆ' ಎನ್ನುವ ದೃಷ್ಟಿಯಿಂದ ನೋಡಲು ಅವರೆಂದೂ ಪ್ರಯತ್ನಿಸಿಲ್ಲ. ಅವರು ಒಂದು ರೀತಿಯ ರೋಗಿಯಾಗಿದ್ದಾರೆ. ಒಬ್ಬ ಯುವ ಮನುಷ್ಯನಿಗೆ ದೇಹದ ಹಸಿವೇ ಇಲ್ಲದಿದ್ದರೆ ಅವನು ಖಂಡಿತ ರೋಗಿ ಅಥವಾ 'ಅಬ್‌ನಾರ್ಮಲ್'

ಡಾಕ್ಟರ್ ಒಂದು ಹೊಸ ತಿರುವಿನಲ್ಲಿ ನಿಂತು ಹಿಂತಿರುಗಿ ನೋಡಿದರು: ಪ್ರಪಂಚ ಎಷ್ಟು ಸುಂದರವಾಗಿದೆ:

ಲೋಕಕಲ್ಯಾಣ ಮಾಡುವ ಇಷ್ಟ ಅವರದು. ಮನುಷ್ಯನ ಜೀವನವನ್ನು ಹಾಳುಮಾಡುವ ರೋಗಗಳ ಮೂಲವನ್ನು ಪತ್ತೆಮಾಡಿ ಹೊಸ ಹೊಸ ಔಷಧಿಗಳನ್ನು ಕಂಡುಹಿಡಿಯಬೇಕು.... ರೋಗದ ಕ್ರಿಮಿಗಳು ನಷ್ಟವಾಗುತ್ತವೆ, ಮನುಷ್ಯ ಆರೋಗ್ಯವಂತನಾಗುತ್ತಾನೆ. ಪ್ರಪಂಚದ ಎಲ್ಲಾ ದೇಶಗಳ ಮೆಡಿಕಲ್ ಕಾಲೇಜುಗಳಲ್ಲೂ ಅವನ ಹೆಸರು ಚರ್ಚಿಸಲ್ಪಡುತ್ತದೆ—ಪ್ರಶಾಂತ ಮೆಥೆಡ್, 'ಪ್ರಶಾಂತ ರಿಯಾಕ್ಷನ್' ಡಬ್ಲ್ಯೂ. ಆರ್. ಎನ್ನುವಂತೆ ಮುಂದೆ ಜನ ಪಿ. ಆರ್. ಎನ್ನುತ್ತಾರೆ. ಅನಂತರ? ಟೆಸ್ಟ್ ಟ್ಯೂಬ್ ಬೇಬಿ ಯಾರನ್ನು ಅಮ್ಮಾ ಎಂದು ಕರೆಯುತ್ತದೆ? ಆಗ ಬಹುಶಃ ತಾಯಿ ಎನ್ನುವ ಶಬ್ದವೇ ಹಾಸ್ಯಾಸ್ಪದವಾಗಿ ತೋರಬಹುದು... 'ಮೊದಲು ತಾಯೀ ಅಂತ ಒಬ್ಬಳಿರುತ್ತಿದ್ದಳು: ಗೊತ್ತೇನು?'.... ಅರ್ಧ ನಗ್ನ ಎನ್ನುವುದಕ್ಕಿಂತ ಸ್ವಲ್ಪ ಮುಂದುವರಿದ ಒಬ್ಬ ಹುಡುಗಿ 'ಟೆಲಿಗ್ರಾಫ್'ಯ ಮುಖಾಂತರ ಅಮೇರಿಕನ್ ಪೆಸ್ತ್ರೀಯ ಆನಂದದಿಂದ ಕೇಳುತ್ತಾಳೆ:.... 'ಪ್ರೀಟೆಸ್ಟ್ ಟ್ಯೂಬ್ ಏಜ್....ಹಿ....ಹಿ....'

....ತಾಯಿ ವಸುಂಧರೆ, ಧರತೀ ಮಾತೆ, ತಾಯಿ ತನ್ನ ಮಗುವನ್ನು ಕೊಲ್ಲಲಾರಳು, ಆದರೆ ಪುತ್ರ ತನ್ನ ತಾಯಿಯ ಕೊರಳನ್ನು ಹಿಸುಕಿ ಕೊಲ್ಲಬಲ್ಲ.... ಸಸ್ಯಶ್ಯಾಮಲಾ....

ಭಾರತ ಮಾತಾ ಗ್ರಾಮವಾಸಿನೀ<br>
ಖೇತೋಂ ಮೇಂ ಫೈಲಾ ಹೈ ಶ್ಯಾಮಲ್<br>
ಧೂಲ್ ಭರಾ ಮೈಲಾ—ಸಾ ಅಂಚಲ್

(ಭಾರತಮಾತೆ ಗ್ರಾಮವಾಸಿನಿ. ಗದ್ದೆಗಳಲ್ಲಿ ಇವಳ ಶ್ಯಾಮಲವರ್ಣದ ಧೂಳು ತುಂಬಿದ ಮಾಸಿದ ಸೆರಗು ಹರಡಿದೆ.)

ಮಾಸಿದ ಸೆರಗು! ಆದರೆ ಭೂಮಾತೆಯ ಸೆರಗು ಈಗಲೂ ಸುವರ್ಣಮಯವಾಗಿಯೇ ಇದೆ. ಗೋಧಿಯ ಹಳದಿ ಬಣ್ಣದ ತೆನೆಗಳಿಂದ ತುಂಬಿದ ಗದ್ದೆಯಲ್ಲಿ ಪೂರ್ವದಿಕ್ಕಿನ ಗಾಳಿ ಅಲೆಯನ್ನೆಬ್ಬಿಸುತ್ತದೆ. ಇಡೀ ಹಳ್ಳಿಯ ಜನ ಗದ್ದೆಯಲ್ಲೇ ಸೇರಿರುತ್ತಾರೆ. ಚಿನ್ನದ ನದಿಯಲ್ಲಿ, ಸೊಂಟದವರೆಗಿದ್ದ ಚಿನ್ನದ ನೀರಿನಲ್ಲಿ ಹಳ್ಳಿಯ ಜನ ವಿಹಾರ ಮಾಡುತ್ತಿರುವಂತೆ ಭಾಸವಾಗುತ್ತದೆ. ಚಿನ್ನದ ಅಲೆಗಳು ತಾಳೆ ಮರದ ಪಂಕ್ತಿಗಳು. ಬೇಲದ ಮರಗಳ ಕಾಡು, ಕೋಥಿಯ ತೋಟ,

ಕಮಲದ ಎಲೆಗಳಿಂದ ತುಂಬಿದ ಕಮಲಾನದಿ—ಎಲ್ಲವೂ ಡಾಕ್ಟರ ಕಣ್ಣಿಗೆ ಹೊಸದಾಗಿ ಕಾಣುತ್ತಿವೆ....ಕೋಗಿಲೆಗಳ ಇಂಚರ ಡಾಕ್ಟರ ಹೃದಯದಲ್ಲಿ ಎಂದೂ ನೋವನ್ನು ಹುಟ್ಟಿಸಿರಲಿಲ್ಲ, ಆದರೆ ಗದ್ದೆಗಳಲ್ಲಿ ಗೋಧಿ ಕತ್ತರಿಸುತ್ತಿರುವ ಕೂಲಿಗಾರರ 'ಚೈತೀ' (ಚೈತ್ರ ಮಾಸದಲ್ಲಿ ಕುಯ್ಲಾಗುವಾಗ ಹಾಡುವ ಜಾನಪದ ಗೀತೆ) ಅರ್ಧ ರಾತ್ರಿಯಲ್ಲಿ 'ಕುಹು' 'ಕುಹು' ಗುಟ್ಟುವ ಕೋಗಿಲೆಯ ಗಂಟಲಿನ ಮಾಧುರ್ಯವನ್ನು ಅನುಭವಕ್ಕೆ ತರುತ್ತಿತ್ತು.

ಸಬ ದಿನ ಬೋಲೆ ಕೋಯಲಾ ಭೋರ ಭಿನ
ಸರ ವಾ....ವಾ....ವಾ....
ಬೈರಿನ್ ಕೋಯಲಿಯಾ, ಆಜು ಬೋಲಿಯ, ಅಧೀ
ರತಿಯಾ ಹೋ ರಾಮಾ....ಓ....ಓ.....
ಸೂತಲ ಪಿಯಾಕೆ ಜಗಾದೆ ಹೋ ರಾಮಾ....ಓ....ಓ.....

(ಪ್ರತಿದಿನ ಕೋಗಿಲೆ ಹಗಲಿನಲ್ಲಿ ಕೂಗುತ್ತಿತ್ತು. ಆದರೆ ಈ ಪಾಪಿ ಕೋಗಿಲೆ ಈ ದಿನ ರಾತ್ರಿ ಕೂಗುತ್ತಿದೆ. ಹೇ ರಾಮ, ನಿದ್ರಿಸುತ್ತಿರುವ ನನ್ನ ಪ್ರಿಯನನ್ನು ಎಚ್ಚರಿಸು.)

ಯಾರ ಪ್ರಿಯತಮರ ನಿದ್ದೆಯೂ ಕೆಡದಿರಲಿ. ಗಾಢವಾದ ನಿದ್ರೆಯಲ್ಲಿ ಮಲಗಿರುವ ಪ್ರಿಯಕರನ ತಲೆಯ ಬದಿ ಕುಳಿತು, ಬೀಸುತ್ತಿರುವ ಗೃಹಿಣಿಗೆ ತನ್ನ ಪ್ರಿಯತಮನ ನಿದ್ದೆ ಕೆಟ್ಟುಹೋಗುತ್ತದೇನೋ, ಸ್ವಪ್ನ ಅರ್ಧದಲ್ಲಿ ಕತ್ತರಿಸಿ ಹೋಗುತ್ತದೇನೋ ಎನ್ನುವ ಭಯ.

ಡಾಕ್ಟರಿಗೂ ಯಾರದಾದರೂ ಪ್ರೀತಿಯ, ಮಧುರವಾದ ಮಡಿಲಿನ ಆಶ್ರಯದಲ್ಲಿ ಮಲಗಬೇಕೆನ್ನಿಸುತ್ತಿದೆ. ಆಳವಾದ ನಿದ್ರೆಯಲ್ಲಿ ಮುಳಗಬೇಕೆನ್ನಿಸುತ್ತಿದೆ ಜೀವನದ ರಸ್ತೆಯಲ್ಲಿ ಅವರು ಬಿಡುವಿಲ್ಲದೆ ಓಡುತ್ತಿದ್ದರು. ಅಕ್ಕಪಕ್ಕದಲ್ಲಿ ಹತ್ತಿರದಲ್ಲಿ ಎಲ್ಲಾದರೂ ಒಂದು ಕ್ಷಣವಾದರೂ ವಿಶ್ರಾಂತಿ ತೆಗೆದುಕೊಳ್ಳಲು ಸ್ವಲ್ಪ ನೆರಳೂ ಸಿಕ್ಕಿರಲಿಲ್ಲ. ಅವರು ಯಾವ ಮರದ ಶೀತಲಛಾಯೆಯ ಕಲ್ಪನೆಯನ್ನೂ ಇದುವರೆಗೆ ಮಾಡಿರಲಿಲ್ಲ. ಜೀವನದ ಈ ಹೊಸ ಕಾಲುದಾರಿಯಲ್ಲಿ ಕಾಲಿಡುತ್ತಿರುವ ಈ ಸಮಯದಲ್ಲಿ ಅವರಿಗೆ ಯಾಕೋ ತುಂಬಾ ಆಯಾಸವಾಗುತ್ತಿದೆ. ರಸ್ತೆಯ ಸೌಂದರ್ಯವನ್ನು ಸವಿಯುತ್ತಾ ಮುಗ್ಧರಾಗಿ ಅವರು ನೆರಳಿನಲ್ಲಿ ಬಿದ್ದುಕೊಂಡಿರಲಾರರು. ಗುರಿಯನ್ನು ಮುಟ್ಟಲು ಪ್ರೇರೇಪಿಸುವ ಆ ದಾರಿಯಾದರೂ ಎಷ್ಟು ಬಲವತ್ತರವಾದುದು....ಒಂದು ಕ್ಷಣವಾದರೂ

ವಿಶ್ರಾಂತಿ ತೆಗೆದುಕೊಳ್ಳಲು ಉದಾರ ಆಶ್ರಯವನ್ನು ಅವರೀಗ ಬಯಸುತ್ತಿದ್ದಾರೆ ....ಪ್ರೇಮ....

"ಸೂತಲ್ ಪಿಯಾ ಕೆ ಜಗಾವ ಹೋ ರಾಮಾ"

(ಹೇ ರಾಮ, ನಿದ್ರಿಸುತ್ತಿರುವ ಪ್ರಿಯತಮನನ್ನು ಎಚ್ಚರಿಸು.)

ಪ್ರಿಯತಮ ಎಚ್ಚರಗೊಂಡ, ಗೃಹಿಣಿ ಅವನನ್ನು ಬೀಳ್ಕೊಟ್ಟಳು. ಪ್ರಿಯತಮ ಹೋಗಲೇಬೇಕು. ಹಿಮಾಲಯದ ಶಿಖರವನ್ನು ಉಷೆಯ ಪ್ರಥಮ ಕಿರಣ ಸ್ಪರ್ಶಿಸಿ ಅದನ್ನು ಸ್ವರ್ಣಮಯವಾಗಿ ಮಾಡಿದೆ. ಮಾವಿನ ತೋಪಿನಲ್ಲಿ ಕೋಗಿಲೆಗಳು, ಬುಲ್‌ಬುಲ್ ಪಕ್ಷಿಗಳು ಸಮ್ಮಿಲಿತ ಸ್ವರದಲ್ಲಿ ಮಂಗಳ ಗೀತೆಯನ್ನು ಹಾಡುತ್ತಿವೆ. ಗದ್ದೆಗಳಿಂದ ಗೀತೆಗಳ ಸೂತ್ರ, ಮಲಯ ಮಾರುತದ ಸಹಾಯದಿಂದ ಹಾರಿ ಬರುತ್ತಿದೆ. ಡಾಕ್ಟರ ಮನಸ್ಸು ಅಲ್ಲೋಲ ಕಲ್ಲೋಲ ವಾಗುತ್ತಿದೆ. . . . . . ಗೋಧಿಯ ಕಟಾವು ಆಗುತ್ತಿದೆ. ಪಕ್ವವಾಗಿದ್ದ ಗೋಧಿಯ ತೆನೆಗಳ ಸುಗಂಧ ಸುತ್ತಲೂ ಹರಡಿದೆ.

"ಡಾಕ್ಟರ್"

"ಏನು"

"ಸ್ವಲ್ಪ ಬನ್ನಿ. ನನ್ನ ತಂಗಿಗೆ ವಾಂತಿಯಾಗ್ತಿದೆ."

"ಭೇದಿಯೂ ಆಗುತ್ತಿದೆಯೇನು?"

"ಹೌದು."

ಡಾಕ್ಟರ್ ತಕ್ಷಣ ಸಿದ್ಧವಾಗಿ ಎದ್ದು ಹೊರಟರು. ಹತ್ತಿರದ ಹಳ್ಳಿಗೆ ಹೋಗಬೇಕು. ಡಯೇರಿಯಾ ಇರಬಹುದು. ಆದರೆ 'ಸೆಲಾಯಿನ್ ಆಪರೇಟರ್ಸ'ನ್ನೂ ತೆಗೆದುಕೊಂಡು ಹೋಗುವುದು ಒಳ್ಳೆಯದು.

"ಮೂರು ಬಾರಿ ಭೇದಿಯಾಯಿತು, ಡಾಕ್ಟರ್."

ಹಾಸಿಗೆಯಲ್ಲಿ ಮಲಗಿದ್ದ ಯುವತಿಯ ಮುಖ ಹಳದಿಯಾಗಿತ್ತು. ಅವಳ ಕೈಕಾಲುಗಳು ಹಿಡಿದುಕೊಂಡಿದ್ದವು. ಮೂತ್ರ ವಿಸರ್ಜನೆ ನಿಂತುಹೋಗಿತ್ತು. ....ಲಕ್ಷಣವನ್ನು ನೋಡಿದರೆ ಕಾಲರಾನೇ. ಡಾಕ್ಟರ್ 'ಸೆಲಾಯಿನ್ ಆಪರೇಟರ್ಸ್' ಸರಿಪಡಿಸಿಕೊಂಡರು. ಸ್ಪಿರಿಟ್ ಸ್ಟೋವ್ ಹತ್ತಿಸಿದರು. ನಾರ್ಮಲ್—ಸೆಲಾಯಿನ್‌ನ ಬಾಟಲಿಯನ್ನು ಹೊರತೆಗೆದರು. ಮುದುಕ ತಂದೆ

ಕೈ ಜೋಡಿಸಿಕೊಂಡು ಏನನ್ನೋ ಕೇಳಲು ಪ್ರಯತ್ನಿಸುತ್ತಿದ್ದ. ಕೊನೆಗೆ ಕೇಳಿಯೇ ಬಿಟ್ಟ: "ಡಾಕ್ಟರ್ ನೀವು ಸೂಜಿ ಚುಚ್ತೀರಿ. ಅವಕ್ಕೆ ಎಷ್ಟಾಗುತ್ತೆ?"

ಚಿಕ್ಕ ಸೂಜಿಗೆ ಎರಡು ರೂಪಾಯಿ ಫೀಸಾಗುತ್ತದೆ. ಇಷ್ಟು ದೊಡ್ಡ ಸೂಜಿಗೆ ಖಂಡಿತ ಐವತ್ತು ರೂಪಾಯಾದರೂ ಆಗಬಹುದು.

"ಯಾಕೆ? ಐವತ್ತು ರೂಪಾಯಿ" ಡಾಕ್ಟರ್ ನಕ್ಕು ಹೇಳಿದರು.

"ಹಾಗಾದರೆ ಬೇಡ, ಯಾವುದಾದರೂ ಔಷಧಿ ಕೊಟ್ಟುಬಿಡಿ."

"ಔಷಧಿಯಿಂದ ಏನೂ ಪ್ರಯೋಜನವಾಗುವುದಿಲ್ಲ."

"ಆದರೆ, ನನ್ನ ಹತ್ತಿರ ಅಷ್ಟೊಂದು ಹಣವಿಲ್ಲ."

"ಎತ್ತನ್ನು ಮಾರಿಬಿಡು"—ಡಾಕ್ಟರ್ ಮೊದಲಿನಂತೆಯೇ ನಗುತ್ತಾ ಹೇಳಿ ಸೆಲಾಯಿನ್ ಕೊಡಲು ಸಿದ್ಧರಾದರು.

"ಡಾಕ್ಟರ್ ಎತ್ತು ಮಾರಿಬಿಟ್ಟರೆ ಗದ್ದೆಯ ಕೆಲಸ ಹೇಗೆ ಮಾಡುವುದು? ಮಕ್ಕಳು-ಮರಿ ಉಪವಾಸ ಸಾಯುತ್ತಾರೆ.—ಎಷ್ಟಾದರೂ ಇವಳು ಹುಡುಗಿ."

"ಅಂದರೆ?"

"ಹುಜೂರ್, ಹೆಣ್ಣು ಜಾತಿ, ಔಷಧಿ—ಪಥ್ಯ ಇಲ್ಲದೆ ಚೇತರಿಸಿಕೊಳ್ತಾರೆ." ....ಹೆಣ್ಣು ಜಾತಿ ಔಷಧಿ ಪಥ್ಯವಿಲ್ಲದೆ ಚೇತರಿಸಿಕೊಳ್ತಾರೆ! ಆದರೆ ಇದರಲ್ಲಿ ಬಡಪಾಯಿ ಮುದುಕನ ತಪ್ಪೇನೂ ಇಲ್ಲ. ಸಭ್ಯರೆನ್ನಿಸಿಕೊಳ್ಳುವ ಸಮಾಜದಲ್ಲಿ ಕೂಡಾ ಹುಡುಗಿಯರೆಂದರೆ ಉದಾಸೀನವೇ! ಕಾಡಿನ ಗಿಡ!

ಡಿಗ್—ಡಿವ್, ಡಿಡಿಗ್-ಡಿಡಿಗ್

....ನಾಳೆ ಬೆಳಗ್ಗೆ ಆಸ್ಪತ್ರೆಯಲ್ಲಿ ಕಾಲರಾಕ್ಕೆ ಸೂಜಿ ಚುಚ್ಚುತ್ತಾರೆ. ಎಲ್ಲರೂ ಮಕ್ಕಳು-ಮರಿ, ಮುದುಕರು-ಹುಡುಗರು, ಹೆಂಗಸರು-ಗಂಡಸರು, ಬಂದು ಸೂಜಿ ಚುಚ್ಚಿಸಿಕೊಳ್ಳಬೇಕು."....

ಡಿಗ್ ಡಿಗ್ ಡಿಡಿಗ್

—ಹಳ್ಳಿಯ ಚೌಕೀದಾರ ಡಂಗೂರ ಸಾರಿದ.

ಕಾಲರಾದ ಮೊದಲ ರೋಗಿಯನ್ನೇನೋ ಬದುಕಿಸಿದ್ದಾಯಿತು. ಆದರೆ ಹಳ್ಳಿಯನ್ನು ಉಳಿಸುವುದಕ್ಕಾಗಲಿಲ್ಲ. ಡಂಗೂರ ಸಾರಿಸಿ ಡಾಕ್ಟರ್ ಇಂಜಕ್ಷನ್ ಕೊಡುವ ವಿಚಾರ ಹಳ್ಳಿಗೆಲ್ಲಾ ತಿಳಿಸಿದ್ದೇನೋ ಆಯಿತು. ಆದರೆ ಯಾರೂ

ಬರಲಿಲ್ಲ. ಬಾವಿಗೆ ಔಷಧ ಹಾಕುವುದಕ್ಕೆ ಹೋದಾಗ ಜನ ಗುಂಪು ಕಟ್ಟಿ ಕೊಂಡು ಅದನ್ನು ವಿರೋಧಿಸಿದರು:

"ಬುದ್ಧಿವಂತಿಕೆ ತೋರಿಸಬೇಡಿ. ಬಾವಿಗಳಲ್ಲೇ ಔಷಧಿ ಹಾಕಿ ಡಾಕ್ಟರ್ ಇಡೀ ಹಳ್ಳಿಗೆ ಕಾಲರಾ ಹರಡಬೇಕೂ ಅಂತಿದ್ದಾರೇನೋ. ನಮಗೂ ಗೊತ್ತು."

ಡಾಕ್ಟರ್ ಬಾಲದೇವನಿಗೂ, ಕಾಳೀಚರಣನಿಗೂ, ಚರಖಾ ಕೇಂದ್ರದ ಅಧ್ಯಾಪಕ, ಅಧ್ಯಾಪಕಿಯರಿಗೂ ಹೇಳಿಕಳುಹಿಸಿದರು. ಅವರಿಂದ ಸಹಾಯ ಯಾಚಿಸುತ್ತಾ ಹೇಳಿದರು: "ಜನ ಇಂಜಕ್ಷನ್ ತೆಗೆದುಕೊಳ್ಳದಿದ್ದರೆ, ಬಾವಿಯಲ್ಲಿ ಔಷಧಿ ಹಾಕಲು ಅವಕಾಶ ಕೊಡದಿದ್ದರೆ, ಹಳ್ಳಿಯನ್ನು ಉಳಿಸುವುದು ಕಷ್ಟ."

ಮಧ್ಯಾಹ್ನ ಬಾಲದೇವ, ಕಾಳೀಚರಣ, ಚರಖಾ ಕೇಂದ್ರದ ಅಧ್ಯಾಪಕ ಅಧ್ಯಾಪಕಿಯರೊಂದಿಗೆ, ಡಾಕ್ಟರ್ ಗುಂಪು ಮಾಡಿಕೊಂಡು ಹೊರಟರು. ಬಾವಿಯಲ್ಲಿ ಔಷಧಿ ಹಾಕಿ ಬಂದರು. ಆದರೆ ಸೂಜಿ ಚುಚ್ಚುವುದು ಮಾತ್ರ ದೊಡ್ಡ ಸಮಸ್ಯೆಯೇ ಆಯಿತು. ಕಾಳೀಚರಣ ಹೇಳಿದ:

"ಒಂದು ವಿಚಾರ. ಈದಿನ ಕೋಠಿಯಲ್ಲಿ ಸಂತೆಯಿದೆ. ಸಂತೆ ಆರಂಭವಾದ ಕೂಡಲೇ ಎಲ್ಲ ಕಡೆಗಳಿಂದ ಜನ ಬರುತ್ತಾರೆ. ಸಂತೆಯ ಸುತ್ತಲೂ ಜನ ನಿಂತು ಎಲ್ಲರಿಗೂ ಬಲವಂತವಾಗಿ ಇಂಜಕ್ಷನ್ ಚುಚ್ಚುವುದು. ಬಾಕಿ ಉಳಿದವರಿಗೆ ಅವರ ಮನೆಯಲ್ಲೇ ಇಂಜಕ್ಷನ್ ಕೊಡುವುದು."

ಕಾಳೀಚರಣನ ಈ ಸೂಚನೆ ಡಾಕ್ಟರಿಗೂ ಒಪ್ಪಿಗೆಯಾಯಿತು. ಆದರೆ ಬಾಲದೇವ ಅಡ್ಡಿಪಡಿಸಿದ: "ಯಾರಿಗೂ ಅವರ ಇಷ್ಟಕ್ಕೆ ವಿರೋಧವಾಗಿ, ಬಲವಂತದಿಂದ. . . . "

"ಏನು ಅರ್ಥವಿಲ್ಲದ ಮಾತಾಡ್ತೀರ್ರೀ"

—ಚರಖಾ ಕೇಂದ್ರದ ಅಧ್ಯಾಪಕಿ ಬಾಲದೇವನ ಮಾತನ್ನು ಅರ್ಧಕ್ಕೇ ಕತ್ತರಿಸುತ್ತಾ ಹೇಳಿದಳು:

"ಕಾಳೀಚರಣ ಹೇಳುತ್ತಿದ್ದೇ ಸರಿ."

ಬಾಲದೇವನ ಕಿವಿಯ ತುದಿ ಬಿಸಿಯಾಯಿತು.····ಈ ಹೆಂಗಸಿಗೆ ಮಾತನಾಡುವುದಕ್ಕೂ ಬರುವುದಿಲ್ಲ. ನಾರಿಯ ಸ್ವಭಾವ ಕರ್ಕಶವಾಗಿರಬಾರದು. ಕೊಠಾರಿನ್ ಎಷ್ಟು ಮಧುರವಾಗಿ ಮಾತನಾಡುತ್ತಾಳೆ. ಇವಳು ಗಂಡುಬೀರಿ ಹೆಂಗಸು, ಈ ಚರಖಾ ಕೇಂದ್ರದ ಅಧ್ಯಾಪಕಿ. ಹೂಂ····ಕಾಂಗ್ರೆಸ್ಸಿನ

ಅನೇಕ ಜನ ಮಹಿಳಾ ಕಾರ್ಯಕರ್ತೆಯರನ್ನೂ ನೋಡಿದ್ದೇನೆ····ಮಹಾರಾಜೀ, ತಾರಾವತಿದೇವಿ, ಸರಸ್ವತಿ, ಉಷಾದೇವಿ, ಶಾರದಾದೇವಿ....ಆದರೆ ಯಾರೂ ಇಷ್ಟು ಕರ್ಕಶವಾಗಿ ಮಾತನಾಡುವುದಿಲ್ಲ,····ಹೂಂ ಕಾಳೀಚರಣ ಸರಿಯಾಗೇ ಹೇಳುತ್ತಾನಂತೆ····ಬಲವಂತ ಮಾಡುವುದು ಹಿಂಸಾವಾದವಲ್ಲದೆ ಮತ್ತೇನು?

ಕಾಳೀಚರಣನ ಗುಂಪು ಸಂತೆಯನ್ನು ಸುತ್ತುಗಟ್ಟಿತು. ಡಾಕ್ಟರ್ ಮಾವಿನ ಮರದ ಕೆಳಗೆ ಟೇಬಲ್ ಹಾಕಿಕೊಂಡು ತಮ್ಮ ವಸ್ತುಗಳನ್ನು ಇಟ್ಟುಕೊಂಡು ಸಿದ್ಧವಾದರು. ಕಾಳೀಚರಣ ಒಬ್ಬೊಬ್ಬ ಮನುಷ್ಯನನ್ನೂ ಹಿಡಿದುಕೊಂಡು ಬರುತ್ತಿದ್ದ. ಅಧ್ಯಾಪಕಿ ಸ್ಪಿರಿಟ್ಟಿನಲ್ಲಿ ಅದ್ದಿದ ಹತ್ತಿಯನ್ನು ತೋಳುಗಳಿಗೆ ಸವರುತ್ತಿದ್ದಳು. ಡಾಕ್ಟರ್ ಸೂಜಿ ಚುಚ್ಚುತ್ತಿದ್ದರು. ತಹಸೀಲ್ದಾರ ಸಾಹೇಬರು ಹೆಸರು ಬರೆದುಕೊಳ್ಳುತ್ತಿದ್ದರು. ಸಂತೆಯಲ್ಲೆಲ್ಲಾ ಗಲಿಬಿಲಿ ಆರಂಭವಾಯಿತು. ಆದರೆ ಎಲ್ಲಿಗೆ ಓಡಿಹೋಗುವುದು? ನಾಲ್ಕು ಕಡೆಯೂ ಸೋಷಲಿಸ್ಟ್ ಪಾರ್ಟಿಯ ಸಿಪಾಯಿಗಳು ನಿಂತಿದ್ದಾರೆ.

"ಅಯ್ಯೋ··ಅಮ್ಮಾ··ಮಗೂ ಕಾಳೀ...."

"ಯಾಕಮ್ಮಾ? ಏನಾಯ್ತು?"

"ಮಗೂ"

"ಸಾಕು ಸುಮ್ಮನಿರಮ್ಮ. ಮೈಗೆಲ್ಲಾ ಹಚ್ಚೆ ಹಾಕಿಸಿಕೊಳ್ಳೋವಾಗ ಸೂಜಿ ಚುಚ್ಚಿಸಿಕೊಂಡಿರಲಿಲ್ಲವೇನು?"

ಏಳುನೂರಇಪ್ಪತ್ತೈದು ಜನರಿಗೆ ಸೂಜಿ ಚುಚ್ಚಿದ್ದಾಯಿತು. ಮನೆಯಲ್ಲೇ ಉಳಿದಿದ್ದ ಜನರಿಗೆ ನಾಳೆ ಬೆಳಗ್ಗೆ, ಸೂರ್ಯ ಹುಟ್ಟುವುದಕ್ಕೆ ಮುಂಚೆಯೇ ಚುಚ್ಚಿ ಬಿಡಬೇಕು.

ಡಾಕ್ಟರ್ ಹೇಳಿದರು: "ರೋಗಿಗಳ ಸೇವೆ ಮಾಡೋದಕ್ಕೆ ಸ್ವಯಂ ಸೇವಕರು ಬೇಕು."

ಕಾಳೀಚರಣ ತನ್ನ ಗುಂಪಿನ ಅರವತ್ತು ಜನ ಸ್ವಯಂಸೇವಕರ ಜೊತೆ ರಾತ್ರಿಯೇ ಆಸ್ಪತ್ರೆಯಲ್ಲಿ ಹಾಜರಾದ.

ಚರಖಾ ಕೇಂದ್ರದ ಅಧ್ಯಾಪಕಿಯೂ ತುಂಬಾ ಧೈರ್ಯಶಾಲಿ. ಅವಳು ಸೇವೆ ಮಾಡಲು ತನ್ನ ಹೆಸರು ಬರೆಸಿದಳು.

ಬಾವನದಾಸ ನಕ್ಕು ಹೇಳಿದ : "ನನ್ನನ್ನು ನೋಡಿದರೆ ರೋಗಿಗಳು ಹೆದರಿ ಕೊಳ್ತಾರೆ ಡಾಕ್ಟರ್, ನನಗೆ ಬೇರೆ ಏನಾದರೂ ಕೆಲಸ ಕೊಡಿ."

ಬಾಲದೇವ ಸುಮ್ಮನಿದ್ದ ಅವನಿಗೆ ಕಾಲರಾ ಎಂದರೆ ತುಂಬಾ ಭಯ.

## 28

ಡಾಕ್ಟರ್ ಮನುಷ್ಯನಲ್ಲ, ದೇವತೆ,....ದೇವತೆ!

ತಂತ್ರಿಮ ಸಂಗಡ, ಪೋಲಿಯಾ ಸಂಗಡ, ಕೂರ್ಮಕ್ಷತ್ರೀ ಸಂಗಡ ಮತ್ತು ರೈದಾಸ್ ಸಂಗಡ ಎಲ್ಲಾ ಸೇರಿ ಕೇವಲ ಐದು ಜನ ಮಾತ್ರ ಸತ್ತಿದ್ದರು. ಮನೆ ಮನೆಯಲ್ಲೂ ಒಂದಿಬ್ಬರು ಕಾಯಿಲೆ ಮಲಗಿದ್ದರು. ಆದರೆ ಡಾಕ್ಟರ್ ದೇವತೆ ಹಗಲೂ ರಾತ್ರಿ. ಒಂದು ನಿಮಿಷವಾದರೂ ನಿಶ್ಚಿಂತೆಯಿಂದ ಕೂಡಲಿಲ್ಲ. ಅಧ್ಯಾಪಕಿಯೂ ದೇವಿಯೇ. ಕಾಳೀಚರಣನು ವೀರ! ವಾಂತಿ ಭೇದಿ ತುಂಬಿದ ಹಾಸಿಗೆಯ ಮೇಲೆ ಮಲಗಿದ ರೋಗಿಯ ಸೇವೆ ಮಾಡುವುದು, ಅವರ ಬಟ್ಟೆ ಒಗೆಯುವುದು, ಔಷಧಿ ಹಾಕಿ ಕೊಳಕನ್ನೆಲ್ಲಾ ಸುಡುವುದು ಮನುಷ್ಯನ ಕೆಲಸ ಅಲ್ಲವೇ ಅಲ್ಲ. ದೇವತೆಯು ಮಾತ್ರ ಅದನ್ನೆಲ್ಲಾ ಮಾಡಬಲ್ಲ. ಡಾಕ್ಟರ್ ಒಂದು ಕಾಸು ಫೀಸು ತೆಗೆದುಕೊಳ್ಳ ಲಿಲ್ಲ. ರಾತ್ರಿಯೆಲ್ಲಾ ಎಚ್ಚರವಾಗಿದ್ದು ಜನರಿಗೆ ಚಿಕಿತ್ಸೆ ಮಾಡಿದರು. ರೇಶಮಲಾಲ ಕೋಯರಿಯನ ಏಕಮಾತ್ರ ಪುತ್ರನನ್ನು ಸಾವಿನ ದವಡೆಯಿಂದ ಉಳಿಸಿದರು. ರೇಶಮ ಡಾಕ್ಟರಿಗೆ ಸಂತೋಷದಿಂದ ಒಂದು ಹಸುವನ್ನು ತಂದೊಪ್ಪಿಸಿದ. ಆದರೆ ಡಾಕ್ಟರ್ ಹೇಳಿದರು : "ನಿನ್ನ ಮಗನಿಗೆ ಈ ಹಸುವಿನ ಹಾಲು ಕುಡಿಸು. ಹಾಲನ್ನು ಮಾರಬೇಡ. ಇದೇ ನೀನು ನನಗೆ ಕೊಡುವ ಬಹುಮಾನ."

ಬಾವನದಾಸನೂ ಅವತಾರ ಪುರುಷನೇ ಸರಿ. ರಾತ್ರಿಯೆಲ್ಲಾ ಬೇವಿನ ಮರದ ಕೆಳಗೆ ಕೂತು ಖಂಜರೀ ಬಾರಿಸುತ್ತಾ ಹಾಡುತ್ತಿದ್ದ—"ಸೀತಾರಾಮನೇ ಎಲ್ಲರಿಗೂ ಒಡೆಯ. ಯಾಕೆ ಯೋಚಿಸುತ್ತೀ? ಸೀತಾರಾಮ್ ಸೀತಾರಾಮ್ ವಂದೇ ಮಾತರಂ ಸೀತಾರಾಮ್"

ಭಯಂಕರ ರಾತ್ರಿಯಲ್ಲಿ, ಮನುಷ್ಯ ತನ್ನ ನೆರಳನ್ನು ಕಂಡರೂ ಹೆದರುತ್ತಿದ್ದ ಕಾಲದಲ್ಲಿ, ಬಾವನನ ಗೀತೆ, ಬೆದರಿದ್ದ ಜನರಿಗೆ ಶಕ್ತಿ ಕೊಡುತ್ತಿತ್ತು.

....“ ಮಾಲಿಕ ಸೀತಾರಾಮ್ ಸೋಚೋ ಮನ ಕಾಹೆಕರೋ ”
....“ ನಿರ್ಬಲಕೆ ಬಲರಾಮ್ ”

ಬ್ರಾಹ್ಮಣ ಪಂಗಡದಲ್ಲಿ ಮೂರು ಜನ ಮಾತ್ರ ಸತ್ತರು. ಅದರಲ್ಲೂ ಜೋಯಿಸರ ಹೆಂಡತಿ ಸತ್ತದ್ದು ಬೇರೆ ಕಾರಣದಿಂದ. ಮಗು ಹೊಟ್ಟೆಯಲ್ಲಿ ಅಡ್ಡಡ್ಡವಾಗಿ ಸಿಕ್ಕಿಕೊಂಡುಬಿಟ್ಟಿತ್ತು....ಕಾಯಸ್ಥ ಪಂಗಡ, ಸಂಥಾಲ ಪಂಗಡ ಮತ್ತು ಯಾದವ ಪಂಗಡಗಳಲ್ಲಿ ಒಬ್ಬ ಮನುಷ್ಯನಿಗೂ ರೋಗ ಬರಲಿಲ್ಲ. ರಾಜಪೂತ ಪಂಗಡದಲ್ಲಿ ಏಳೆಂಟು ಜನರಿಗೆ ರೋಗವೇನೋ ತಗುಲಿತು. ಆದರೆ ಡಾಕ್ಟರ್ ಎಲ್ಲರನ್ನೂ ಉಳಿಸಿದರು. ಕಮಲಾ ಡಾಕ್ಟರ ಮುಖವನ್ನು ನೋಡಿದ್ದು ಹದಿನೈದು ದಿನಗಳ ನಂತರ.

ಕಮಲಾ ಮನಸ್ಸಿನಲ್ಲೇ ಎಷ್ಟೋ ಮಾತುಗಳನ್ನು ಅಂದುಕೊಂಡಿದ್ದಳು. ಅವಳು ಸಿಟ್ಟು ಮಾಡಿಕೊಂಡೇ ಇರುತ್ತಾಳೆ, ಮಾತನಾಡುವುದಿಲ್ಲ....ಹದಿನೈದು ದಿನಗಳಲ್ಲಿ ಒಂದು ಬಾರಿಯಾದರೂ ಬರಬಾರದಾಗಿತ್ತೇನು? ಸಾಕು ಬಿಡಿ, ರೋಗ ನನಗೂ ತಗಲುತ್ತದೆಂಬ ಭಯ ತಾನೇ? ನಾನು ಸತ್ತು ಹೋಗಿದ್ದರೆ ನಿಮಗಾಗುತ್ತಿದ್ದ ನಷ್ಟವೇನು? ಚರಖಾ ಕೇಂದ್ರದ ಅಧ್ಯಾಪಕಿ ಇದ್ದಳಲ್ಲಾ....ರಾತ್ರಿಯೆಲ್ಲಾ ಚೆನ್ನಾಗಿ ಚಹಾ ಮಾಡಿ ಕುಡಿಸುತ್ತಿದ್ದಳೇನೋ.

ಆದರೆ ಡಾಕ್ಟರನ್ನು ನೋಡಿದ ಕೂಡಲೇ ಅವಳು ಎಲ್ಲಾ ಮಾತೂ ಮರೆತುಬಿಟ್ಟಳು. ಡಾಕ್ಟರ ಮುಖ ಕಪ್ಪಗಾಗಿತ್ತು. ಕಣ್ಣುಗಳು ಒಳಗೆ ಹೋಗಿದ್ದವು. ಸ್ವಾರೂ ಹೇಳುವುದು ಸರಿಯೇ. “ಪ್ರಪಂಚದ ಜನರ ಯೋಗಕ್ಷೇಮವನ್ನೆಲ್ಲಾ ಡಾಕ್ಟರ್ ನೋಡಿಕೊಳ್ಳುತ್ತಾರೆ. ಆದರೆ ತಾವು ಮಾತ್ರ ಕಾಯಿಲೆ ಬೀಳುತ್ತಾರೆ. ಊಟ ತಿಂಡಿ ಎಲ್ಲಾ ಕಡಮೆಮಾಡಿ ಬಿಟ್ಟಿದ್ದಾರೆ.”....ಕಮಲಾ ಯೋಚಿಸಿದಳು. ‘ತಾಯಿ ಸ್ವಲ್ಪ ಹೊತ್ತಾದರೂ ಡಾಕ್ಟರ್ ಒಬ್ಬರನ್ನೇ ಬಿಟ್ಟು ಹೋದರೆ ತಾನು ಅವರನ್ನು ತಬ್ಬಿಕೊಳ್ಳಬಹುದು!’

“ಏನು ಸಮಾಚಾರ ಕಾಲರಾ ಡಾಕ್ಟರೇ” ಕಮಲಿ ನಗುತ್ತಾ ಡಾಕ್ಟರ ಹತ್ತಿರ ಬಂದಳು.

"ಕಾಲರಾ ಡಾಕ್ಟರ್? ಹುಡುಗಿ ಮಾತು ಕೇಳಿದಿರೇನು?.... ಏನ ದಿನಕ್ಕೆ ನೀನ್ಯಾಕೆ ಹೀಗಾಗ್ತಿದ್ದೀ?"

ತಾಯಿ ಗದರಿಸಿದಳು.

"ಸರಿಯಪ್ಪ, ರಾಮಪುರದ ಜನ ಆದಿನ ಅಪ್ಪನ ಹತ್ತಿರ ಕಾಲರಾ ಡಾಕ್ಟರ್ ಎಲ್ಲಿ ಅಂತ ಕೇಳ್ತಿರಲಿಲ್ಲವೇನಮ್ಮ? ಜನ ಅವರನ್ನು ಕರೆಯೋದೇ ಕಾಲರಾ ಡಾಕ್ಟರ್ ಅಂತ."

ಕಮಲಾ ಕಿಲಕಿಲನೆ ನಕ್ಕಳು.

ತಾಯಿ ನಗುತ್ತಾ ಒಳಗೆ ಹೋದಳು. ಡಾಕ್ಟರು ನಸುನಗೆಯಿಂದ ಹೇಳಿದರು:

"ಬೇರೆ ಜನರೇನೋ ನನ್ನ ಕಾಲರಾ ಡಾಕ್ಟರ್ ಅಂತ ಕರೀತಾರೆ. ಆದರೆ ನೀನು ಮೂರ್ಖ ಡಾಕ್ಟರೂ ಅನ್ನಬೇಕು."

"ಆಹಾ–ಹಾ. ಈ ಮೂರ್ಖ ಡಾಕ್ಟರ ಮುಖ ಹದಿನೈದು ದಿನಗಳಾದ ಮೇಲೆ ಬಿದಿಗೆ ಚಂದ್ರನ ಹಾಗೆ ಈವತ್ತು ಕಾಣಿಸಿದೆ. ಮಾತನಾಡೋದು ನೋಡ ಲಿಲ್ಲ." ಕಮಲಿ ಮುಖ ಉಬ್ಬಿಸಿ ಹೇಳಿದಳು.

"ಇಲ್ಲ ಕಮಲಾ, ಈ ದಿನಗಳಲ್ಲೆಲ್ಲಾ ನನಗೆ ನಿನ್ನದೇ ಭಯ ಆಗಿತ್ತು—ನೀನು ಏನಾದರೂ ಗಡಿಬಿಡಿ ಮಾಡಿದ್ರೆ ಏನಾಗುತ್ತೋ ಅಂತ."

"ಹಾಗಾದರೆ ನನಗೆ ಬೇಕೂಂತ ಜ್ಞಾನ ತಪ್ಪುತ್ತಿತ್ತೇನು?"

"ಹೌದು. ಬೇಕೂ ಅಂತಾನೇ."

"ಯಾಕೆ?"

"ಯಾಕೇ ಅಂದರೆ, ಜ್ಞಾನ ತಪ್ಪಿದರೆ ಮೂರ್ಖ ಡಾಕ್ಟರ್ ಬರ್ತಾನೆ!"

"ಮಹಾ, ಡಾಕ್ಟರ್ ಬಂದರೆ ಬರಲಿ, ಬಿಟ್ಟರೆ ಬಿಡಲಿ, ನನಗೇನಂತೆ?"

"ಸರಿ ಹಾಗಾದರೆ ನಾನು ಹೋಗ್ತೀನಿ."

"ಹೂಂ."

"ಡಾಕ್ಟರ್ ಇಷ್ಟು ದಿನಗಳ ಮೇಲೆ ಬಂದಿದ್ದಾರೆ. ಅವರಿಗೆ ಚಹಾ ಮಾಡಿ ಕೊಡೋದು ಬಿಟ್ಟು, ಕೂತ್ಕೊಂಡು ಜಗಳಾ ಆಡ್ತಿದಾಳೆ." ತಾಯಿ ಒಳಗಡೆ ಯಿಂದಲೇ ಹೇಳಿದಳು.

ಕಮಲಾ ಹಲ್ಲಿನಿಂದ ನಾಲಿಗೆ ಕಚ್ಚಿಕೊಂಡು ಒಳಗಡೆ ಓಡಿಹೋದಳು. ತಾಯಿ ಬಹುಶಃ ಎಲ್ಲಾ ಮಾತುಗಳನ್ನು ಕೇಳಿಸಿಕೊಂಡಳೇನೋ!

ಈಬಾರಿ ಡಾಕ್ಟರ್ ಸುತ್ತಮುತ್ತಲ ಹದಿನೈದು ಗ್ರಾಮಗಳ ಪರಿಚಯ ಮಾಡಿಕೊಂಡರು. ಭಯ ಕಾತುರಗಳಿಂದ ತುಂಬಿದ ಮನುಷ್ಯರನ್ನು ನೋಡಿದರು. ರೋಗಿಗಳ ನಿರಾಶೆಹೊಂದಿದ ಕಣ್ಣಿನ ಭಾಷೆಯನ್ನು ಅರಿಯಲು ಪ್ರಯತ್ನಿಸಿದರು. ಮಧ್ಯಮ ಆದಾಯದ ರೈತರ ಮನೆಗಳಿಗೆ, ಭೂಮಿಯಿಲ್ಲದ ಕೂಲಿಗಾರರ ಗುಡಿಸಲುಗಳಿಗೆ ಹೋಗುವ ಸೌಭಾಗ್ಯ ಅಥವಾ ದೌರ್ಭಾಗ್ಯ ಅವರಿಗೆ ಪ್ರಾಪ್ತವಾಗಿತ್ತು. ರೋಗಿಗಳನ್ನು ಪರೀಕ್ಷಿಸಿ ಎದ್ದ ಕೂಡಲೇ, ಮೇಲ್ಛಾವಣಿಗೆ ತಗುಲಿಹಾಕಿದ್ದ ಖಾಲಿ ಮಡಕೆಗಳು ಅವರ ತಲೆಗೆ ತಗಲುತ್ತಿದ್ದವು. ಏಳು ತಿಂಗಳ ಮಗುವೂ ಅನ್ನ ಸಾರು ತಿಂದು ಬೆಳೆಯುತ್ತಿರುವುದನ್ನು ಅವರು ನೋಡಿದರು. ಬಡತನ, ಕೊಳಕು ಮತ್ತು ಅಜ್ಞಾನ ತುಂಬಿದ ಈ ಪ್ರಪಂಚದಲ್ಲೂ ಸೌಂದರ್ಯ ಜನ್ಮ ತಾಳುತ್ತದೆ. ಕಿಶೋರ–ಕಿಶೋರಿಯರ ಮತ್ತು ಯುವತಿಯರ ಮುಖದಲ್ಲಿ ಒಂದು ವಿಶೇಷತೆಯನ್ನು ಅವರು ಕಂಡರು. ಕಮಲಾನದಿಯ ದಿಣ್ಣೆಗಳಲ್ಲಿ ಅರಳಿದ ಕಮಲದ ಹೂವುಗಳಂತೆ ಜೀವನದ ಉದಯಕಾಲದಲ್ಲಿ ಅವರು ತುಂಬಾ ಮುಗ್ಧರಾಗಿ, ಮನೋಹರವಾಗಿ, ಸುಂದರವಾಗಿ ಕಾಣುತ್ತಿದ್ದರು. ಸೂರ್ಯನ ಶಾಖ ಹೆಚ್ಚಿದಂತೆ ಆ ಹೂವುಗಳು ಬಾಡಿಹೋಗುತ್ತಿದ್ದವು. ಸಂಜೆಯಾಗುವುದಕ್ಕೆ ಮುಂಚೆಯೇ ದಳಗಳೆಲ್ಲಾ ಉದುರಿಹೋಗುತ್ತಿದ್ದವು....ಕಾಶ್ಮೀರದ ಕಮಲಗಳಲ್ಲಿ ಮತ್ತು ಪೂರ್ಣಿಯಾದ ಕಮಲಗಳಲ್ಲಿ ಇರುವ ವ್ಯತ್ಯಾಸ ಬಹುಶಃ ಇದೇ.... ಕಮಲಿಯಂತೂ ರಾಜಕಮಲ.

"ನಾನು ಇನ್ಮೇಲೆ ನಿನ್ನ ರಾಜಕಮಲಾ ಅಂತ ಕರೀತೀನಿ."

"ನಾನು ನಿನ್ನ ಪ್ರಶಾಂತ ಮಹಾಸಾಗರ ಅಂತ ಕರೀತೀನಿ."

ಕಮಲಾ ಇದ್ದಕ್ಕಿದ್ದಂತೆ ಡಾಕ್ಟರನ್ನು ನೀನು ಎಂದು ಕರೆದುಬಿಟ್ಟಿದ್ದಳು.

"ಪ್ರಶಾಂತಮಹಾಸಾಗರದಲ್ಲಿ ರಾಜಕಮಲ ಅರಳುವುದಿಲ್ಲ. ಕಮಲಾನದಿಯ ದಿಣ್ಣೆಯಾಗಿಯೇ ಇರಲು ನನ್ನ ಇಷ್ಟ" ಎನ್ನುತ್ತಾ ಡಾಕ್ಟರ್ ನಕ್ಕರು.

ಕಮಲಿಯ ದೊಡ್ಡ ದೊಡ್ಡ ರೆಪ್ಪೆಗಳು ಒಮ್ಮೆ ಮೇಲೆದ್ದು ಮತ್ತೆ ಕೆಳಗೆ ಬಾಗಿದವು.

"ನೀವು ಇಷ್ಟು ದಿನವಾದರೂ ನನಗೆ ನಿಮ್ಮ ಆಸ್ಪತ್ರೇನೇ ತೋರಿಸಿಲ್ಲವಲ್ಲಾ? ನಿಮ್ಮ ಇಲಿ, ಮೊಲ, ನರಿ, ಮುಂಗಸಿ...."

"ನಿನ್ನ ತಂದೆ ತಾಯಿ ನೀನು ಆಸ್ಪತ್ರೇಗೆ ಬರೋದಕ್ಕೆ ಒಪ್ತಾರ್ಯೇ?"

"ಯಾಕೆ ಒಪ್ಪೋಲ್ಲ?"

"ಸರಿ ಹಾಗಾದರೆ ನಡಿ, ಈವತ್ತೇ ಕರ್ಕೊಂಡು ಹೋಗ್ತೀನಿ."

ಕಮಲಾ ಡಾಕ್ಟರ ಜೊತೆ ಆಸ್ಪತ್ರೆಯ ಕಡೆ ನಡೆದಳು. ಚೈತ್ರದ ಸೂರ್ಯ ಪಶ್ಚಿಮದ ಕಡೆ ನಿಷ್ಪ್ರಾಣನಾಗಿ ಇಳಿಯುತ್ತಿದ್ದ. ಪೂರ್ಣಿಮೆಯ ಚಂದ್ರನಂತೆ ಕಾಣುತ್ತಿದ್ದ. ದಿನವೆಲ್ಲಾ ಧೋ ಧೋ ಎಂದು ಬೀಸುವ ಪಶ್ಚಿಮದ ಗಾಳಿ ಶಾಂತ ವಾಗಿತ್ತು.

ಹಳ್ಳಿಯ ನೀರಿನ ಘಟ್ಟಗಳಲ್ಲಿ ನೀರು ತುಂಬಿಕೊಳ್ಳುತ್ತಿದ್ದ ಹೆಂಗಸರೆಲ್ಲಾ ಕಣ್ಣರಳಿಸಿ ಇಬ್ಬರನ್ನೂ ನೋಡುತ್ತಾ ನಿಂತರು. ಜಗಳಗಳು ಅರ್ಧಕ್ಕೇ ನಿಂತವು. ನೀರು ತುಂಬುವುದೂ ಮರೆತುಹೋಯಿತು. ದೃಷ್ಟಿಯಿಂದ ಮರೆಯಾದ ಮೇಲೆ ಎಲ್ಲರೂ ಬಾಯಿ ಬಿಟ್ಟು ತಮ್ಮ ತಮ್ಮ ಅಭಿಪ್ರಾಯಗಳನ್ನು ಹೇಳಲಾರಂಭಿಸಿದರು. ....ಕಮಲಿ ಈಗ ಆರೋಗ್ಯವಾಗಿದ್ದಾಳೆ, ಡಾಕ್ಟರ್ ಅವಳನ್ನು ಉಳಿಸಿಬಿಟ್ಟರು. ....ಇಬ್ಬರ ಜೊತೆ ಎಷ್ಟು ಚೆನ್ನಾಗಿದೆ....ಸತಲರೈನಾ ಬೈಸ್ಕೋಪಿನ ಒಂದು ಪುಸ್ತಕ ತಂದಿದ್ದಾನೆ. ಅದರಲ್ಲಿ ಇಂಥದೇ ಒಂದು ಜೋಡಿ ಅಚ್ಚಾಗಿದೆ. ಹೀಗೇನೇ ....ಡಾಕ್ಟರೂ ಕಾಯಸ್ಥರೇ ಏನು? ಅವರು ಯಾವ ಜಾತಿ? ಯಾರಿಗೆ ಗೊತ್ತಮ್ಮ, ಚಿಕಿತ್ಸೆ ಮಾಡ್ತಾ ಮಾಡ್ತಾನೇ....ಏನು ಒದರ್ತೀ? ತಲೆಯ ಬಿಸಿಯೆಲ್ಲಾ ಸಂಜೆ ಮೈದಾನದಲ್ಲಿ ಓಡಾಡಿದ್ರೆ ತಂಪು ಆಗುತ್ತೆ ಗೊತ್ತಿಲ್ವೇನು?

ಚಿಕ್ಕಮ್ಮ ಮಾತ್ರ ಈ ಜೋಡಿಯನ್ನು ಕಂಡ ಕೂಡಲೇ ತಾನೇ ಮರೆಯಾಗಿ ನಿಂತಳು. ಸೆರಗನ್ನು ಹರಡಿ ಮನಸ್ಸಿನಲ್ಲೇ ಆಶೀರ್ವಾದ ಮಾಡಿದಳು: 'ಇವರಿಗೆ ಒಳ್ಳೇದು ಮಾಡು ಕಮಲಾತಾಯಿ.' ಗಣೇಶ ಹತ್ತಿರದಲ್ಲೇ ಗೋಲಿ ಆಡುತ್ತಿದ್ದ. ಅವನು ಗಟ್ಟಿಯಾಗಿ ಕಿರುಚಿಕೊಂಡ: ....

**ಪೂರಬ್ ಸೇ ಸಾಹೇಬ ಆಯಾ**
**ಪಶ್ಚಿಮ ಸೇ ಮೇಮ್**
**ಸಾಹೇಬ್ ಬೋಲೆ ಗಿಟಲ್-ಪಿಟಲ್**
**ಖಿಲ್ ಖಿಲ್ ಹಸೆ ಮೇಮ್.**

(ಪೂರ್ವದಿಂದ ಸಾಹೇಬ ಬಂದ, ಪಶ್ಚಿಮದಿಂದ ಮೇಡಂ ಬಂದಳು. ಸಾಹೇಬ ಗಿಟಲ್-ಪಿಟಲ್ ಎಂದು ಮಾತನಾಡಿದ. ಮೇಡಂ ಕಿಲಕಿಲನೆ ನಕ್ಕಳು.)

ಕಮಲಾ ಮತ್ತು ಡಾಕ್ಟರ್ ಹಿಂತಿರುಗಿ ನೋಡಿದರು. ಗಣೇಶ ಚಪ್ಪಾಳೆ ತಟ್ಟಿಕೊಂಡು ನಗುತ್ತಿದ್ದ: "ಅಜ್ಜೀ, ಅಲ್ಲಿ ನೋಡು, ಸಾಹೆಬ್–ಮೇಮ್."

ಇಬ್ಬರೂ ನಗುತ್ತಾ ಚಿಕ್ಕಮ್ಮನಿಗೆ ನಮಸ್ಕಾರ ಮಾಡಿದರು. ಗಣೇಶ ಓಡಿ ಹೋಗಿ ಕಮಲಿಯ ಸೆರಗಿನ ಮರೆಯಲ್ಲಿ ಅವಿತುಕೊಂಡ. ಕಮಲಾ ಕೂಗಿ ಕೊಂಡಳು: "ಸ್ವಲ್ಪ ಇರಿ ಗಣೇಶರಾಯರೇ, ಕಿವಿ ಹಿಡಿದೆತ್ತಿ ಚಂದ್ರನ್ನ ತೋರಿಸಿ ಬಿಡ್ತೀನಿ."

ರಸ್ತೆಯಲ್ಲಿ ತಹಸೀಲ್ದಾರರು ಸಿಕ್ಕಿದರು. ನಗುತ್ತಾ ಹೇಳಿದರು: "ಈವತ್ತು ಬಹುಶಃ ಈ ಹೊಸ ಹುಚ್ಚು ತಲೆಗೇರ್ತ್ತೀನೋ....ಒಳ್ಳೇದು, ಬೆಳಗ್ಗಿನ ಸಂಜೆಯ ಗಾಳಿ ಆರೋಗ್ಯಕ್ಕೆ ಒಳ್ಳೇದು."

ಎಲ್ಲರೂ ಒಟ್ಟಿಗೆ ನಕ್ಕರು.

ಕೋಠಿಯ ತೋಟವಲ್ಲಿ ಗುಲ್‌ಮೊಹರ್ ಹೂವಿನ ರೆಂಬೆಗಳು ಬೆಂಕಿ ಹತ್ತಿಸಿ ದಂತಿದ್ದ ಕೆಂಪು ಕೆಂಪು ಹೂವುಗಳಿಂದ, ಗಾಳಿಯ ಮೆದು ಹೊಡೆತಕ್ಕೆ ತೂಗಾಡು ತ್ತಿದ್ದವು. 'ಅಮಲತಾಸ್' ಗಿಡದ ಹಳದಿಯ ಹೂವುಗಳು ನವವಧುವಿನ ಹಳದಿಯ ಮುಸುಕನ್ನು ನೆನಪಿಗೆ ತರುತ್ತಿದ್ದವು. ಯೋಜನಗಂಧಿಯಾದ ಸಂಜೆಯ ಗಾಳಿ ಸುತ್ತಲೂ ಮತ್ತತೆಯನ್ನು ಹರಡುತ್ತಿತ್ತು. ಶಿರೀಷ ಪುಷ್ಪಗಳ ದಳಗಳು ಮಂಗಳಾಶೀರ್ವಾದದಂತೆ ತಲೆಯ ಮೇಲೆ ಸುರಿಯುತ್ತಿದ್ದವು....ಮಾರ್ಟಿನ್ ತುಂಬಾ ಮುಂದಾಲೋಚನೆಯಿಂದ ಹೂವಿನ ಗಿಡಗಳನ್ನು ಹಾಕಿರಬಹುದು. ತೋಟ ಮಾಡಿಸುವಾಗ ಅವನು ಇಂಥದೇ ಸಂಜೆಯ ಕಲ್ಪನೆ ಮಾಡಿಕೊಂಡಿರ ಬಹುದು. ಬಾಹುಗಳಲ್ಲಿ ಬಂಧಿತಳಾಗಿದ್ದ ಮೇರಿಯ ಕೆಂಪು ತುಟಿಗಳ ಹೊಸತನ ವನ್ನು ಮತ್ತಷ್ಟು ಜೀವಂತವಾಗಿಡಲು ಯೋಚಿಸಿರಬೇಕು. ನೀರು ಹಾಕುವ ಮಾಲಿಗಳನ್ನು ಗದರಿಸಿಕೊಳ್ಳುತ್ತಾ ಅವನು ಹೇಳಿರಬಹುದು...."ನೋಡು, ಒಂದು ಮರವೇನಾದರೂ ಒಣಗಿಹೋದರೆ ನಿನಗೆ ಐವತ್ತು ಏಟು ಹಾಕಿಸ್ತೀನಿ."

ಚೈತ್ರದ ಗೋಧೂಳಿ ಸಮಯದಲ್ಲಿ ತನ್ನ ತೇಜಸ್ಸನ್ನೆಲ್ಲಾ ಕಳೆದು ಕೊಂಡು ಸೂರ್ಯ ಶ್ಯಾಮಲ ವರ್ಣದ ಸಂಧ್ಯೆಯ ಸೆರಗಿನಲ್ಲಿ ತನ್ನ ಮುಖ ಮುಚ್ಚಿಕೊಂಡ. ದೂರದವರೆಗೆ ಹಬ್ಬಿದ್ದ ತಾಳೆಮರದ ಪಂಕ್ತಿಗಳು ಕೊಂಚ ಮಣ್ಣಿನ ಬಣ್ಣದ, ಕೊಂಚ ಸಿಂಧೂರ ವರ್ಣದ ಪೃಷ್ಠಭೂಮಿಯಲ್ಲಿ ತಲೆ ಎತ್ತಿ ನಿಂತು ಸೂರ್ಯನ ಬಿಂಬ ಆಳದಲ್ಲಿ ಮುಳುಗುತ್ತಿರುವುದನ್ನು ನೋಡುತ್ತಿದ್ದವು.

ದನಗಳ ಮಂದೆಯೊಡನೆ ಮನೆಗೆ ಹಿಂತಿರುಗುತ್ತಿದ್ದ. ದನಗಾಹಿಗಳು ಸಾವಿತ್ರೀ-ನೃತ್ಯದ ಗೀತೆಯನ್ನು ಹಾಡುತ್ತಿದ್ದರು:

ಅಹೆ ಸಖಿ ಚಲೂ ಫುಲವಾರೀ ದೇಖೆ ಹೇ
ದೇಖಿಬೋ ಸುಂದರ ರೂಪ್
ನಾನಾ ರಸನಾ ಫೂಲ್ ಅನೂಪ್,
ಚಲೂ ಫುಲವಾರೀ ದೇಖೆ ಹೇ.

ಹೇ ಸಖಿ, ಉದ್ಯಾನವನಕ್ಕೆ ಹೋಗೋಣ ಬಾ. ಅಲ್ಲಿನ ಸುಂದರ ದೃಶ್ಯವನ್ನು ನೋಡಿ ಬರೋಣ. ಅಲ್ಲಿ ನಾನಾ ವಿಧವಾದ ಅಪರೂಪದ ಪುಷ್ಪಗಳು ಅರಳಿವೆ. ಸಖಿ, ಉದ್ಯಾನವನವನ್ನು ನೋಡೋಣ ಬಾ.

ಗುಲಮೊಹರಿನ ಕೆಂಪು ಹೂಗಳ ಬೆಳಕು ಆರಿಹೋಯಿತು. 'ಅಮಲತಾಸ್'ನ ಹಳದಿಯ ಮುಸುಕು ಯಾವಾಗ ಜಾರಿಬಿತ್ತೋ ತಿಳಿಯದು. ಆದರೆ ಯೋಜನಗಂಧಿ ಈಗಲೂ ತಲೆಗೆ ಅಮಲೇರಿಸುತ್ತಿದೆ....ಡಾಕ್ಟರ್ ದೇವತೆಯಾಗುವುದರ ಬದಲು, ಮನುಷ್ಯರಾಗಲು ಇಷ್ಟಪಡುತ್ತಿದ್ದಾರೆ....

ಒಂದು ಜೊತೆ ನಿರ್ಮಲ ಕಣ್ಣುಗಳ ರೆಪ್ಪೆಗಳು ಸ್ವಲ್ಪ ಮೇಲೆದ್ದು ಮತ್ತೆ ನೆಲದ ಕಡೆ ಬಾಗಿದವು.

## 29

ನಾಳೆ 'ಸಿರವಾ' ಹಬ್ಬ.

ಮುಂದಿನ ಪಾಡ್ಯದ ದಿನ 'ಮಛಮರೀ' ಅಂದರೆ ಮೀನಿನ ಬೇಟೆ ನಡೆಯುತ್ತದೆ. ಇಂದು ಚೈತ್ರ ಸಂಕ್ರಾಂತಿ. ನಾಳೆ ಮೊದಲ ವೈಶಾಖ, ವರ್ಷದ ಮೊದಲ ದಿನ. ನಾಳೆ ಹಳ್ಳಿಯ ಜನರೆಲ್ಲಾ ಸಾಮೂಹಿಕವಾಗಿ ಮೀನು ಹಿಡಿಯುತ್ತಾರೆ. ಚಿಕ್ಕವರು-ದೊಡ್ಡವರು, ಶ್ರೀಮಂತರು, ಬಡವರು—ಎಲ್ಲಾ ಗೂಡೆಗಳನ್ನೂ ಬಲೆಗಳನ್ನೂ ಹಿಡಿದುಕೊಂಡು ಬೆಳಗಾಗುತ್ತಲೇ ಮನೆಯಿಂದ ಹೊರಡು

ತ್ತಾರೆ. ಇಂದು ಮಧ್ಯಾಹ್ನ ಸತ್ವದ ಹಿಟ್ಟನ್ನು ತಿನ್ನುತ್ತಾರೆ. ಇಂದು ಸತ್ವದ ಹಿಟ್ಟಿನ ಹಬ್ಬ. ಇಂದು ರಾತ್ರಿ ತಯಾರಿಸಿದ ಪದಾರ್ಥಗಳನ್ನು ನಾಳೆ ತಿನ್ನಬೇಕು. ನಾಳೆ ಒಲೆಯನ್ನೇ ಹಚ್ಚಿಸಬಾರದು. ವರ್ಷದ ಹನ್ನೆರಡು ತಿಂಗಳು ಒಲೆ ಉರಿಸುವುದರಿಂದ ವರ್ಷದ ಮೊದಲ ದಿನವಾದರೂ ಒಲೆ ಹಚ್ಚದೆ ಭೂಮಿಯನ್ನು ತಂಪಾಗಿಡಬೇಕಾದುದು ಅವಶ್ಯಕ. ಅಲ್ಲದೆ, ಈ ವರ್ಷ ಬೇಯಿಸಿದ ಪದಾರ್ಥ ವನ್ನು ಮುಂದಿನ ವರ್ಷ ತಿನ್ನುವುದು ಸಂಪ್ರದಾಯ.

ಇಡೀ ಮೇರೀಗಂಜಿನಲ್ಲಿ ಮೀನು ಹಿಡಿಯುವ ನಾಯಕ ಕಾಳೀಚರಣ. ಶುಕ್ರ ಹುಟ್ಟುವ ಹೊತ್ತಿಗೇ ಹೊರಡಬೇಕು. ಹನ್ನೆರಡು ಹರಿದಾರಿ ದಾಟಿ ಹೋಗಬೇಕು. ಈ ಬಾರಿ ಮೆರವಣಿಗೆ ಮಾಡಿಕೊಂಡು ಕೆಂಪು ಬಾವುಟದೊಂದಿಗೆ ಹೋಗಬೇಕೆಂದು ಕಾಳೀಚರಣ ಘೋಷಣೆ ಮಾಡಿದ್ದಾನೆ. ಘೋಷಣೆಗಳನ್ನು ಕೂಗಬೇಕಂತೆ. ಜಮೀನ್ದಾರ ಫೈಜಬಕ್ಷ್ ಅಲೀ, ಪಾಡ್ಯದ ದಿನ ನದಿಯಲ್ಲಿ ಮೀನು ಹಿಡಿಯಬಾರದೆಂದು ಆಜ್ಞೆ ಹೊರಡಿಸಿದ್ದಾನೆ. 'ಸೈನಿಕರನ್ನು ಕಾವಲಿಡು ತ್ತೇವೆ. ಮೀನು ಹಿಡಿಯಲು ಬಿಡುವುದಿಲ್ಲ' ಎಂದು ಅವನ ಗುಮಾಸ್ತರು ತಿಳಿಸಿ ದ್ದಾರೆ. ಆ ಸೈನಿಕರು ಹೇಗಿರುತ್ತಾರೋ ನೋಡಬೇಕು!

ಹೊಸ ತಹಸೀಲ್ದಾರ ಹರಗೌರಿಸಿಂಹನ ಮನೆಯಲ್ಲಿ ಹೊಸ ಲೆಕ್ಕ-ಪತ್ರ ಆರಂಭವಾಗುತ್ತದೆ. ಸಂಜೆ ಸತ್ಯನಾರಾಯಣ ಪೂಜೆ ನಡೆಯುತ್ತದೆ. ಡಾಕ್ಟರಿಗೂ ಆಮಂತ್ರಣವಿದೆ.

ತಹಸೀಲ್ದಾರ ವಿಶ್ವನಾಥಪ್ರಸಾದರು ತಹಸೀಲ್ದಾರಿಯನ್ನೇನೋ ಬಿಟ್ಟು ಬಿಟ್ಟರು. ಅಂದರೆ ಹೊಸ ಲೆಕ್ಕದ ಪುಸ್ತಕ ಆರಂಭಿಸಬೇಡವೇ? ಅವರ ಮನೆ ಯಲ್ಲೂ ಸತ್ಯನಾರಾಯಣ ವ್ರತ ನಡೆಯುತ್ತದೆ. ಡಾಕ್ಟರಿಗೂ ಆಮಂತ್ರಣವಿದೆ.

ಹೋಲಿ ಹಬ್ಬದ ದಿನ ಡಾಕ್ಟರ್ ಮೌಸಿಯ ಮನೆಯಲ್ಲಿ ಊಟ ಮಾಡಲಿಲ್ಲ. ಈವತ್ತು ಅವರು ಅಲ್ಲೇ ಊಟ ಮಾಡಬೇಕು.

ಮಠದಲ್ಲೂ ಹೊಸ ಲೆಕ್ಕದ ಪುಸ್ತಕ ತೆಗೆಯಬೇಕು. ಈ ಬಾರಿ ನವ ಮಹಂತ ರಾಮದಾಸನ ಕೈಯ್ಯಿಂದಲೇ ಹೊಸ ಪುಸ್ತಕ ಆರಂಭವಾಗುತ್ತದೆ. ಅದಕ್ಕಾಗಿ ವಿಶೇಷ ಏರ್ಪಾಡುಗಳು ನಡೆಯುತ್ತಿವೆ. ಆ ದಿನದ ಕಾರ್ಯಕ್ರಮಗಳು ಬೀಜಕ ಪಾಠ, ಸಾಹೇಬರ ಭಜನಾವಳಿ, ಧ್ಯಾನ, ಕೊನೆಗೆ ವೈಷ್ಣವ ಭೋಜನ. ಬಾಲ ದೇವನಿಗೆ, ಬಾವನದಾಸನಿಗೆ ವಿಶೇಷ ಆಹ್ವಾನವಿತ್ತು. ಲಕ್ಷ್ಮಿದಾಸಿ ಭಂಡಾರಿ

ಯೊಂದಿಗೆ ಹೇಳಿಕಳುಹಿಸಿದ್ದಳು: "ಬಾಲದೇವ, ಖಂಡಿತ ಬರಬೇಕು. ಅವರನ್ನು ಬಿಟ್ಟರೆ ಹಳ್ಳಿಯಲ್ಲಿ ಬೇರೆ ವೈಷ್ಣವರು ಯಾರಿದ್ದಾರೆ?"

ವೈರ್‌ಲೆಸ್ ಸುಮರಿತದಾಸ ಈಗ ಹೊಸ ತಹಸೀಲ್ದಾರರ ಏಜೆಂಟ್ ಆಗಿದ್ದಾನೆ. ಅವನು ಹೇಳಿಕೊಂಡು ತಿರುಗುತ್ತಾನೆ: "ಹರಗೌರಿ ಚಿನ್ನದಂತಹ ಮನುಷ್ಯ. ಕಾಗದ ಪತ್ರವನ್ನೆಲ್ಲಾ ನನ್ನ ಮೇಲೆ ಎಸೆದು ನಿಶ್ಚಿಂತರಾಗಿದ್ದಾರೆ. ನಾನು ಎಷ್ಟೋ ತಿಳಿಸಿ ಹೇಳಿದೆ 'ಸಾಹೆಬ್, ಲೆಕ್ಕಪತ್ರದ ಪುಸ್ತಕವನ್ನು ಯಾರ ಕೈಲೂ ಮುಟ್ಟಸಬಾರದು' ಅಂತ. ಆದರೆ ಹರಗೌರಿ ಚಿನ್ನದಂತಹ ಮನುಷ್ಯ. ವಿಶ್ವನಾಥಪ್ರಸಾದ ಮೊದಲ ದರ್ಜೆಯ ನಿಪುಣರು, ಸಂಶಯ ಸ್ವಭಾವದವರು. ಕಾಯಸ್ಥರೂ ರಾಜಪೂತರೂ ಒಂದೇ ಸಮ ಆಗೋದು ಸಾಧ್ಯವೇ?....ಹೂಂ.. ..ಕಾಂಗ್ರೆಸ್ಸಿಗೆ ಬೇರೆ ಸೇರಿದಾರೆ. ಸುಮರಿತದಾಸನಿಗೆ ಯಾವ ವಿಚಾರ ಗೊತ್ತಿಲ್ಲ? ಹಳ್ಳಿಯ ನಡತೆಯೆ ಕೆಟ್ಟುಹೋಗುತ್ತೆ ನೋಡ್ತಿರಿ. ವಯಸ್ಸಿಗೆ ಬಂದ ಹುಡುಗೀನ ಒಬ್ಬ ಪರದೇಶಿ ಯುವಕನೊಂದಿಗೆ ಮಾತಾಡೋದಕ್ಕೆ, ವಿನೋದ ಮಾಡೋದಕ್ಕೆ, ಸುತ್ತಾಡೋದಕ್ಕೆ ಬಿಡೋದು ಅಂದರೇನು? ಹಳ್ಳಿಯ ನಡತೆಯೇ ಕೆಟ್ಟುಹೋಗದಿದ್ದರೆ ಸುಮರಿತದಾಸನ ಹೆಸರೇ ಬದಲಾಯಿಸಿಬಿಡಿ."

ಹೊಸ ತಹಸೀಲ್ದಾರ ಹರಗೌರಿಸಿಂಹನ ಮನೆಗೆ ರಾತ್ರಿ ಒಬ್ಬ ರೈತನೂ ಬರಲಿಲ್ಲ. ಪುಣ್ಯಾಹದಲ್ಲಿ ಕೊಡುವ ಸಂಭಾವನೆ ಜಮೀನ್ದಾರರದು. ಆದರೆ ಲೆಕ್ಕದ ಪುಸ್ತಕ ಆರಂಭಿಸುವ ದಿನ ಸಿಗುವ ಇನಾಮು ತಹಸೀಲ್ದಾರರ ಸ್ವಂತ ಖಜಾನೆಗೆ ಸೇರುತ್ತದೆ. ಸುಮರಿತದಾಸ ಬಂದು ಸುದ್ದಿ ಮುಟ್ಟಿಸಿದ.

"ಎಲ್ಲಾ ರೈತರೂ ಶಿವನಾಥಪ್ರಸಾದರ ಮನೆಗೆ ಹೋಗಿದ್ದಾರೆ. ಒಂದೂವರೆ ನೂರು ರೂಪಾಯಿ ಸಂಭಾವನೆಯ ಹಣ ತಟ್ಟೆಯಲ್ಲಿ ಬಿದ್ದಿತ್ತು. ಚೆನ್ನಾಗಿ ಮೀನು ತಿಂದು ಹಿಂತಿರುಗಿ ಬರುವಾಗ ರಸ್ತೆಯಲ್ಲೇ ರೈತರೆಲ್ಲಾ ಮೀಟಿಂಗ್ ಮಾಡಿ ಹೊಸ ತಹಸೀಲ್ದಾರರ ಮನೆಗೆ ಹೋಗುವುದಿಲ್ಲವೆಂದು ನಿರ್ಧಾರ ಮಾಡಿದರು. ಕುಶರಸ ಮಗ ಕಾಳೀಚರಣ ಇವರಿಗೆಲ್ಲಾ ಲೀಡರ್. "ತಂದೆ ಕುದುರೆಗೆ ಹುಲ್ಲು ಹಾಕುವವನು, ಮಗನ ಹೆಸರು ದುರ್ಗಾದಾಸನಂತೆ" ಹಾಗಾಯ್ತು. ತತಮಾ ಪಂಗಡದ ವಿರಂಚಿ ಹೇಳ್ತಿದ್ದ: 'ಯಾರು ರೈತರ ಹೊಟ್ಟೆ ತುಂಬಿಸುತ್ತಾರೋ ಅವರೇ ನಿಜವಾದ ಜಮೀನ್ದಾರರು. ಹೊಸ ತಹಸೀಲ್ದಾರರು ಒಂದು ಹಿಡಿ ಬತ್ತವನ್ನೇನಾದರೂ ಕೊಟ್ಟಿದಾರೇನು?....ಶಾಸ್ತ್ರದ ಮಾತು ಸುಳ್ಳಾಗುತ್ತೇನು? ಇಂತಹವರೆಲ್ಲಾ ಒಡೆಯರಾದರೆ ಹೇಗೆ?' "ಇಲ್ಲಿ ಕೇಳಿ ತಹಸೀಲ್ದಾರರೇ, ಜಗಳಗಂಟರನ್ನೂ, ಮುಳ್ಳುಗಳನ್ನೂ ಚಪ್ಪಲಿಯಿಂದಲೇ ವಶಪಡಿಸಿಕೊಳ್ಳಬೇಕು."

ಬಾಲದೇವನ ಕೆಲಸ ನಿಂತುಹೋಯಿತು.

ಬಟ್ಟೆ, ಸಕ್ಕರೆ ಮತ್ತು ಸೀಮೆ ಎಣ್ಣೆಗಳನ್ನು ಇನ್ನುಮೇಲೆ ತಹಸೀಲ್ದಾರ ವಿಶ್ವನಾಥ ಪ್ರಸಾದರೇ ಹಂಚುತ್ತಾರೆ. ಬಾಲದೇವನನ್ನು ಕೆಲಸದಿಂದ ಬಿಡಿಸಿದ್ದೇಕೆ? ಖೇಲಾವನಸಿಂಹ ಪರಮೇಶ್ವರಸಿಂಹನ ಭೂಮಿ ಕೊಂಡುಕೊಂಡನಲ್ಲಾ, ಆ ಹಣ ಎಲ್ಲಿಂದ ಬಂತು? ಅದು ಬಾಲದೇವನ ಜಮೀನೇ. ಖೇಲಾವನನ ಮನೆಗೆ ಹೋಗಿ ನೋಡಿ, ಈವತ್ತು ಮೂಟೆಗಟ್ಟಲೆ ಬಟ್ಟೆ ಬಿದ್ದಿದೆ. ಟಿನ್ನು ಟಿನ್ನೇ ಎಣ್ಣೆ ಉಳಿದಿದೆ. ಖೇಲಾವನ್ನನ ಸಂಬಂಧಿಕರ ಮನೆಗೆಲ್ಲಾ ಬಟ್ಟೆ ಹೋಗಿದೆ. ಈ ವಿಷಯ ಎಷ್ಟು ದಿನಾಂತ ಗುಟ್ಟಾಗಿರೋದು ಸಾಧ್ಯ? ಕಾಂಗ್ರೆಸ್ ಸರ್ಕಾರ ಸಿ.ಐ.ಡಿ.ನ ನೇಮಕ ಮಾಡಿತ್ತಂತೆ. ಇಂಗ್ಲೀಷ್ ಸಿ.ಐ.ಡಿ.ಗಳು ಇದ್ದ ಜಾಗದಲ್ಲೇ ಎಲ್ಲಾ ಪತ್ತೆಮಾಡಿಬಿಡ್ತಿದ್ರು. ಕಾಂಗ್ರೆಸ್ ಸಿ.ಐ.ಡಿ.ಗೆ ಹಂಡೆಯಲ್ಲಿರೋ ಅಕ್ಕಿ ಕೂಡಾ ತಿಳಿದಿರುತ್ತಂತೆ.

ಪತ್ನಿವಿಯೋಗದ ನಂತರ ಜೋಯಿಸರು ತುಂಬಾ ಮೌನಿಗಳಾಗಿದ್ದರು.. ..ಹೇಗಾದರೂ ಮಾಡಿ ಹೆಂಡತಿಯನ್ನು ಉಳಿಸಿಕೊಡಿ ಅಂತ ಡಾಕ್ಟರನ್ನು ಎಷ್ಟೋ ಕೇಳಿಕೊಂಡಿದ್ದಾಯ್ತು. ಆದರೆ ಅವರ ಮಾತನ್ನು ಕೇಳೋರ್‍ಯಾರು? ಡಾಕ್ಟರದ್ದು ಒಂದೇ ಮಾತು. ಹೊಟ್ಟೆ ಕತ್ತರಿಸಿ ಮಗೂನ ತೆಗೀಬೇಕು. ಶಿವ ಶಿವಾ ಪರಸ್ತ್ರೀಯ ಬಟ್ಟೆಯನ್ನು ತೆಗೆದುಹಾಕುವ ಮಾತು ಅವರ ಬಾಯಿಂದ ಹೇಗಾದರೂ ಬಂತೋ?.... ಪಾರ್ವತಿ ತಾಯಿ ಸೇಡು ತೀರಿಸಿಕೊಂಡಳು, ಅಷ್ಟೆ. ಐದು ವರ್ಷಗಳ ಕೆಳಗೆ ಪಂಚಾಯಿತಿಯಲ್ಲಿ, ಪಾರ್ವತಿಯ ತಾಯಿಗೆ ತಿನ್ನಬಾರದ್ದನ್ನು ತಿನ್ನಿಸಬೇಕೆಂದು ಜೋಯಿಸರು ಹೇಳಿದ್ದರು. ಶಿವನಾಥಪ್ರಸಾದರು ಪಾರ್ವತಿಯ ತಾಯಿಯ ಪರವಾಗಿಯೇ ಮಾತನಾಡಿದ್ದರು. ಇಲ್ಲದಿದ್ದರೆ ಆಗಲೇ ಅವಳ ನಾಮಾವಶೇಷ ಆಗಿಬಿಡುತ್ತಿತ್ತು..... ಅವರ ಸೇಡನ್ನು ಅವಳು ಈಗ ತೀರಿಸಿಕೊಂಡಿದ್ದಾಳೆ..... ಇರಲಿ ಬ್ರಾಹ್ಮಣನ ಶಾಪ ಎಂದಿಗೂ ನಿಷ್ಫಲ ಆಗುವುದಿಲ್ಲ. ನೋಡೋಣ, ಈ ಕಲಿಯುಗದಲ್ಲೂ ನಿಜವಾದ ಬ್ರಾಹ್ಮಣ ಇರುತ್ತಾನೋ ಇಲ್ಲವೋ, ನೋಡೇಬಿಡೋಣ!

ರಾಜಪೂತ ಪಂಗಡದವರೂ, ಬ್ರಾಹ್ಮಣ ಪಂಗಡದವರೂ ಮಾತು ಮಾತಿಗೆ ಚಪ್ಪಲಿ ಹಿಡಿದು ಜಗಳವಾಡುತ್ತಿದ್ದ ಕಾಲ ಹೊರಟುಹೋಯಿತು. ಜ್ಞಾಪಕ ಇಲ್ಲವೇನು? ಒಂದು ಬಾರಿ ಟಹಲೂ ಪಾಸ್ವಾನನ ಗುರು ಕುದುರೆಯನ್ನೇರಿ ಬರುತ್ತಿದ್ದ. ಹಳ್ಳಿಯ ಒಳಗೆ ಬಂದಿದ್ದರೆ ಒಂದು ರೀತಿಯಾಗುತ್ತಿತ್ತು. ಹಳ್ಳಿಯ

ಹೊರಗಡೆಯೇ ಸಿಂಘಜೀ ಅವನನ್ನು ಕುದುರೆಯಿಂದ ಉರುಳಿಸಿ ಚಪ್ಪಲಿಯಿಂದ ಹೊಡೆಯಲಾರಂಭಿಸಿದರು : "ದುಸಾಧ ಜಾತಿಯ ಭಡವಾ, ಕುದುರೆ ಸವಾರಿ ಮಾಡುತ್ತೀಯಾ?"....ಆದರೆ ಈಗ ಆ ಕಾಲ ಹೊರಟುಹೋಯಿತು. ಇದು ಗಾಂಧೀಜಿಯ ಕಾಲ. ಹೊಸ ತಹಸೀಲ್ದಾರನಾದರೇನು? ನಮಗೆ ಏನು ನಷ್ಟ ಮಾಡಬಲ್ಲ? ಅವನಿಗೆ ಭೂಮಿಯಿಲ್ಲ, ಮನೆಯಿಲ್ಲ. ಈ ಊರು ಅಲ್ಲದಿದ್ದರೆ ಬೇರೆ ಊರಿಗೆ ಹೋದರಾಯಿತು....ಚಪ್ಪಲಿಯಿಂದ ಹೊಡೆದು ಸರಿ ಮಾಡ್ತೀನಿ ಅಂತ ಬೆದರಿಕೆ ಬೇರೆ ಹಾಕ್ತಾನೆ ಮಹಾ ಮಹಾ....

ಅನೇಕ ವರ್ಷಗಳಿಂದ, ಯುಗಗಳಿಂದ, ದಲಿತರಾಗಿದ್ದ, ಪೀಡಿತರಾಗಿದ್ದ, ತಿರಸ್ಕೃತರಾಗಿದ್ದ ಜನರಿಗೆ ಕಾಳೀಚರಣನ ಮಾತುಗಳು ಹಿತವಾಗಿ ಕೇಳುತ್ತಿದ್ದವು. ಗಾಯಕ್ಕೆ ತಂಪು ಮುಲಾಮು ಸವರಿದಂತಾಗುತ್ತಿತ್ತು. ಆದರೆ ಕಾಳೀಚರಣ ಹೇಳುತ್ತಿದ್ದ: "ನಿಮ್ಮ ಹೃದಯದಲ್ಲಿ ಬೆಂಕಿ ಹತ್ತಿಸಬೇಕೆನ್ನುವುದು ನನ್ನ ಇಷ್ಟ. ಮಲಗಿರುವವರನ್ನು ಎಬ್ಬಿಸಲು ಇಷ್ಟಪಡುತ್ತೇನೆ. ಸೋಷಲಿಸ್ಟ್ ಪಾರ್ಟಿ, ನಿಮ್ಮ ಪಾರ್ಟಿ, ಬಡವರ, ಕೂಲಿಗಾರರ ಪಾರ್ಟಿ. ನೀವು ನಿಮ್ಮ ಹಕ್ಕುಗಳನ್ನು ತಿಳಿದುಕೊಳ್ಳಬೇಕೆಂಬುದು ಪಾರ್ಟಿಯ ಇಷ್ಟ. ನೀವು ಮನುಷ್ಯರು. ಬೇರೆ ಮನುಷ್ಯರಿಗೆ ಸಿಕ್ಕುವ ಎಲ್ಲಾ ಅಧಿಕಾರಗಳೂ ನಿಮಗೆ ಸಿಗಬೇಕು. ಸಿಹಿಯಾದ ಮಾತುಗಳಿಂದ ನಿಮ್ಮನ್ನು ನಾನು ಹೊಗಳಲಾರೆ. ಅದು ಕಾಂಗ್ರೆಸ್ಸಿನ ಕೆಲಸ. ನಾನು ಉರಿ ಹತ್ತಿಸಲು ಇಷ್ಟಪಡುತ್ತೇನೆ.

ಕಾಳೀಚರಣ ಉರಿ ಹತ್ತಿಸುವ ಮಾತನಾಡುತ್ತಾನೆ. ಆದರೆ ಕೇಳುವವರ ಉರಿಯುತ್ತಿರುವ ಹೃದಯಗಳೆಲ್ಲಾ ತಂಪಾಗುತ್ತವೆ....ಭೂಮಿ, ಉಳುವವರದು : ಪೂಂಜೀವಾದದ ನಾಶ.

ಬಾವನದಾಸ ಇನ್ನೊಂದು ಫಾರಂ ತಂದಿದ್ದಾನೆ. ಕಾರ್ಯದರ್ಶಿಗಳು ಕಳುಹಿಸಿದ್ದಾರೆ. ಈ ಸಲದ್ದು ಪಾಟ್ನಾದ ಮುದ್ರೆ ಇರುವ ಫಾರಂ, ಪೂರ್ಣಿಯಾದ್ದಲ್ಲ. ಪಟನಾದ ಫಾರಂ ಸುಳ್ಳಾಗಲಾರದು,....ಇದರಲ್ಲಿ ತಮ್ಮ ಹೆಸರು, ತಂದೆಯ ಹೆಸರು, ಜಮೀನಿನ ನಂಬರು, ಶಾನುಭೋಗರ ಖಾತೆಯ ನಂಬರು ಬರೆದು ಪೂರ್ಣಿಯಾ ಕಛೇರಿಗೆ, ನಲವತ್ತನೇ ವಿಧಿಯ ಆಫೀಸರಿಗೆ ಕೊಡಬೇಕು. ಜಮೀನು ಸ್ವಂತದ್ದಾಗುತ್ತದೆ. ನಿಜವಾಗಲೂ? ....ಹೌದು, ಹೆಬ್ಬೆಟ್ಟಿನ ಗುರುತನ್ನೂ ಹಾಕಬೇಕು.....ಚರಖಾ ಕೇಂದ್ರದಲ್ಲಿ ಸಹಿ ಮಾಡುವುದನ್ನು ಕಲಿತಿರುವವರೂ ಹೆಬ್ಬೆಟ್ಟಿನ ಗುರುತು ಹಾಕಬೇಕೇನು?

ಬಾಲದೇವ ಏನು ಮಾಡಬೇಕು? ಶೇಲಾವನ ಸ್ವಲ್ಪವೂ ಅರ್ಥವೇ ಮಾಡಿ ಕೊಳ್ಳುವುದಿಲ್ಲ. ಪ್ರತಿದಿನ ಹೇಳುತ್ತಾನೆ: "ಬಾಲದೇವ ಕಮಲಾನದಿಯ ದಡದಲ್ಲಿರುವ ಜಮೀನು ಕಲರೂ ಪಾಸ್ವಾನನ ಅಜ್ಜನ ಹೆಸರಿನಲ್ಲಿದೆ. ಕಲರೂಗೆ ಹೇಳಿ ಅದನ್ನು ನಿನ್ನ ಹೆಸರಿಗೆ ಮಾಡಿಕೋ"····ಆದರೆ ಬಾಲದೇವ ಏನು ಮಾಡಬಲ್ಲ? ಚೌಧರಿಯನ್ನು ಅವನು ಮೊದಲಿನಿಂದಲೂ ಗುರುವೆಂದೇ ತಿಳಿದು ಗೌರವಿಸುತ್ತಿದ್ದಾನೆ. ಎಂದೂ ಯಾವ ಕೆಲಸದಲ್ಲೂ ಹೆಚ್ಚು ಕಡಿಮೆ ಆಗಲು ಅವಕಾಶ ಕೊಟ್ಟಿಲ್ಲ. ಎಷ್ಟೋ ಮಂದಿ ನಾಲ್ಕಾಣೆ ಸದಸ್ಯರನ್ನು ಮಾಡಿಸಿದ್ದಾನೆ. ಹಳ್ಳಿಯಲ್ಲಿ ಚರಖಾ ಕೇಂದ್ರ ಆರಂಭಿಸಿದ. ಆದರೆ ಜಿಲ್ಲಾ ಸಮಿತಿಯಲ್ಲಿ ತಹಸೀಲ್ದಾರರು ಸದಸ್ಯರಾದರು. ಬಾಲದೇವನಿಗೆ ಸಮಾಚಾರವೂ ತಿಳಿಯಲಿಲ್ಲ, ಬಟ್ಟಿಯ ಕಾಂಟ್ರಾಕ್ಟೂ ಉಳಿಯಲಿಲ್ಲ. ಉಪ್ಪಿನ ಸತ್ಯಾಗ್ರಹದ ಸಮಯದಿಂದ ಜೈಲಿಗೆ ಹೋಗಿದ್ದಕ್ಕೆ ಅವನಿಗೆ ಸಿಕ್ಕಿದ ಬಹುಮಾನ ಇದೇ. ಕಾಳೀಚರಣನ ಪಾರ್ಟಿಯವರು ಹೇಳುವುದೂ ಸರಿಯೇ: ಕಾಂಗ್ರೆಸ್ ಶ್ರೀಮಂತರ ಪಾರ್ಟಿ." ····ಆದರೆ ಅವನು ಕಾಳೀಚರಣನ ಪಾರ್ಟಿಗೆ ಸೇರಲಾರ. ಕಾಳೀಚರಣನ ಕಣ್ಣುಗಳನ್ನು ತೆರೆದವನು ಅವನೇ. ಅನೇಕ ರಾತ್ರಿಗಳು ನಿದ್ದೆಯಿಲ್ಲದೆ ಅವನಿಗೆ ಜೈಲಿನ ಕಥೆಗಳನ್ನೂ, ಗಾಂಧೀಜಿಯ, ಜವಾಹರಲಾಲರ ಕಥೆಯನ್ನೂ ಹೇಳಿದ್ದ. ಕಾಳೀಚರಣ ಅವನ ಶಿಷ್ಯ. ತನ್ನ ಶಿಷ್ಯನ ಪಾರ್ಟಿಗೇ ಅವನು ಸೇರಿಕೊಳ್ಳುವುದು ಹೇಗೆ? ಇಲ್ಲ, ಅದು ಖಂಡಿತ ಸಾಧ್ಯವಿಲ್ಲ.····ಶೇಲಾವನ್ನನಿಗೆ ಏನೂ ಅರ್ಥವಾಗುವುದಿಲ್ಲ. ಪಾಸ್ವಾನ ಪಂಗಡದಲ್ಲಿ ಈಗ ಅವನ ಮಾತು ನಡೆಯುವುದಿಲ್ಲ. ಕಲರೂ ಅವನ ಮಾತನ್ನು ಕೇಳುವುದಿಲ್ಲ. ಈಗ ಅವನ ಲೀಡರ್ ಕಾಳೀಚರಣ ····ಭಯದಿಂದ ತಹಸೀಲ್ದಾರರನ್ನು ಲೀಡರ್ ಎಂದು ಒಪ್ಪುತ್ತಾರೆ ಅಷ್ಟೆ.

ಹೊಸ ತಹಸೀಲ್ದಾರರು ದೂರುಗಳ ಪಟ್ಟಿಯನ್ನು ಸಿದ್ಧಮಾಡುತ್ತಿದ್ದರು. ಸುಮರಿತದಾಸ ಎಲ್ಲರ ಹೆಸರನ್ನೂ ಬರೆಸುತ್ತಿದ್ದ: "ಎಲ್ಲರಿಗಿಂತ ಮೊದಲು ವಿರಂಚಿಯ ಹೆಸರು ಬರೆಯಿರಿ. ಸೊನವೂ ದುಸಾಧ, ಕಿರಾಯ ಕೋಯರೀ ಇವರೆಲ್ಲಾ ಬಾಕಿದಾರರ ಪಟ್ಟಿಯಲ್ಲಿ ಬರಬೇಕು. ಈಗ ಗುಡಿಸಿಲಿನ ಕಾಲಂ ಪ್ರಾರಂಭಿಸಿ····ಗುಡಿಸಿಲನ್ನು ಬಿಟ್ಟು ಬೇರೆ ಏನೂ ಇಲ್ಲದವರ ಹೆಸರು ಬರೆದುಕೊಳ್ಳಿ····ಸಾಕು ಈ ಪಟ್ಟಿಯನ್ನು ಮ್ಯಾನೇಜರ್ ಸಾಹೇಬರಿಗೆ ಕೊಟ್ಟು ಪರಿವಾರ ಸಮೇತ ಬೇಗ ಹಳ್ಳಿಗೆ ಬರುವಂತೆ ತಿಳಿಸಿ. ಇಲ್ಲದಿದ್ದರೆ ಇಲಾಖೆಯೆಲ್ಲಾ ಹಾಳಾಗಿ ಹೋಗುತ್ತದೆ.

ಲಕ್ಷ್ಮಿದಾಸಿಯ ಹೃದಯದಲ್ಲಿ ಬಾಲದೇವ ನೆಲೆಸಿಬಿಟ್ಟಿದ್ದಾನೆ. ಹೊಸ ಲೆಕ್ಕದ ದಿನ ಬಂದಿದ್ದ. ಬಾಲದೇವ ತುಂಬಾ ಒಣಗಿಹೋಗಿದ್ದಾನೆ. ಕೆಲಸ ಕಾರ್ಯಬಿಟ್ಟು ಸ್ವಲ್ಪ ದಿನ ವಿಶ್ರಾಂತಿ ತೆಗೆದುಕೊಳ್ಳುವಂತೆ ಲಕ್ಷ್ಮಿ ಅವನಿಗೆ ಬುದ್ಧಿ ಹೇಳಿದಳು. ಆದರೆ ಅವನು ಕೇಳಬೇಕಲ್ಲ? ಪ್ರಾಣವಿದ್ದರೆ ಪ್ರಪಂಚ. ಶರೀರವೇ ಉಳಿಯದಿದ್ದರೆ ಪರಮಾರ್ಥದ ಕೆಲಸ ಯಾತರಿಂದ ಮಾಡುವುದು? ಶರೀರವೇ ತೀರ್ಥ. ಎಷ್ಟೋ ಹೇಳಿ, ಸದ್ಗುರುವಿನ ಮೇಲೆ ಆಣೆ ಇಟ್ಟಮೇಲೆ, ಪ್ರತಿದಿನ ಒಂದು ಸಲವಾದರೂ ಮಠಕ್ಕೆ ಬರುತ್ತೇನೆಂದು ಒಪ್ಪಿದ. ಸಂಜೆ 'ಸತ್ಸಂಗ'ದ ಸಮಯದಲ್ಲಿ ಬರುತ್ತಾನೆ. ತುಪ್ಪ, ಹಾಲಿನ ಕೆನೆಯನ್ನು ಪ್ರತಿದಿನ ತಟ್ಟೆಯಲ್ಲಿ ಮುಚ್ಚಿಟ್ಟು ಕೊಡುವಂತೆ ಭಂಡಾರಿಗೆ ಹೇಳಿದ್ದಾಯಿತು. ರಾಮದಾಸನಿಗೆ ಬಾಲದೇವ ಬರುವುದು ಇಷ್ಟವಿಲ್ಲ......ಏನಾದರೂ ಬಾಲದೇವನ ಸೇವೆಯನ್ನು ಲಕ್ಷ್ಮಿ ಮಾಡಿಯೇ ಮಾಡುತ್ತಾಳೆ. ಈಗ ಬಾಲದೇವ ಬರುವುದು ಸ್ವಲ್ಪ ತಡವಾದರೂ ಲಕ್ಷ್ಮಿಯ ಹೃದಯ ಧಡಗುಟ್ಟುತ್ತದೆ. ಮನಸ್ಸು ಚಂಚಲವಾಗುತ್ತದೆ. ಸದ್ಗುರು ಸಾಹೇಬರು ಹೇಳಿದ್ದಾರೆ:

ಈ ಮನ ಚಂಚಲ, ಈ ಮನ ಚೋರ್
ಈ ಮನ ಶುಧ ಠಗಹಾರ್
ಮನಮನ ಕರತ ಸುರ ನರ ಮುನಿ
ಮನ ಕೆ ಲಕ್ಷದುವಾರ್!

ಲಕ್ಷ್ಮಿಯ ಮನಸ್ಸು ಚಂಚಲವಾಗಿರುವುದೇನೋ ಸತ್ಯ. ಆದರೆ ಅದು ಚೋರತನದ್ದಲ್ಲ. ಬಾಲದೇವ ಕಳ್ಳನಂತೆ ಮನಸ್ಸನ್ನು ಪ್ರವೇಶಿಸಿಲ್ಲ. ಮನಕ್ಕೆ ಲಕ್ಷ ದ್ವಾರಗಳಿವೆ. ಬಾಲದೇವ ಒಂದೇ ಬಾರಿಗೆ ಲಕ್ಷ ದ್ವಾರಗಳಿಂದಲೂ ಅವಳ ಮನಸ್ಸನ್ನು ಪ್ರವೇಶ ಮಾಡಿದ್ದಾನೆ.····ಒಂದು ಲಕ್ಷ ಬಾಲದೇವರು!

## 30

ಅಖಿಲ ಭಾರತೀಯ ಮೆಡಿಕಲ್ ಗೆಜೆಟ್ಟಿನಲ್ಲಿ ಮಲೇರಿಯಾಲಜಿಸ್ಟ್ ಡಾಕ್ಟರ್ ಪ್ರಶಾಂತನ ಸಂಶೋಧನೆಯ ಆರು ತಿಂಗಳ ರಿಪೋರ್ಟ್ ಪ್ರಕಟವಾಗಿತ್ತು. ಗೆಜೆಟ್ಟಿನ ಸಂಪಾದಕ ಮಂಡಲಿಯಲ್ಲಿ ಭಾರತದ ಐದು ಡಾಕ್ಟರುಗಳಿದ್ದಾರೆ. ಈ ರಿಪೋರ್ಟಿನ ಮೇಲೆ ಅವರು ತಮ್ಮ ತಮ್ಮ ಟಿಪ್ಪಣಿಗಳನ್ನೂ ಬರೆದಿದ್ದಾರೆ. ಮದ್ರಾಸಿನ ಡಾಕ್ಟರ್ ಟಿ.ಕೆ.ರಾಮಸ್ವಾಮಿ, ಎಂ.ಎಸ್‌ಸಿ., ಡಿ.ಟಿ.ಎಂ. (ಕೈಲ್), ಪಿ.ಎಚ್‌ಡಿ. (ಎಡಿನ್.), ಎಫ್.ಆರ್.ಎಸ್.ಜೆ. (ಎಡಿನ್.) ಅವರು ಬರೆದಿದ್ದಾರೆ:

"ಮಲೇರಿಯಾ ಮತ್ತು ಕರಿಜ್ವರದ ಬಗ್ಗೆ ಡಾಕ್ಟರ್ ಪ್ರಶಾಂತರವರು ನಾವು ಇದುವರೆಗೆ ಅನಭಿಜ್ಞರಾಗಿರುವ ಸತ್ಯವಿಚಾರಗಳನ್ನು ಆವಿಷ್ಕರಿಸುತ್ತಾರೆಂಬ ನಂಬಿಕೆ ನಮಗಾಗಿದೆ. ....ಆ ಕಾಯಿಲೆಗಳಿಗೆ ಹೊಸ ಔಷಧಿ, ಹೊಸ ಚಿಕಿತ್ಸೆಯನ್ನು ಕಂಡುಹಿಡಿಯುತ್ತಾರೆಂದು ಇಡೀ ವೈದ್ಯಪ್ರಪಂಚ ಅವರ ಕಡೆ ಕುತೂಹಲದಿಂದ ದಿಟ್ಟಿಸುತ್ತಿದೆ."

ಪ್ರಶಾಂತನ ವಿವರವಾದ ರಿಪೋರ್ಟಿನಲ್ಲಿ ಮಲೇರಿಯಾ ಮತ್ತು ಕರಿಜ್ವರಕ್ಕೆ ಸಂಬಂಧಿಸಿದ ಮಣ್ಣು, ವಾಯುಗುಣ ಮತ್ತು ಈ ವಾತಾವರಣದಲ್ಲಿ ಬೆಳೆಯುವ ಪ್ರಾಣಿಗಳ ವಿಚಾರಗಳ ಸಂಶೋಧನೆ ಇತ್ತು. ತಮ್ಮ ರಿಪೋರ್ಟಿನಲ್ಲಿ ಡಾಕ್ಟರ್ ಒಂದು ಕಡೆ ಬರೆದಿದ್ದರು:

"ಇಲ್ಲಿನ ಜನ ಬೆಳಗ್ಗೆ ಹಳಸಿದ ಅನ್ನ ತಿಂದುಕೊಂಡು, ಸೆಣಬನ್ನು ತೊಳೆಯಲು ಕೊಳಕು ನೀರಿನಲ್ಲಿ ನುಗ್ಗುತ್ತಾರೆ. ಸುಮಾರು ಏಳು ಘಂಟೆಗಳ ಕಾಲ ನೀರಿನಲ್ಲೇ ಇರುತ್ತಾರೆ. ಕೊಳಕು ನೀರನ್ನು ನೋಡಿದ ಕೂಡಲೇ, ನೀರಿನ ಕೆಳಗಿನ ಅರ್ಧ ಅಂಗುಲ ಭೂಮಿಯನ್ನು ಪರೀಕ್ಷಿಸಿದರೆ ಲಕ್ಷಾಂತರ ಸೊಳ್ಳೆಗಳು ಸಿಗಬಹುದು ಅನ್ನಿಸುತ್ತದೆ. ಆದರೆ ಇಲ್ಲಿನ ಸೊಳ್ಳೆಗಳು ಕೊಳಕು ನೀರಿನಲ್ಲಿ ಮೊಟ್ಟೆ ಇಡುವುದಿಲ್ಲ. ಈ ಸೊಳ್ಳೆಗಳ ಕೆಲವು ಗುಂಪುಗಳಂತೂ ಎಷ್ಟು ಸ್ವಚ್ಛತಾಪ್ರಿಯವಾಗಿರುತ್ತವೆಂದರೆ ನಿರ್ಮಲವಾದ ಕೆರೆಗಳನ್ನು ಬಿಟ್ಟು ಬೇರೆ ಜಾಗದಲ್ಲಿ ಅವು ಮೊಟ್ಟೆ ಇಡುವುದೇ ಇಲ್ಲ. ······ನಾಲಿಗೆಯಿಂದ ಕಾಳುಗಳು ಬಿದ್ದುಹೋಗುವುದೂ, ಕಿವಿಯ ಒಳಗೆ ಕಡಿತವಾಗುವುದೂ, ಅತಿ ಕೋಮಲವಾದ ಹುಲ್ಲನ್ನು ತಿನ್ನುವುದಕ್ಕೂ ಅಸಹ್ಯವಾಗುವುದೂ, ಕರಿಜ್ವರದ ಲಕ್ಷಣವೆಂದು ಬಡಪಾಯಿ ಮೊಲಗಳಿಗೇನು ಗೊತ್ತು?"

ಮನುಷ್ಯನ ಶತ್ರುಗಳಾದ ಕ್ರಿಮಿ-ಕೀಟಗಳ ಬಗ್ಗೆ ಡಾಕ್ಟರ್ ಬರೆದಿದ್ದರು:

"ಸೊಳ್ಳೆಗಳನ್ನು ಕೊಲ್ಲಲು, ನಾಶಪಡಿಸಲು ಕಂದಾಚಾರ ಪದ್ಧತಿಯನ್ನೇ ಈಗಲೂ ನಾವು ಕಣ್ಣು ಮುಚ್ಚಿಕೊಂಡು ಅನುಸರಿಸುತ್ತಿದ್ದೇವೆ. ನಾವು ನಾಶ ಪಡಿಸಲು ಯತ್ನಿಸಿರುವ ಕೀಟಗಳ ಬಗ್ಗೆ ನಮಗಿರುವ ತಿಳುವಳಿಕೆ ಬಹಳ ಕಡಿಮೆ. ನಾವು ಅವುಗಳ ಅಭ್ಯಾಸ, ಸ್ವಭಾವ, ವ್ಯವಹಾರದ ರೀತಿನೀತಿಗಳನ್ನು ಚೆನ್ನಾಗಿ ಅರಿತುಕೊಳ್ಳಬೇಕು....'ಎನಾಫಿಲೀಸ್' ಸೊಳ್ಳೆಯಲ್ಲೂ ಅನೇಕ ಗುಂಪು ಗಳಿವೆ. ಪ್ರತಿ ಗುಂಪಿಗೂ ಬೇರೆ ಬೇರೆ ರೀತಿಯ ಸ್ವಭಾವವಿದೆ. ಅಷ್ಟೇ ಅಲ್ಲ, ಈ ಒಂದೊಂದು ಗುಂಪಿನಲ್ಲೂ ಅನೇಕ ಉಪಗುಂಪುಗಳಿವೆ. ಅವುಗಳ ಅಭ್ಯಾಸದಲ್ಲಿ, ಜನನ ಕ್ರಿಯೆಯಲ್ಲಿ ವ್ಯತ್ಯಾಸ ಕಂಡುಬರುತ್ತದೆ....ಅವುಗಳು ಅವಿತುಕೊಳ್ಳುವುದು, ಅವುಗಳ ಇಷ್ಟಾನಿಷ್ಟಗಳು, ಪ್ರತಿಯೊಂದರಲ್ಲೂ ವ್ಯತ್ಯಾಸ ವಿರುತ್ತದೆ....ಒಂದೇ ಗುಂಪಿನ ಸೊಳ್ಳೆಗಳು ಮೂರು ವಿಧವಾದ ಮೊಟ್ಟೆ ಗಳನ್ನಿಟ್ಟಿರುವುದನ್ನು ನಾನು ನೋಡಿದ್ದೇನೆ. ಪ್ರತಿಗುಂಪಿನಲ್ಲಿ ಒಂದು ವಿಶೇಷ ದಳಗಳಿರುತ್ತವೆ. ಅವು ಗಾಳಿಯಲ್ಲಿ ಮೊಟ್ಟೆಯನ್ನು ಇಡುತ್ತವೆ....ಇವುಗಳ ಬುದ್ಧಿವಂತಿಕೆ, ಜಾಣತನ ಎಷ್ಟರಮಟ್ಟಿಗೆ ಇರುತ್ತದೆಂದರೆ ಒಂದೇ ಋತುವಿನಲ್ಲಿ ಒಂದೇ ಗುಂಪಿನ ಸೊಳ್ಳೆಗಳು ಆಕ್ರಮಣ ಮಾಡಲು ಹದಿನೈದು ರೀತಿಯ ವಿಧಾನಗಳನ್ನು ಅನುಸರಿಸುತ್ತವೆ....ಕೆಲವಂತೂ ಇದ್ದಕ್ಕಿದ್ದಂತೆ 'ಡೈವ್ ಫ್ಲೈಯಿಂಗ್' ಮಾಡಿ ದಾಳಿ ಮಾಡುತ್ತವೆ."

ಇದಲ್ಲದೆ ಮಲೇರಿಯಾ ಮತ್ತು ಕರಿಜ್ವರದಲ್ಲಾಗುವ ರಕ್ತ ಪರಿವರ್ತನೆಯ ಬಗ್ಗೆಯೂ ಡಾಕ್ಟರ್ ಹೊಸ ಮಾಹಿತಿಗಳನ್ನಿತ್ತಿದ್ದರು.

ಮಮತಾಳಿಂದ ಕಾಗದ ಬಂದಿತ್ತು: "ಬಿಹಾರದ ಏಕಮಾತ್ರ ಮಲೇರಿಯಾಲಾಜಿಸ್ಟ್ ಡಾಕ್ಟರ್ ಪ್ರಶಾಂತ, ತನ್ನ ಕೊಡುಗೆಯೆಂದು ಪಾಟ್ನಾ ಮೆಡಿಕಲ್ ಕಾಲೇಜ್ ತುಂಬಾ ಹೆಮ್ಮೆಪಡುತ್ತಿದೆ." ಮಮತಾ ಇನ್ನೂ ಅನೇಕ ವಿಚಾರಗಳನ್ನು ಬರೆದಿದ್ದಳು: ಪ್ರಶಾಂತ ಬಹುಶಃ ಮರೆತೇಬಿಟ್ಟಿದ್ದ ಅಥವಾ ಮರೆಯಲು ಪ್ರಯತ್ನಿಸುತ್ತಿದ್ದ ಅನೇಕ ವಿಚಾರಗಳನ್ನು ಅವಳು ಬರೆದಿದ್ದಳು. ......ಪಾಟ್ನಾ ಕ್ಲಬ್ ಹೆಸರು ಈಗ 'ಪಾಟಲಿಪುತ್ರ ಕ್ಲಬ್' ಎಂದಾಗಿದೆ ....ಮಿಸ್ ರೇವಾ ಸರ್ಕಾರ್ ಬ್ಯಾಡ್‌ಮೆಂಟನ್ನಿನಲ್ಲಿ ರೋಮೇಶ್‌ಪಾಲನನ್ನು ಸೋಲಿಸಿದಳು....ಈ ವಿಚಾರಗಳಲ್ಲಿ ಈಗ ಪ್ರಶಾಂತನಿಗೆ ಯಾವ ಆಸಕ್ತಿಯೂ ಇರಲಿಲ್ಲ. ಆದರೆ ಮಮತಾ ಪತ್ರ ಬರೆಯುವಾಗ ಯಾವುದನ್ನೂ ಬಿಡುವುದಿಲ್ಲ.

ಸಣ್ಣ ಸಣ್ಣ ವಿಚಾರಗಳನ್ನೂ ಮರೆಯದೆ ಬರೆಯುವುದು ಅವಳ ಅಭ್ಯಾಸ····
"ಪಾಟ್ನಾ ಮಾರ್ಕೆಟ್ಟಿನ ಎದುರಿಗಿದ್ದ ಚಹಾ ಅಂಗಡಿಯ ಮುದುಕ ಮಾಲಿಕ ಸತ್ತುಹೋದ····ನಿನಗೆ ಅವನ ಜ್ಞಾಪಕ ಇದೆಯೇನು? ಅವನೇ, ಪ್ರತಿದಿನ ನಿನ್ನನ್ನು ಚಹಾ ಕುಡಿಯಲು ಆಮಂತ್ರಿಸುತ್ತಿದ್ದನಲ್ಲ, ಅದೇ ಮುದುಕ!.... ಕಾಶ್ಮೀರಿ ಚಹ...." ಪ್ರಶಾಂತನಿಗೆ ನಗು ಬಂತು. ಬಡಪಾಯಿ ಮಮತಾ: ಮೀನನ್ನು ಕೈಯ್ಯಲ್ಲಿ ಹಿಡಿದು ಸಾಕಿದ ಮುಂಗಸಿಯೊಡನೆ ಆಟವಾಡುವುದರಲ್ಲಿ ಸಿಗುವ ಆನಂದ ಮಿಕ್ಕ ಯಾವ ಆಟದಲ್ಲೂ ಸಿಗುವುದಿಲ್ಲ ಎಂದು ಪಾಪ ಅವಳಿಗೇನು ಗೊತ್ತು: ಪ್ರಶಾಂತ ಎಂದೂ ಆಟಗಾರ ಆಗಿರಲಿಲ್ಲ. ಅವನು ಎಂದೂ ಯಾವ ಆಟವನ್ನೂ ಆಡಿರಲಿಲ್ಲ. ಆದರೂ ಆಟಗಳಲ್ಲಿ ಅವನಿಗೆ ತುಂಬಾ ಆಸಕ್ತಿಯಿತ್ತು. ಅವನು ಇಸ್ಪೀಟಿನ ಎಲೆಗಳನ್ನು ಕೈಯ್ಯಿಂದಲೂ ಮುಟ್ಟಿರಲಿಲ್ಲ. ಆದರೆ ಸಾಪ್ತಾಹಿಕ ಬ್ರಿಜ್ ನೋಟ್ಸನ್ನು ಬಹಳ ಗಂಭೀರವಾಗಿ ಓದುತ್ತಿದ್ದ. ಚರ್ಚಿಲ್ ಭಾಷಣವನ್ನು ಓದುವುದು ಮರೆತರೂ, ಕಲಕತ್ತೆಯ ಐ.ಎಫ್.ಎ.ಯ ಮ್ಯಾಚುಗಳ ರಿಪೋರ್ಟನ್ನು ಎಲ್ಲರಿಗಿಂತ ಮೊದಲು ಓದುತ್ತಿದ್ದ.... ಆದರೀಗ ಸ್ವತಃ ಅವನೇ ಆಟಗಾರನಾಗಿದ್ದಾನೆ....ಮಂಗಸಿಯ ಗುರುಗುಟ್ಟುವಿಕೆ, ಕಿರುಚುವಿಕೆ, ಬಾಲದ ಕೂದಲನ್ನು ನೆಟ್ಟಗೆ ನಿಲ್ಲಿಸಿಕೊಂಡು ಆಕ್ರಮಣ ಮಾಡುವುದು, ಆಕ್ರಮಣ ಮಾಡುವಾಗ ತನಗೆ ಪೆಟ್ಟಾಗದಂತೆ ಎಚ್ಚರಿಕೆ ವಹಿಸುವುದು, ಉಗುರುಗಳು ಸಿಕ್ಕಿಹಾಕಿಕೊಳ್ಳದಂತೆ ನೋಡಿಕೊಳ್ಳುವುದು····ಎಷ್ಟು ಚೆನ್ನ! 'ಸ್ಪೋರ್ಟ್ಸ್‌ಮನ್ ಸ್ಪಿರಿಟ್' ಎನ್ನುವುದು ಮತ್ಯಾವುದು?

ಡಾಕ್ಟರ್ ಮಮತಾ ಶ್ರೀವಾಸ್ತವ್, ದರಬಂಗಾದ ಪ್ರಸಿದ್ಧ ಡಾಕ್ಟರ್ ಕಾಳೀಪ್ರಸಾದ ಶ್ರೀವಾಸ್ತವ್ ಅವರ ಸುಪುತ್ರಿ. ಮಮತಾ ವೈದ್ಯ ಪರೀಕ್ಷೆಯಲ್ಲಿ ಉತ್ತೀರ್ಣಳಾದ ಮೇಲೆ ತಾನೇ ಒಂದು ಹೆಲ್ತ್ ಸೆಂಟರನ್ನು ಆರಂಭಿಸಿದ್ದಾಳೆ. ಪಟ್ಟಣದ ಬಡವರ ಬಡಾವಣೆಗಳಲ್ಲಿ ಈ ಹೆಲ್ತ್ ಯೂನಿಟ್ಟಿನವರು ನಡೆಸುತ್ತಿರುವ ಸೇವಾ ಕಾರ್ಯ ಪ್ರಶಂಸನೀಯವಾಗಿದೆ. ಪಾಟ್ನಾದ ಮಹಿಳಾ ಸಮಾಜಸೇವಿಕೆಯರಲ್ಲಿ ಮಮತೆಯ ಹೆಸರು ಅಗ್ರಸ್ಥಾನದಲ್ಲಿ ನಿಲ್ಲುತ್ತದೆ. ಬಡವರ ಗುಡಿಸಿಲಿನಿಂದ ಹಿಡಿದು 'ಗವರ್ನಮೆಂಟ್ ಹೌಸ್' ವರೆಗೆ ಅವಳಿಗೆ ಪ್ರವೇಶವಿದೆ. ಅವಳ ನಿಕಟ ಪರಿಚಯವಿರುವವರ ಹೇಳಿಕೆಯಂತೆ, ಮಮತಾ ಅಕ್ಕ ಹಗಲೂ ರಾತ್ರಿ ಸೇರಿ ಕೇವಲ ನಾಲ್ಕು ಗಂಟೆಗಳ ಕಾಲ ಮಾತ್ರ ವಿಶ್ರಾಂತಿ ತೆಗೆದುಕೊಳ್ಳುತ್ತಾಳೆ····ದೂರದಿಂದ ನೋಡುವವರು ಅವಳ ಶೀಲದ ಬಗ್ಗೆ ಸಂಶಯಪಡುತ್ತಾರೆ. ಸದಾಕಾಲ ಅವಳ ಮುಖದಲ್ಲಿ ಬೆಳಗುತ್ತಿರುವ ಮುಗುಳ್ನಗೆ ಜನರನ್ನು ಒಮ್ಮೊಮ್ಮೆ ಭ್ರಮೆಗೆ ಗುರಿ ಮಾಡುತ್ತದೆ

....ಕೆಲಸವಿಲ್ಲದೆ ಸುಮ್ಮನೆ ಕುಳಿತು ಆಲೋಚನೆ ಮಾಡುವವರು ವಿಧವಿಧವಾದ ಬಲೆಯನ್ನು ಬೀಸಿ ಸರ್ಕಾರದಿಂದ ಹಣ ವಸೂಲು ಮಾಡಿಕೊಳ್ಳುವುದೇ ಮಮತಾ ದೇವಿಯ ಕೆಲಸವೆಂದು ಅವಳನ್ನು ದೂರುತ್ತಾರೆ....ವಿಕಾರಪೂರ್ಣ ಮನಸ್ಸಿನವರು ಯಾವನಾದರೊಬ್ಬ ಮಂತ್ರಿಯೊಡನೆ ಅವಳ ಹೆಸರು ಸೇರಿಸಿ ನಗುತ್ತಾರೆ ....ಮಿಸ್ ಮಮತಾ ಶ್ರೀವಾಸ್ತವ ಅಲ್ಲ ಮಿಸೆಸ್ ....ಅನ್ನು!

ಡಾಕ್ಟರ್ ಪ್ರಶಾಂತ ಮಮತಾಳಿಗೆ ಋಣಿಯಾಗಿದ್ದಾರೆ! ಯಾಕೆಂದರೆ ಅವರಿಗೆ ಪ್ರೇರಣೆ ನೀಡಿದವಳು ಅವಳೇ: ಅವಳು ಹೇಳಿದ್ದಳು:

....“ಡಾಕ್ಟರ್ ಪ್ರತಿದಿನ ಡಿಸ್ಪೆನ್ಸರಿ ತೆಗೆದು, ಶಿವನ ಫೋಟೋದ ಮೇಲೆ ಬಿಲ್ವಪತ್ರೆ ಹಾಕಿ, ಸಾಂಕ್ರಾಮಿಕವಾದ, ಭಯಾನಕ ರೋಗಗಳು ಹರಡುವುದನ್ನೇ ನಿರೀಕ್ಷಿಸುತ್ತಾ ಕುರ್ಚಿಯಲ್ಲಿ ಕುಳಿತಿರುವುದೂ, ಅಥವಾ ಬಂಗಲೆಯ ಮುಂದೆ ನೂರಾರು ಜನ ರೋಗಿಗಳನ್ನು ಗುಂಪು ಸೇರಿಸಿ ಅವರನ್ನು ಪರೀಕ್ಷೆ ಮಾಡುವುದಕ್ಕೆ ಮುಂಚೆಯೇ ಅವರು ತಂದಿರುವ ನೋಟುಗಳ, ರೂಪಾಯಿಗಳ ಪರೀಕ್ಷೆ ಮಾಡುವುದೂ, ಮೆಡಿಕಲ್ ಕಾಲೇಜಿನ ವಿದ್ಯಾರ್ಥಿಗಳ ಮೇಲೆ ತನ್ನ ಪಾಂಡಿತ್ಯದ ಮಳೆ ಸುರಿಸಿ ತನ್ನ ಕರ್ತವ್ಯ ಮುಗಿದುಹೋಯಿತೆಂದು ಭಾವಿಸುವುದೂ, ಆಸ್ಪತ್ರೆಯಲ್ಲಿ ನರಳುತ್ತಿರುವ ರೋಗಿಗಳ ಅಳುವನ್ನೇ ತನ್ನ ಜೀವನದ ಸಂಗೀತವೆಂದು ಭಾವಿಸಿ ಆನಂದಪಡುವುದೂ ಡಾಕ್ಟರ ಕರ್ತವ್ಯ ಅಲ್ಲ.”

....ಮಮತಾಳಿಗೆ ಪ್ರಶಾಂತನ ವಿಚಾರದಲ್ಲಿ ಸಂದೇಹ. ಘೋರವಾದ ಹಳ್ಳಿಯಲ್ಲಿ ಪ್ರಶಾಂತ ಚಡಪಡಿಸುತ್ತಿರಬಹುದು, ತನ್ನ ತಪ್ಪಿಗಾಗಿ ಪಶ್ಚಾತ್ತಾಪ ಪಡುತ್ತಿರಬಹುದು ಎಂದು ಅವಳು ಭಾವಿಸಿದ್ದಳು. ಆದ್ದರಿಂದಲೇ ಅವಳು ತನ್ನ ಪ್ರತಿ ಪತ್ರದಲ್ಲೂ ಪಟ್ಟಣದ ಸಾಮಾಜಿಕ ಜೀವನದ ಬಗ್ಗೆ ಕೆಲವು ವಿಚಾರಗಳನ್ನಾದರೂ ಬರೆದಿರುತ್ತಿದ್ದಳು. ಒಂದು ಕಾಗದದಲ್ಲಿ ಅವಳು ಬರೆದಿದ್ದಳು:

“ಇದು ಬುಷ್ ಶರ್ಟಿನ ಯುಗ. ಐದು ವರ್ಷಗಳ ಹಿಂದೆ ಬಾಂಕೀಪುರದ ರಸ್ತೆಗಳಲ್ಲಿ, ಪಾರ್ಕು ಮೈದಾನಗಳಲ್ಲಿ ದಾನಪುರದ ಕಂಟೋನ್ಮೆಂಟಿನಿಂದ ಬಂದ ಬಿಳಿಯ ಸೈನಿಕರು ಪ್ರದರ್ಶಿಸಿದ ಜೀವನದ ಕುತ್ಸಿತ ಹಾಗೂ ಬೀಭತ್ಸ ರೂಪದ ಪ್ರಭಾವ ನಮ್ಮ ಸಮಾಜದ ಅಚೇತನ ಮನಸ್ಸಿನ ಮೇಲೆ ಆಳವಾದ ಪ್ರಭಾವ ಬೀರಿದೆ. ಇಂದು ಪ್ರತಿ ಮನುಷ್ಯನ ಒಳಗೂ ಹುಸಿದ ‘ಟಾಮೀ’ ಅಧೀರವಾಗಿ ಕುಣಿಯುತ್ತಿದೆ. ಯುದ್ಧದ ವಿಷಪೂರಿತ ಗಾಳಿ ಇಡೀ ಸಮಾಜದ ಮನಸ್ಸನ್ನು ವಿಕೃತಗೊಳಿಸಿದೆ. ಕಾಳಸಂತೆಯ ಕತ್ತಲೆಯಲ್ಲಿ ಹೊಸ ಪ್ರಪಂಚವೊಂದು ರೂಪಿತ

ವಾಗುತ್ತಿದೆ. ಆ ಪ್ರಪಂಚದಲ್ಲಿ ಸೂರ್ಯ ಉದಯಿಸುವುದಿಲ್ಲ, ಚಂದ್ರ ಬೆಳಗುವುದಿಲ್ಲ, ನಕ್ಷತ್ರಗಳು ಮಿಣಗುಟ್ಟುವುದಿಲ್ಲ....ಈ ಪ್ರಪಂಚದಲ್ಲಿ ತಾಯಿ–ಮಗ, ಅಣ್ಣ–ತಂಗಿ, ಗಂಡ–ಹೆಂಡತಿ—ಇಂಥ ಯಾವ ಸಂಬಂಧವೂ ಇರುವುದಿಲ್ಲ. ನಿನ್ನೆ ತಾನೆ ಒಬ್ಬ ಬಡವ ವಿಟಮಿನ್ 'ಸಿ' ಇಂಜಕ್ಷನ್ನನ್ನು ಎಂಟು ರೂಪಾಯಿ ಕೊಟ್ಟು ಕೊಂಡು ತಂದ. ಐದು ಆಣೆಯ ಒಂದು ಚಿಕ್ಕ ಇಂಜಕ್ಷನ್....ನಮ್ಮ ಬಡಾವಣೆಯ ಮಹಾರಾಜ ಮಹತಾ ನಿನಗೆ ಖಂಡಿತ ಗೊತ್ತಿರಬಹುದು. ಅವರ ಚಿಕ್ಕ ಮಗಳು ಫೂಲಮತಿ ಅವಳು ಕಳೆದ ವರ್ಷದವರೆಗೆ ಮಿಲ್ಕ್ ಸೆಂಟರಿನಲ್ಲಿ ಹಾಲು ಕುಡಿಯಲು ಬರುತ್ತಿದ್ದಳು. ಕೈತಟ್ಟಿ ಕುಣಿಯುತ್ತಿರುತ್ತಿದ್ದಳು. ಅವಳನ್ನು ನೀನು ಮರೆತಿರಲಾರೆ. ಮೊನ್ನೆಯಿಂದ ಅವಳು ಆಸ್ಪತ್ರೆಯಲ್ಲಿ ಬಿದ್ದುಕೊಂಡಿದ್ದಾಳೆ. ರಾಮನವಮಿಯ ದಿನ ಸಂಜೆ ಬಣ್ಣಬಣ್ಣದ ಸೀರೆಯುಟ್ಟು ಕುಣಿಯುತ್ತಾ ಅವಳು ರಾಮಮಂದಿರಕ್ಕೆ ಹೋಗಿದ್ದಳು. ರಾತ್ರಿ ಎರಡು ಗಂಟೆಯ ಹೊತ್ತಿಗೆ ಸಿಟಿಯ ಒಂದು ಪಾರ್ಕಿನಲ್ಲಿ ಅವಳು ನರಳುತ್ತಾ ಬಿದ್ದಿದ್ದುದನ್ನು ಪೊಲೀಸಿನವರು ನೋಡಿದರು. ಅವಳ ಹೇಳಿಕೆ ಇದು: ಟೇಥೀನೀಮ್‌ನಲ್ಲಿಯ ಹತ್ತಿರ ಒಂದು ಮೋಟಾರ್ ನಿಂತಿತು. ಇಬ್ಬರು ಗಂಡಸರು ಅವಳನ್ನು ಹಿಡಿದುಕೊಂಡು ಕಾರಿನಲ್ಲಿ ಕೂರಿಸಿಕೊಂಡರು....ದೊಡ್ಡ ಮನುಷ್ಯರು!

"ಮಂಚರಅಲೀ ರಸ್ತೆಯಿಂದ ಹಿಡಿದು ಅಶೋಕಪಥದವರೆಗೆ ವಿದೇಶಿ ಮದ್ಯದ ಹತ್ತು ಅಂಗಡಿಗಳು ತೆರೆದಿವೆ.

"....ನಿನ್ನೆ ವಿಲ್ಲಿಂಗ್ಡನ್ ಹಾಲಿನಲ್ಲಿ ಟಿ.ಬಿ. ಸ್ಯಾನಿಟೋರಿಯಂಗೋಸ್ಕರ ಸ್ಥಾನೀಯ ಮಹಿಳಾ ಕಾಲೇಜಿನ ಹುಡುಗಿಯರು ಒಂದು ಸಹಾಯಾರ್ಥ ಪ್ರದರ್ಶನ ನಡೆಸಿದರು. ಬ್ಯಾರಿಸ್ಟರ್ ಪ್ರಾಣಮೋಹನ ಸಿನ್ಹಾ ಅವರ ಪುತ್ರಿ ವಾಣಿ ವೇದಿಕೆಯನ್ನು ಏರಿದ ಕೂಡಲೇ, ಮೇಲಿನ ಗ್ಯಾಲರಿಗಳಿಂದ ಒಂದಾಣೆ ಎರಡಾಣೆ ನಾಣ್ಯಗಳು ಅವಳ ಮೇಲೆ ಬಿದ್ದವು. ಜೊತೆಗೆ ವಿಧವಿಧವಾದ ಕೊಳಕು ಬೈಗಳು ಕೇಳಿಬಂದವು. ಪೊಲೀಸಿನವರು ಶಾಂತಿಯನ್ನು ಸ್ಥಾಪಿಸಲು ತುಂಬ ಪ್ರಯತ್ನಪಟ್ಟರು. ಆದರೆ ಅವರ ಮೇಲೂ ಇಟ್ಟಿಗೆ ಚೂರು, ಕಲ್ಲುಗಳ ಮಳೆಯೇ ಸುರಿಯಿತು. ಹಾಲಿನಲ್ಲಿದ್ದ ಎಲ್ಲಾ ಬಾಗಿಲುಗಳ ಕಿಟಕಿಗಳ ಗಾಜು ಚೂರು ಚೂರಾದವು. ಅನೇಕ ಜನ ಗಾಯಗೊಂಡರು. ಗಾಯಗೊಂಡವರಲ್ಲಿ ಹೆಂಗಸರು ಮಕ್ಕಳ ಸಂಖ್ಯೆಯೇ ಹೆಚ್ಚಾಗಿತ್ತು.....ಎಲ್ಲದಕ್ಕಿಂತ ಆಶ್ಚರ್ಯದ ವಿಚಾರ ಯಾವುದು ಗೊತ್ತೇನು?.... ವಾಣಿಯ ಚಿಕ್ಕಪ್ಪನ ಮಗ ಅಮಲೇಶ ಸಿನ್ಹ ಖುರಾಫತ್ ಪಂಗಡದ ಲೀಡರಂತೆ.

ಪ್ರಾಣಮೋಹನ ಬಾಬು ಅಮಲೇಶ ತನ್ನ ಮನೆಗೆ ಬರುವುದನ್ನು ತಡೆಗಟ್ಟಿದ್ದರಂತೆ. ಶರಾಬಿನ ಅಮಲಿನಲ್ಲಿ ಅಮಲೇಶ ಅನೇಕ ಬಾರಿ ಮನೆಯ ಕೆಲಸದ ಹೆಂಗಸರೊಡನೆ ಅವಿಚಾರದಿಂದ ನಡೆದುಕೊಂಡನಂತೆ····ಅದೇ ಸಿಟ್ಟಿನಿಂದ ಅವನು ಕೈತೊಳೆದು ಕೊಂಡು ಅವರ ಮಗಳು ಅಂದರೆ ತನ್ನ ದೊಡ್ಡಪ್ಪನ ಮಗಳು ವಾಣಿಯ ಬೆನ್ನು ಹತ್ತಿದ್ದ.

····ಕೋಠಿಯ ಕಾಡಿನಲ್ಲಿ ಸಂಥಾಲಿ ಸ್ತ್ರೀಯರು ಸೌದೆ ಒಡೆಯುತ್ತಾ ಹಾಡುತ್ತಿದ್ದರು. ಕೆಲವು ದಿನಗಳ ಕೆಳಗೆ ಇದೇ ಕಾಡಿನಲ್ಲಿ ಸಂಥಾಲ ಸ್ತ್ರೀಯರು ಒಂದು ಚಿರತೆಯನ್ನು ಕೊಡಲಿಯಿಂದ ಕೊಂದುಹಾಕಿದ್ದರು. ಗಲಾಟೆಯನ್ನು ಕೇಳಿ ಹಳ್ಳಿಯ ಜನರೆಲ್ಲಾ ಬಂದು ಸೇರಿದ್ದರು. ಸತ್ತ ಚಿರತೆಯನ್ನು ನೋಡಿಯೇ ಜನರ ಮೈಮೇಲಿನ ಕೂದಲುಗಳು ಎದ್ದುನಿಂತಿದ್ದವು. ಕೆಲವರಂತೂ ಓಡಿಯೇ ಹೋಗಿದ್ದರು. ಆದರೆ ಸಂಥಾಲ ಹೆಂಗಸರು ಎಂದಿನಂತೆ ನಗುತ್ತಾ ನಿಂತಿದ್ದರು. ಜೋಳದ ಕಾಳುಗಳಂತಿದ್ದ ಬಿಳಿಯ ದಂತಪಂಕ್ತಿಗಳು, ಸರಳ ಮುಗುಳು ನಗೆ. ಚಿರತೆಯ ಆಕಸ್ಮಿಕ ಆಕ್ರಮಣದಿಂದ ಒಂದಿಬ್ಬರು ಯುವತಿಯರಿಗೆ ಸ್ವಲ್ಪ ಗಾಯ ವೇನೋ ಆಗಿತ್ತು. ಆದರೆ ಅವರ ಮುಖದಲ್ಲೂ ಅದೇ ನಗೆ ನಲಿಯುತ್ತಿತ್ತು. ಅವರ ಗಾಯಗಳಿಗೆ ಪಟ್ಟಿ ಕಟ್ಟುವಾಗ ಡಾಕ್ಟರ ಶರೀರದಲ್ಲಿ ಸಣ್ಣಗೆ ಕಂಪನ ಉಂಟಾಗಿತ್ತು, ಆದರೆ ಆ ಹುಡುಗಿಯರು ಕಿಲಕಿಲನೆ ನಗುತ್ತಿದ್ದರು····ಗಾಯ ಗಳ ಮೇಲೆ ತೀಕ್ಷ್ಣವಾದ ಔಷಧಿ ಹಾಕಿದಾಗಲೂ ಈ ರೀತಿ ನಗುವವರನ್ನು ಡಾಕ್ಟರು ನೋಡಿದ್ದು ಇದೇ ಮೊದಲು. ಕರಿ ಮರದ ವಿಗ್ರಹಗಳು—ತುರುಬಿನಲ್ಲಿ ಮುಡಿದಿರುವ ಗುಲ್‌ಮೊಹರ್ ಪುಷ್ಪ: ಸಂಥಾಲ ಸ್ತ್ರೀಯರು ಹಾಡುತ್ತಾರೆ.

ಛೋಟೀ—ಮೋಟೀ ಪುಖರೀ,
ಚರಕುಲಿಯಾ ಫೂಟಿ ಲಾಲೆ—ಲಾಲ್,
ಪಾಸ ಚೆ ತೇರೀ ಫೂಲ್ ದೇಖೀ
ಫೂಲಯ ಲಾಬೇ ಲಬ್
ಪಾಸ ಚೆ ತೇರೀ ಆಧಾದಿನ ಲಗಿತ್

(ನಾಲ್ಕು ಕಡೆಯೂ ಕಟ್ಟಿಕಟ್ಟಿರುವ ಚಿಕ್ಕ ಪುಷ್ಕರಣಿಯಲ್ಲಿ ಕೆಂಪು ಕಮಲದ ಹೂವುಗಳು ಅರಳಿವೆ. ಆ ಹೂವನ್ನು ಕಂಡು ನೀನು ಮುಗ್ಧನಾಗಿದ್ದೀ. ನನ್ನನ್ನು ನೋಡಿದರೂ ನೀನು ಮೋಹಿತನಾಗುತ್ತೀ. ಆದರೆ ಆ ಮೋಹ ಅರ್ಧ ದಿನದಷ್ಟು ಕಾಲ ಮಾತ್ರ ಅಲ್ಲವೇ?····)

ಇಲ್ಲ, ಇಲ್ಲ: ಅರ್ಧ ದಿನದ ಮಟ್ಟಿಗೆ ಖಂಡಿತ ಅಲ್ಲ, ಪ್ರಾಣಗಳೊಡನೆಯೇ ಸೇರಿಹೋಗಿರುವ ಬಣ್ಣದ ಮೋಹ ಅರ್ಧ ದಿನಕ್ಕೇ ನಾಶವಾಗಿ ಹೋಗುವುದಿಲ್ಲ.

## 31

ಚರಖಾ ಕೇಂದ್ರದ ಅಧ್ಯಾಪಿಕೆ ಮಂಗಳಾದೇವಿ ಕಾಯಿಲೆ ಮಲಗಿದ್ದಳು.

ಡಾಕ್ಟರ್ ರಕ್ತ ಪರೀಕ್ಷೆ ಮಾಡಿ ನೋಡಿದರು. ಕರಿ ಜ್ವರವಲ್ಲ, ಟೈಫಾಯಿಡ್. ಚರಖಾ ಕೇಂದ್ರದ ಇಬ್ಬರು ಅಧ್ಯಾಪಕರೂ ವಾಸವಾಗಿರುವುದು ತಹಸೀಲ್ದಾರರ ಮನೆಯಲ್ಲೇ. ಅಧ್ಯಾಪಿಕೆ ಮಾತ್ರ ಭಗವಾನ್ ಭಗತನ ಒಂದು ಗುಡಿಸಿಲಿನಲ್ಲಿದ್ದಳು. ಭಗವಾನ್ ಭಗತ ಎತ್ತುಗಳನ್ನು, ಗಾಡಿಯನ್ನು ಇಡುವುದಕ್ಕಾಗಿ ಆ ಗುಡಿಸಲು ಕಟ್ಟಿದ್ದ. ಮುಂದಿನ ವರ್ಷದಿಂದ ಝಿಂಕ್‌ಶೀಟಿನ ಮನೆ ಕೊಡಬೇಕೆಂದು ನಿಶ್ಚಯವಾಗಿದೆ. ಆದ್ದರಿಂದಲೇ ಈ ಬಾರಿ ಅವನು ಎತ್ತನ್ನೂ, ಗಾಡಿಯನ್ನೂ ಕೊಳ್ಳಲಿಲ್ಲ. ಚರಖಾ ಕೇಂದ್ರ ಆರಂಭವಾದಾಗ ಹಳ್ಳಿಯ ಜನ ಭಗವಾನ್ ಭಗತನಿಗೆ ಹೇಳಿದರು: "ಮನೆ ಖಾಲಿಯಿದೆ. ಅಧ್ಯಾಪಿಕೆ ಇರುವುದಕ್ಕೆ ಮನೆಯಿಲ್ಲ. ಚರಖಾ ಕೇಂದ್ರದ ಮನೆ ಕಟ್ಟಾದ ಮೇಲೆ ನಿನ್ನ ಮನೆ ಖಾಲಿ ಮಾಡುತ್ತೇನೆ." ಖೋಟಾ ಪರ್ಮಿಟ್ಟಿನ ಯುಗದಲ್ಲಿ ಕಾಂಗ್ರೆಸ್ಸಿನವರ ಮಾತು ಕೇಳದಿರುವುದಕ್ಕಾಗುತ್ತದೆಯೇ? ಅದಕ್ಕೆಂದೇ ಹದಿನೈದು ರೂಪಾಯಿ ಬಾಡಿಗೆಗೆ ಇಷ್ಟು ದೊಡ್ಡ ಮನೆ ಸಿಕ್ಕಿತ್ತು.

ಮಂಗಳಾದೇವಿ ಕಾಲರಾದ ಸಮಯದಲ್ಲಿ ರಾತ್ರಿಯೆಲ್ಲಾ ನಿದ್ದೆಯಿಲ್ಲದೆ ರೋಗಿಗಳ ಸೇವೆ ಮಾಡಿದ್ದಳು. ಆದರೆ ಈಗ ಅವಳೇ ಕಾಯಿಲೆ ಬಿದ್ದಿರುವಾಗ ಹತ್ತಿರ ಬಂದು ಕುಳಿತಿರಲು ಒಬ್ಬರೂ ಇರಲಿಲ್ಲ. ಚರಖಾ ಕೇಂದ್ರದ ಅಧ್ಯಾಪಕರಿಬ್ಬರೂ ಒಬ್ಬರಾಗುತ್ತಲೊಬ್ಬರು ಒಂದೊಂದು ಗಂಟೆ ಡ್ಯೂಟಿ ಮಾಡಿ ಹೋಗುತ್ತಿದ್ದರು. ರಾತ್ರಿ ಬಿಜಾಯನ ತಾಯಿ ಬಂದು ಮಲಗಿಕೊಳ್ಳುತ್ತಿದ್ದಳು. ಆದರೆ ಮುದುಕಿ ಒಂದೇ ಸಮನೆ ಹುಕ್ಕಾ ಸೇದುತ್ತಿದ್ದಳು. ಒಂದೇ ಸಮನೆ ಕೆಮ್ಮುತ್ತಿದ್ದಳು. ಆದರಿಂದಾಗಿ ಮಂಗಳಾದೇವಿಯ ಜ್ವರದ ಉರಿ ಇನ್ನಷ್ಟು ಹೆಚ್ಚುತ್ತಿತ್ತು.

ಮುದುಕಿ ನಿದ್ದೆ ಮಾಡುತ್ತಿದ್ದಾಗ ಹೊಡೆಯುತ್ತಿದ್ದ ಗೊರಕೆಯ ಶಬ್ದ ಅಕ್ಕಪಕ್ಕದ ಮನೆಯವರ ನಿದ್ದೆಯನ್ನೆಲ್ಲಾ ಕೆಡಿಸುತ್ತಿತ್ತು. ಡಾಕ್ಟರ್ ಹೇಳಿದರು : "ಪರಿಸ್ಥಿತಿ ಹೀಗೇ ಮುಂದುವರಿದರೆ ಸುಧಾರಿಸುವುದು ತುಂಬಾ ಕಷ್ಟ. ಮನೆಗೆ ಕಾಗದ ಬರೆದು ಯಾರನ್ನಾದರೂ ಕರೆಸಿಕೊಳ್ಳುವುದು ಒಳ್ಳೆಯದು."

ಮನೆ? ಮನೆಯಿಂದ ಯಾರಾದರೂ ಬರುವವರಿದ್ದಿದ್ದರೆ ಅಥವಾ ಅವಳ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವವರಿದ್ದಿದ್ದರೆ ಅವಳು ಚರಖಾ ಕೇಂದ್ರಕ್ಕೆ ಯಾಕೆ ಸೇರಬೇಕಾಗಿತ್ತು? ಅವಳು ಮನೆ ಬಿಟ್ಟು ಐದು ವರ್ಷಗಳಾಗಿದ್ದವು. ಮಂಗಳಾದೇವಿ ಈ ಪ್ರಪಂಚವನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದಳು. ಮನುಷ್ಯನ ಒಳಗೇ ಅಡಗಿರುವ ಪ್ರಾಣಿಯನ್ನು ಅವಳು ಅನೇಕ ಬಾರಿ ಹತ್ತಿರದಿಂದಲೇ ಕಂಡಿದ್ದಳು. ವಿಧವಾಶ್ರಮದಲ್ಲಿ, ಅಬಲಾಶ್ರಮದಲ್ಲಿ, ದೊಡ್ಡ ದೊಡ್ಡ ಮನುಷ್ಯರ ಮನೆಯಲ್ಲಿ ಆಯಾ ಆಗಿ ಜೀವನ ಕಳೆದಿದ್ದಳು. ಅಬಲೆ ನಾರಿ ಪ್ರತಿಯೊಂದು ಸ್ಥಾನದಲ್ಲೂ ಅಬಲೆಯೇ. ರೂಪ ಜೊತೆಗೆ ಯೌವನ.... ಇಲ್ಲ, ಅದೂ ಸುಳ್ಳು. ಹೆಂಗಸಾದರಾಯಿತು, ರೂಪ ಮತ್ತು ವಯಸ್ಸಿನ ಆವಶ್ಯಕತೆಯೂ ಇಲ್ಲ. ಒಬ್ಬ ಅಸಹಾಯ ಹೆಂಗಸು ದೇವತೆಯ ರಕ್ಷಣೆಯಲ್ಲೂ ನಿಶ್ಚಿಂತೆಯಿಂದಿರುವುದು ಸಾಧ್ಯವಿಲ್ಲ. ಮಂಗಳಾದೇವಿಯ ಪಾಲಿಗೆ ಮನೆಯೂ ಒಂದೇ, ಬಯಲೂ ಒಂದೇ. ಅವಳಿಗೆ ತನ್ನವರು ಎನ್ನುವವರು ಯಾರಿದ್ದಾರೆ? ಯಾರೂ ಇಲ್ಲ. "ಯಾರು....?....ಕಾಳೀಚರಣ ಬಾಬು."

ಡಾಕ್ಟರ್ ಹೇಳಿದರು: "ಈ ಗುಡಿಸಲಿನಲ್ಲಿದ್ದರೆ ನಿಮ್ಮ ಆರೋಗ್ಯ ಸುಧಾರಿಸುವುದಿಲ್ಲವಂತೆ. ನಮಗೆ ಸೇರಿದ ಭಜನೆ ಕೀರ್ತನೆ ಮಾಡುವ ಮನೆ ಚೊಕ್ಕಟವಾಗಿದೆ, ಅಲ್ಲಿ ಹವೆ ಚೆನ್ನಾಗಿದೆ."

ಮಂಗಳಾದೇವಿ ಯಾದವ ಪಂಗಡದ ಭಜನೆ ಮನೆಗೆ ಬಂದಳು. ಸೋಷಲಿಸ್ಟ್ ಪಾರ್ಟಿಯ ಆಫೀಸಿರುವುದೂ ಅಲ್ಲಿಯೇ. ಕಾಳೀಚರಣ ಅದನ್ನು ಆಫೀಸ್ ಎಂದೇ ಕರೆಯುತ್ತಾನೆ....ಆದರೆ ಸೋಷಲಿಸ್ಟ್ ಪಾರ್ಟಿಯ ಆಫೀಸ್ ಎಂದರೆ ಮಂಗಳಾದೇವಿ ಬರುವುದಿಲ್ಲವೇನೋ ಎನ್ನುವ ಭಯ.

"ಔಷಧಿ ಕುಡೀರಿ."

"ಕುಡಿಯೋದಿಲ್ಲ."

"ಕುಡೀರಿ ಮೇಡಂ. ಔಷಧಿ...."

" ಕಾಳೀಬಾಬು. ಒಂದು ಮಾತು ಹೇಳಲಾ?"

"ಹೇಳಿ."

"ನೀವು ನನ್ನ ಮೇಡಂ ಅಂತ ಕೂಗಬೇಡಿ."

" ಹಾಗಾದರೆ ಏನೆಂದು ಕೂಗಬೇಕು ?"

"ಯಾಕೆ, ನನಗೊಂದು ಹೆಸರಿಲ್ವೇ?"

"ಮಂಗಳಾದೇವಿ ?"

"ಉಹುಂ"

"ಮತ್ತೆ?"

"ಬರೀ····ಮಂಗಳಾ."

"ಔಷಧಿ ಕುಡೀರಿ."

"ಮಂಗಳಾ ಅನ್ನಿ."

"ಮಂಗಳಾ."

ಹದಿನೈದು ದಿನಗಳಿಂದ ಕಾಳೀಚರಣ ಮಂಗಳಾದೇವಿಯ ಸೇವೆ ಮಾಡುತ್ತಿದ್ದ. ಹಗಲಿನಲ್ಲೇನೋ ಬೇರೆ ಜನವೂ ಇರುತ್ತಿದ್ದರು. ರಾತ್ರಿ ಮಾತ್ರ ಕಾಳೀಚರಣನದೇ ಡ್ಯೂಟಿ. ಡಾಕ್ಟರ್ ಇನ್ನು ಭಯವಿಲ್ಲ ಎಂದರು. ಸ್ವಲ್ಪ ನಿಃಶಕ್ತಿಯಿದೆ. ಕೆಲವು ದಿನಗಳಲ್ಲಿ ಸರಿಹೋಗುತ್ತದೆ.

ಮಂಗಳಾದೇವಿಯ ಶರೀರದಲ್ಲಿ ಕೇವಲ ಮೂಳೆಗಳು ಮಾತ್ರ ಉಳಿದಿದ್ದವು. ಕೂದಲೆಲ್ಲಾ ಉದುರುತ್ತಿತ್ತು. ಊಟ ಮಾಡುವುದಕ್ಕೆ ಅವಳು ಮಕ್ಕಳಂತೆ ಹಠ ಮಾಡುತ್ತಿದ್ದಳು, ಅಳುತ್ತಿದ್ದಳು, ಪಾತ್ರೆ ಎಸೆಯುತ್ತಿದ್ದಳು. ಕಾಳೀಚರಣ ಕೈಯಲ್ಲಿ ಪಥ್ಯವಿದ್ದ ಬಟ್ಟಲನ್ನಿಟ್ಟುಕೊಂಡು ಎಷ್ಟೋ ಹೊತ್ತು ತಿಳುವಳಿಕೆ ಹೇಳುತ್ತಿದ್ದ····"ತೆಗೆದುಕೊಳ್ಳಿ. ಇದಕ್ಕೆ ನಿಂಬೆಹಣ್ಣಿನ ರಸ ಹಾಕಿದೆ. ತಿನ್ನಿ. ನಾಳೆಯಲ್ಲ, ನಾಡಿದ್ದು ಅನ್ನ ಕೊಡ್ತೀನಿ····"

ಕಾಳೀಚರಣನ ವ್ರತ ಭಂಗವಾಯಿತು. ಅವನ ಪಹಿಲ್ವಾನ್ ಗುರು ಹೇಳಿದ್ದ : "ಶಿಷ್ಯಾ, ಕುಸ್ತಿಯ ಮೈದಾನದ ಮಣ್ಣು ದೇಹಕ್ಕೆ ಪೂರ್ತಿ ಅಂಟುವವರೆಗೂ ಹೆಂಗಸರಿಂದ ಐದು ಕೈದೂರ ಇರಬೇಕು." ····ಕಾಳೀಚರಣನ ಆ ವ್ರತ ಭಂಗವಾಗಿ ಹೋಯಿತು. ಐದು ಕೈದೂರ ಇದ್ದರೆ ಮಂಗಳಾದೇವಿಯ ಸೇವೆ

ಮಾಡುವುದು ಹೇಗೆ? ಹಾಸಿಗೆ ಬದಲಾಯಿಸುವಾಗ, ಬಟ್ಟೆ ಬದಲಾಯಿಸುವಾಗ, ದೇಹವನ್ನು ಒರೆಸುವಾಗ ಕಾಳೀಚರಣನಿಗೆ ತನ್ನ ಗುರುವಿನ ಮಾತು ಜ್ಞಾಪಕಕ್ಕೆ ಬರುತ್ತಿತ್ತು. ಆದರೆ ಏನು ಮಾಡುವುದು?

" ಕಾಳೀಚರಣ, ಕಾಳೀಚರಣ."

" ಏನು?"

" ಕಾಗದ ಎಲ್ಲಿಂದ ಬಂದಿದೆ?"

" ಸೆಕ್ರೆಟರಿ ಬರೆದಿದ್ದಾರೆ. ಸೋಮವಾರ ಜಿಲ್ಲಾ ಪಾರ್ಟಿಯ ರ‍್ಯಾಲಿ ಇದೆಯಂತೆ. ಆದರೆ....ನಾನು ಹೇಗೆ ಹೋಗಲಿ?...."

" ಯಾಕೆ? ನೀವು ಹೋಗಿ ಬನ್ನಿ. ನಾನೀಗ ಆರೋಗ್ಯವಾಗಿದ್ದೀನಿ."

ರ‍್ಯಾಲಿಯ ನಂತರ ಸೆಕ್ರೆಟರಿ ಕಾಳೀಚರಣನನ್ನು ತಡೆದ. "ಕಾಮ್ರೇಡ್, ಇನ್ನೆರಡು ದಿನ ನೀವಿಲ್ಲೇ ಇರಿ. ಸೈನಿಕಜಿಯ ಹೆಂಡತಿ ಆಸ್ಪತ್ರೆಯಲ್ಲಿದ್ದಾರೆ. ಸೈನಿಕಜೀ ಪಾಟ್ನಾಗೆ ಹೋಗಿದ್ದಾರೆ, ನಾಡಿದ್ದು ಬರ‍್ತಾರೆ. ಎರಡು ಹೊತ್ತೂ ಆಸ್ಪತ್ರೆಗೆ ಊಟ ತೊಗೊಂಡು ಹೋಗಿ ಕೊಡಬೇಕು....ಇಲ್ಲಿ ಯಾರೂ ಇಲ್ಲ."

ಸೆಕ್ರೆಟರಿಯ ಮಾತನ್ನು ಮೀರುವುದು ಸಾಧ್ಯವಿಲ್ಲ. ಅಲ್ಲದೆ ಕಾಮ್ರೇಡಿನ ಹೆಂಡತಿ....ಕಾಳೀಚರಣನಿಗೆ ಪದೇ ಪದೇ ಮಂಗಳೆಯ ನೆನಪಾಯಿತು. ಅವಳು ದಾರಿ ಕಾಯುತ್ತಿರಬಹುದು. ಎರಡು ದಿನಗಳ ನಂತರ ಬರುತ್ತಾನೆಂದು ವಾಸುದೇವ ಹೋಗಿ ಹೇಳಿರುತ್ತಾನೆ. ಅದನ್ನು ಕೇಳುತ್ತಲೇ ಮಂಗಳೆಯ ಮುಖ ಬಾಡಿಹೋಗುತ್ತದೆ, ಕಳೆಗುಂದುತ್ತದೆ. ಮಂಗಳೆಯದು ಮಗುವಿನಂತಹ ಮುಖ. ಕಾಳೀಚರಣ ಅವಳಿಗೆಂದು ಹಣ್ಣುಗಳನ್ನು ಕಳುಹಿಸಿದ್ದ....ಆದರೆ ಅವಳು ಅದನ್ನು ಮುಟ್ಟುವುದೂ ಇಲ್ಲ. ವಾಸುದೇವ ಅವಳಿಗೆ ಏನು ಸಮಾಧಾನ ಹೇಳಬಲ್ಲ....ಈ ಪಟ್ಟಣದ ಜನ ತುಂಬಾ ಕೆಟ್ಟವರು: ಹಿಂದೆ ಹತ್ತಿರ ಬಂದು ಸೈಕಲ್ಲಿನ ಗಂಟೆ ಬಾರಿಸುತ್ತಾರೆ....ಸ್ವಲ್ಪ ತಗುಲಿದ್ದರೆ ಊಟವೆಲ್ಲಾ ಬಿದ್ದುಹೋಗುತ್ತಿತ್ತು.

"ಏನೋ ಗೂಬೆ, ಲೋಟ ತೊಳೆಯೋದು ಹೀಗೇನಾ?"....ಗೂಬೆ, ಕಾಳೀಚರಣನಿಗೆ ಯಾರೋ ಕೆನ್ನೆಗೆ ಅಪ್ಪಳಿಸಿದಂತಾಯಿತು. ಗೂಬೆ! ಅವನ ಶರೀರವೆಲ್ಲಾ ಝುಲ್ಲೆಂದಿತು. ಸೈನಿಕಜಿಯ ಹೆಂಡತಿ ಅವನನ್ನು ಏನೆಂದು ಭಾವಿಸಿದಳೋ? ನೌಕರನೆಂದೋ?

" ಇಲ್ಲಕ್ಕಾ ಲೋಟ...."

"ಹುಷಾರ್, ಅಕ್ಕಾ ಗಿಕ್ಕಾ ಅನ್ನಬೇಡ."

ಪಕ್ಕದಲ್ಲಿ ಮಂಚದ ಮೇಲೆ ಮಲಗಿದ್ದ, ತೊಗಲು ಬಾವಲಿಯ ಹಾಗಿದ ಹೆಂಗಸು ಕೇಳಿದಳು:

"ಇವನು ಯಾವ ದೇಶದ ಮನುಷ್ಯಾರೀ? ಮನುಷ್ಯನೋ ಭೂತವೋ? ಮಾತನಾಡೋದಕ್ಕೂ ಬರೋದಿಲ್ಲ."

"ಬರೋದೇ ಇಲ್ಲ, ಯಾಕೆಂದರೆ ಗೊಲ್ಲನಿಗೆ ಅರವತ್ತು ವರ್ಷವಾದರೂ ......" ಸೈನಿಕಜೀ ಹೆಂಡತಿ ಹೇಳಿದ್ದನ್ನೆಲ್ಲಾ ಕಾಳೀಚರಣನಿಗೆ ಪೂರ್ತಿ ಕೇಳಲಾಗಲಿಲ್ಲ. ಅವನ ತಲೆ ತಿರುಗಲಾರಂಭಿಸಿತು. ಸೈನಿಕಜಿಯೂ ಗೊಲ್ಲನೇ. ಕಾಳೀಚರಣನ ಕಣ್ಣ ಮುಂದೆ ಸಾಸಿವೆಯ ಹೂವುಗಳು ಹಾರಾಡಿದಂತಾಯಿತು. ಯಾರಾದರೂ ಗಂಡಸು ಈ ಮಾತು ಹೇಳಿದ್ದರೆ ಇಷ್ಟರಲ್ಲಿ ಕೊಲೆಯಾಗಿ ಹೋಗುತ್ತಿತ್ತು. ಕಾಳೀಚರಣನ ಕಿವಿಯ ಅಂಚು ಬಿಸಿಯಾಯಿತು...... ಮಂಗಳಾದೇವಿಯೂ ಹೆಂಗಸು, ಆದರೆ ಮಂಗಳಾ ಎಲ್ಲಿ? ಈ ಭೂತ ಎಲ್ಲಿ? ಧ್ವನಿಯಂತೂ ಗುಳ್ಳೆನರಿಯ ಧ್ವನಿಯೆ! ಬಾಯಿ ಬಿಟ್ಟರೆ ಕಚ್ಚೋದಕ್ಕೆ ಬರ್‍ತಿದ್ದ ಹಾಗಿತ್ತು. ಬಹುಶಃ ಅದೂ ಒಂದು ರೀತಿಯ ರೋಗವೇನೋ!

"ರೌತಹಟ್ ಸ್ಟೇಷನ್ನಿನಲ್ಲಿ ರೈಲಿನಿಂದ ಇಳಿದು ಬೇಗ ಬೇಗ ಮನೆಯ ಕಡೆ ನಡೆದ ಕಾಳೀಚರಣ.... ಅವನನ್ನು ನೋಡಿದ ಕೂಡಲೇ ಸಂತೋಷ ದಿಂದ ಮಂಗಳೆಯ ಮುಖ ಅರಳುತ್ತದೆ. ಹಣ್ಣುಗಳು ಒಣಗಿಹೋಗಿರಬಹುದು ಎರಡು ಕಡೆಗಳಲ್ಲೂ ಕೂಲಿಯ ಬಾಡಿಗೆ ಉಳಿಸಿ ಕಾಳೀಚರಣ ಒಂದು ಪ್ಯಾಕೆಟ್ ಬಿಸ್ಕತ್ತನ್ನು ತಂದಿದ್ದ. ಕಾಳೀಚರಣ ಎಂದೂ ಬಿಸ್ಕತ್ತನ್ನು ತಿಂದೇ ಇರಲಿಲ್ಲ. ಡಾಕ್ಟರ್ ಮಂಗಳೆಗೆ ಬಿಸ್ಕತ್ ತಿನ್ನುವಂತೆ ಹೇಳಿದ್ದಾರೆ. ಬಹುಶಃ ಇದರಲ್ಲಿ ಕೋಳಿಯ ಮೊಟ್ಟೆ ಇರುತ್ತದೆ....ಅವನು ಪದೇ ಪದೇ ಬಿಸ್ಕತ್ತಿನ ಡಬ್ಬವನ್ನು ಮುಟ್ಟಿ ಮುಟ್ಟಿ ನೋಡುತ್ತಿದ್ದ. ಇದರ ಒಳಗೆ ಶಬ್ದ ಮಾಡುವುದು ಯಾವುದು? ಕೋಳಿಮೊಟ್ಟೆಯೇನಾದರೂ ಒಡೆದು...."

"ಸೀತಾರಾಮ್ ಸೀತಾರಾಮ್, ಜೈಹಿಂದ್ ಕಾಳೀಜೀ."

"ಅಂ....ಓ....ಬಾವನದಾಸ ನನಗೆ ಗಾಬರಿಯಾಯಿತು. ಇಲ್ಲಿ ಯಾಕೆ ಮಲಗಿದ್ದೀರಿ?"

"ನೀವಂತೂ ಒಳ್ಳೆ ರೇಸಿನ ಕುದುರೆಯಂತೆ ಕಣ್ಣು ಮುಚ್ಚಿಕೊಂಡು ಓಡುತ್ತಿದ್ದೀರಿ...."

“ಕಾಡುನೇರಳೆಯ ಮರದ ನೆರಳಿನಲ್ಲಿ ಬಾವನದಾಸ ಮಲಗಿದ್ದ. ಸರಳಿಗೆ ಹೋದ ಮೇಲೆ ಬಿಸಿಲು ಎಷ್ಟು ತೀಕ್ಷ್ಣವಾಗಿದೆ ಎಂದು ಕಾಳೀಚರಣನಿಗೆ ಅನ್ನಿಸಿತು.”

“ನಾನು ರಾತ್ರಿ ಗಾಡಿಯಲ್ಲೇ ಬಂದೆ. ನಿನ್ನೆ ನಲವತ್ತನೇ ಅಕ್ಷಿನ ತೀರ್ಮಾನವಾಯಿತು.”

“ತೀರ್ಮಾನವಾಯಿತು?.... ಏನಾಯ್ತು?”

“ಆಗೋದೇನು? ಎಲ್ಲರ ಬೇಡಿಕೆಯೂ ರದ್ದಾಯಿತು. ನನಗೆ ಮೊದಲೇ ಗೊತ್ತಿತ್ತು. ನಿನ್ನೆ ಹಳ್ಳಿಯಿಂದ ಎಲ್ಲ ರೈತರೂ ಬಂದಿದ್ದರು. ತೀರ್ಮಾನ ಕೇಳಿ ಎಲ್ಲರೂ ಅಳಲಾರಂಭಿಸಿದರು. ಇನ್ನು ಜಮೀನ್ದಾರರು ಅವರನ್ನು ಜಮೀನು ಉಳೋದಕ್ಕೂ ಬಿಡೋದಿಲ್ಲ.”

“ಉಳೋದಕ್ಕೂ ಬಿಡೋದಿಲ್ಲ....ಇಲ್ಲ....ನಮ್ಮ ಪಾರ್ಟಿಯ ರ‍್ಯಾಲಿಯಲ್ಲಿ ಆವತ್ತೇ ತೀರ್ಮಾನವಾಗಿದೆ. ಜಮೀನ್ದಾರರು ರೈತರನ್ನು ಭೂಮಿಯಿಂದ ಬಿಡಿಸೋಹಾಗಿಲ್ಲ. ಅದಕ್ಕಾಗಿ ಪಾರ್ಟಿ ಹೋರಾಟ ನಡೆಸುತ್ತೆ.”

“ಕಾಳೀಬಾಬು, ತೀರ್ಮಾನದಿಂದ ಏನೂ ಆಗೋಲ್ಲ”—ಬಾವನದಾಸ ರಹಸ್ಯ ತುಂಬಿದ ನಗೆ ಬೀರುತ್ತಾ ಹೇಳಿದ.

“ನೀವು ಕುಳಿತುಕೊಳ್ಳಿ ಬಾವನಜೀ. ನಾನು ಸ್ವಲ್ಪ ಬೇಗ ಹೋಗ್ಬೇಕು.”

“ಹೋಗಿ ಹೋಗಿ.... ಇಷ್ಟಕ್ಕೂ ನನಗೆ ನಿಮ್ಮ ಸಮಕ್ಕೆ ನಡೆಯೋದಕ್ಕೂ ಆಗೋದಿಲ್ಲ.”

ಹೋಗುತ್ತಾ ಹೋಗುತ್ತಾ ಕಾಳೀಚರಣ ಯೋಚಿಸಿದ. “ಈಗ ಆಗಿದ್ದೇ ಸರಿ. ರೈತರ ಬೇಡಿಕೆ ಪೂರ್ತಿಯಾಗಿದ್ದರೆ ಜನರೆಲ್ಲಾ ಕಾಂಗ್ರೆಸ್ಸಿಗೇ ಸೇರಿ ಬಿಡುತ್ತಿದ್ದರು. ಈಗ ಹೋರಾಟ ನಡೆಸಲು ಎಲ್ಲರೂ ಸೋಷಲಿಸ್ಟ್ ಪಾರ್ಟಿಗೆ ಸೇರುತ್ತಾರೆ....”

“ಏನದು? ಬಿಸ್ಕತ್ತು?” ಮಂಗಳಾದೇವಿ ಪ್ರೀತಿಯಿಂದ ರೇಗಿದಳು: “ವ್ಯರ್ಥವಾದ ಖರ್ಚು ಮಾಡುವುದಕ್ಕೆ ನಿಮಗೆ ಯಾರು ಹೇಳಿದರು: ಅಲ್ಲಿ ನೋಡಿ ನೀವು ಕಳುಹಿಸಿದ್ದ ಹಣ್ಣುಗಳೆಲ್ಲಾ ಹಾಗೇ ಬಿದ್ದಿದೆ. ನಾನು ತಿನ್ನೋದಿಲ್ಲ.”

“ಡಾಕ್ಟರ್ ಹೇಳಿದ್ದರು.”

"ಆಹಾ ಡಾಕ್ಟರ್ ಹೇಳಿದ್ದರು,"....ಮಂಗಳಾ ಸುಳ್ಳು ಕೋಪವನ್ನು ತೋರಿಸುತ್ತಾ ಹೇಳಿದಳು: "ಉಪವಾಸ ಇದ್ದು, ಹಣ್ಣನ್ನೂ, ಬಿಸ್ಕತ್ತನ್ನೂ ತನ್ನೀ ಅಂತ ಡಾಕ್ಟರ್ ಹೇಳಿದ್ದರೇನೋ."

ಕಾಳೀಚರಣನಿಗೆ ಸೈನಿಕಜಿಯ ಹೆಂಡತಿಯ ನೆನಪಾಯಿತು. ಗೂಬೆ, ಅರವತ್ತು ವರ್ಷವಾದರೂ ಬುದ್ಧಿ ಬರೋಲ್ಲ....

"ತಿನ್ನು ಮಂಗಳಾ."

"ಮೊದಲು ನೀವೊಂದು ಬಿಸ್ಕತ್ತು ತಿನ್ನಿ."

ಬಿಸ್ಕತ್ತು ಇಷ್ಟು ಸಿಹಿಯಾಗಿ, ಗರಿಗರಿಯಾಗಿ, ರುಚಿಯಾಗಿ ಇರುತ್ತೇನು! ಇದರಲ್ಲಿ ಹಾಲು, ಸಕ್ಕರೆ, ಬೆಣ್ಣೆ ಇರುತ್ತೆ. ಮೊಟ್ಟೆ ಇರೋಲ್ಲ.

## 32

ವೈಶಾಖ, ಜ್ಯೇಷ್ಠ ಮಾಸಗಳ ಸಂಜೆ, ಮದ್ಯದಂಗಡಿಯಲ್ಲಿ, ಮೂರಾಣೆಯ ಮದ್ಯ ಇಳಿಸುವ ಮಡಿಕೆಯಿಂದ ಜೀವನದ ಆನಂದ ಸಿಗುತ್ತದೆ.

ಕಡಲೆ ಗುಗ್ಗರಿ ಈರುಳ್ಳಿ ಮತ್ತು ಬಿಳಿ ನೊರೆಯಿಂದ ತುಂಬಿದ ಹೆಂಡದ ಮಡಕೆ....ಹುಳಿ–ಸಿಹಿ, ಸಕ್ಕರೆ–ಸಿಹಿ ಮತ್ತು ಮದ್ಯದ ಸ್ವಾದ ಬೇರೆ ಬೇರೆ ರೀತಿಯದು. 'ಬಸಂತಿ'ಯನ್ನು ಕುಡಿದು ಎಚ್ಚರ ತಪ್ಪದಿರುವ ಕುಡುಕರು ತಂಬಾ ಕಡಮೆ. ಶಾಖದ ಶರೀರದವರು ರಾತ್ರಿಯಾದ ಮೇಲೆ ಕುಡಿದು ನೋಡಲಿ....ಎದೆ ತಣ್ಣಗಾಗುತ್ತದೆ, ಮೂತ್ರ ವಿಸರ್ಜನೆ ಮಾಡುವಾಗಲೂ ಸ್ವಲ್ಪವೂ ಉರಿಯಾಗುವುದಿಲ್ಲ. ಶೀತ ಪ್ರಕೃತಿಯವರಾದರೆ ಸಂಜೆಯೇ ಕುಡಿಯ ಬೇಕು. ರಾತ್ರಿಯವರೆಗೂ ದೇಹ ಬಿಸಿಯಾಗಿರುತ್ತದೆ.

ವರ್ಷಗಳಿಂದ ಇದ್ದ ಜಗಳವೆಲ್ಲಾ ಮದ್ಯದಂಗಡಿಯಲ್ಲೇ ತೀರ್ಮಾನ ವಾಗುತ್ತದೆ. ಮಣ್ಣಿನ ಮಡಕೆಗಳಂತೆ ಮನಸ್ಸು ಚೂರು ಚೂರಾಗುವುದೂ ಇಲ್ಲಿಯೇ. ಇಲ್ಲಿ ಮದುವೆಗಾಗಿ ವರ ವಧುಗಳ ಜೋಡಿ ನಿಶ್ಚಯವಾಗುವಂತೆಯೇ,

ಮತ್ತೊಬ್ಬರ ಹೆಂಡತಿಯನ್ನು ಓಡಿಸಿಕೊಂಡು ಬರುವ ಉಪಾಯ ಹೊಳೆಯುವುದೂ ಇಲ್ಲಿಯೇ !

ಜಗದೇವ ಪಾಸ್ವಾನ, ದುಲಾರಿ, ಸನಿಚ್ಚರ್ ಮತ್ತು ಸುಂದರ ಮದ್ಯ ಸೇವಿಸುತ್ತಿದ್ದರು. ಸೋಮಾಚಟ ಇಂದು ಬರುವವನಿದ್ದಾನೆ. ಭಾನುವಾರ ಮದ್ಯದಂಗಡಿಗೆ ಬರುವೆನೆಂದು ರೌತಹಟ್ ಸಂತೆಯ ದಿನವೇ ಹೇಳಿದ್ದ. ಸೋಮಚಟ ಇತ್ತೀಚಿಗೆ ಜೈಲಿನಿಂದ ಬಿಡುಗಡೆಯಾಗಿದ್ದಾನೆ. ಪ್ರಸಿದ್ಧ ಡಕಾಯಿತ. ಆದರೆ ಈಗ ಸೋಷಲಿಸ್ಟ್ ಪಾರ್ಟಿಗೆ ಸೇರಲು ಇಷ್ಟಪಡುತ್ತಿದ್ದಾನೆ. ಸುನರಾ ಕಾಳೀಚರಣನನ್ನು ಕೇಳಿದ. ಕಾಳೀಚರಣ ಜಿಲ್ಲೆಯ ಸೆಕ್ರೆಟರಿಯನ್ನು ಕೇಳಿದ. ವರ್ಷವೆಲ್ಲಾ ಅವನ ನಡತೆಯನ್ನು ಪರೀಕ್ಷಿಸಿ ಅನಂತರ ಸದಸ್ಯನನ್ನಾಗಿ ಮಾಡಿಕೊಳ್ಳಬೇಕೆಂದು ಕಾರ್ಯದರ್ಶಿ ತಿಳಿಸಿದರು. ಅವನ ಮೇಲೆ ಒಂದು ಕಣ್ಣು ಇಟ್ಟಿರಬೇಕು.

ಬರಿ ಕಣ್ಣು ಇಟ್ಟಿರುವುದೇನು, ಸೋಮನ ನಡವಳಿಕೆ ಸುಧಾರಿಸಿದೆ ಎಂದು ಮಧ್ಯೆ ಮಧ್ಯೆ ಹೋಗಿ ಸೆಕ್ರೆಟರಿಯವರಿಗೆ ತಿಳಿಸಬೇಕು. ಕಾಳೀಚರಣನಿಗೆ ವಾಸುದೇವ ತಿಳಿಹೇಳುತ್ತಾನೆ. ····ಸೋಮ ಏನಾದರೂ ಪಾರ್ಟಿಗೆ ಬಂದು ಬಿಟ್ಟರೆ, ಪ್ರಾಂತ್ಯದ ದೊಡ್ಡ ದೊಡ್ಡ ಜನರೆಲ್ಲಾ ಸರಿಯಾಗಿಬಿಡುತ್ತಾರೆ. ಪಾರ್ಟಿಗೆ ಸೇರಿದ ಮೇಲೆ ಪೋಲೀಸಿನವರು ಏನೂ ಮಾಡುವ ಹಾಗಿಲ್ಲ. ಸೆಕ್ರೆಟರಿ ಸಾಹೇಬರು ಪೋಲೀಸ್ ಇನ್ಸ್‌ಪೆಕ್ಟರಿಗಿಂತ ಕಡಿಮೆಯೇನು? ನೋಡಿದೀರಲ್ಲಾ, ಭಾಷಣ ಮಾಡೋದಕ್ಕೆ ಎದ್ದು ನಿಂತರೆ, ಜವಾಹರಲಾಲ ನೆಹರೂ ಅವರಿಗೂ ನೀರು ಕುಡಿಸಿಬಿಡುತ್ತಾರೆ. ಇನ್ಸ್‌ಪೆಕ್ಟರಿಗೆ ಪಾರ್ಟಿಯ ವಿರುದ್ಧ ಮಾತನಾಡಲು ಧೈರ್ಯವಿಲ್ಲ. ತಮಾಷೆಯಲ್ಲಿ 'ಲಾಲ್ ಪತಾಕ' ಪತ್ರಿಕೆಯಲ್ಲಿ ತಕ್ಷಣ ಗೆಜಟ್ ನಲ್ಲಿ ಅಚ್ಚಾಗಿಬಿಡುತ್ತದೆ····ಇನ್ಸ್‌ಪೆಕ್ಟರ ಅತ್ಯಾಚಾರ....

····ಚಲಿತ್ತರ ಕರ್ಮಕಾರನನ್ನು ಪಾರ್ಟಿಯಿಂದ ತೆಗೆದುಹಾಕಿಬಿಟ್ಟರು. ಅವನು ಸಿಮೆಂಟಿನ ವ್ಯವಹಾರದಲ್ಲಿ ತುಂಬಾ ಹಣವನ್ನು ಮುಳುಗಿಸಿಬಿಟ್ಟ, ಲೆಕ್ಕ ಪತ್ರ ಒಂದನ್ನೂ ಕೊಡಲಿಲ್ಲ. ಅವನನ್ನು ಪಾರ್ಟಿಯಿಂದ ಕಳುಹಿಸದೆ ಇರುವುದು ಹೇಗೆ?····ಅವನು ಪಾರ್ಟಿಯ ಬಂದೂಕ, ಪಿಸ್ತೂಲುಗಳನ್ನು ವಾಪಸು ಕೊಡಲಿಲ್ಲ....ಆದರೆ, ಹೇಗಾದರೂ ಮಾಡಿ ಅವನಿಂದ ಪಿಸ್ತೂಲು, ಬಂದೂಕಗಳನ್ನು ಪಡೆಯುವಂತೆ ಸೆಕ್ರೆಟರಿಯವರು ಕಾಳೀಚರಣನಿಗೆ ಗುಟ್ಟಾಗಿ ಹೇಳಿದ್ದಾರಂತೆ. ಅವನನ್ನು ಸರಕಾರಕ್ಕೆ ಒಪ್ಪಿಸಬೇಕು. ಅದಕ್ಕೇ ಕಾಳೀಚರಣ

ಅವನ ಜೊತೆ ಸ್ನೇಹವಾಗಿಯೇ ಓಡಾಡುತ್ತಿದ್ದಾನೆ. ಇದು ರಹಸ್ಯ ವಿಚಾರ. ಜೋಕೆ, ಯಾರಿಗೂ ಹೇಳಬೇಡ ಸನಿಚ್ಚರ. ಇಲ್ಲದಿದ್ದರೆ, ಕ್ರಾಂತಿ ಪಾರ್ಟಿಯ ಗುಟ್ಟು ಬಯಲು ಮಾಡಿದರೆ ಯಾವ ಶಿಕ್ಷೆ ವಿಧಿಸುತ್ತಾರೆ ಗೊತ್ತೇನು?····ಹುಂ ····ಜನ ಕೇಳಿದರೆ ಹೇಳಬೇಕು...."

"ಹಾಗಾದರೆ ಈಗ ಪಾರ್ಟಿಗೆ ಬಂದೂಕು ಪಿಸ್ತೂಲುಗಳಿಂದ ಉಪಯೋಗವಿಲ್ಲವೇನು?"

"ಇಲ್ಲ," ಸುಂದರ ನಕ್ಕ. ಅದರ ಅರ್ಥ, ಅಷ್ಟು ಬೇಗ ನೀವು ಪಾರ್ಟಿಯ ವಿಚಾರ ತಿಳಿದುಕೊಳ್ಳಲು ಇಷ್ಟಪಡುತ್ತೀರೇನು? ಇನ್ನು ಸ್ವಲ್ಪ ದಿನ ಸದಸ್ಯರಾಗಿರಿ. ಕಾನ್‌ಫರೆನ್ಸ್ ಆದಾಗ ಎಲ್ಲಾ ವಿಚಾರಗಳೂ ತಾನಾಗಿಯೇ ತಿಳಿಯುತ್ತದೆ. ಹೊಸ ಸದಸ್ಯರ ಕಿವಿ ಹಸಿಯಾಗಿರುತ್ತದೆ. ಇಲ್ಲಿ ಕೇಳಿದರೆ, ಅಲ್ಲಿ ಉಗುಳಿಬಿಡ್ತಾರೆ. ಮೊದಲು ನಿಶ್ಚಯವಾಗಲಿ····"

"ಕಾಮ್ರೇಡ್ ಸೋಮೂ, ಬಾ. ನಿನ್ನ ಮಾತನ್ನೇ ಆಡುತ್ತಿದ್ದೆವು. ಕೂತು ಕೂತಿದ್ದ ಹಾಗೇ ಎರಡು ಮಡಕೆ ಮದ್ಯ ಮುಗಿದುಹೋಯಿತು." ಸುಂದರ ನಕ್ಕ.

ಇತ್ತೀಚೆಗೆ ಸುಂದರ ಯಾವಾಗಲೂ ಖದ್ದರಿನ ಪಂಜಾಬಿ ಕುರ್ತಾ ಧರಿಸುತ್ತಿದ್ದ. ಕುತ್ತಿಗೆಯ ಹತ್ತಿರ ಎರಡಂಗುಲ ಉದ್ದದ ಪಟ್ಟಿ ಬೇರೆ. ಇದಕ್ಕೆ "ಸೋಷಲಿಸ್ಟ ಕಟ್" ಕುರ್ತಾ ಎಂದು ಹೆಸರು. ಸೋಷಲಿಸ್ಟ ಅಲ್ಲದವರು ಯಾರೂ ಇದನ್ನು ಧರಿಸಬಾರದು. ಹಳ್ಳಿಯ ಸದಸ್ಯರಲ್ಲಿ ಮೂರು ಜನ ಮಾತ್ರ ಇಂಥ ಬಟ್ಟೆಯನ್ನು ಧರಿಸುತ್ತಾರೆ—ಕಾಳೀಚರಣ, ವಾಸುದೇವ ಮತ್ತು ಸುಂದರ. ಮಿಕ್ಕವರು ಜೀವನದಲ್ಲಿ ಒಮ್ಮೆಯಾದರೂ ಬನೀನನ್ನೂ ಹಾಕಿಕೊಂಡವರಲ್ಲ. ಆದರೆ ಸೋಷಲಿಸ್ಟ್ ಪಾರ್ಟಿಯ ಪಟ್ಟಿಯಿರುವ ಅಂಗಿ ಹಾಕಿಕೊಳ್ಳದಿದ್ದರೆ ಅವನು ಪಾರ್ಟಿಯವನು, ಕ್ರಾಂತಿಕಾರಿ ಎಂದು ಬೇರೆಯವರಿಗೆ ತಿಳಿಯುವುದು ಹೇಗೆ? ಒಂದು ಕುರ್ತಕ್ಕೆ ಏಳು ರೂಪಾಯಿ ಖರ್ಚಾಗುತ್ತದೆ....ವಾಸುದೇವ ಈಗೀಗ ಬೀಡಿಯನ್ನೂ ಕುಡಿಯುವುದಿಲ್ಲ. ಕಾರು ಮಾರ್ಕಿನ ಸೀಗರೇಟು ಸೇದುತ್ತಾನೆ. ಸೆಕ್ರೆಟರಿ ಸಾಹೇಬ್, ಸೈನಿಕಜೀ, ಚಿನಗಾರೀಜೀ, ಮಾಸ್ಟರ್ ಸಾಹೇಬ್ ಎಲ್ಲ ದೊಡ್ಡ ದೊಡ್ಡ ಲೀಡರುಗಳೂ ಸೀಗರೇಟೇ ಸೇದುವುದು. ಸೋಷಲಿಸ್ಟ್ ಪಾರ್ಟಿಯ ಮೆಂಬರುಗಳು ಬೀಡಿಯನ್ನು ಸೇದಬಾರದು. ಸೀಗರೇಟನ್ನೇ ಸೇದಬೇಕು.

ಇಂದಿನ ಖರ್ಚನ್ನೆಲ್ಲಾ ಸೋಮುನೇ ವಹಿಸಿಕೊಳ್ಳುತ್ತಾನೆ. ಆದ್ದರಿಂದ ಭಯಪಡುತ್ತಾ ಕುಡಿಯುವ ಆವಶ್ಯಕತೆಯೇ ಇಲ್ಲ. ಹಾಕು····ಒಂದು ಮಡಕೆ,

ಎರಡು ಮಡಕೆ····ಮೂರು ಮಡಕೆ····ಚರಖಾ ಕೇಂದ್ರದವರು ಹೇಳು ತ್ತಿದ್ದಾರೆ. ಮುಂದಿನ ವರ್ಷದಿಂದ ತಾಳೆಯಿಂದ ಬೆಲ್ಲ ಮಾಡುತ್ತಾರಂತೆ. ಆಗ ಯಾರೂ ಕುಡಿಯುವ ಹಾಗೇ ಇಲ್ಲ. ಈ ವರ್ಷವೇ ಎಷ್ಟು ಸಾಧ್ಯವೋ ಅಷ್ಟೂ ಕುಡಿದುಬಿಡು.

ಸೋಮಾಜಟ್ಟಿಯದು ಕಾಳೀಚರಣನಿಗಿಂತಲೂ ಉದ್ದ ಗಾತ್ರದ ಶರೀರ. ಪೊಲೀಸಿನವರ ಪೆಟ್ಟು ತಿಂದೂ ತಿಂದೂ ಮೂಳೆಯಲ್ಲಾ ಗಂಟು ಕಟ್ಟಿಹೋಗಿದೆ. ಗಂಟಿರುವ ಮೂಳೆ ತುಂಬಾ ಗಟ್ಟಿಯಾಗಿರುತ್ತದೆ. ಕಾಳೀಚರಣನ ದೇಹ ಆನೆಯ ದಂತದ ಹಾಗೆ ಗಟ್ಟಿಯಾಗಿದ್ದರೆ, ಸೋಮನ ಮುಖದಲ್ಲಿ ಕಠೋರತೆ ಇದೆ. ಕಾಳೀಚರಣನ ಕಣ್ಣಲ್ಲಿ ನೀರಿದೆ, ಸೋಮನ ಕಣ್ಣುಗಳು ಬೆಕ್ಕಿನ ಕಣ್ಣಿನಂತೆ ಹೊಳೆಯುತ್ತವೆ.

"ಯಾರು? ಹರಗೌರೀ? ಶಿವಶಂಕರಸಿಂಹನ ಮಗನೇ?····ಅವನು ತಹಸೀಲ್ದಾರನಾದನೇ? ಕಾಳೀಚರಣ ಅಪ್ಪಣೆ ಕೊಟ್ಟರೆ ಒಂದೇ ರಾತ್ರಿಯಲ್ಲಿ ಅವನ ಮೂಳೆ ಪುಡಿ ಪುಡಿ ಮಾಡಿಬಿಡಲೇನು?"

ಸೋಮ ಮೀಸೆಗೆ ಅಂಟಿಕೊಂಡಿದ್ದ ಮದ್ಯದ ನೊರೆಯನ್ನು ಒರಸಿ ಕೊಳ್ಳುತ್ತಾ ಹೇಳಿದ. ಸುಂದರ ಹೇಳಿದ: "ಕಾಮ್ರೇಡ್ ಇನ್ಮೇಲೆ ಮೀಸೆ ಕತ್ತರಿಸಿಬಿಡಬೇಕು. ಪಾರ್ಟಿ ಸದಸ್ಯರು ಮೀಸೆ ಇಟ್ಕೊಂಡಿರೋ ಹಾಗಿಲ್ಲ."

"ಕತ್ತರಿಸೋಣ, ಆದರೆ ಕಾಳೀಚರಣ ಅಪ್ಪಣೆ ಮಾಡಿದರೆ...."

"ಸ್ವಲ್ಪ ತಡೀರಿ ಕಾಮ್ರೇಡ್, ಇನ್ನೇನು ಘರ್ಷಣೆ ಆರಂಭವಾಗುತ್ತದೆ. ತೀರ್ಮಾನ ಆಗಿಹೋಗಿದೆ. ಆಗ ನೋಡೋಣ ನಿಮ್ಮ ಶೌರ್ಯ····"

"ಆ ಬಾಲದೇವನನ್ನು ನೀವೆಲ್ಲಾ ಊರಿಂದ ಓಡಿಸಲಾರಿರೇನು? ಮಠದ ಕೊಠಾರಿನ್ ಜೊತೆ ಅವನಿಗೆ ತುಂಬಾ ಸ್ನೇಹವಂತೆ. ಕಾಳೀಚರಣ ಅಪ್ಪಣೆ ಕೊಟ್ಟರೆ ಒಂದೇ ದಿನದಲ್ಲಿ ಅವನಿಗೆ ಚನ್ನಪಟ್ಟಿಯ ದಾರಿ ತೋರಿಸಿಬಿಡ್ತೀನಿ."

"ಬಾಲದೇವ ಹೆಣವಾಗಿಬಿಟ್ಟಿದ್ದಾನೆ. ಈಗ ಅವನನ್ನು ಕೇಳುವವರ್ಯಾರು! ಒಂದು ಮಗೂ ಕೂಡ ಈಗ ಅವನನ್ನು ಲೆಕ್ಕಕ್ಕೆ ಇಡೋಲ್ಲ. ಕಾಂಗ್ರೆಸ್ಸಿನಲ್ಲೂ ಈಗವನಿಗೆ ಒಳ್ಳೆ ಹೆಸರಿಲ್ಲ. ಅವನು ಕುಣೀತಿದ್ದದ್ದೆಲ್ಲಾ ನಮ್ಮ ಬಲದಿಂದಲೇ. ····ಇನ್ನು ಆ ಕೊಠಾರಿನ್ ಈಗಾಗಲೇ ಎಪ್ಪತ್ತು ಇಲಿಗಳನ್ನು ನುಂಗಿದವಳು. ಬಾಲದೇವ ಅವಳ ಜಾಲದಲ್ಲಿ ಸಿಕ್ಕಿಹಾಕಿಕೊಳ್ಳಲಿ. ನಾವು ಕಾಯುತ್ತಿರೋದೂ

ಆದನ್ನೇ····ಗೊತ್ತಾಯ್ತಾ?····ಚರಖಾ ಕೇಂದ್ರದ ಮೇಲೂ ಈಗ ನಮ್ಮದೇ ಅಧಿಕಾರ. ಉಪಾಧ್ಯಾಯಿನಿ ಕಾಳೀಚರಣನನ್ನ ಕೇಳದೆ ನೀರೂ ಕುಡಿಯೋದಿಲ್ಲ. ಇನ್ನು ಕೆಲವೇ ದಿನಗಳಲ್ಲಿ ಅವಳು 'ಕಾಮ್ರೇಡ್' ಆಗಿಬಿಡ್ತಾಳೆ....ಉಳಿದಿರೋನು ಬಾವನದಾಸ, ಆ ಮೂರಡಿ ಕುಳ್ಳ ನಮಗೇನು ಮಾಡಬಲ್ಲ?"

ನಾಲ್ಕು ಮಡಕೆ ಮದ್ಯ ಖಾಲಿಯಾಗಿಹೋಯಿತು. ಸೂರ್ಯ ಮುಳುಗುವ ಸಮಯದಲ್ಲಿ ಮರದಿಂದ ಇಳಿಸಿದ ಮದ್ಯದ ಕೆಂಪು, ತಕ್ಷಣ ಕಣ್ಣಿಗೆ ಏರಿ ಬಿಡುತ್ತದೆ. ಅಮಲಿನಲ್ಲಿ ಇನ್ನಷ್ಟು ಕುಡಿಯುವ ಆಸೆ····ಇನ್ನೊಂದು ಮಡಕೆ.

"ಬಡಪಾಯಿ ಡಾಕ್ಟರ್ ಹತ್ತಿರ ಕಾಸೆಲ್ಲಿಂದ ಬರಬೇಕು? ಎಲ್ಲರಿಗೂ ಬಿಟ್ಟಿ ಚಿಕಿತ್ಸೆ ಮಾಡ್ತಾರೆ. ಒಂದು ಕಾಸೂ ಮುಟ್ಟೊಲ್ಲ."

"ಡಾಕ್ಟರ್ ಹತ್ತಿರ ಕಾಸಿಲ್ಲವೆ? ಏನು ಹೇಳ್ತೀ ಅಣ್ಣಾ?····ಲೋಚನ ಪುರದ ಡಾಕ್ಟರು ಫಸ್ಟ್‌ಕ್ಲಾಸ್ ಬಂಗಲೆ ಕಟ್ಟಿಸಿದಾರೆ. ಜೀವಛಗಂಜಿನ ಡಾಕ್ಟರು ಮುನ್ನೂರು ಬೀಘಾ ಜಮೀನು ಕೊಂಡುಕೊಂಡಿದ್ದಾರೆ. ಸಿಝುವಾಗರ್ಹಿಯಾದ ಡಾಕ್ಟರು ಡಕಾಯಿತಿ ಮಾಡ್ತಾನೆ. ಡಕಾಯಿತರ ಸರದಾರ ಅನ್ನಿಸಿಕೊಂಡಿದ್ದಾನೆ. ನಿಮ್ಮ ಹಳ್ಳಿ ಡಾಕ್ಟರು ಎಂಥವರಯ್ಯಾ?"

"ನಮ್ಮ ಹಳ್ಳಿಯ ಹರಖೂಗಾಣಿಗ ಬೇಕಾದಷ್ಟು ಸಂಪಾದಿಸಿಬಿಟ್ಟಿದ್ದಾನೆ. ಅವನ ಹತ್ತಿರ ನಾಣ್ಯಗಳು ಝುಣ ಝುಣಾ ಅನ್ತಿವೆ." "ತಾಲೂಕಚಂದನಿಗೆ ಬಂದೂಕಿನ ಲೈಸೆನ್ಸ್ ಸಿಕ್ಕಿದೆ. ಕಬ್ಬಿಣದ ಪೆಟ್ಟಿಗೆನ ಕಲಕತ್ತೆಯಿಂದ ತಂದಿದ್ದಾನೆ."

"ಬಿಡಯ್ಯಾ ಬೇಕಾದಷ್ಟು ಜನ ಬಂದೂಕು, ಕಬ್ಬಿಣದ ಪೆಟ್ಟಿಗೆ ಇಟ್ಟು ಕೊಂಡಿರೋರನ್ನ ನೋಡಿದೀನಿ. ಕೇವಲ ಭರ್ಜಿಯಿಂದಾನೇ ಇಡೀ ಜಿಲ್ಲೆಯನ್ನು ಹುರಿದು ಮುಕ್ಕಿಬಿಟ್ಟಿದೀನಿ. ಒಂದು ಬಂದೂಕ ಕೈಗೆ ಸಿಕ್ಕಿದ್ದಿದ್ರೆ ಆ ಭೂಪತಿ ಸಿಂಹನ ಆಫೀಸಿನ ನೇಪಾಳೀ ಕಾವಲುಗಾರರನ್ನೆಲ್ಲಾ ಒಂದು ಕೈ ನೋಡಿ ಕೊಳ್ತಿದ್ದೆ."

ಒಮ್ಮೆಯೂ ಹಾಡದಿರುವವರೂ ಕೂಡ ನಶೆ ಏರಿದಾಗ ಸಂಗೀತಗಾರರಾಗಿ ಬಿಡುತ್ತಾರೆ. ಸುಂದರನಂತೂ ಮೊದಲೇ ಕೀರ್ತನಕಾರ. ಸ್ವರಾಜ್ಯದ ಗೀತೆಗಳನ್ನು ಹಾಡುತ್ತಾನೆ, ಕ್ರಾಂತಿ ಗೀತೆಗಳನ್ನು ಹಾಡುತ್ತಾನೆ. ನಶೆಯಲ್ಲಿದ್ದಾಗ ಕ್ರಾಂತಿ ಗೀತೆಗಳನ್ನು ಚೆನ್ನಾಗಿ ಹಾಡಬಹುದು.

ಅರೇ ಜಿಂದಗೀ ಹೈ ಕ್ರಾಂತಿ ಸೆ ಕ್ರಾಂತಿ ಮೇಂ ಬಿತಾಯಜಾ
ದುನಿಯಾ ಕೆ ಪೂಂಜೀವಾದ ಕೋ ದುನಿಯಾಸೆ ಮಿಟಾಯಜಾ

(ಜೀವನ ಇರುವುದೇ ಕ್ರಾಂತಿಯಿಂದ. ಕ್ರಾಂತಿಗಾರರಾಗಿಯೇ ಬಾಳಿ. ಪೂಂಜೀವಾದವನ್ನು ಪ್ರಪಂಚದಿಂದ ನಾಶಮಾಡಿಬಿಡಿ.)

ಸನಿಚ್ಚರ ಹೆಂಡದ ಮಡಕೆಯನ್ನು ತಲೆಕೆಳಗಾಗಿಟ್ಟುಕೊಂಡು ತಬಲದಂತೆ ಬಡಿಯುತ್ತಾ, ತಾನೂ ದನಿಗೂಡಿಸಿದ.

ದುನಿಯಾ ಕೆ ಗರೀಬೋಂಕಾ ಪೈಸಾ ಜಿಸನೆ ಚೂಸ್ ಲಿಯಾ,
ಅರೆ ಹಾ, ಪೈಸಾ ಜಿಸನೆ ಚೂಸ್ ಲಿಯಾ
ಹಾ, ಜೀ, ಪೈಸಾ ಜಿಸನೆ ಚೂಸ್ ಲಿಯಾ,
ಉಸಕೀ ಹಡ್ಡೀ ಹಡ್ಡೀ ಸೆ ಪೈಸಾ ಫಿರ್ ಚುಕಾಯಜಾ
ಹಂಸಕೆ ಗೋಲೀ ದಾಗೆ ಜಾ
ಹಂಸ ಕೆ ಗೋಲೀ ಖಾಯೆ ಜಾ

(ಬಡವರ ಹಣವನ್ನು ಕಸಿದುಕೊಂಡಿರುವವನಿಂದ, ಕಾಸಿಗೆ ಕಾಸು ಸೆಳೆಯೋಣ. ನಗುನಗುತ್ತಾ ಗುಂಡು ಹಾರಿಸು, ನಗುನಗುತ್ತಾ ಗುಂಡಿನೇಟು ಅನುಭವಿಸು.)

ಕ್ರಾಂತಿ ಚಿರಾಯುವಾಗಲಿ. ಕಾಮ್ರೇಡ್ ಸುಂದರ, ಸ್ವಲ್ಪ ನಿಂತುಕೊಂಡು ಅಭಿನಯ ತೋರಿಸಯ್ಯಾ.

ಸುಂದರ ಎದ್ದುನಿಂತು ಕುಣಿಯಲಾರಂಭಿಸಿದ:

"ಜಿಂದಗೀ ಹೈ ಕಿರಾಂತಿ ಸೆ, ಕಿರಾಂತಿ ಮೇಂ····"

(ಜೀವನ ಇರುವುದೇ ಕ್ರಾಂತಿಯಿಂದ, ಕ್ರಾಂತಿಗಾರರಾಗಿಯೇ ಬಾಳಿ.)

ಕಾಳೀಚರಣ ಇಂದು ಸಂಜೆ ಸಭೆ ಕರೆದಿದ್ದಾನೆ. ಮೇಲಿನ ದೊಡ್ಡ ಲೀಡರ್ ಒಬ್ಬರು ಪೂರ್ಣಿಯಾಗೆ ಬರುವವರಿದ್ದಾರೆ: ಚಂದಾ ವಸೂಲು ಮಾಡಬೇಕು. ಸೆಕ್ರೆಟರಿ ಸಾಹೇಬರು ಹೇಳುತ್ತಿದ್ದರು: "ದೊಡ್ಡ ಲೀಡರ್ ಪೂರ್ಣಿಯಾಕ್ಕೆ ಬರಲು ಒಪ್ಪಲೇ ಇಲ್ಲ. ತುಂಬಾ ಹೇಳಿದ ಮೇಲೆ ಇಡೀ ಜಿಲ್ಲೆಯಿಂದ ಹತ್ತುಸಾವಿರ ರೂಪಾಯಿ ಸಿಗುವುದಾದರೆ ಬರುತ್ತೇನೆಂದು ಒಪ್ಪಿದರು. ಕಾಳೀಚರಣ ಮುನ್ನೂರು ರೂಪಾಯಿಗಳನ್ನು ವಸೂಲು ಮಾಡಬೇಕು····ಈ ಸಲದ ರಸೀತಿಯ ಮೇಲೆ ದೊಡ್ಡ ಲೀಡರಿನ ಮುದ್ರೆ ಇರುತ್ತದೆ."

"ನೀವೆಲ್ಲಾ ಎಲ್ಲಿಗೆ ಹೋಗಿದ್ರಿ?....ಓ: ಆಸ್ಮಾನಬಾಗಿಗೆ, ತುಂಬಾ ತಡವಾಯಿತು. ಹೀಗೆ ಮಾಡಿದ್ರೆ ಪಾರ್ಟಿ ಕೆಲಸ ಆಗೋದು ಹ್ಯಾಗೆ? ನೋಡೋಣ, ಯಾರ್‍ಯಾರು ಎಷ್ಟೆಷ್ಟು ರೂಪಾಯಿ ವಸೂಲು ಮಾಡ್ತೀರೊ."

"ಮುನ್ನೂರು ರೂಪಾಯಿ ತಾನೇ? ಮಾಡಿದ್ರಾಯ್ತು" "ಹತ್ತು ದಿನ-ಗಳು ಕಳೆದುಹೋದವು. ಉಳಿದ ಐದೇ ದಿನಗಳಲ್ಲಿ ಆಗುತ್ತೇನು?" "ಬರೀ ಮೂನ್ನೂರು ರೂಪಾಯಿಗಳು ತಾನೇ?"

"ಇಂಕಿಲಾಬ್ ಜಿಂದಾಬಾದ್"
ಕ್ರಾಂತಿ ಚಿರಾಯುವಾಗಲಿ!

## 33

ಅತಿಮಂಗಳ:

"ಇನ್ನು ಹಳ್ಳಿಗೆ ಮಂಗಳವಾಗುವ ಆಶೆಯೇ ಇಲ್ಲ."

ಹರಗೌರಿ ತಹಸೀಲ್ದಾರ, ದುರ್ಗೆಯ ವಾಹನ ಸಿಂಹದಂತೆ ಗುರುಗುಟ್ಟು-ತ್ತಾನೆ:

"ಕತ್ತೇಬಡವರು! ನಲವತ್ತನೇ ಕಾನೂನು ಜಾರಿಗೆ ಬಂದುಬಿಡುತ್ತೆ. ಭೂಮಿ ತಮ್ಮದೇ ಆಗಿಬಿಡುತ್ತೇ ಅಂತ ಕುಣಿದಾಡ್ತಿದ್ರು. ಈಗ ಅನುಭವಿಸಿ, ಬಾವನದಾಸ, ಬಾಲದೇವರಿಂದಲೇ ಭೂಮಿ ತೆಗೆದುಕೊಳ್ಳಲಿ? ಎಲ್ಲ ಮೂರ್ಖರ ಹತ್ತಿರಾನೂ ಭೂಮಿ ಕಿತ್ಕೋ-ಅಂತ ಮ್ಯಾನೇಜರ್ ಸಾಹೇಬರು ಹೇಳಿಕಳುಹಿಸಿ ದ್ದಾರೆ. ತೊಗೊಳ್ಳಲಿ ಭೂಮಿ....ಅರೆ ಕಾಂಗ್ರೆಸ್ ರಾಜ್ಯ ಆದ ಮಾತ್ರಕ್ಕೆ ಜಮೀನುದಾರರನ್ನೆಲ್ಲಾ ಅರೆದು ನುಂಗಿಬಿಡ್ತಾರೇನು?"

ಸುಮರಿತದಾಸ ವೈರಲೆಸ್‌ನ ಬಾಯಿಗೆ ಎಷ್ಟು ಮಾತಾಡಿದರೂ ತೃಪ್ತಿ ಯಾಗಲಿಲ್ಲ. ಬೆಳಗ್ಗಿನಿಂದ ಒಂದೇ ಸಮನೆ ಒಟಗುಟ್ಟುತ್ತಿದ್ದ. ತತಮಾ ಪಂಗಡದಲ್ಲಿ, ಪಾಸವಾನ ಪಂಗಡದಲ್ಲಿ, ಕೋಯರೀ ಪಂಗಡದಲ್ಲಿ ಸುತ್ತಾಡುತ್ತಾ

ಅವನು ಜನಕ್ಕೆ ಹೇಳುತ್ತಿದ್ದ: "ಮ್ಯಾನೇಜರ್ ಸಾಹೇಬರು ಏನು ಬರೆದು ಕಳುಹಿಸಿದಾರೆ, ಗೊತ್ತೇನು? ಅದನ್ನು ನೋಡಿ ಹೊಸ ತಹಸೀಲ್ದಾರರು ಪೂರಾ ಗಾಬರಿಯಾಗಿದ್ದರು. ನಾನು ಎಷ್ಟೋ ಸಮಾಧಾನ ಮಾಡಿದೆ. ನೀವು ಸ್ವಲ್ಪಾನೂ ಗಾಬರಿಯಾಗಬೇಡಿ, ತಹಸೀಲ್ದಾರರೇ, ಸುಮ್ಮನೇ ಇರಿ. ಯಾರ್‍ಯಾರು ಅರ್ಜಿ ಕೊಡ್ತಾರೋ ಕೊಡಲಿ. ಮೊಕದ್ದಮೆಯ ತಾರೀಖಿನ ಹಿಂದಿನ ದಿನ ಒಂದು ಉಪಾಯ ಹೇಳುತ್ತೇನೆ, ಅಂತ. ಹಾಗೇ ಆಯ್ತು. ತೀರ್ಪನ್ನು ಕೇಳಿ ಜಮೀನ್ದಾರರ ವಕೀಲನಂತೂ ಹಾರಾಡಿಬಿಟ್ಟ. ಏನು ಬೇಕಾದರೂ ಅನ್ನಿ. ತಹಸೀಲ್ದಾರ ವಿಶ್ವನಾಥಪ್ರಸಾದರು ಎಂದೂ ಯಾವ ಗುಟ್ಟನ್ನೂ ನನ್ನಿಂದ ಮುಚ್ಚಿಡುತ್ತಿರಲಿಲ್ಲ. ····ಮ್ಯಾನೇಜರ ಸಾಹೇಬರು ಏನು ಹೇಳಿದರು ಗೊತ್ತೇನು? ಸುಮಂತ ದಾಸನನ್ನು ಒಂದು ಬಾರಿ ಸರ್ಕಲ್ ಆಫೀಸಿಗೆ ಕಳುಹಿಸಿ ಅಂದರು.··ಸೋಷಲಿಸ್ಟ ಪಾರ್ಟಿ ಏನು ಮಾಡುತ್ತೆ?"

"ಸುಮಂತದಾಸ, ಮುಪ್ಪಿನಲ್ಲಿ ಗೌರವ ಉಳಿಸಿಕೊಳ್ಳಬೇಕೂ ಅನ್ನೋ ಆಸೆಯಿದ್ರೆ, ಜ್ಞಾನ ಸರಿಯಾಗಿ ಇಟ್ಟುಕೊಂಡು ಮಾತಾಡು. ಅರ್ಥವಾಯ್ತೇನು?" —ಕಾಳೀಚರಣ ಕಣ್ಣು ಕೆಂಪಗೆ ಮಾಡಿಕೊಂಡು ಹೇಳಿದ. ಬೆಳಗ್ಗಿನಿಂದ ಅವನು ಸುಮಂತದಾಸನನ್ನು ಹುಡುಕುತ್ತಿದ್ದ. ಸೋಷಲಿಸ್ಟ ಪಾರ್ಟಿಯ ವಿರುದ್ಧ ಮುದುಕ ಬಾಯಿಗೆ ಬಂದ ಹಾಗೆ ಪ್ರಚಾರ ಮಾಡ್ತಿದ್ದ.

"ಗೊತ್ತಾಯ್ತು ತಾನೇ?—ಆಮೇಲೆ ಸೋಷಲಿಸ್ಟ ಪಾರ್ಟಿಯ ಯುವಕರಿಗೆ, ದೊಡ್ಡವರು ಚಿಕ್ಕವರು ಅನ್ನೋ ಭೇದವೂ ಇಲ್ಲ ಅನ್ನಬೇಡ."

"ನಾನು ಏನಂದೆ? ಈ ಜನಗಳನ್ನೇ ಕೇಳು. ನೀನೇ ಹೇಳು ಗುಲಚರಣ. ಸುಸ್ಲಿಂಗ್ ಪಾರ್ಟಿ····" "ಸುಸ್ಲಿಂಗ್ ಅನ್ನಬೇಡ ಸೋಷಲಿಸ್ಟ ಅನ್ನು.... ನೆಟ್ಟಗೆ ಶಬ್ದಗಳನ್ನು ಉಚ್ಚಾರಣೆ ಮಾಡೋದಕ್ಕೆ ಬರೋದಿಲ್ಲ. ಬಾಯಿಗೆ ಬಂದದ್ದು ಒದರ್‍ತಿರೋದು····ಜಮೀನ್ದಾರರ, ತಹಸೀಲ್ದಾರರ ಹತ್ತಿರ, ಬೇಕಾದ್ರೆ ನಿಮ್ಮ ಮ್ಯಾನೇಜರ್ ಹತ್ತಿರಾನೇ ಹೋಗಿ ಹೇಳು. ರೈತರಿಂದ ಭೂಮಿ ಕಿತ್ತುಕೊಳ್ಳೋದು ಮಕ್ಕಳಾಟವಲ್ಲ. ಪಾರ್ಟಿಯ ಸಮಿತಿಯಲ್ಲಿ ತೀರ್ಮಾನವಾಗಿ ಹೋಗಿದೆ. ನಾವೆಲ್ಲಾ ಘರ್ಷಣೆ ಮಾಡ್ತೀವಿ. ಘರ್ಷಣೆ, ಗೊತ್ತಾಯ್ತೇನು?"

ಕಾಳೀಚರಣ ತಲೆ ಆಡಿಸುತ್ತಾ ಹೊರಟುಹೋದ-ನಾಗರಹಾವು ಕೋಪದಿಂದ ಸಿಟ್ಟುಗೊಂಡು ಹೋಗುತ್ತದಲ್ಲಾ ಹಾಗೆ. ಸುಮಂತದಾಸನಿಗೆ ನಡುಕ ಹುಟ್ಟಿತು. ಸುತ್ತಮುತ್ತ ಕುಳಿತಿದ್ದವರ ಎದೆಯ ಬಡಿತವೂ ಹೆಚ್ಚಾಯಿತು. ಇದುವರೆಗೆ

ಬರಿ ಮೆರವಣಿಗೆ ಹೊರಡ್ತಿದ್ರು.... ಇನ್ನು ಏನು ಮಾಡ್ತಾರೋ!.... ಕಲಿಯಾ....ಕಾಳೀಚರಣ ಚೆನ್ನಾಗಿ ಮೈ ಬೆಳೆಸಿದ್ದಾನೆ. ಸುಸ್ಲಿಂಗ್.... ಅಲ್ಲ...ಸೋಷಲಿಸ್ಟ್ ಪಾರ್ಟಿಗೆ ಸೇರಿದ ಮೇಲೆ ಮೊದಲಿಗಿಂತ ಜೋರಾಗಿದ್ದಾನೆ. ಘರ್ಷಣೆ ಅಂದರೆ ಏನು ಮಾಡ್ತಾರೆ?...."

ಡಾ ಡಿಗ್ಗಾ ಡಾ ಡಿಗ್ಗಾ.

ಕಾಳೀಚರಣ ಹೇಳಿದ, ಸಂಘರ್ಷ ಮಾಡ್ತೀವಿ. ಸಂಘರ್ಷ ಅಂದರೇನು? ಪ್ರಸ್ತಾವನೆ ಎಂದರೇನು?

ರಿಂಗ್ ರಿಂಗ್—ತಾ—ಧಿನ್—ತಾ.
ಡಾ ಡಿಗ್ಗಾ, ಡಾ ಡಿಗ್ಗಾ.

....ಗದ್ದೆಯಲ್ಲಿ ಸೆಣಬಿನ ಕೆಂಪು ಪೊದೆಗಳನ್ನು ನೋಡಿದರೆ ಮನಸ್ಸು ಮರುಳಾಗುತ್ತದೆ. ಬತ್ತದ ಹಸಿರು ತೆನೆಗಳು ಸೂಜಿಯಂತೆ ತಲೆಯೆತ್ತಿ ನಿಂತಿವೆ. ಮಣ್ಣಿನ ಮೋಹ ದೂರವಾಗುವುದೇ ಇಲ್ಲ. 'ಬಧನಾ' ಹಬ್ಬದ ರಾತ್ರಿ (ಸಂಥಾಲರ ಒಂದು ಪ್ರಸಿದ್ಧ ಹಬ್ಬ) ತುರುಬಿನಲ್ಲಿ ನೀನು ಹೂವು ಮುಡಿಸಿದ್ದನ್ನು ಮರೆತಿಲ್ಲ. ಭೂಮಿಯ ಮೋಹವೂ ಬಿಟ್ಟಿಲ್ಲ. ಪ್ರಿಯೆ, ನಮ್ಮ ತಾತ, ಮುತ್ತಾತಂದಿರು ಪೂರ್ಣಿಯಾದ ಜೈಲಿನಲ್ಲಿ ಸತ್ತು ಮಣ್ಣಾದರು. ಜೋಳದ ಕೂದಲಿನಂತೆ ಅವರ ಕೂದಲು ಬೂದಿಯಾಗಿ ಹೋಗಿರಬಹುದು. ನಮ್ಮ ಮಕ್ಕಳ ಹಾಲು ಹಲ್ಲುಗಳು ಜೋಳದ ಕಾಳುಗಳಂತೆ ಹೊಳೆಯುವುವು. ನಾವು ಭೂಮಿತಾಯಿಯ ಪ್ರೀತಿಯ ಬೇಡಿಕೆಯಿಂದ ಬಂಧಿತರಾಗಿದ್ದೇವೆ ಎಂದು ಅವರಿಗೆ ಹೇಳಿಬಿಡು.

....ರಿಂಗ್—ರಿಂಗ್—ತಾ—ಧಿನ್—ತಾ.
ಡಾ ಡಿಗ್ಗಾ ಡಾ ಡಿಗ್ಗಾ.....

"ಜಮೀನಿನ ಹತ್ತಿರ ಯಾರಾದರೂ ಬಂದರೆ ತಲೆ ಕತ್ತರಿಸಿಹಾಕಿಬಿಡು."

ತಹಸೀಲ್ದಾರ ಹರಗೌರಿ ಸಿಂಹ ಭೂಕಂದಾಯ ಘೋಷಿಸಿದ.....ಒಂದು ಬೀಘಾ ಜಮೀನಿಗೆ ನೂರು ರೂಪಾಯಿ. ಒಪ್ಪಿಸಿದವರು ಭೂಮಿಯನ್ನು ಉಳಲು ಅರ್ಜಿ ಹಾಕಿಕೊಳ್ಳಬಹುದು...ನೀನು ಪಕ್ಕ ಮೂರ್ಖ ಕಣಯ್ಯ. ಈ ಭೂಮಿ ಒಂದು ವರ್ಷದ ಹಿಂದೆಯೇ ಹರಾಜಾಗಿ ಅದು ನನಗೆ ಸೇರಿಬಿಡಲಿಲ್ವಾ? ಹಳೆ ತಹಸೀಲ್ದಾರರೇ ಎಲ್ಲಾ ಕೆಲಸಗಳನ್ನೂ ಮುಗಿಸಿದ್ದರು. ಹರಾಜು ಆಗಿ ಬೇರೆ

ಯವರಿಗೆ ಸೇರಿದ ಜಮೀನು ಅರ್ಜಿ ಹಾಕಿದ ಮಾತ್ರಕ್ಕೆ ಸ್ವಂತ ಆಗೋದು ಹೇಗೆ?....ಹೊಸದಾಗಿ ಭೂಮಿ ಉಳಲು ತೆಗೆದುಕೊಳ್ಳುವವರಿಗೆ ಜಮಾಖರ್ಚು ಕಟ್ತೇವಿ. ಅದು ನಮ್ಮ ಕೈಯ್ಯಲ್ಲಿರುವ ವಿಚಾರ. ಅದಕ್ಕೋಸ್ಕರ ಆಫೀಸಿಗೆ ಓಡಾಡುವ ಆವಶ್ಯಕತೆಯೇನು?....ಸುಜಾನದಾಸ, ಮೊಕದ್ದಮೆಗೋಸ್ಕರ ನಿಮಗೆ ಎಷ್ಟು ಖರ್ಚಾಯ್ತು ಅನ್ನೋದನ್ನು ಸ್ವಲ್ಪ ಇವರಿಗೆ ಹೇಳು—ಕಾಂಗ್ರೆಸ್ಸಿನವರಿಗೆ, ಸೋಷಲಿಸ್ಟ್ ಪಾರ್ಟಿಯವರಿಗೆ ಕೊಟ್ಟ ಭತ್ಯವನ್ನೂ ಅದರೊಂದಿಗೆ ಸೇರಿಸುವುದನ್ನು ಮರೆಯಬೇಡಿ.....ಕೇಳಿಸ್ತೇನು? ಪ್ರತಿದಿನ ಚಂದಾ ವಸೂಲಿ ಮಾಡಿ ಮುಖಂಡರಿಗೆ ಕೊಡಬೇಕಾಗುತ್ತಿತ್ತು—ಹತ್ತು ರೂಪಾಯಿ ನಗದು! ಇದಲ್ಲದೆ ಸಿಗರೇಟು, ಎಲೆ ಅಡಿಕೆಯ ಖರ್ಚು ಬೇರೆ. ಆ ಜನಕ್ಕೆ ಅದೇ ಉದ್ಯೋಗ ಕಣಯ್ಯ....ಹೂಂ....ಹರಾಜಾಗಿರುವ ಜಮೀನಿನಲ್ಲಿ ಕಾಲಿಟ್ಟರೆ ಕತ್ತು ಹಾರಿಸಿಬಿಡು ಸರಕಾರ ನಿನ್ನ ಸಹಾಯಕ್ಕೆ ಬರುತ್ತೆ.

ರಾಮ ನಾಮ ಕೀ ಲೂಟ್ ಹೈ
ಲೂಟ್ ಸಕೆತೋ ಲೂಟೀ.

(ರಾಮನಾಮದ ಲೂಟ ನಡೆಯುತ್ತದೆ. ಲೂಟ ಮಾಡಬಲ್ಲವರು ಮಾಡಿ.)

ಹಸು-ಎತ್ತು, ಕರು-ಎಮ್ಮೆಗಳ ಮಾರಾಟ ಜೋರಾಗಿ ನಡೆಯುತ್ತಿತ್ತು. ಎರಡರಷ್ಟು ಬಡ್ಡಿ ಕೊಟ್ಟು ರೂಪಾಯಿ ಸಾಲ ತೆಗೆದುಕೊಂಡರೂ ಪರವಾಗಿಲ್ಲ, ಭೂಮಿ ಸಿಕ್ಕಿಬಿಟ್ಟರೆ ಲಾಭವೇ ಬರುತ್ತೆ. ಸೆಣಬಿನ ಬೆಲೆ ಈಗ ಹದಿನೈದು ರೂಪಾಯಿದೆ ಅದು ಐವತ್ತಾದರೂ ಆಗಬಹುದು, ನೂರಕ್ಕೆ ಏರಿದರೂ ಏರಬಹುದು. ಬತ್ತವಂತೂ ಚಿನ್ನದ ಬೆಲೆಗೆ ಮಾರಾಟವಾಗುತ್ತಿದೆ. ಜಮೀನಿಲ್ಲದವನು ಮನುಷ್ಯನೇ ಅಲ್ಲ. ಪ್ರಾಣಿ ಹುಲ್ಲು ತಿನ್ನುತ್ತದೆ. ಮನುಷ್ಯ ಹುಲ್ಲು ತಿಂದುಕೊಂಡು ಬದುಕಿರಲಾರ, ಅಷ್ಟೇ ವ್ಯತ್ಯಾಸ....ಈ ಕಾಂಗ್ರೆಸ್, ಸೋಷಲಿಸ್ಟ್ ಪಾರ್ಟಿಗಳ ವಿಚಾರ ಬಿಡಪ್ಪ...ಅರ್ಜಿ ರದ್ದಾಯಿತು. ಭೂಮಿ ಯಾರಾದರೂ....

ಹಳ್ಳಿಗೆ ಶುಭವಾಗುವ ಸೂಚನೆಯೇ ಇಲ್ಲ.

ಪ್ರತಿ ಪಂಗಡದ ಜನರೂ ತಮ್ಮ ತಮ್ಮಲ್ಲೇ ಜಗಳವಾಡುವುದೇ? ಕೋಯರೀ ಪಂಗಡದ ಭಜೂ ಮಹತೋನ ಜಮೀನನ್ನು ಅವನ ಭಾವ ಸ್ವರೂಪ ಮಹತೋನೇ ಉಳಲು ತೆಗೆದುಕೊಳ್ಳುತ್ತಿದ್ದಾನೆ. ಸೋಬರನ ಜಮೀನಿನ ಮೇಲೆ

ಅವನ ಚಿಕ್ಕಪ್ಪ ರಾಮೇಶ್ವರನೇ ಕಣ್ಣು ಹಾಕಿದ್ದಾನೆ. ಸೋನಾನ ಭೂಮಿಯಲ್ಲಿ ಚಿನ್ನ ಬೆಳೆಯುತ್ತದೆ. ಯಾದವ ಪಂಗಡದ ಎಲ್ಲ ರೈತರ ಹರಾಜಾದ ಭೂಮಿಯನ್ನೂ ಖೇಲಾವನಸಿಂಹ ಯಾದವನೇ ತೆಗೆದುಕೊಳ್ಳುತ್ತಿದ್ದಾನೆ....ಸಂಥಾಲ ಪಂಗಡದ ಜಮೀನನ್ನು ರಾಜಪೂತ ಪಂಗಡದವರು ಕೊಳ್ಳುತ್ತಿದ್ದಾರೆ.... ಸುಮರಿತದಾಸ ಹೇಳುವುದು, "ಇದು ರಹಸ್ಯ, ಯಾರ ಹತ್ತಿರವೂ ಹೇಳಬೇಡ. ಸಂಥಾಲರ ಜಮೀನನ್ನು ಸ್ವತಃ ತಹಸೀಲ್ದಾರರೇ ಕೊಳ್ಳುತ್ತಿದ್ದಾರೆ. ಆದರೆ ತಮ್ಮ ಹೆಸರಿನಲ್ಲಿ ಕೊಳ್ಳುವುದು ಸಾಧ್ಯವಿಲ್ಲ. ಆದ್ದರಿಂದ ಬೇರೆಯವರ ಹೆಸರಿನಲ್ಲಿ ಕೊಳ್ಳುತ್ತಿದ್ದಾರೆ."

ಹಳ್ಳಿಗೆ ಮಂಗಳವಾಗುವ ವಿಚಾರದಲ್ಲಿ ಈಗ ಯಾವ ಆಶೆಯೂ ಉಳಿದಿಲ್ಲ. ತಹಸೀಲ್ದಾರ ವಿಶ್ವನಾಥಪ್ರಸಾದರು ಬಾಲದೇವ ಮತ್ತು ಬಾವನದಾಸರಿಗೆ ಪಂಚಾಯಿತಿ ಕರೆಯುವಂತೆ ತಿಳಿಸಿದ್ದಾರೆ: "ಪಂಚಾಯಿತಿಯನ್ನು ನೀವೇ ಕರೆಯಿರಿ. ನಾನು ಕರೆಯುವುದು ಸರಿಯಲ್ಲ."

ಕಾಳೀಚರಣನ ಪಾರ್ಟಿಯ ಎಲ್ಲರಿಗಿಂತ ದೊಡ್ಡ ಮುಖಂಡರು ಪೂರ್ಣಿಯಾಗೆ ಬರುವವರಿದ್ದರು. ಕಾಮ್ರೇಡುಗಳೆಲ್ಲಾ ಐದೇ ದಿನದಲ್ಲಿ ಮುನ್ನೂರು ರೂಪಾಯಿಗಳನ್ನು ವಸೂಲು ಮಾಡಿದ್ದಾರೆ. ಸೋಮಾ ಒಬ್ಬನೇ ಇನ್ನೂರೈವತ್ತು ರೂಪಾಯಿಗಳನ್ನು ಕೊಟ್ಟಿದ್ದಾನೆ. ಮುಖಂಡರ ಹತ್ತಿರ ಹೇಳಬೇಕು. ಹಳ್ಳಿಯಲ್ಲಿ ಈ ರೀತಿ ಒಳ ಜಗಳವಿದ್ದರೆ ಸಂಘರ್ಷ ನಡೆಸುವುದು ಸಾಧ್ಯವಿಲ್ಲ. ಮತ್ತೊಮ್ಮೆ ಸೈನಿಕಜಿಯನ್ನೂ ಚಿನಗಾರಿಜಿಯವರನ್ನೂ ಕರೆಸಬೇಕು. ಬಹಳ ದಿನಗಳಿಂದ ಸಭೆ ನಡೆದಿಲ್ಲ. ಗದ್ದೆಯಲ್ಲಿ ಅಗೆಯದಿದ್ದರೆ ಪೊದೆ ಬೆಳೆಯುವಂತೆ, ಜಿಲ್ಲೆಯಲ್ಲಿ ಸಭೆ ನಡೆಯದಿದ್ದರೆ ಜಿಲ್ಲೆಯೆಲ್ಲಾ ಹಾಳಾಗುತ್ತದೆ. ಈ ಬಾರಿ ಸೆಕ್ರೆಟರಿ ಸಾಹೇಬರನ್ನು ಕರೆಸಬೇಕು. ಈ ಸಲ ಲೌಡ್‌ಸ್ಪೀಕರನ್ನೂ ಹಾಕಿಸಬೇಕು.

ಚರಖಾ ಕೇಂದ್ರದ ಉಪಾಧ್ಯಾಯಿನಿಗೂ, ಉಪಾಧ್ಯಾಯರಿಗೂ ಜಗಳವಾಯಿತು.

ತಕಲಿ ಮಾಸ್ಟರು ಟುನ್‌ಟುನ್‌ಜಿಯವರಿಗೆ, ಮಂಗಳಾದೇವಿ ಸೋಷಲಿಸ್ಟ್ ಆಫೀಸಿನಲ್ಲಿ ಇರುವುದು ಬೇಜಾರನ್ನುಂಟುಮಾಡಿದೆ. ಕಾಯಿಲೆಯಿದ್ದಾಗ ಹೋಗಲಿ ಎನ್ನಬಹುದು. ಈಗ ಆರೋಗ್ಯವಾಗಿದ್ದಾಳೆ, ಇನ್ನೂ ಅಲ್ಲೇ ಇರುವ ಆವಶ್ಯಕತೆ ಯೇನು? ಅಲ್ಲದೆ ಮಂಗಳಾದೇವಿಯನ್ನು ಟುನ್‌ಟುನ್‌ಜಿ ಪಾಟ್ನಾದಲ್ಲಿದ್ದಾಗಿನಿಂದಲೂ ಬಲ್ಲ. ಗ್ರಾಮ ಸುಧಾರಣಾ ಕೇಂದ್ರದಲ್ಲಿ ಟ್ರೈನಿಂಗ್ ತೆಗೆದುಕೊಳ್ಳು

ತ್ತಿದ್ದಾಗಲೇ ಹಾರಾಡುತ್ತಿದ್ದಳು. ಇವಳನ್ನು ಭೇಟಿಯಾಗುವವರಿಂದಾಗಿ ವ್ಯವಸ್ಥಾಪಕಿಗೆ ತಲೆ ಚಿಟ್ಟು ಹಿಡಿದುಹೋಗಿತ್ತು. ಪ್ರತಿದಿನ ಹೊಸ ಹೊಸ ಜನ. ಅನೇಕ ಬಾರಿ ಮಂಗಳಾದೇವಿಗೆ ಎಚ್ಚರಿಕೆಯನ್ನು ಕೊಟ್ಟೂ ಆಯಿತು. ಅವಳನ್ನು ನೋಡುವುದಕ್ಕೆ ಬರುವವರಲ್ಲಿ ಕಾಲೇಜಿನ ವಿದ್ಯಾರ್ಥಿಗಳು, ಎಂ.ಎಲ್.ಎ.ಗಳು, ಸಾಹಿತ್ಯ ಗೋಷ್ಠಿಯ ಕಾರ್ಯದರ್ಶಿ, ಚರಖಾ ಸಂಘದ ಕಾರ್ಯಕರ್ತರು ಮತ್ತು ಅನೇಕ ಹಿಂದಿ ದೈನಿಕ ಪತ್ರಿಕೆಗಳ ಸಹಾಯಕ ಸಂಪಾದಕರೂ ಇದ್ದರು. ಕೊನೆಗೆ ವ್ಯವಸ್ಥಾಪಕಿ ಸೋತು ಸುಮ್ಮನಾದಳು. ಯಾಕೆಂದರೆ ಮಂಗಳಾದೇವಿಯ ಸ್ವಾತಂತ್ರ್ಯಕ್ಕೆ ಅಡ್ಡಿಬರುವ ಪ್ರಯತ್ನದಲ್ಲಿ, ಒಂದು ಡಜನ್ನಿಗಿಂತ ಹೆಚ್ಚು ಜನ ಪ್ರಮುಖ ವ್ಯಕ್ತಿಗಳ ಕೋಪಕ್ಕೆ ಭಾಜನಳಾಗುವುದಕ್ಕೆ ಅವಳು ಇಷ್ಟಪಡಲಿಲ್ಲ. ಆದ್ದರಿಂದಲೇ ವ್ಯವಸ್ಥಾಪಕಿ ಮಂಗಳಾದೇವಿಯನ್ನು ಹಿಂದುಳಿದಿರುವ ಈ ಹಳ್ಳಿಗೆ ಕಳಿಸಿದ್ದು. ಆದರೆ ಇಲ್ಲೂ....

ಮಂಗಳಾದೇವಿ ಮಾತನಾಡುವುದರಲ್ಲಿ ಗಂಡಸರಿಗೂ ಸೋಲುತ್ತಿರಲಿಲ್ಲ. ಅವಳು ಧರಿಸುತ್ತಿದ್ದುದು ಪೈಜಾಮಾ ಮತ್ತು ಕುರ್ತಾ. ಹೊರಗಡೆ ಹೊರಡುವಾಗ ಖದ್ದರಿನ ದುಪಟ್ಟಾ ಹಾಕಿಕೊಳ್ಳುತ್ತಿದ್ದಳು. ಕುಳ್ಳು ಶರೀರ, ಶ್ಯಾಮಲ ವರ್ಣ, ಹೃಷ್ಟಪುಷ್ಟ ದೇಹ. ಕಣ್ಣುಗಳು ತುಂಬಾ ಸುಂದರವಾಗಿದ್ದವು. ನಿಜವಾದ ತಿರಹುತನ್ ಕಣ್ಣುಗಳೆ. ಅವಳು ತಕಲಿ ಮಾಸ್ಟರನ್ನು ಮಗ್ಗದ ಮಾಸ್ಟರೆಂದೂ, ಚರಖಾ ಮಾಸ್ಟರನ್ನು ಹತ್ತಿ ಮಾಸ್ಟರೆಂದೂ ಕರೆಯುತ್ತಿದ್ದಳು. ನೇಯ್ಗೆಯವರೂ, ಪಿಂಜಾರರೂ ಅವಳೊಡನೆ ಏನು ಮಾತನಾಡಬಲ್ಲರು?....ಕಾಯಿಲೆ ಬಿದ್ದಿದ್ದಾಗ ಇಣುಕಿಯೂ ನೋಡಲಿಲ್ಲ, ಈಗ ನೈತಿಕತೆಯ ಉಪದೇಶ ಮಾಡುತ್ತಿದ್ದಾರೆ. ಮಂಗಳಾದೇವಿ ಇವರಿಬ್ಬರನ್ನೂ ಚೆನ್ನಾಗಿ ಬಲ್ಲಳು. ವ್ಯವಸ್ಥಾಪಕಿಗೆ ಕಾಗದ ಬರೆಯುತ್ತಾರೆ ತಾನೇ! ಬರೆದುಕೊಳ್ಳಲಿ. ವ್ಯವಸ್ಥಾಪಿಕೆ ಏನು ಮಾಡುತ್ತಾಳೆ? ಇಂಥ ಬೆದರಿಕೆಗೆಲ್ಲಾ ಮಂಗಳಾದೇವಿ ಹೆದರುವವಳಲ್ಲ. ಟುನ್‌ಟುನ್‌ಜಿಗೆ ಬೇಕಾಗಿರುವುದೇನೆಂಬುದೂ ಅವಳಿಗೆ ಗೊತ್ತು. ಪಾಟ್ನಾದಿಂದ ಬರುವಾಗ ಸಮಸ್ತೀಪುರದಲ್ಲೇ ಇಳಿದುಬಿಟ್ಟರು. ಅಲ್ಲಿ ರೈಲು ಬದಲಾಯಿಸಬೇಕೆಂದು ಹೇಳಿದರು. ಆದರೆ ಅದೇ ರೈಲು ಕಟಿಹಾರದವರೆಗೆ ಹೋಗುತ್ತದೆಂದು ಆಮೇಲೆ ತಿಳಿಯಿತು. ಇನ್ನೊಂದು ಗಾಡಿ ಬೆಳಗ್ಗೆ ಎಂಟು ಗಂಟೆಗೆ ರಾತ್ರಿ ಹನ್ನೆರಡು ಗಂಟೆಗೆ ಧರ್ಮಶಾಲೆಗೆ ಕರೆದುಕೊಂಡು ಹೋದರು.....

`ಟುನ್‌ಟುನ್‌ಜಿಯ ಪರಿಚಯ ಇದಕ್ಕಿಂತ ಹೆಚ್ಚಾಗಿ ಏನು ಹೇಳುವುದಿದೆ?

ಬಾಲದೇವನಿಗೆ ಷೀಲಾವನಸಿಂಹ ಸ್ಪಷ್ಟವಾಗಿ ಹೇಳಿಬಿಟ್ಟ. ಸಕಲದೀಪನ ಶೋಭನ ನಿಶ್ಚಯವಾಗಿದೆ. ಹೊಸ ಸೊಸೆ ಅತ್ತೆಯ ಮನೆಯಲ್ಲಿರಲು ಬರುವವ ಳಿದ್ದಾಳೆ. ಇಂಥ ಸಮಯದಲ್ಲಿ ಹೊರಗಿನ ಮನುಷ್ಯನೊಬ್ಬ ಮನೆಯಲ್ಲಿರುವುದು ಸರಿಯಲ್ಲ. ಚಂಪಾಪುರದ ಆಸೀನಬಾಬುವಿನ ಮಗಳು. ಸ್ವಲ್ಪ ಹೆಚ್ಚು ಕಡಿಮೆ ಆದರೂ ತಂದೆಗೆ ಕಾಗದ ಬರೆದುಬಿಡುತ್ತಾಳೆ. ದೊಡ್ಡ ಮನುಷ್ಯರ ಮಗಳು.....

ಬಾಲದೇವ ತನ್ನ ಬಟ್ಟೆಯನ್ನೂ, ಬಾವುಟವನ್ನೂ ಅಲ್ಲಿಂದ ತೆಗೆದುಕೊಂಡು ಹೊರಟುಬಿಟ್ಟ. ಬಾಲದೇವನ ಚಿಕ್ಕಮ್ಮನು ಹಳ್ಳಿಯಲ್ಲೆಲ್ಲಾ ದೂರು ಮಾಡುತ್ತಾ ತಿರುಗುತ್ತಿದ್ದಳು. ಆದರೆ ಬಾಲದೇವ ಸಾಧು ಮನುಷ್ಯ. ಮಾನಾಪಮಾನಗಳಿಗೆ ಹೊರತಾದವನು. ಅವನು ಸುಮ್ಮನಿದ್ದ.

ಮಠದ ಶಿಷ್ಯನಾಗುವಂತೆ ಲಕ್ಷ್ಮಿ ಅವನನ್ನು ಒತ್ತಾಯಪಡಿಸುತ್ತಿದ್ದಳು. ಳುಪಡೀ ಮಠದ ಮಹಂತ ರಾಮಸ್ವರೂಪ ಗೋಸಾಯಿ ಬರುತ್ತಾರೆ. ಬಾಲದೇವ ಶಿಷ್ಯನಾದರೆ ಮಠದಲ್ಲೇ ಇರಬಹುದು.

ಬಾವನದಾಸನ ಮನಸ್ಸು ತುಂಬಾ ಸಂಶಯಕ್ಕೊಳಗಾಗಿದೆ. ಅವನಿಗೆ ಯಾರ ಮೇಲೂ ನಂಬಿಕೆಯಿಲ್ಲ. ಗಾಂಧೀಜಿಯನ್ನು ಬಿಟ್ಟು ಬೇರೆ ಯಾರಲ್ಲೂ ನಂಬಿಕೆಯಿಲ್ಲ. ಗಾಂಧೀಜಿಗೆ ಒಂದು ಕಾಗದ ಬರೆಸಬೇಕೆಂದಿದ್ದಾನೆ. ಗಂಗೂಲಿ ಖಂಡಿತ ಬರೆಯುತ್ತಾನೆ. ಅವನ ಮನಸ್ಸಿನಲ್ಲಿ ತುಂಬಾ ಅನುಮಾನಗಳೂ ಸಂದೇಹಗಳೂ ಏಳುತ್ತಿವೆ.

## 34

ಫುಲಿಯಾ ಪೂರ್ಣಿಯಾ ಸ್ಟೇಷನ್ನಿನಿಂದ ಬಂದಿದ್ದಾಳೆ.

ಫುಲಿಯಾ ಈಗ ಪೂರಾ ಬದಲಾಗಿದ್ದಾಳೆ. ಸೀರೆ ಉಡುವ ರೀತಿ, ಮಾತು-ಕಥೆಯಾಡುವುದು ಎಲ್ಲಾ ಬದಲಾಗಿದೆ. ತಹಸೀಲ್ದಾರರ ಮಗಳು ಕಮಲಿ ಯಂತೆ ಚಿಕ್ಕ ರವಿಕೆ ಹಾಕಿಕೊಳ್ಳುತ್ತಾಳೆ. ಕಿವಿಯಲ್ಲಿ ಹಿತ್ತಾಳೆಯ ಹೂವು,

ಕಿವಿಯೋಲೆ, ಸೆರಗಿನಲ್ಲಿ ಬೀಗದ ಕೈಗೊಂಚಲು: ಕಾಲಿಗೆ ಬಣ್ಣ ಸವರಿಕೊಳ್ಳು ತ್ತಾಳೆ....ಕಲಾಸಿ ತುಂಬಾ ಹಣ ಸಂಪಾದಿಸಬಹುದು. ....ಅಯ್ಯೋ ಕಲಾಸಿಯ ಮುಖಕ್ಕೆ ಪೊರಕೆಯಿಂದ ಹೊಡಿ....ಅವನ ಮುಖ, ಅವನೇನು ಸುಖಪಡಿಸಬಲ್ಲ? ಫುಲಿಯಾ ಕಲಾಸಿಯನ್ನು ಬಿಟ್ಟುಬಿಟ್ಟಳಂತೆ. ಕಲಾಸಿಗೆ ಖೋಕ್ಸಬಾಗಿನಲ್ಲಿ ಒಬ್ಬ ವೇಶ್ಯೆಯ ಜೊತೆ ಸ್ನೇಹವಂತೆ. ಪ್ರತಿದಿನ ಕುಡಿದು ಅವನು ಅಲ್ಲೇ ಬಿದ್ದಿರುತ್ತಿದ್ದನಂತೆ. ಸಂಬಳದ ದಿನ ಆ ವೇಶ್ಯೆ ಅವನನ್ನು ಒಂದು ನಿಮಿಷವೂ ಬಿಡುತ್ತಿರಲಿಲ್ಲವಂತೆ. ಸಂಬಳದ ಹಣದಲ್ಲಿ ಒಂದು ಕಾಸು ಕಡಿಮೆ ಯಾದರೂ ಕಾಲಿನ ಎಕ್ಕಡವನ್ನೇ ಕೈಗೆ ತೆಗೆದುಕೊಳ್ಳುತ್ತಿದ್ದಳು. ಫುಲಿಯಾ ಎಷ್ಟು ದಿನಾ ಅಂತ ಸಹಿಸೋದಕ್ಕೆ ಸಾಧ್ಯ? ಸ್ಟೇಷನ್ನಿನ ರೈಲ್ವೆ ಪ್ಯಾಟಮ್ಯಾನ್ ಇರದಿದ್ದರೆ ಫುಲಿಯಾಳ ಮರ್ಯಾದೆಯೇ ಹೋಗುತ್ತಿತ್ತು. ಈಗ ಫುಲಿಯಾ ರೈಲ್ವೆ ಪ್ಯಾಟಮ್ಯಾನನ ಮನೆಯಲ್ಲೇ ಇರುವುದು. ಕಲಾಸಿ ಒಂದು ದಿನ ಅವನ ಹತ್ತಿರ ಜಗಳ ಆಡೋದಕ್ಕೆ ಹೋದ, 'ಕಲಾಸೀ ಸ್ಟೇಷನ್ನಿನ ಆವರಣದಲ್ಲಿ ಕಾಲಿಟ್ಟರೆ ಹಿಡಿದುಕೊಂಡು ಬಡೀರಿ' ಅಂತ ಸ್ಟೇಷನ್ ಮಾಸ್ಟರ್ ಹೇಳಿಬಿಟ್ಟರು. ಆವತ್ತು ಕಲಾಸಿ ಬಾಲ ಮುದುರಿಕೊಂಡು ಓಡಿಹೋದವನು ಮತ್ತೆ ಅವನ ನೆರಳನ್ನೂ ತೋರಿಸಿಲ್ಲ. ಪೈಟಮಾನ್ ಪಂಗಡದಲ್ಲಿ ಕ್ಷತ್ರಿಯ, ತಂತ್ರಿಮಾ ಕ್ಷತ್ರಿಯ ಅಲ್ಲ. ನಿಜವಾದ ಬುಂದೇಲೀ ಕ್ಷತ್ರಿಯ. ಎಲೆ ಹೊಗೆಸೊಪ್ಪು ತಿಂದೂ ತಿಂದೂ ಹಲ್ಲು ಮುರಿದುಹೋಯಿತು, ಈಗ ಕಲ್ಲಿನ ನಕಲಿ ಹಲ್ಲುಗಳನ್ನು ಹಾಕಿ ಕೊಳ್ಳುತ್ತಾನೆ. ಹೇಳೋದಕ್ಕೆ ನಕಲಿ ಹಲ್ಲುಗಳು, ಆದರೆ ನಿಜವಾದ ಹಲ್ಲುಗಳಿ ಗಿಂತ ಚೆನ್ನಾಗಿವೆ. ಕಡಲೆ, ಜೋಳ, ಸೀಬೆಹಣ್ಣು ಏನು ಬೇಕಾದರೂ ಅಗಿದು ತಿನ್ನುತ್ತಾನೆ. ಇಪ್ಪತ್ತೈದು ವರ್ಷಗಳ ಹಿಂದೆಯೇ ಹಾಸಾವಪ್ ಊರಿನಲ್ಲಿದ್ದಾಗ, ಚಹಾ ಕುಡಿದು, ಎಲೆ ಹೊಗೆಸೊಪ್ಪು ಹಾಕಿಕೊಂಡು ಹಲ್ಲುಗಳು ಮುರಿದು ಹೋದವು. ವಯಸ್ಸೇನೋ ಹೆಚ್ಚಾಗಿ ಆಗಿಲ್ಲ. ಹತ್ತು ವರುಷದಿಂದ ವಿಧುರ ನಾಗಿದ್ದರೂ, ಮನಸ್ಸಿಗೆ ಒಪ್ಪುವ ಹೆಂಗಸು ಸಿಕ್ಕಿರಲಿಲ್ಲ. ಪೈಟಮಾನ ಮಹಂಗೂ ದಾಸನಿಗೋಸ್ಕರ ಒಂದು ಹಳೆಯ ಕಮೀಜನ್ನು ಕಳುಹಿಸಿಕೊಟ್ಟಿದ್ದ. ಕಮೀಜ್ ಹಾಕಿಕೊಂಡರೆ ಮಹಂಗೂದಾಸನನ್ನು ಗುರುತಿಸುವುದೇ ಕಷ್ಟ. ರೈಲ್ವೆ ಮನುಷ್ಯ ನಂತೆಯೇ ಕಾಣುತ್ತಾನೆ....ಮುದುಕಿಗೆಂದು ಹೊಸ ಸೀರೆ ಬೇರೆ, ಒಂದು ಬೆರಳಿನ ಕಪ್ಪು ಅಂಚಿರುವ ಸೀರೆ....ಈ ಸಲದ ಸಂತೆಯಲ್ಲಿ 'ಸಂತೀಪುರಿ ಸೀರೆ' ಸಿಕ್ಕಿದರೆ ಫುಲಿಯಾಗೆ ಕಳುಹಿಸಿಕೊಡಬೇಕು. ಈ ಸಲ ತನ್ನ ತಾಯಿಯನ್ನೂ ಜೊತೆಗೆ ಕರೆದುಕೊಂಡು ಹೋಗುತ್ತೇನೆಂದು ಫುಲಿಯಾ ಹೇಳುತ್ತಿದ್ದಾಳೆ.

ಫುಲಿಯಾ ಅದೃಷ್ಟವಂತ. ರಮಪ್ಯಾರಿಯ ತಾಯಿ ಹೇಳಿದಳು: "ರಮಿಯಾನೂ ಮದುವೆಗೆ ಬೆಳೆದು ನಿಂತಿದ್ದಾಳೆ. ತಂದೆ ಇಲ್ಲದ ಮಗಳು. ನೀನಂತೂ ಅತ್ತೆ ಮನೆಗೆ ಹೋಗಿಬಿಟ್ಟೆ. ರಮಿಯಾ ಪ್ರತಿದಿನ ಒಂದು ಸಲವಾದರೂ ನಿನ್ನನ್ನು ಜ್ಞಾಪಿಸಿಕೊಳ್ಳದೆ ಇರೋದೇ ಇಲ್ಲ.—'ಫುಲಿಯಾ ಅಕ್ಕ ಯಾವಾಗ ಬರ್‍ತಾಳೆ. ಈ ಸಲ ನಾನೂ ಅವಳ ಜೊತೆ ಹೋಗ್ತೀನೀ' ಅಂತ ಹೇಳ್ತಾನೇ ಇರ್‍ತಾಳೆ. ಆ ಕಡೆ ಯಾರಾದರೂ ವರ ದೃಷ್ಟಿಯಲ್ಲಿದ್ದರೆ ರಮಿಯಾಳನ್ನು ನಿನ್ನ ಜೊತೆಗೇ ಕರೆದುಕೊಂಡುಹೋಗು ಮಗೂ. ಇಲ್ಲಿ ಕೋಯರೀ ಪಂಗಡದ ಹುಡುಗರು ದಿನ ದಿನಕ್ಕೆ ಕೆಟ್ಟುಹೋಗ್ತಿದಾರೆ····"

ಸಹದೇವ ಮಿಶ್ರನನ್ನು ನೋಡಿದರೆ ತಂತ್ರಿಮಾ ಪಂಗಡದ ನಾಯಿಯೂ ಬಗುಳುತ್ತದೆ. ಫುಲಿಯಾ ಕರೆಸಿದಳೆಂದು ಬಹಳ ದಿನಗಳ ನಂತರ ಅವನು ತಂತ್ರಿಮಾ ಪಂಗಡದ ಗಲ್ಲಿಗೆ ಬಂದಿದ್ದಾನೆ. ಹತ್ತು ದಿನ ಇರುತ್ತಾಳೆ, ಮತ್ತೆ ಹೊರಟು ಹೋಗುತ್ತಾಳೆ. ಫುಲಿಯಾ ಈಗ ಕುಲಕ್ಕೆ, ಸಮಾಜಕ್ಕೆ ಹೆದರುವುದಿಲ್ಲ. ಅವಳು ತಂತ್ರಿಮಾ ಕ್ಷತ್ರಿಯ ಅಲ್ಲ, ನಿಜವಾದ ಬುಂದೇಲೀ ಕ್ಷತ್ರಿಯನ ಹೆಂಡತಿ. ಅಂಗಳದಲ್ಲಿ ತಾನೇ ಬೇರೆಯಾಗಿ ಅಡಿಗೆ ಮಾಡಿಕೊಂಡು ಊಟ ಮಾಡುತ್ತಾಳೆ···· ತಾಯಿ ಮುಟ್ಟಿದ್ದನ್ನೂ ತಿನ್ನುವುದಿಲ್ಲ.

ಅವಳೀಗ ಅತಿಥಿಯಾಗಿ ಬಂದಿದ್ದಾಳೆ. ಅವಳ ಮನಸ್ಸಿಗೆ ಬಂದಂತೆ ಮಾಡುವ ಸ್ವಾತಂತ್ರ್ಯ ಅವಳಿಗಿದೆ. ಯಾರಿಗೂ ಮಾತಾಡುವ ಅಧಿಕಾರವಿಲ್ಲ.... ಅವಳು ಸಹದೇವ ಮಿಶ್ರನಿಗೆ ಕುಳಿತುಕೊಳ್ಳಲು ಚಾಪೆ ಹಾಸಿದಳು. ಗಾಜಿನ ಒಂದು ಚಿಕ್ಕ ತಟ್ಟೆಯಲ್ಲಿ ಅಡಿಕೆ, ಸೋಂಪು, ದಾಲಚಿನ್ನಿಯ ಚೂರುಗಳನ್ನಿಟ್ಟು ಕೊಟ್ಟಳು....ಹಾಗಾದರೆ ಫುಲಿಯಾ ಅವನನ್ನು ಮರೆತಿಲ್ಲ. ಭೇಷ್, ಪಟ್ಟಣದ ನೀರಿನಿಂದ ಬಾಹ್ಯ ರೂಪ ಸಂಪೂರ್ಣ ಬದಲಾಗಿದೆ. ಆದರೆ ಒಳಗಡೆ ಮೊದಲಿನಂತೆಯೇ ಇದ್ದಾಳೆ. ಕಪ್ಪು ಹಚ್ಚಿರುವ ಕಣ್ಣುಗಳು ಮೊದಲಿಗಿಂತ ದೊಡ್ಡದಾಗಿ ಕಾಣುತ್ತಿವೆ. ರವಿಕೆ, ಅಂಚಿರುವ ಸೀರೆ···· ಸಹದೇವ ಮಿಶ್ರ ಹೆದರುತ್ತಲೇ ಮಾತನಾಡಿದ:

"ಫುಲಿಯಾ"

"ಏನು" ಎನ್ನುತ್ತಾ ಫುಲಿಯಾ ನಕ್ಕಳು.

ಸಹದೇವ ಮಿಶ್ರನ ಮುಖ ಒಮ್ಮೆಲೇ ಕೆಂಪಗಾಯಿತು. ಕಿವಿಗಳು ಕೆಂಪಗಾದವು. ಮೂಗಿನ ತುದಿ ಬಿಸಿಯಾಯಿತು. ಅವನೆಂದ: "ಫುಲಿಯಾ, ನೀನು ಹೋದಾಗಿನಿಂದ ನಾನು ಈ ಗಲ್ಲಿಯಲ್ಲಿ ಕಾಲಿಟ್ಟೂ ಇಲ್ಲ."

ಫುಲಿಯಾ ನಕ್ಕಳು: "ಬಿಡಿ ಬಿಡಿ.... ಇಲ್ಲಿಗೆ ಬರದಿದ್ದರೆ ಗಹಲೋತ ಪಂಗಡವಿರುವ ಗಲ್ಲಿಗೆ ಹೋಗ್ತಿರಲಿಲ್ಲವೇನು? ....ಪನಬತಿಯ ಮನೆಗೆ ಹೋಗುತ್ತಿದ್ದವರು ಯಾರು? ಸುಳ್ಳು ಹೇಳಬೇಡಿ."

"ಖಂಡಿತ ಇಲ್ಲ ಫುಲಿಯಾ."

ಬುಡ್ಡಿಯ ದೀಪದ ಬೆಳಕಿನಲ್ಲಿ ಸಹದೇವ ಮಿಶ್ರ ಫುಲಿಯಾಳ ಕಣ್ಣುಗಳಲ್ಲಿ ಬರೆದಿದ್ದ ಹೊಸ ಭಾಷೆಯನ್ನು ಓದುತ್ತಿದ್ದ....ಗಾಳಿಯ ವೇಗದಿಂದ ದೀಪ ಆರಿಹೋಯಿತು,....ಫುಲಿಯಾ ಕೂದಲಿಗೆ ಸುಗಂಧ ತೈಲವನ್ನು ಹಾಕಿಕೊಂಡಿದ್ದಳು. ರವಿಕೆಯ ಒಳಗಿನ ಅಂಗಿಗೆ ಬಹುಶಃ ರಬ್ಬರ್ ಹಾಕಿಕೊಂಡಿರಬಹುದು. ....ಫುಲಿಯಾಳ ದೇಹದಿಂದ ಈಗ ಹಳ್ಳಿಯ ವಾಸನೆ ಬರುತ್ತಿಲ್ಲ. ಸೋಂಪು, ದಾಲ್ಚಿನ್ನಿ ತಿನ್ನುವುದರಿಂದ ಬಾಯಿಂದ ಸುಗಂಧ ಬರುತ್ತಿದೆ....ಪಟ್ಟಣದ ವಿಚಾರವೇ ವಿಚಿತ್ರ....ಪಟ್ಟಣದ ಗಾಳಿ ಬೀಸಿದ ಕೂಡಲೇ ಮನುಷ್ಯನ ಸ್ವಭಾವವೇ ಬದಲಾಗಿಬಿಡುತ್ತದೆ. ತಹಸೀಲ್ದಾರರ ಮಗಳು ಎಂದೂ ಪಟ್ಟಣಕ್ಕೆ ಹೋದವಳಲ್ಲ....ಜಾತಿಯ ಕಟ್ಟು, ನಿಯಮ, ಪಂಚಾಯಿತಿಯ ತೀರ್ಮಾನಗಳನ್ನು ಈಗ ಪಂಚರೇ ಮುರಿದಿದ್ದಾರೆ....ತಂತ್ರಿಮ ಪಂಗಡದ ಬೆತ್ತದವರು ಅನೋಖೆ ಮತ್ತು ಉಚಿತದಾಸರು, ನಡತೆ ಕೆಟ್ಟವರಿಗೆ ಬೆನ್ನ ಮೇಲೆ ತಮ್ಮ ಬೆತ್ತದಿಂದ ಚರ್ಮ ಸುಲಿಯುವಂತೆ ಬಡಿಯುತ್ತಾರೆ. ಅದೇ ಅನೋಖೆಯ ಹೆಂಡತಿ ರಾಮಲಗನಸಿಂಹನ ಮಗನೊಡನೆ ವ್ಯವಹಾರ ಇಟ್ಟುಕೊಂಡಿದ್ದಾಳೆ. ಉಚಿತ ದಾಸನ ಮಗಳು ಕೋಯರೀ ಪಂಗಡದ ಸರಸ ಮಹತೋನನ್ನು ಪ್ರೀತಿಸುತ್ತಾಳೆ. ಪಂಚಾಯಿತಿಯ ತೀರ್ಮಾನ ಹೆಚ್ಚೆಂದರೆ ಹತ್ತು ದಿನ ಜಾರಿಯಲ್ಲಿರುತ್ತದೆ. ತಲೆತಲಾಂತರಗಳಿಂದ ಹಳ್ಳಿಯಲ್ಲಿರುವ ಪದ್ಧತಿ ಸಂಪ್ರದಾಯಗಳನ್ನು ಒಂದೇ ಸಲಕ್ಕೆ ಬದಲಾಯಿಸುವುದು ಸಾಧ್ಯವಿಲ್ಲ. ಭೂಮಿ-ಕಾಣಿ, ಹಣ-ಕಾಸು ಇರುವವರೂ ತಮ್ಮ ನಡತೆಯನ್ನು ತಿದ್ದಿಕೊಂಡಿಲ್ಲ....ಮೇಲಿನ ಪಂಗಡಗಳ ಯಾರ ಮನೆಯ ವಿಚಾರ ರಹಸ್ಯವಾಗಿದೆ....ಪಂಚರು ಪಂಚಾಯಿತಿಯಲ್ಲಿ ಕೂತು ತೀರ್ಮಾನ ಕೊಡಬಹುದು. ಆದರೆ ಅದರಿಂದ ಆಗುವುದು ಅಷ್ಟರಲ್ಲೇ ಇದೆ. ಪಂಚಾಯಿತಿಯ ತೀರ್ಮಾನದಿಂದ ಇಲಿಯನ್ನು ಬೇಯಿಸುವುದಕ್ಕಾಗುತ್ತದೆಯೇ? ಒಂದು ಮಣ ಬತ್ತದಿಂದ ಎಷ್ಟು ಅಕ್ಕಿಯಾಗುತ್ತದೆಂದು ಪಂಚರಿಗೇನು ಗೊತ್ತು? ಶಾಸ್ತ್ರದಲ್ಲಿ ಹೇಳಿಯೇ ಇದೆಯಲ್ಲ. "ಭೂಮಿ, ಹೆಂಗಸು, ಬಲವಿದ್ದರೆ ಮಾತ್ರ. ಇಲ್ಲದಿದ್ದರೆ ಬೇರೆಯವರಿಗೆ ಸೇರಿಬಿಡುತ್ತದೆ."....ಶರೀರದ ಬಲದಿಂದಲೂ

ಈ ಕಾಲದಲ್ಲಿ ಎಲ್ಲಾ ಪಡೆಯುವುದಕ್ಕಾಗುವುದಿಲ್ಲ. ಹಣವಿದ್ದವನೇ 'ಬೋಕಲ್ ಮಿಶ್ರ' (ಮಿಥಿಲೆಯ ಒಬ್ಬ ಪ್ರಸಿದ್ಧ ಪಹಿಲವಾನ್) ಅನ್ನಿಸಿಕೊಳ್ಳುತ್ತಾನೆ. ಅವನೇ ಎಲ್ಲರಿಗಿಂತ ದೊಡ್ಡವನು.

....ತಹಸೀಲ್ದಾರರ ಮಗಳು ಸಂಜೆಯಿಂದ ಅರ್ಧ ರಾತ್ರಿಯಾದರೂ ಡಾಕ್ಟರ್ ಬಾಬುವಿನ ಮನೆಯಲ್ಲಿ ಕುಳಿತಿರುತ್ತಾಳೆ. ಬೆಳದಿಂಗಳ ರಾತ್ರಿಯಲ್ಲಿ ಕೋಠಿಯ ತೋಟದಲ್ಲಿ ಡಾಕ್ಟರ ಕೈ ಹಿಡಿದುಕೊಂಡು ಸುತ್ತಾಡುತ್ತಿರುತ್ತಾಳೆ. ತಹಸೀಲ್ದಾರರ ಹತ್ತಿರ ಹೋಗಿ, ನಿಮ್ಮ ಮಗಳ ನಡತೆ ಕೆಟ್ಟಿದೆ ಅಂತ ಅವರ ಮುಂದೆಯೇ ಹೇಳುವ ಧೈರ್ಯ ಯಾರಿಗಿದೆ?....ತಹಸೀಲ್ದಾರ ಹರಗೌರಿಸಿಂಹ ಸ್ವಂತ ಚಿಕ್ಕಪ್ಪನ ಮಗಳನ್ನೇ ಇಟ್ಟುಕೊಂಡಿದ್ದಾನೆ....ಬಾಲದೇವ, ಕೊಠಾರಿನ್‌ಗೆ ಅಂಟಿಕೊಂಡಿದ್ದಾನೆ. ಕಾಳೀಚರಣನಂತೂ ಚರಖಾ ಕೇಂದ್ರದ ಉಪಾಧ್ಯಾಯಿನಿಯನ್ನು ತನ್ನ ಮನೆಯಲ್ಲೇ ಇಟ್ಟುಕೊಂಡಿದ್ದಾನೆ....ಇವರ ನ್ನೆಲ್ಲಾ ಯಾರೂ ಕೇಳೋರೇ ಇಲ್ಲ. ಕಾನೂನು ಪಂಚಾಯಿತಿ ಎಲ್ಲಾ ಬಡವರಿ ಗೋಸ್ಕರವೇ ಇದೆಯೇನು?....ಹೂಂ....

ಜಮೀನಿಗಾಗಿ ಹಳ್ಳಿಯಲ್ಲಿ ಹೊಸ ಗುಂಪು ಹುಟ್ಟಿಕೊಂಡಿದೆ. ಜಮೀನು ಹರಾಜಿನಲ್ಲಿ ಮಾರಾಟವಾಗಿರುವವರೂ, ಸರ್ಕಾರಕ್ಕೆ ಅರ್ಜಿ ಹಾಕಿ ಅದು ರದ್ದಾಗಿರುವವರೂ ಒಂದು ಕಡೆ ಇದ್ದಾರೆ. ಉಳುವುದಕ್ಕೆ ಹೊಸದಾಗಿ ಭೂಮಿ ಯನ್ನು ತೆಗೆದುಕೊಂಡಿರುವವರೂ, ಜಮೀನ್ದಾರರಲ್ಲಿ ಕ್ಷಮೆ ಕೇಳಿಕೊಂಡಿರುವವರೂ ಇನ್ನೊಂದು ಕಡೆ ಇದ್ದಾರೆ. ಬಡವರ ಮತ್ತು ಕೂಲಿಗಾರರ ಗುಂಪಿನ ಮೇಲೂ ಇವರ ಪ್ರಭಾವವಿದೆ. ಹೀಲಾವನ್ನನ ರೈತರಿಗೆ ಕಾಳೀಚರಣ, ನೇಗಿಲು ಉಳಲು ಅಡ್ಡಿಪಡಿಸಿದ್ದಾನೆ. ತಹಸೀಲ್ದಾರ ಹರಗೌರಿಸಿಂಹನಿಗೆ ಹಜಾಮ, ಅಗಸ ಮತ್ತು ಮೋಚಿ ಸಿಗದಂತೆ ಬಹಿಷ್ಕಾರ ಮಾಡಬೇಕೆಂದು ಕಾಳೀಚರಣ ಮನೆಮನೆಗೆ ಹೋಗಿ ಭಾಷಣ ಮಾಡುತ್ತಿದ್ದಾನೆ. ಹಳ್ಳಿಯ ಹಳೆಯ ಕಟ್ಟುಗಳೆಲ್ಲಾ ಮುರಿದು ಹೋಗಿವೆ. ಹೊಸ ಪ್ರವಾಹದ ನೀರು ಬಂದಿರುವಂತೆ ತೋರುತ್ತಿದೆ....

ಕಾಳೀಚರಣ ಬಡವರ, ಕೂಲಿಗಾರರ ಕಣ್ಣು ತೆರೆಸಿದ್ದಾನೆ. ನೂರಾರು ಎಕರೆ ಭೂಮಿ ಇರುವ ರೈತರ ಹತ್ತಿರ ಹಣವಿರುತ್ತದೆ. ಆ ಹಣದಿಂದ ಬಡವರನ್ನು ಕೊಂಡು, ಬಡವರ ಕೊರಳಿಗೆ ಬಡವರಿಂದಲೇ ಚೂರಿ ಹಾಕಿಸುತ್ತಾರೆ.... ಎಚ್ಚರಿಕೆ ಹೊಸದಾಗಿ ಭೂಮಿಯನ್ನು ಉಳುವ ವ್ಯವಸ್ಥೆ ಮಾಡಿಕೊಂಡಿರುವವರು ಬಡವರ ರೊಟ್ಟಿ ಕದಿಯುತ್ತಿದ್ದಾರೆ....

ಕಾಳೀಚರಣ ಚಮ್ಮಾರ ಪಂಗಡದಲ್ಲಿ ಊಟಮಾಡಿದನೇ? ಜಾತಿಯೇನು? ಪ್ರಪಂಚದಲ್ಲಿ ಇರುವುದು ಎರಡೇ ಜಾತಿ. ಒಂದು ಬಡವರದು, ಮತ್ತೊಂದು ಶ್ರೀಮಂತರದು····ಖೇಲಾವನ್ನನನ್ನು ನೋಡಿದಿರೋ ಇಲ್ಲವೋ. ಯಾದವರ ಭೂಮಿಯನ್ನೇ ತನ್ನದಾಗಿ ಮಾಡಿಕೊಂಡುಬಿಟ್ಟ....ಕಣ್ಣು ಬಿಟ್ಟು ನೋಡಿ, ಹಳ್ಳಿಯಲ್ಲಿರುವುದು ಎರಡೇ ಜಾತಿ.

ಶ್ರೀಮಂತರು-ಬಡವರು.

ತಹಸೀಲ್ದಾರ ಹರಗೌರಿಸಿಂಹ ಕಪ್ಪು ಟೋಪಿಯ ಯುವಕರೊಂದಿಗೆ ಹೇಳಿದ:

"ಈ ಬಾರಿ ಮೆರವಣಿಗೆ ಹೋಗಬೇಕು. ಹಿಂದೂ ರಾಜ್ಯ ಸ್ಥಾಪಿಸುವ ಮೊದಲು ಹಳ್ಳಿಯನ್ನು ವಶಪಡಿಸಿಕೊಳ್ಳಬೇಕು."

ಸಂಚಾಲಕ ಇತ್ತೀಚೆಗೆ ತಿಂಗಳಿಗೆ ಎರಡು ಬಾರಿ ಮನೆಗೆ ಮನಿಯಾರ್ಡರ್ ಕಳುಹಿಸುತ್ತಾನೆ. ಸಂಚಾಲಕ ಹೇಳಿದ ಮಾತನ್ನು ಕಪ್ಪು ಟೋಪಿಯ ಯುವಕರು ಪ್ರಾಣ ಹೋದರೂ ಮೀರುವುದಿಲ್ಲ. ಬೆಂಕಿಯಲ್ಲಿ, ನೀರಿನಲ್ಲಿ ಬೇಕಾದರೂ ಹಾರಿಬಿಡುತ್ತಾರೆ. ಶಿಸ್ತು ಎಂದರೆ ಅದೇ.

ಬಾವನದಾಸ ಜಿಲ್ಲಾ ಕಾಂಗ್ರೆಸ್‌ನ ಮುಖಂಡರಿಗೆ ಸುದ್ದಿ ತಿಳಿಸಲು ಹೋಗಿದ್ದಾನೆ: "ಹಳ್ಳಿಯಲ್ಲಿ ಮೆರವಣಿಗೆ ನಡೆಯುತ್ತಿದೆ"

## 35

ತಹಸೀಲ್ದಾರ ವಿಶ್ವನಾಥಪ್ರಸಾದರ ಮುಂದೆ ವಿಕಟ ಸಮಸ್ಯೆ ಬಂದು ನಿಂತಿತ್ತು. ಹೊಸದಾಗಿ ಭೂಮಿ ಉಳುವುದಕ್ಕೆ ವ್ಯವಸ್ಥೆ ಮಾಡಿಕೊಂಡಿದ್ದ ರೈತರು ಪ್ರತಿದಿನ ಅವರ ಮನೆಗೆ ಬರುತ್ತಿದ್ದರು. ಮೊಕದ್ದಮೆ ನಡೆದರೆ ವಿಶ್ವನಾಥಪ್ರಸಾದರು ಸಾಕ್ಷಿ ನೀಡಬೇಕಾದ ಆವಶ್ಯಕತೆಯಿದೆ. ಭೂಮಿಯಿಲ್ಲದ ಜನ ತಮ್ಮ ಗುಂಪನ್ನು ಬಲಪಡಿಸಿಕೊಳ್ಳುತ್ತಿದ್ದಾರೆ. ಆದ್ದರಿಂದ ಭೂಮಿ ಇರುವವರೂ ತಮ್ಮಲ್ಲಿರುವ ಭೇದಭಾವವನ್ನೂ, ಜಗಳ ಕದನಗಳನ್ನೂ ಮರೆತು

ಒಂದಾಗಬೇಕು····ತಹಸೀಲ್ದಾರ ಹರಗೌರಿಸಿಂಹ ಹಗಲೂ–ರಾತ್ರಿ ವಿಶ್ವನಾಥ ಬಾಬುವಿನ ಮನೆಯಲ್ಲೇ ಇರುತ್ತಾನೆ.

"ಚಿಕ್ಕಪ್ಪ ಈ ಸಲ ನನ್ನ ಮರ್ಯಾದೆ ಕಾಪಾಡಿಬಿಡಿ. ಅಗಸ, ಹಜಾಮ, ಚಮ್ಮಾರರ ಮುಂದೆ ನಾನು ಕೈ ಜೋಡಿಸಿಕೊಳ್ಳಬೇಕೆಂದು ನೀವಾದರೂ ಇಷ್ಟ ಪಡ್ತೀರೇನು?—ನಿನ್ನೆಯಿಂದಲೇ ರಾಮಕೃಪಾಲ ಚಿಕ್ಕಪ್ಪನ ಮನೆಯಲ್ಲಿ ಹಸು ಸತ್ತುಬಿದ್ದಿದೆ. ಚಮ್ಮಾರರು ಅದನ್ನು ಎತ್ತಲು ನಿರಾಕರಿಸುತ್ತಿದ್ದಾರೆ. ಜೀವೇಶ್ವರ ಚಮ್ಮಾರನನ್ನು ಲೀಡರಾಗಿ ಮಾಡಿರುವುದು ನೀವೇ····ರಾಜಪೂತ ಸಂಗಡದ ಗಂಡಸರನ್ನು ನೋಡಿದ್ದೀರೇನು, ····ಅವರಿಗೆ ಎಷ್ಟುದ್ದ ಗಡ್ಡ ಬೆಳೆದಿದೆ? ಹಜಾಮರು ಕ್ಷೌರ ಮಾಡಲು ಒಪ್ಪುತ್ತಿಲ್ಲ. ಎಲ್ಲರ ಜುಟ್ಟೂ ನಿಮ್ಮ ಕೈಯ್ಯಲ್ಲಿದೆ. ಒಂದು ಸಲ ನೀವೇ ಹೇಳಿದರೆ ಎಲ್ಲರ ಅಹಂಭಾವ ಅಡಗುತ್ತೆ····"

ಕಾಳೀಚರಣ ಬಂದು ಹೇಳಿದ:

"ಮಾವ, ನೀವು ಕಾಂಗ್ರೆಸ್ಸಿನ ಲೀಡರ್. ಕಾಂಗ್ರೆಸ್ ಪಾರ್ಟಿ ಬಡವರದ್ದೋ, ಶ್ರೀಮಂತರದ್ದೋ ಅನ್ನೋದು ನಿಶ್ಚಯ ಆಗಿಹೋಗಲಿ····ಈವತ್ತಿನವರೆಗೆ ನಿಮ್ಮನ್ನು ನಾನು ದೇವತೆಯೆಂದೇ ಭಾವಿಸಿದ್ದೇನೆ. ಆದರೆ ನೀವೇನಾದರೂ ಬಡವರ ವಿರುದ್ಧವಾಗಿ ಹೆಜ್ಜೆ ಇಟ್ಟರೆ, ಬೇರೆ ಉಪಾಯವಿಲ್ಲದೆ ನಾನು····"

ತಹಸೀಲ್ದಾರ ವಿಶ್ವನಾಥಪ್ರಸಾದರಿಗೆ, ಏನು ಮಾಡಬೇಕು, ಏನು ಮಾಡ ಬಾರದು ಅರ್ಥವಾಗುತ್ತಿಲ್ಲ.

ಬಾವನದಾಸ ಪೂರ್ಣಿಯಾದಿಂದ ಹಿಂತಿರುಗಿ ಬಂದಿದ್ದಾನೆ.

"ಮೆರವಣಿಗೆ ನಡೀತಿದೆ" ಎಂದು ಹೇಳಲು ಅವನು ಹೋಗಿದ್ದುದು. ಪೂರ್ಣಿಯಾದಲ್ಲೂ ಮೆರವಣಿಗೆ ನಡೆಯುತ್ತಿತ್ತು.

ಕೋರ್ಟಿನ ಮುಂದೆ ಜಿಲ್ಲೆಯ ರೈತರೆಲ್ಲಾ ಹೊಟ್ಟೆ ಕಟ್ಟಿಕೊಂಡು ಬಿದ್ದು ಕೊಂಡಿದ್ದರು. ನಲವತ್ತನೆ ಸೆಕ್ಷನ್ನಿನ ಅರ್ಜಿ ಕೆಳ ಕೋರ್ಟಿನಲ್ಲಿ ರದ್ದಾಗಿತ್ತು. ಅಪೀಲು ಮಾಡಿಕೊಳ್ಳಬೇಕು....ಅಪೀಲು? ಕಾಸು ತೆಗೀರಿ, ಆಗ ತಮಾಷೆ ನೋಡಿ. ಏನಂದಿರಿ? ದುಡ್ಡಿಲ್ಲ? ಹಾಗಾದರೆ ಅಪೀಲು ಮಾಡಿದ ಹಾಗೇ. ಹತ್ತಿರ ದಲ್ಲಿ ನಗದು ನಾರಾಯಣ ಇದ್ದರೇ ಭೂಮಿ ಸ್ವಂತದ್ದಾಗೋದಕ್ಕೆ ಸಾಧ್ಯ....

ಕಾನೂನು ಮತ್ತು ಕೋರ್ಟಿನ ಆವರಣದಲ್ಲಿ ವಾಸಿಸುವ ಕೀಟ ಪತಂಗ ಗಳೂ ಹಣ ಬೇಡುತ್ತವೆ.

ಜಿಲ್ಲಾ ಕಾಂಗ್ರೆಸ್ ಆಫೀಸಿನಿಂದ ಮೆರವಣಿಗೆ ಹೊರಡುತ್ತಿದೆ.

ಜಿಲ್ಲಾ ಕಾಂಗ್ರೆಸ್ ಆಫೀಸಿನಲ್ಲಿ ಸಭೆ ನಡೆಯುತ್ತಿದೆ. ಜಿಲ್ಲಾ ಕಾಂಗ್ರೆಸ್ಸಿನ ಅಧ್ಯಕ್ಷರ ಚುನಾವಣೆ ನಡೆಯುವುದಿದೆ. ನಾಲ್ಕು ಜನ ಉಮೇದುವಾರರು ಚುನಾವಣೆಗೆ ನಿಂತಿದ್ದಾರೆ. ರಾಜಪೂತರು ಮತ್ತು ರೈತರಲ್ಲಿ ಸ್ಪರ್ಧೆ.... ಇಡೀ ಜಿಲ್ಲೆಯ ಸೇಠರು, ಜಮೀನ್ದಾರರ ಕಾರುಗಳು, ಲಾರಿಗಳೂ ಬಂದು ನಿಂತಿವೆ. ಒಬ್ಬರನ್ನೊಬ್ಬರು ಇದಿರಿಸಲು ಹಸಿದ ಹುಲಿಯಂತೆ ಕಾದಿದ್ದಾರೆ. ಕಟಿಹಾರದ ಕಾಟನ್ ಮಿಲ್ಲಿನ ಸೇಠಜಿ ರೈತರ ಪಾರ್ಟಿಯಲ್ಲಿದ್ದಾರೆ, ಫಾರಬಿಸ್‌ಗಂಜಿನ ಸೆಣಬಿನ ಮಿಲ್ಲಿನವರು ರಾಜಪೂತರ ಕಡೆ ಇದ್ದಾರೆ.... ಹಣದ ಚೆಲ್ಲಾಟವನ್ನು ನೋಡಬೇಕಾದವರು ಇಲ್ಲಿ ನೋಡಬೇಕು.

ಬಾವನದಾಸ ಯೋಚಿಸುತ್ತಿದ್ದ: ಈಗ ಜನಕ್ಕೆ ತಮ್ಮ ಟೋಪಿಯ ಮೇಲೆ ಒಕ್ಕಲಿಗ, ರಾಜಪೂತ, ಕಾಯಸ್ಥ, ಯಾದವ, ಹರಿಜನ ಎಂದು ಜಾತಿಯ ಹೆಸರನ್ನು ಹಾಕಿಸಿಕೊಳ್ಳುವುದೇ ಮುಖ್ಯವಾಗಿದೆ.... ಯಾರು ಯಾವ ಪಾರ್ಟಿಯವನು ಎನ್ನುವುದು ಅರ್ಥವಾಗುವುದಿಲ್ಲ.

"ಸಭೆ ನಡೆಯುತ್ತಿದೆಯೇನು?"

"ಹೌದು, ಸಭೆ ನಡೆಯುತ್ತಿದೆ."

"ನೋಡಿ ಬಾವನದಾಸ್, ನೂರರಲ್ಲಿ 95 ಭಾಗ ಜನರಂತೂ ಸುಳ್ಳು ಮೊಕದ್ದಮೇನೇ ಹೂಡಿರೋದು. ಇದರಲ್ಲೇನೂ ಸಂಶಯವಿಲ್ಲ. ನಿಜವಾದ ಮತ್ತು ಸರಿಯಾದ ಕಾರಣದಿಂದ ಮೊಕದ್ದಮೆ ಹೂಡಿರುವವರ ಈ ಕೇಸೂ ಸುಳ್ಳುಗಾರರಿಂದಾಗಿ ಹಾಳಾಗೋ ಹಾಗೆ ಆಗಿದೆ. ಇದರಲ್ಲಿ ಕಾನೂನಿನ ದೋಷ ಏನಿದೆ ಹೇಳಿ? ಜನರ ನೈತಿಕ ಪತನ ಆಗಿದೆ. ನೋಡಿ, ಜಿಲ್ಲಾ ಸಮಿತಿಯಲ್ಲಿ ಇದೇ ಸಂಬಂಧವಾಗಿ ಒಂದು ಪ್ರಸ್ತಾವನೆ ಪಾಸಾಗುತ್ತದೆ."

"ಭೂಮಿಯನ್ನು ಕಳೆದುಕೊಂಡಿರೋ ರೈತರಿಗೆ ಏನು ಹೇಳೋಣ?"

"ಹೇಳೋದೇನು? ಹೇಳಿ. ಜಮೀನ್ದಾರಿ ಪದ್ಧತಿ ನಾಶವಾಗ್ತಾ ಇದೆ. ಜಮೀನ್ದಾರಿ ಪದ್ಧತಿಯನ್ನು ನಾಶಪಡಿಸಲು ಬಿಹಾರ ಸರ್ಕಾರ ಸೊಂಟಕಟ್ಟಿ ನಿಂತಿದೆ" ಅಂತ ಈವತ್ತು ಬಿಹಾರ ಮಂತ್ರಿಮಂಡಲ ಘೋಷಣೆಯನ್ನೇ ಮಾಡಿದೆಯಲ್ಲ."

ಬಾವನದಾಸ ರೈತರಿಗೆ ಏನು ಹೇಳಬಲ್ಲ?

ಜಮೀನ್ದಾರಿ ಪದ್ಧತಿ ನಾಶವಾಗುತ್ತದೆಯೇ? ಆಗ ಈ ಕಾಂಗ್ರೆಸ್ ಜಮೀನ್ದಾರರು ಏನು ಮಾಡುತ್ತಾರೆ? ಬಹುಶಃ ಎಲ್ಲರೂ ಮಿಲ್ಲುಗಳನ್ನು ತೆರೆಯುತ್ತಾರೇನೋ? ಅದಕ್ಕೇ, ಪ್ರತಿ ಚಿಕ್ಕ ಮತ್ತು ದೊಡ್ಡ ನಾಯಕನ ಜೊತೆಯೂ ಒಬ್ಬೊಬ್ಬ ಮಾರ್ವಾಡಿ ಓಡಾಡುತ್ತಿರುತ್ತಾನೆ.... ಐದು ತಿಂಗಳ ಹಿಂದಿನ ಮಾತು ಬಾವನದಾಸನಿಗೆ ನೆನಪಾಯಿತು. ಪೂರ್ಣಿಯಾ ಸ್ಟೇಷನ್ನಿನಲ್ಲಿ, ತೀಲರ್ಝೂಡಿಯ ಶಂಕರಬಾಬು, ತಮ್ಮ ಜೊತೆಯಲ್ಲಿದ್ದ ಹತ್ತು ಜನ ಕಾರ್ಯಕರ್ತರಿಗೂ ಪೂರಿ-ಮಿಠಾಯಿ ಕೊಡಿಸಿದರು. ದುಡ್ಡು ಕೊಟ್ಟವನು ತೀಲರ್ಝೂಡಿಯ ಮಾರ್ವಾಡಿ ಜೋಖಮಲ್ ಜುಹಾರ ಚಂಬನ ಮಗ....'ತಿನ್ನಯ್ಯಾ ಪರವಾಗಿಲ್ಲ. ದೇಶದ ನಿಜವಾದ ಸೇವಕರು ನೀವೇ. ಜೈಲಿನಲ್ಲಿ ಖಿಚಡೀ ತಿಂದು ಜೀವನ ಕಳೆದಿದ್ದೀರಿ.' ಇಡೀ ಇಲಾಖೆಯ ಕಾರ್ಯಕರ್ತರಿಗೆ ತಿನ್ನಿಸಿದ್ದಲ್ಲದೆ ಒಂದೊಂದು ಸೇರು ಮಿಠಾಯಿಯನ್ನೂ ಸಹ ಕೊಂಡು ಕೊಟ್ಟ....ಜೋಖಮಲ್ ಜುಹಾರಚಂದನ ಮಗ ಈಗ ಅರರಿಯಾ ಸಬ್‌ಡಿವಿಜನ್ ಕಾಂಗ್ರೆಸ್ಸಿನ ಖಜಾಂಚಿ. ಎಂಟು ರೂಪಾಯಿ ಜೊತೆಯ ಖಾದಿ ಪಂಚೆ ಧರಿಸುತ್ತಾನೆ. ಚರಖಾ ಸಂಘದ ಬಾಬು ಎಷ್ಟು ಉಪಚಾರ ಮಾಡುತ್ತಾನೆ....

"ಸಭೆ ಮುಗಿಯಿತು."

"ಏನಾಯಿತು?"

"ಜಮೀನ್ದಾರಿ ಪದ್ಧತಿ ಮುಗಿದುಹೋಯಿತು."

"ಭಯಂಕರ."

ಇಲ್ಲಿನ ಜನ ಸಂತೋಷದ ವಿಚಾರ ಕೇಳಿದಾಗಲೂ "ಭಯಂಕರ" ಎನ್ನುವ ಶಬ್ದವನ್ನು ಉಪಯೋಗಿಸುತ್ತಾರೆ. ಭಯಂಕರ ನಗು, ಭಯಂಕರ ಆನಂದ ಹೀಗೇ ಬಂಗಾಳದಲ್ಲಿ "ಭೀಷಣ ಸುಂದರ" ಎನ್ನುವಂತೆ.

"ಭಯಂಕರ ವಿಚಾರ."

"ಏನಾಯಿತು?"

"ಬಾವನದಾಸ ಜಮೀನ್ದಾರಿ ಪದ್ಧತಿಯನ್ನು ನಾಶಮಾಡಿಬಿಟ್ಟ"—ಕಾಮ್ರೇಡ್ ವಾಸುದೇವ ಓಡುತ್ತಾ ಬಂದು ಕಾಳೀಚರಣನಿಗೆ ಸುದ್ದಿ ಮುಟ್ಟಿಸಿದ.

"ಬಾವನದಾಸನೇ?"

" ಅಲ್ಲ, ಅಲ್ಲ. ಬಾವನದಾಸ ಸುದ್ದಿ ತಂದಿದ್ದಾನೆ. ಕಾಂಗ್ರೆಸ್ಸಿನ ಮಂತ್ರಿಗಳು ಜಮೀನ್ದಾರಿಯನ್ನು ನಾಶಮಾಡಿಬಿಟ್ಟರಂತೆ."

" ಲಾಲ್ ಪತಾಕ" ಪತ್ರಿಕೆಯಲ್ಲಿ ಅಚ್ಚಾಗುವವರೆಗೆ ಈ ವಿಚಾರವನ್ನು ನಂಬುವುದಕ್ಕಾಗುವುದಿಲ್ಲ. ಕಾಮ್ರೇಡ್, ಇವೆಲ್ಲಾ ಕಾಂಗ್ರೆಸ್ಸಿನ ಕಣ್ಣುಮುಚ್ಚಾಲೆಯಾಟ. ಇರಲಿ, ನಾನು ನಾಳೆನೇ ಹೋಗಿ ಸೆಕ್ರೆಟರಿಯವರನ್ನು ಕೇಳ್ಕೊಂಡು ಬರ್ತೀನಿ. ನೀವೆಲ್ಲಾ ಸದಸ್ಯತ್ವದ ಶುಲ್ಕವನ್ನು ಆಫೀಸಿಗೆ ಕಟ್ಟಿಲ್ಲ. ಎಲ್ಲ ಕಾಮ್ರೇಡುಗಳಿಗೂ ವಿಚಾರ ತಿಳಿಸಿಬಿಡು. ಇದೇ ಕೊನೆಯ ಸಲ. ಇನ್ಮೇಲೆ 'ಲಾಲ ಪತಾಕೆ' ಯಲ್ಲಿ ಹೆಸರು ಹಾಕಿಸಿಬಿಡ್ತೀವಿ."

" ಸನಿಚ್ಚರ, ಸದಸ್ಯತ್ವದ ಹಣದಲ್ಲಿ 'ಸೋಷಲಿಸ್ಟ ಕಟ್' ಕುರ್ತಾ ಹೊಲಿಸಿಕೊಂಡುಬಿಟ್ಟ. ಸೆಣಬಿನ ಮಾರಾಟ ಆದಮೇಲೆ ದುಡ್ಡು ಕೊಡ್ತೀನೀ ಅಂತಿದ್ದಾನೆ."

" ಭಯಂಕರ ವಿಚಾರ! ಸದಸ್ಯತ್ವದ ಹಣದಲ್ಲಿ ಕುರ್ತಾ ಹೊಲಿಸಿಕೊಂಡನೇ? ಸಾಧ್ಯವಿಲ್ಲ, ಹೇಗಾದರೂ ಮಾಡಿ ಹಣ ಕಟ್ಟಲೇಬೇಕಂತೆ ಅಂತ ಅವನಿಗೆ ಹೇಳು."

" ತಹಸೀಲ್ದಾರ ಹರಗೌರಿ ಮತ್ತು ತಹಸೀಲ್ದಾರ ವಿಶ್ವನಾಥಪ್ರಸಾದರು ಈಗ ಒಂದು ಎಲೆಯನ್ನು ಎರಡು ಭಾಗ ಮಾಡಿಕೊಂಡು ಹಾಕಿಕೊಳ್ಳುವಷ್ಟು ಸ್ನೇಹಿತರಾಗಿದ್ದಾರೆ."

ನಿಜವಾಗಲೂ.'

'ನಿಜ ಅಲ್ಲದೆ ಮತ್ತೇನು?'—ವೈರಲೆಸ್ ಸುಮರಿತದಾಸ ಎಲ್ಲರೊಂದಿಗೆ ಹೇಳಿಕೊಂಡು ತಿರುಗುತ್ತಿದ್ದ—..." ಲೇಖನಿ ಮತ್ತು ಕಾನೂನುಗಳ ಮಾತು ಬಂದಾಗ, ಕತ್ತಿ ದೊಣ್ಣೆಗಳಿಂದ ಏನು ಪ್ರಯೋಜನ? ತಹಸೀಲ್ದಾರ ವಿಶ್ವನಾಥ ಪ್ರಸಾದರು ಹಳೆಯ ತಹಸೀಲ್ದಾರರು, ರಾಜಪಾರಬಂಗಾದ ಬೇವಿನ ನೀರಿನಿಂದಲೇ ಅವರು ಬೆಳೆದಿರುವುದು: ಅಲ್ಲದೆ ಕಾಯಸ್ಥ ಎಂದಿಗೂ ಉಪ್ಪುಂಡ ಮನೆಗೆ ಎರಡು ಬಗೆಯುವುದಿಲ್ಲ....ಕಾಂಗ್ರೆಸ್ಸಿಗೆ ಸೇರಿಬಿಟ್ಟ ಮಾತ್ರಕ್ಕೆ ತಮ್ಮ ಹಣವನ್ನು ಮರೆಯುವುದಕ್ಕಾಗುತ್ತದೆಯೇ? "

ಸಂಥಾಲ ಪಂಗಡದಲ್ಲಿ ಡೋಲು ಹೊಡೆಯುತ್ತಿದ್ದರು.

**ಸೋನೋ ರೋ ರೂಪ್, ರೂಪೆ ರೋ ರೂಪ್,**
**ಸೋನೋ ರೋ ರೂಪ್ ಲೇಕಾಗಾತೆ ಮೇಲಾಯ**
**ಗಾತೇಞ ಮೇಲಾಯ ರೇ ಸೋನಾ ಮುಂದೋಮ್**
**ಗಾತೇಞ ಉಞಹಯ ಜೀವೀದೀ ಲೋಕತಿಯ**
**ಡಾ ಡಿಗ್ಗಾ ಡಾ ಡಿಗ್ಗಾ ರಿ ರಿ—ತಾ ಧಿನ್ ತಾ:**

(ಚಿನ್ನ ಬೆಳ್ಳಿಗಳ ಮಧ್ಯೆ ಪ್ರಿಯತಮನ ರೂಪ ಚಿನ್ನದಂತಿದೆ. ಚಿನ್ನದ ಉಂಗುರವನ್ನು ನೋಡಿ ನನ್ನ ಪ್ರಿಯತಮನ ನೆನಪು ಬರುತ್ತಿದೆ.)

ಸಂಥಾಲ ಪರಗಣದ ಆದಿವಾಸಿ ಸಂಥಾಲರು ಚಿನ್ನದ ನೆರಳನ್ನೂ ಕಂಡಿದ್ದಾರೋ ಇಲ್ಲವೋ, ಯಾರಿಗೆ ಗೊತ್ತು! ಆದರೆ ಇಲ್ಲಿನ ಸಂಥಾಲರಿಗೆ ಚಿನ್ನ ಬೆಳ್ಳಿಗಳಿಗೆ ವ್ಯತ್ಯಾಸ ಗೊತ್ತು.

—ಜಮೀನ್ದಾರಿ ಪದ್ಧತಿ ನಾಶವಾಯಿತು. ಇನ್ನು ಜಮೀನ್ದಾರರು ಭೂಮಿಯಿಂದ ರೈತರನ್ನು ಬಿಡಿಸಲಾರರು. ನಾವು ಅವರನ್ನೇ ಭೂಮಿಯಿಂದ ಬಿಡಿಸಿಬಿಟ್ಟೆವು.

ಉಳುವವನಿಗೇ ಜಮೀನು. ಎಷ್ಟು ಸಾಧ್ಯವೋ ಅಷ್ಟು ಉಳು. ಬೆಳೆ, ಕತ್ತರಿಸು. ಇನ್ನು ಹಂಚುವ ತೊಂದರೆಯೂ ಇಲ್ಲ....ಭೂಮಾತೆಯ ಪ್ರೇಮ ಸುಳ್ಳಲ್ಲ. ಮತ್ತೆ ಗದ್ದೆಗಳಲ್ಲಿ ಜೀವನ ನಲಿದಾಡುತ್ತದೆ. ಆಷಾಢದ ಮೋಡ 'ಥಕ್ಕೆ ಬಡಿಯುತ್ತಿದೆ', ಮಿಂಚು ನರ್ತಿಸುತ್ತಿದೆ. ನೀನೂ ಕುಣಿ. ಕುಣಿ.... ಕುಣಿ, ಜೋರಾಗಿ ಥಕ್ಕೆಯನ್ನು ಬಡಿ. 'ಪಂಚಾಯ' (ಸಂಥಾಲರ ಮನೆಯಲ್ಲೇ ತಯಾರಾಗುವ ಮದ್ಯದ ನಶೆ) ಇಂದು ಇಳಿಯುವುದೇ ಇಲ್ಲ. ಪೂರ್ಣಿಮೆಯ ಚಂದ್ರ ಮುಳುಗುವವರೆಗೂ, ನಿಬಿಡವಾದ ಮೋಡಗಳು ಕುಣಿಯುವುದನ್ನು ನಿಲ್ಲಿಸುವವರೆಗೂ ನಶೆ ಇಳಿಯುವುದಿಲ್ಲ. ಬೆಳದಿಂಗಳಂತಿರುವ ಪ್ರಿಯತಮೆಯ ಮುಗುಳ್ನಗೆ, ಮುರುಳಿಯಂತಹ ಮಧುರ ಸ್ವರ, ಬಾಣದಂತೆ ಹೃದಯಕ್ಕೆ ನೋವುಂಟು ಮಾಡುತ್ತಿದೆ....ನನ್ನ ಎದೆಯ ಮೇಲೆ ಹೂವು ಮುಡಿದಿರುವ ನಿನ್ನ ತಲೆಯನ್ನು ಒರಗಿಸು ಪ್ರಿಯೆ....

ಡಾ ಡಿಗ್ಗಾ ರಿಂ ರಿಂ ತಾಧಿನ್....

# 36

ಡಾಕ್ಟರರಿಗೆ ಇಲ್ಲಿನ ಮಣ್ಣಿನ ವಿಚಾರದಲ್ಲಿ ಮೋಹವುಂಟಾಗಿದೆ. ತಾನು ಯುಗ ಯುಗಗಳಿಂದ ಈ ಭೂಮಿಯನ್ನು ಗುರುತಿಸುತ್ತಿದ್ದೇನೆ ಎಂದು ಅವರಿಗೆ ಭಾಸವಾಗುತ್ತದೆ. ಇದು ತಮಗೆ ಸೇರಿದ ಮಣ್ಣು. ಇಲ್ಲಿನ ನದಿ-ಕೊಳ, ಮರ-ಗಿಡಗಳು, ಕಾಡು-ಮೈದಾನ, ಪ್ರಾಣಿ-ಪಕ್ಷಿಗಳು, ಕ್ರಿಮಿ-ಕೀಟಗಳು ಎಲ್ಲದರಲ್ಲೂ ಒಂದು ವಿಶೇಷತೆ ಇದೆ. ವಾರಣಾಸಿ ಮತ್ತು ಪಾಟ್ನಾದಲ್ಲೂ ಗುಲ್ ಮೊಹರಿನ ಕೊಂಬೆಗಳಲ್ಲಿ ಕೆಂಪು ಹೂವುಗಳು ತುಂಬಿರುತ್ತವೆ. ನೇಪಾಳದ ಪರ್ವತ ಪ್ರದೇಶದ ಇಳಿಜಾರಿನಲ್ಲಿ ಪಲಾಶ ಮತ್ತು ಅಮಲತಾಸ್ ಕೊಂಬೆಗಳು ಒಂದಕ್ಕೊಂದು ತೂಗಿಹಾಕಿಕೊಂಡಿರುವುದನ್ನು ಡಾಕ್ಟರ್ ನೋಡಿದ್ದಾರೆ. ಆದರೆ ಈ ಹೂವಿನ ಬಣ್ಣ ಅವರ ಮೇಲೆ ಮೊದಲ ಬಾರಿಗೆ ಪ್ರಭಾವ ಬೀರಿದೆ.

ಗೋಲ್ಡ್ ಮೊಹರ್-ಗುಲ್ ಮೊಹರ್-ಕೃಷ್ಣಚೂಡಾ....ಗುಲ್ ಮೊಹರಿಗೆ ಕೃಷ್ಣಚೂಡಾ! ಎನ್ನುವ ಹೆಸರು ಎಷ್ಟು ಚೆನ್ನಾಗಿ ಒಪ್ಪುತ್ತದೆ! ಕಪ್ಪು ಕೃಷ್ಣನ ಕಿರೀಟದ ಮೇಲೆ ಕೆಂಪು ಹೂವು ಎಷ್ಟು ಚೆನ್ನಾಗಿ ಕಾಣುತ್ತಿರಬಹುದು!

ಮಾವಿನ ಹಣ್ಣುಗಳಿಂದ ತುಂಬಿದ ಮರಗಳನ್ನು ನೋಡುವುದಕ್ಕೆ ಮೊದಲು, ಮಾವಿನ ಹಣ್ಣಿನ ಓಟೆಗಳ ಒಣ ತಿರುಳಿನ ರೊಟ್ಟಿ ತಿಂದು ಜೀವಿಸುತ್ತಿರುವ ಜನರ ಒಣಗಿದ ಶರೀರದ ಕಡೆ ಡಾಕ್ಟರ್ ದೃಷ್ಟಿ ಹರಿಯುತ್ತದೆ. ಇಂಥ ಮನುಷ್ಯರು? ಹಸಿದ, ಅತೃಪ್ತಿ ಮನುಷ್ಯರ ಆತ್ಮ ಎಂದೂ ಭ್ರಷ್ಟವಾಗಬಾರದು, ಅಥವಾ ಅವರು ಎಂದೂ ವಿದ್ರೋಹ ಮಾಡಬಾರದು ಎಂದು ಆಶಿಸುವುದು ಎಂತಹ ಮೂರ್ಖತನ....ಇಲ್ಲಿನ ಬಡತನ, ವಿವಶತೆಗಳನ್ನು ಕಂಡು ಡಾಕ್ಟರ್ ಆಶ್ಚರ್ಯಚಕಿತರಾಗಿದ್ದಾರೆ. ಯಾವುದರ ಆಧಾರದಿಂದ ಈ ವರ್ಗ ಜೀವಿಸಿದೆಯೋ ಆ ತೃಪ್ತಿ ಎಂತಹ ಮಹತ್ತರವಾದುದು! ಸಾವಿರಾರು ಜನ ಹಸಿದವರನ್ನೂ ಒಂದು ಶಿಸ್ತಿನ ಸೂತ್ರದಲ್ಲಿ ಬಂಧಿಸಿರುವ ಆ ಕಠೋರ ವಿಧಾನ ಯಾವುದೋ?

....ಕಫ ತುಂಬಿದ ಎರಡೂ ಶ್ವಾಸಕೋಶಗಳು, ಹೊದೆಯುವುದಕ್ಕೆ ಬಟ್ಟೆಯಿಲ್ಲ, ಮಲಗುವುದಕ್ಕೆ ಚಾಪೆಯಿಲ್ಲ, ತಿನ್ನಲು ಕಡ್ಡಿಯೂ ಇಲ್ಲ. ಒದ್ದೆಯಾದ

ನೆಲದ ಮೇಲೆ ಮಲಗಿದ್ದರೂ ಮಲೇರಿಯಾ ರೋಗಿ ಸಾಯುವುದಿಲ್ಲ, ಬದುಕಿಬಿಡುತ್ತಾನೆ....ಹೇಗೋ ?....ವಿಟಮಿನ್ನುಗಳ ವಿವಿಧ ರೂಪಗಳು, ಮತ್ತು ಅವುಗಳಲ್ಲಿ ಬೇರೆ ಬೇರೆ ಗುಣ, ಅವುಗಳ ಆವಶ್ಯಕತೆಗಳ ಬಗ್ಗೆ ಇಲ್ಲಿ ಸುದೀರ್ಘವಾದ ಪಟ್ಟಿ ತಯಾರಿಸಿ ಹಂಚುವವರ ಬುದ್ಧಿಯನ್ನು ಕಂಡು ಕನಿಕರಪಟ್ಟು ಏನು ಪ್ರಯೋಜನ?....ಸೊಳ್ಳೆಗಳ ಚಿತ್ರಗಳು, ಅವುಗಳಿಂದ ತಪ್ಪಿಸಿಕೊಳ್ಳುವ ಉಪಾಯ ಇವುಗಳನ್ನು ಪೋಸ್ಟರಿನ ಮೇಲೆ ಚಿತ್ರಿಸಿ, ಅಥವಾ ಮ್ಯಾಜಿಕ್ ಲ್ಯಾಂಟ್ರನ್‌ನಿಂದ ಚಿತ್ರ ತೋರಿಸಿ ಮಲೇರಿಯಾ ಮಾರಿಯನ್ನು ತಡೆಗಟ್ಟುವವರು ಯಾವ ದೇಶದ ಜನ?....ಇಲ್ಲಿನ ಜನ ಆ ಸೊಳ್ಳೆಗಳ ಚಿತ್ರವನ್ನು ನೋಡಿದ ಕೂಡಲೇ ಹೇಳಿಬಿಡುತ್ತಾರೆ. "ಪೂರ್ಣಿಯಾ ಜಿಲ್ಲೆಯ ಜನ ಸೊಳ್ಳೆಗಳನ್ನು ಅನ್ಯಾಯವಾಗಿ ಬೈಯ್ಯುತ್ತಾರೆ. ನೋಡಿದಿರೇನು, ಪಶ್ಚಿಮ ದೇಶದ ಸೊಳ್ಳೆಗಳು ಎಷ್ಟು ದೊಡ್ಡದಾಗಿವೆ. ಒಂದೊಂದೂ ಒಂದು ಕೈನಷ್ಟು ಉದ್ದವಾಗಿದೆ. ಮೀಸೆಯಂತೂ ನಾಲ್ಕು ಕೈ ಉದ್ದವಿದೆ!"

ಡಿ.ಡಿ.ಟಿ. ಮತ್ತು ಸೊಳ್ಳೆ ಪರದೆಯ ವಿಚಾರ ತುಂಬಾ ದೊಡ್ಡದಾಯಿತು. ಶರೀರಕ್ಕೆ ಎಣ್ಣೆ ಹಚ್ಚಿಕೊಳ್ಳುವುದೂ ಸ್ವರ್ಗೀಯ ಭೋಗ ವಿಲಾಸ ಎನ್ನಿಸಿಕೊಳ್ಳುತ್ತದೆ....ಸುಗಂಧ ತೈಲವನ್ನು ಜಮೀನ್ದಾರರು ಮಾತ್ರ ಲೇಪಿಸಿಕೊಳ್ಳುತ್ತಾರೆ. ಸ್ವರ್ಗದ ಅಪ್ಸರೆಯರು ಪುಣ್ಯಮಾಡಿ ಸ್ವರ್ಗ ಸೇರಿದವರಿಗೆ ಸುಗಂಧದೆಣ್ಣೆ ಲೇಪನದ ಸೇವೆ ಮಾಡುತ್ತಾರೆ!

ಗದ್ದೆಗಳಲ್ಲಿ ಹರಡಿರುವ ಕರಿಯ ಮಣ್ಣಿನ ಸಂಜೀವಿನಿಯೇ ಇವರನ್ನು ಬದುಕಿಸಿದೆ. ಸಸ್ಯ ಶ್ಯಾಮಲಾಂ, ಸುಜಲಾಂ, ಸುಫಲಾಂ....ಇವರ ತಾಯಿಯಲ್ಲವೇನು! ಮುಂದೆ ಬಹುಶಃ ಆ ಭೂಮಿಯ ಮೇಲೆ ಕಾಲಿಡುವ ಅಧಿಕಾರವೂ ಅವರಿಗೆ ದೊರೆಯಲಾರದೇನೋ! ಕಾನೂನನ್ನು ಜಾರಿಗೆ ತರುವ ಮೊದಲೇ, ಕಾನೂನನ್ನು ವ್ಯರ್ಥಮಾಡುವ ಉಪಾಯಗಳನ್ನು ಹುಡುಕಿಯಾಯಿತು. ಸೂಜಿಯ ತೂತಿನಲ್ಲಿ ಆನೆಯನ್ನು ತೂರಿಸುವುದೇ ಇಂದು ನಿಜವಾದ ಬುದ್ಧಿವಂತಿಕೆ....ಮಿಕ್ಕವರೆಲ್ಲಾ ವ್ಯರ್ಥಾಲಾಪ ಮಾಡುತ್ತಾರೆ. ಬುದ್ಧಿ ವಿಸ್ಮೃತಿಯ ರೋಗದಿಂದ ಪೀಡಿತರಾಗಿದ್ದಾರೆ. ಸಾವಿರಾರು ಬೀಘಾ ಜಮೀನಿರುವವರೆಲ್ಲಾ ನಾಲ್ಕಾರು ಬೀಘಾ ಜಮೀನಿಗಾಗಿ ಚಡಪಡಿಸುತ್ತಿದ್ದಾರೆ....ಯಜಮಾನ ಎನ್ನಿಸಿಕೊಂಡವನು ಯಜಮಾನನಾಗಿ ಉಳಿದಿಲ್ಲ, ಪಶುವಾಗಿದ್ದಾನೆ.

ಡಾಕ್ಟರು ಮಮತಾಗೆ ಕಾಗದ ಬರೆದರು :

"ನಿನ್ನ ಭಾಷೆ ಈ ಜನಕ್ಕೆ ಅರ್ಥವಾಗುವುದಿಲ್ಲ, ನೀನು ಇವರ ಭಾಷೆ ಅರ್ಥ ಮಾಡಿಕೊಳ್ಳಲಾರೆ. ನೀನು ತಿನ್ನುವುದನ್ನು ಇವರು ತಿನ್ನುವುದಿಲ್ಲ. ನೀನು ಧರಿಸುವ ಬಟ್ಟೆಯನ್ನು ಇವರು ಧರಿಸಲಾರರು. ನೀನು ಮಲಗುವ ಹಾಗೆ, ಕುಳಿತುಕೊಳ್ಳುವ ಹಾಗೆ, ನಗುವ ಹಾಗೆ, ಮಾತನಾಡುವ ಹಾಗೆ ಈ ಜನ ಮಾಡಲಾರರು. ಅಂದಮೇಲೆ ನೀನು ಇವರನ್ನು ಮನುಷ್ಯರೆಂದು ಕರೆಯುವುದು ಹೇಗೆ?"

....ಅವರು ಮನುಷ್ಯರ ಡಾಕ್ಟರ್, ಪ್ರಾಣಿಗಳ ಡಾಕ್ಟರಲ್ಲ.... 'ಟೆಸ್ಟ್‌ಟ್ಯೂಬ್'ನಲ್ಲಿ ಮನುಷ್ಯರು ಮತ್ತು ಪ್ರಾಣಿಗಳ ರಕ್ತ ಬೇರೆ ಬೇರೆಯಾಗಿ ಇಟ್ಟಿದೆ. ಎರಡಕ್ಕೂ ಬೇಕಾದ ಆವಶ್ಯಕತೆಗಳೂ ಬೇರೆ ಬೇರೆ. ಡಾಕ್ಟರ್ ಮನುಷ್ಯನ ರಕ್ತವಿದ್ದ ಟ್ಯೂಬನ್ನು ಕೈಗೆತ್ತಿಕೊಂಡು ಸ್ವಲ್ಪ ಮೇಲೆತ್ತಿ ಗಮನವಿಟ್ಟು ನೋಡಿದರು. ಮನುಷ್ಯನ ಮತ್ತು ಪ್ರಾಣಿಗಳ ರಕ್ತದಲ್ಲಿ ಏನು ವ್ಯತ್ಯಾಸವಿದೆ ಯೆಂಬುದನ್ನು ನೋಡುವ, ತಿಳಿಯುವ ಇಚ್ಛೆ ಅವರಿಗೆ....

ರಕ್ತ ತುಂಬಿದ ಟೆಸ್ಟ್‌ಟ್ಯೂಬ್‌ನಲ್ಲಿ ಡಾಕ್ಟರಿಗೆ ಈಗ ಯಾವ ಆಕರ್ಷಣೆಯೂ ಉಳಿದಿಲ್ಲ....

ಸಂಜೀವಿನಿ ಬೇರು ಕೊಟ್ಟರೂ ಈಗ ಡಾಕ್ಟರಿಗೆ ಅದರಿಂದ ಪ್ರಯೋಜನ ವೇನು? ಅವರಿಗೆ ಸಂಜೀವಿನಿ ಬೇಡ. ಹಸಿವು, ವಿವಶತೆಯಿಂದ ಚಡಪಡಿಸಿ ಸಾಯುವುದರ ಬದಲು ಮಲೇರಿಯಾದಿಂದ ಜ್ಞಾನ ತಪ್ಪಿ ಸಾಯುವುದು ಎಷ್ಟೋ ಒಳ್ಳೆಯದು. ಸ್ವಲ್ಪ ಸ್ವಲ್ಪವೇ ಕರಗಿ ಕರಗಿ ಸಾಯಲೆಂದು ಅವರನ್ನು ಬದುಕಿಸು ವುದು ದೊಡ್ಡ ಕಾರ್ಯ....ಕಷ್ಟದಿಂದ ಒದ್ದಾಡುತ್ತಿದ್ದ ಕರುವನ್ನು ಗುಂಡಿಟ್ಟು ಕೊಲ್ಲುವಂತೆ ಒಮ್ಮೆ ಮಹಾತ್ಮ ಗಾಂಧಿಯವರು ಹೇಳಿದರಂತೆ. ಡಾಕ್ಟರ್, ಹೊಸ ಪ್ರಪಂಚದಲ್ಲಿ ಮನುಷ್ಯರನ್ನು ಸುಂದರವಾಗಿ, ಸುದೃಢವಾಗಿ ಮಾಡಲು ಇಷ್ಟಪಡುತ್ತಿದ್ದರು. ಆದರೆ ಇಲ್ಲಿ ಮನುಷ್ಯರು ಎಲ್ಲಿದ್ದಾರೆ?....ಮಾಡಬೇಕಾದ ಮೊಟ್ಟಮೊದಲನೆಯ ಕೆಲಸ ಪ್ರಾಣಿಗಳನ್ನು ಮನುಷ್ಯರನ್ನಾಗಿ ಮಾಡುವುದು.

ಅವರು ಮಮತಾಗೆ ಬರೆದರು:

"ಇಲ್ಲಿನ ಮಣ್ಣಿನಲ್ಲಿ ಹರಡಿಕೊಂಡಿರುವ ಲಕ್ಷ ಲಕ್ಷ ಜನರ ಜೀವನದ ಸ್ವರ್ಣಮಯ ಸ್ವಪ್ನವನ್ನು ಅಪೂರ್ಣ ಆಸೆಗಳನ್ನು ಒಂದುಗೂಡಿಸಿ, ಇಲ್ಲಿನ ಪ್ರಾಣಿಗಳ ಜೀವಕೋಶದಲ್ಲಿ ತುಂಬಬೇಕೆಂದು ನಾನು ಕನಸುಕಂಡಿದ್ದೆ. ಸಾವಿರಾರು ಜನ ಆರೋಗ್ಯವಂತ ಮನುಷ್ಯರು ಹಿಮಾಲಯದ ಕಂದರದಲ್ಲಿ, ತ್ರಿವೇಣಿಯ

ಸಂಗಮದಲ್ಲಿ ಅರುಣ, ತಿಮುರ, ಸುಣಕೋಶಿಗಳ ಸಂಗಮದಲ್ಲಿ ಒಂದು ವಿಶಾಲ ಅಣೆಕಟ್ಟನ್ನು ನಿರ್ಮಿಸಲು ಪರ್ವತ ಕಡಿಯುವ ಕೆಲಸದಲ್ಲಿದ್ದಾರೆ ಎಂದು ನಾನು ಕಲ್ಪಿಸಿಕೊಂಡಿದ್ದೆ....ಲಕ್ಷಾಂತರ ಎಕರೆ ಬಂಜರು ಭೂಮಿ, ಕೋಶಿಯಿಂದ ಜೀವನ ಪಡೆದು ಸಸ್ಯ ಶ್ಯಾಮಲ ಧರತಿಯಾಗುವುದು. ಹೆಣಕ್ಕೆ ಹೊಂದಿಸುವ ಬಟ್ಟೆಯಂತೆ ಬೆಳ್ಳಗಿರುವ ಮೈದಾನದಲ್ಲಿ, ಭತ್ತದ ಬಣ್ಣ ಜೀವನದ ಲತೆಯಂತೆ ಬಳುಕುತ್ತದೆ. ಜೋಳದ ಹೊಲದಲ್ಲಿ ಹುಲ್ಲು ನೆಡುತ್ತಿರುವ ಹೆಂಗಸರು ಕಾರಣ ವಿಲ್ಲದೆ ನಗುತ್ತಿರುತ್ತಾರೆ. ಅವರ ಮುತ್ತಿನಂತಹ ಬಿಳಿ ಹಲ್ಲುಗಳ ಹೊಳಪು·····"

ಡಾಕ್ಟರ ರಿಸರ್ಚ್ ಪೂರ್ತಿಯಾಗಿತ್ತು. ಅವರಿಂದು ದೊಡ್ಡ ಡಾಕ್ಟರ್. ರೋಗದ ಮೂಲವನ್ನು ಕಂಡುಹಿಡಿದ ಡಾಕ್ಟರ್····

ಬಡತನ ಮತ್ತು ಅಜ್ಞಾನ—ಇವೆರಡೂ ಈ ರೋಗದ ಕೀಟಾಣುಗಳು!

ಎನೋಫಿಲೀಸ್ ಸೊಳ್ಳೆಗಿಂತ, ಸ್ಯಾಂಡ್‌ಫ್ಲೈ (ಕರಿಜ್ವರಕ್ಕೆ ಕಾರಣವಾದ ನೊಣ) ಗಿಂತ ಭಯಂಕರವಾಗಿದೆ, ವಿಷಯುಕ್ತವಾಗಿದೆ ಇಲ್ಲಿನ....

ಇಲ್ಲ, ಇಲ್ಲ. ಬಹುಶಃ ಇದು ಕಾಳೀಚರಣನ ಹೋಲಿಕೆಯಂತಾಗುತ್ತದೆ-....ಕಾಳೀಚರಣ ರೈತರ ಮಧ್ಯೆ ಭಾಷಣ ಮಾಡುತ್ತಿದ್ದ: "ಈ ಪೂಂಜೀಪತಿಗಳು ಮತ್ತು ಜಮೀನ್ದಾರರು, ತಿಗಣೆಗಳು ಮತ್ತು ಸೊಳ್ಳೆಗಳ ಹಾಗೆ ಶೋಷಕರು ....ತಿಗಣೆಗಳಿಗೆ ಹಿಂದಿಯಲ್ಲಿ ಖಟ್‌ಮಲ್ ಅನ್ನುತ್ತಾರೆ. ಆದ್ದರಿಂದಲೇ ಹೆಚ್ಚು ಜನ ಮಾರ್ವಾಡಿಗಳ ಹೆಸರಿನ ಮುಂದೆ ಮಲ್ ಜೋಡಿಸಿರುತ್ತದೆ! ಇನ್ನು ಜಮೀನ್ದಾರರ ಮಕ್ಕಳನ್ನು ಜನ ಮಿಸ್ಟರ್ ಎನ್ನುತ್ತಾರೆ. ಮಿಸ್ಟರ್ ಅಂದರೆ ಮಚ್ಛರ್! (ಸೊಳ್ಳೆ)."

ಬಿರುಕುಬಿಟ್ಟ ಬಾಗಿಲು ಅದು, ಬಿದ್ದೇ ಬೀಳುತ್ತದೆ. ಬೀಳಲಿ ಬಿಡು. ಇಂಥ ಸಮಾಜ ಎಷ್ಟು ದಿನ ಉಳಿದಿರಬಲ್ಲುದು?

····ಕವಿವರ ಹಂಸಕುಮಾರ ತಿವಾರಿಯ ಕವಿತೆಯ ಕೆಲವು ಪಂಕ್ತಿಗಳು ನೆನಪಿಗೆ ಬರುತ್ತವೆ—

"ದ-ನಿಯಾ ಘೋಸ್ ಬಟೋರ್ ಚುಕೀಹೈ,
ಮೈ ದೋ ಚಿನಗಾರೀ ದೇದೂಂಗಾ"

(ಪ್ರಪಂಚದಲ್ಲಿ ಹುಲ್ಲು ತುಂಬಿಕೊಂಡಿದೆ. ನಾನದಕ್ಕೆ ಎರಡು ಕಿಡಿ, ಬೆಂಕಿ ಹಾಕಿಬಿಡುತ್ತೇನೆ.)

ಗುಲ್‌ಮೊಹರ್—ಇಂದು ಅರಳಿದ ಹೂವು. ಕುರೂಪವನ್ನೆಲ್ಲಾ ಸುಟ್ಟು ಹಾಕುತ್ತದೆ. ಕೆಂಪು, ಕೆಂಪು.

....ಕಮಲ—ಕಮಲಾ ನದಿಯ ದಿಣ್ಣೆಯಲ್ಲಿ ಕಮಲದ ಅರೆ ಮುಚ್ಚಿದ ಮೊಗ್ಗುಗಳು ತಮ್ಮ ಕೋಶದಲ್ಲಿ ಹೊಸ ಜೀವನದ ಪರಾಗ ತುಂಬಿಕೊಂಡು ಅರಳಲು ಬಯಸುತ್ತಿವೆ.

"ಓ ನೀನು ಕಮಲಾ....ಇಷ್ಟು ಕತ್ತಲಾದ ಮೇಲೆ ಒಬ್ಬಳೇ ಬಂದೆಯಾ?"

"ಡಾಕ್ಟರ್—ಹೇಳಿ ನಿಜವಾಗಿ ಹೇಳಿ ಅರ್ಧ ಗಂಟೆಯಿಂದ ನಿಂತ್ಕೊಂಡು ನೋಡ್ತಿದೀನಿ. ನಿಮಗೇನಾಗಿದೆ? ನಿಮಗೂ ಭಯ ಆಗ್ತಿದೆಯೇನು?.... ತಲೆ ತಿರುಗ್ತಿದೆಯೇನು?....ನೋಡಿ, ಕಿವಿ ಹತ್ತಿರ ಬಿಸಿಯಾಗ್ತಿದೆಯೇ? ಪ್ರಪಂಚ ಸುತ್ತುತ್ತಿರೋ ಹಾಗೆ ಕಾಣ್ತಿದೆಯಾ?....ಡಾಕ್ಟರ್....ಡಾಕ್ಟರ್ ....ಪ್ಯಾರೂ."

....ಕಮಲದ ಮಧುರ ಸುಗಂಧ ಕೋಮಲ ದಳಗಳ ಮೋಹಕ ಸ್ಪರ್ಶ ಕಮಲಾ....ಓ ನಾನು ಕಮಲೆಯ ಮಡಿಲಿನಲ್ಲಿ ಹೀಗೆ ನನಗೆ ನಿದ್ದೆ ಬಂದು ಬಿಟ್ಟೀತು....ನಾನು ಎದ್ದು ಕುಳಿತುಕೊಳ್ಳಬೇಕು: ನನ್ನ ಗುರಿ....

"ಕಮಲಾ, ನಡೆ, ನಿನ್ನ ಮನೇಗೆ ಕಳುಹಿಸಿ ಬರ್‍ತೀನಿ."

"ಮಲಗಿರು, ಮಗೂ."

"ಓ ಚಿಕ್ಕಮ್ಮ, ನೀನ್ಯಾವಾಗ ಬಂದೆ."

ಪ್ಯಾರೂ ಹೇಳುತ್ತಿದ್ದ: "ನಿನ್ನೆ ಬೆಳಗ್ಗಿನಿಂದ ಬರಿ ಚಹ ಕುಡಿದುಕೊಂಡು ಕೂತಿದ್ದಾರೆ, ತಲೆ ತಿರುಗದೆ ಏನಾಗುತ್ತೆ?"

## 37

ತಹಸೀಲ್ದಾರ ವಿಶ್ವನಾಥಪ್ರಸಾದರ ಮನೆಯ ಕಟ್ಟೆಯ ಮೇಲೆ ಪಂಚಾಯತಿ ಸೇರಿದೆ. ಇಬ್ಬರು ತಹಸೀಲ್ದಾರರ ಅಕ್ಕಪಕ್ಕದಲ್ಲಿ ಬಾಲದೇವ ಮತ್ತು ಕಾಳೀಚರಣ ಕುಳಿತಿದ್ದಾರೆ. ಬ್ರಾಹ್ಮಣ ಮತ್ತು ರಾಜಪೂತರ ಜೊತೆಯಾದವರು ಒಂದೇ ಜಮಖಾನದ ಮೇಲೆ ಕುಳಿತಿದ್ದಾರೆ. ಅರಿಜೀವೇಸ್ವರ ಚಮ್ಮಾರನೂ ಅದೇ ಜಮಖಾನದ ಮೇಲೆ ಕುಳಿತಿದ್ದಾನೆಯೇ? ಸರಿ, ಸರಿ, ಎಲ್ಲಾ ಈಗ ದಾರೀಗೆ ಬರ್ತಿದ್ದಾರೆ. ಅಲ್ಲಿ ನೋಡು, ಈವತ್ತು ತಹಸೀಲ್ದಾರ ಹರಗೌರಿ, ಕಾಳೀಚರಣನ ಜೊತೆ, ಒಟ್ಟಿಗೆ ಬೆಳೆದ ಸ್ನೇಹಿತರೇನೋ ಅನ್ನುವಂತೆ ಹೇಗೆ ನಗುನಗುತ್ತಾ ಮಾತಾಡ್ತಿದಾನೆ ಹೂಂ....ಯಾದವರನ್ನು ಈಗ ಜವಹರಲಾಲರೂ ಕ್ಷತ್ರಿಯ ರೆಂದು ಒಪ್ಪಿದ್ದಾರೆ. ಇನ್ನು ಬೇರೆಯವರು ಏನು ಮಾತಾಡಬಲ್ಲರು?.... ಬಾವನದಾಸ ಯಾವ ಜಾತಿಯವನು? ಬಾವನದಾಸ ಎಲ್ಲಿ? ಪೂರ್ಣಿಯಾಗೆ ಹೋಗಿದ್ದಾನ್ಯೇ? ಪಂಚಾಯತಿ ದಿನ ಅವನು ಇರಬೇಕಾಗಿತ್ತು—ಅಯ್ಯೋ, ಬಿಡಯ್ಯಾ. ಎಷ್ಟಾದರೂ ಅವನು ಹೊರಗಡೆ ಮನುಷ್ಯ. ಅವನಿಗೆ ಈ ಹಳ್ಳಿ ವಿಚಾರ ಕಟ್ಟಿಕೊಂಡು ಆಗಬೇಕಾದ್ದೇನು? ಇಲ್ಲಿ ಅಲ್ಲದಿದ್ದರೆ ಇನ್ನೊಂದು ಕಡೆ. ಆದರೆ ಕಾಳೀಚರಣ....ಬಾಲದೇವ....? —ಡೋಮನ್ ಠಾಕೂರ ಏನೋ ಹೇಳ್ತಿದ್ದಾನೆ, ಕೇಳು.

"ಹಜಾಮರ ಪಂಗಡದಿಂದ, ಅಗಸರ ಪಂಗಡದಿಂದ ಒಬ್ಬೊಬ್ಬ ಮನುಷ್ಯ ನಿಗೆ ಮೇಲೆ ಕೂತ್ಕೊಳ್ಳೋದಕ್ಕೆ ಅವಕಾಶ ಕೊಡಬೇಕು."

"ಸರಿ ಡೋಮನ್, ನಿನ್ನ ಪಂಗಡದಲ್ಲಿ ಯಾರನ್ನು ಪಂಚನಾಗಿ ಆರಿಸ್ತೀ? ಹೇಳು. ನೀನೇ ಬಂದುಬಿಡು. ಅಗಸರ ಪಂಗಡದಲ್ಲಿ ಪ್ಯಾರೆಲಾಲ ಇದ್ದೇ ಇದ್ದಾನೆ. ಪ್ಯಾರಿಲಾಲ್, ಮೇಲೆ ಬಾರಯ್ಯ."

ಕಾಳೀಚರಣ ಪ್ಯಾರೆಲಾಲನನ್ನು ತನ್ನ ಹತ್ತಿರ ಕೂರಿಸಿಕೊಂಡ.

ತಹಸೀಲ್ದಾರ ವಿಶ್ವನಾಥ ಪ್ರಸಾದರು ಅಡಿಕೆ ಕತ್ತರಿಸುತ್ತಾ ಹೇಳಿದರು:

"ಒಟ್ಟಿನಲ್ಲಿ ಹೇಳೋದಾದ್ರೆ ಕಾಲ ತುಂಬಾ ಕೆಟ್ಟುಹೋಗಿದೆ. ಪತ್ರಿಕೆ, ಗೆಜೆಟ್ ಓದೋರಿಗೆ ಎಷ್ಟು ಕೆಟ್ಟ ಕಾಲ ಬರ್ತಿದೇ ಅನ್ನೋದು ಅರ್ಥವಾಗುತ್ತೆ ...

ಬಂಗಾಳದ ಹಾಗೆ ಇಲ್ಲೂ ಕ್ಷಾಮ ಹರಡುತ್ತೆ. ಬಂಗಾಳದ ಕ್ಷಾಮದ ವಿಚಾರನೂ ಗೊತ್ತಿಲ್ವೇನು?····ದನ ಕಾಯೋರು ಹಾಡ್ತಾ ಇರ್ತಾರಲ್ಲಾ, ಕೇಳಿಲ್ವೇನು?

ಬಡ ಜುಲುಮ್ ಕುಯಿಲಕ್ ಅಕಲವಾರೀ
ಬಂಗಾಲಾ ಮುಲಕುವಾ ಮೇಂ
ಚಾರ ಕರೋಡ ಆದಮೀ ಮರಲ....

(ಬಂಗಾಳಾದಲ್ಲಿ ಕ್ಷಾಮ ತುಂಬಾ ಉಪದ್ರವ ಮಾಡಿತು. ನಾಲ್ಕು ಕೋಟಿ ಜನ ಸತ್ತರು.)

....ಕಾಳೀಚರಣನನ್ನು ಕೇಳಿ. ಬಂಗಾಳಾದಲ್ಲಿ ಬಂದ ಕ್ಷಾಮದಂತಹ ಕ್ಷಾಮ ಬೇರೆಲ್ಲಿಯಾದರೂ ಬಂದಿತ್ತೇ? ಬಾಲದೇವನನ್ನು ಕೇಳಿದರೂ ಹೇಳುತ್ತಾನೆ. ಪತ್ರಿಕೆ ಓದದವರಿಗೆ ಪ್ರಪಂಚದ ವಿಚಾರ ಏನು ತಿಳಿಯುತ್ತದೆ. ನಾನಾದರೂ ಮೊದಲಿನಿಂದ ಕಂದಾಯ–ಆಫೀಸು, ಕಟಿಹಾರ–ಪೂರ್ಣಿಯಾ ಎಂದು ಓಡಾಡ ದಿದ್ದರೆ ಕೂಪಮಂಡೂಕನಂತೆಯೇ ಇರುತ್ತಿದ್ದೆ. ಬಾವಿಯ ಕಪ್ಪೆ.... ನೋಡಿ, ಭತ್ತ ಬರುವವರಿಂದ ಸರ್ಕಾರ ಭತ್ತ ವಸೂಲುಮಾಡಿಕೊಳ್ಳುತ್ತಿದೆ. ಯಾಕೆ ಗೊತ್ತೇನು? ಕ್ಷಾಮ ಬರಬಹುದೆಂದು ಸರ್ಕಾರಕ್ಕೆ ಭೀತಿ. ಆದ್ದರಿಂದ ಕೈಗಾವಲಿಗೆಂದು ತನ್ನ ಹತ್ತಿರ ಪೂರಾ ಸ್ಟಾಕ್ ಇಟ್ಟುಕೊಳ್ಳುವುದು ಆವಶ್ಯಕ, ಅಲ್ಲಾ, ಮೂರು ಜನಕ್ಕೆ ಹೊಟ್ಟೆ ತುಂಬಿಸಬೇಕಾದರೆ ವರ್ಷವೆಲ್ಲಾ 'ಅಪ್ಪಾ, ತಂದೇ, ಸ್ವಾಮಿ, ಗುರುವೇ ಅಂತ' ಒದ್ದಾಡ್ತಿರ್ತೀರಿ. ಒಂದು ಸಲ ಇಂದ್ರ ದೇವನಿಂದ ಮಳೆ ಬೇಡುತ್ತೀರಿ. ಸೂರ್ಯ ಭಗವಂತನಲ್ಲಿ ಶಾಖ ಕೇಳುತ್ತೀರಿ, ಮಡೀತೀರಿ, ಸಾಲ ಮಾಡ್ತೀರಿ. ಅಂತಹುದರಲ್ಲಿ ಇಡೀ ಭಾರತ ವರ್ಷ ಹಿಂದೂ ಸ್ಥಾನದ ಜವಾಬ್ದಾರಿಯನ್ನು ಹೊತ್ತುಕೊಂಡಿರುವವರ ಸ್ಥಿತಿ ಹೇಗಿರುತ್ತದೆ? ಎಲ್ಲಾ ನಾಯಕರು ಜೈಲಿನಿಂದ ಬಂದು ಸ್ವಲ್ಪವೇ ದಿನಗಳಾದುವು. ತಕ್ಷಣ ಮಂತ್ರಿಗಳಾಗಿದ್ದಾರೆ. ಕ್ಷಾಮ ಬಂದುಬಿಟ್ಟರೆ, ಸ್ವರಾಜ್ಯವೂ ಸಿಕ್ಕುವುದಿಲ್ಲ; ಒಂದು ವೇಳೆ ಸಿಕ್ಕರೂ, ಜನರಿಗೆ ಊಟ ಒದಗಿಸುವುದರಲ್ಲೇ ಅವರ ಶಕ್ತಿಯೆಲ್ಲಾ ವ್ಯಯವಾಗುತ್ತದೆ. ಆದ್ದರಿಂದ ನಾವು ಭೂಮಿಯಿಂದ ಹೆಚ್ಚು ಬೆಳೆ ಉತ್ಪಾದಿಸ ಬೇಕು····ಕೋರ್ಟು ಕಛೇರಿ, ಅದೂ ಇದೂ ಮಾಡಿ 144ನೇ ಸೆಕ್ಷನ್ನಿನಂತೆ ನೀವು ಭೂಮಿಯನ್ನು ನಿಮ್ಮದಾಗಿ ಪಡೆದರೂ 145ನೇ ಸೆಕ್ಷನ್ ಜಾರಿಗೆ ಬರುತ್ತದೆ. ಅದರ ಪ್ರಕಾರ ಜಮೀನಿನಲ್ಲಿ ಭತ್ತವನ್ನೇ ಬೆಳೆಯದ ಹಾಗೆ ಕಾನೂನು ಬರುತ್ತದೆ. ಆಗ ಭೂಮಿ ಪಾಳು ಬೀಳುತ್ತದೆ, ಆಹಾರ ಬೆಳೆಯುವುದಿಲ್ಲ.

ಒಂದು ವೇಳೆ ನೀವು ಮಾಲೀಕರಿಂದಲೇ ಧಾನ್ಯವನ್ನು ಬೇಡಿದರೂ ಅವರು ಆಗ ಎಲ್ಲಿಂದ ತಂದು ಕೊಡುತ್ತಾರೆ? ತಮ್ಮ ಖರ್ಚಿಗೆ ತಕ್ಕಷ್ಟು ದವಸ-ಧಾನ್ಯ ಮಾಲೀಕರ ಹತ್ತಿರವೂ ಇರುವುದಿಲ್ಲ. ಸರ್ಕಾರ ಕಾನೂನಿನ ಬಲದಿಂದ, ಲಾಠಿಯ ಜೋರಿನಿಂದ ವಸೂಲು ಮಾಡಿಕೊಳ್ಳುತ್ತದೆ. ದೊಡ್ಡ ಮಾಲೀಕರ ಕಣಜದಲ್ಲೂ ಬಾವಲಿಗಳು ತೂಗಾಡುತ್ತವೆ....ಆದ್ದರಿಂದ ನಾನು ಹೇಳುವುದಿಷ್ಟೇ, ಎಲ್ಲರೂ ಒಟ್ಟಾಗಿ ಕೂತು, ಆಲೋಚನೆ ಮಾಡಿ, ಯಾವುದರಿಂದ ಪರಿಹಾರವಾಗುತ್ತದೆ ಎಂದು ನಿರ್ಧರಿಸಿ....'' 'ಈ ಪಂಚಾಯತಿ ಕೂತಿರೋದು ಕೇವಲ ಯಜಮಾನರು ಪಾಠ ಹೇಳಿಕೊಡೋದಕ್ಕೇನು?····ಸುಮ್ಮನಿರು ತಹಸೀಲ್ದಾರರು ಹೇಳ್ತಿರೋದು ಅರ್ಥವಾಗ್ಲಿಲ್ವೇನು?····ಅವರು ಸರಿಯಾದ ಮಾತೇ ಹೇಳ್ತಿದಾರೆ····ಬಹಳ ಯೋಗ್ಯ ಮನುಷ್ಯ. ಈ ಕಾಳೀಚರಣ, ಬಾಲದೇವ ಎಲ್ಲಾ ಬಂದಿದ್ದು ಈಗ ತಾನೇ, ಮೊದಲು ನಮ್ಮ ಕಣ್ಣು ಕಿವಿ ಎಲ್ಲಾ ಆಗಿದ್ದೋರು ತಹಸೀಲ್ದಾರರೇ ತಾನೇ! ನೇತಾಜೀ ಸಿಂಗಪುರದಿಂದ ಪುಷ್ಪಕ್ ವಿಮಾನದಲ್ಲಿ ಕುಳಿತು ಬಂದರು ಎನ್ನುವ ವಿಚಾರ ಕೇಳಿದ್ದೂ ಇವರಿಂದಾನೇ ತಾನೇ! ತಹಸೀಲ್ದಾರರು ಹೇಳೋದು ಸರಿಯಾಗಿದೆ.

"ತಹಸೀಲ್ದಾರರೇ, ತಾಯಿ ತಂದೆ, ನೀವು ಹೇಳಿದ್ದು ಸರೀನೇ. ಇನ್ನು ನೀವೇ ನಮಗೆ ಮಾರ್ಗ ತೋರಿಸಬೇಕು." "ಹೌದು ಹೌದು. ತಹಸೀಲ್ದಾರ ಚಿಕ್ಕಪ್ಪ ನೀವೇ ಹೇಳಿ."

"ಸರಿಯಾಗಿದೆ····ಏನು ಹೇಳ್ತೀರಿ ಕಾಳೀಚರಣ?" ತಹಸೀಲ್ದಾರ ಹರಗೌರಿ ಕೂಡ ಕಾಳೀಚರಣನನ್ನು "ಏನು ಹೇಳ್ತೀರಿ?" ಅಂತ ಬಹುವಚನದಲ್ಲಿ ಕೇಳಿದ.

"ಸರಿಯಾಗಿದೆ, ಸರಿಯಾಗಿದೆ: ತಹಸೀಲ್ದಾರರು ಸರಿಯಾಗಿ ಹೇಳ್ತಿದಾರೆ."

"....ಹಾಗಾದರೆ ಸರಿ. ನಾನು ಇಡೀ ಭಾರತ ವರ್ಷದ, ಹಿಂದೂಸ್ತಾನದ ಮಾತು ಹೇಳಲಾರೆ. ನಮಗೆ ಗೊತ್ತಿರುವುದು ನಮ್ಮ ಹಳ್ಳಿಯ ವಿಚಾರ ಮಾತ್ರ. 'ತಾನುಂಟೋ ಮೂರು ಲೋಕವುಂಟೋ' ಅಣ್ಣ ತಮ್ಮಂದಿರೂ ಬಡವರೂ, ಶ್ರೀಮಂತರೂ ಎಲ್ಲಾ ಒಗ್ಗಟ್ಟಾಗಿ ದುಡಿಯುವುದರಲ್ಲೇ ಹಳ್ಳಿಯ ಮಂಗಳವಿದೆ ಎಂದು ನನಗೆ ಅನ್ನಿಸುತ್ತಿದೆ. ಯಾರೂ ಯಾರ ಜಮೀನನ್ನು ಬಿಡಿಸುವುದೂ ಬೇಡ, ಯಾರೂ ಯಾರ ಮೇಲೂ ಸುಳ್ಳು ಮೊಕದ್ದಮೆ ಹೂಡುವುದೂ ಬೇಡ. ಹಿಂದೆ ಉತ್ತು ಬಿತ್ತು ಬೆಳೆ ತೆಗೆಯುತ್ತಿದ್ದ ಹಾಗೆಯೇ ಮುಂದುವರಿಯಲಿ. ರಸೀತಿ

ಕೇಳುವುದೂ ಬೇಡ, ಭೂಮಿಯನ್ನು ಸ್ವಂತ ಮಾಡಿಸಿಕೊಳ್ಳಲು ಅರ್ಜಿ ಹಾಕುವುದೂ ಬೇಡ. ಇಬ್ಬರೂ ಇದನ್ನು ತಿಳಿದುಕೊಳ್ಳಬೇಕು. ಹರಗೌರಿ, ಕೇಳ್ತಿದೀ ತಾನೇ? ಇನ್ನಾದರೂ ಎಚ್ಚೆತ್ತುಕೊಳ್ಳಬೇಕೆಂದು ನಿನ್ನ ಮ್ಯಾನೇಜರರಿಗೆ ಹೋಗಿ ಹೇಳು. ಈ ರೀತಿ ರೈತರ ಜೊತೆ, ಕಡೆಯ ಪಕ್ಷ ನಮ್ಮ ಊರಿನ ರೈತರ ಜೊತೆ, ವೈರ ಬೆಳಸಿದರೆ ಚೆನ್ನಾಗಿರುವುದಿಲ್ಲ.....ಎಲ್ಲಾ ನನ್ನ ಕೈಯಲ್ಲೇ ಇದೆ. 'ಹುಜೂರು ಅಲೀ, ಈ ವ್ಯರ್ಥವಾದ ಕೆಲಸವನ್ನೆಲ್ಲಾ ನನ್ನಿಂದ ಮಾಡಿಸಿದರು ಎಂದು ಸಾಕ್ಷಿ ಕೊಟ್ಟರೆ, ಕಾಗದ ಪತ್ರ ತೋರಿಸಿದರೆ', ಎಲ್ಲಾ ಶ್ರೀಕೃಷ್ಣಾರ್ಪಣ ಆಗಿಹೋಗುತ್ತದೆ."

ಪಂಚಾಯತಿಯಲ್ಲಿದ್ದ ಜನರೆಲ್ಲಾ ಅಟ್ಟಹಾಸದಿಂದ ನಕ್ಕರು.

"ಹಾಗಾದರೆ ಯಾವ ವಂಶದ ತಹಸೀಲ್ದಾರರು ಎನ್ನುವುದನ್ನು ನೋಡಬೇಕು."—ಸಿಂಗಜೀ ನಕ್ಕು ಹೇಳಿದರು.

"ಮಹಾರಾಣಿ ಚಂಪಾವತೀ....."

....ನಗುವಿನ ಎರಡನೆಯ ಅಲೆ, ನೂರಾರು ಜನ ಸರಳ ಹೃದಯ ರೈತರನ್ನು ಮುಳುಗಿಸಿತು.

"ಇರಲಿ ಈಗ ಕೆಲಸದ ಮಾತು ಆಡೋಣ....ಕಾಳೀಚರಣ ಕೇಳಿಲ್ಲಿ. ಲೀಡರ್ ಆಗಿದಿಯಾ, ತುಂಬಾ ಸಂತೋಷ. ಹಳ್ಳಿಯ ಹೆಸರು ಉಳಿಯೋದು ಅದರಿಂದಾನೇ, ಒಬ್ಬರು ಸೋಷಲಿಸ್ಟ್ ಪಾರ್ಟಿಯ ಲೀಡರು, ಇನ್ನೊಬ್ಬರು ಕಾಂಗ್ರೆಸ್ಸಿನ ಲೀಡರು, ಮತ್ತೊಬ್ಬರು ಕಪ್ಪು ಟೋಪಿಯವರು, ಆದರೆ ಹಳ್ಳಿಯ ಎಲ್ಲಾ ಯುವಕರಿಗೂ ನಾನೊಬ್ಬನೇ ಮಾಲೀಕ. ಹಳ್ಳಿಯಲ್ಲಿ ಏನಾದರೂ ಹೆಚ್ಚು ಕಡಮೆ ನಡೆದರೆ ಬೆನ್ನಿನ ಚರ್ಮ ಸುಲಿದುಬಿಡ್ತೀನಿ....ಖೇಲಾವನ್, ಜೋಯಿಸರೇ, ನೀವೇ ಹೇಳಿ ನನ್ನ ಚಿಕ್ಕಪ್ಪ ಮಾವ, ಅಣ್ಣಾ, ಅನ್ನುವ ಹುಡುಗರಿಗೆ, ಕಿವಿ ಹಿಂಡಿ ಬುದ್ಧಿ ಕಲಿಸಿದರೆ, ಒಂದೆರಡು ಕಠಿಣವಾದ ಮಾತುಗಳನ್ನು ಆಡಿದರೆ, ನನ್ನ ಮೇಲೆ ಯಾರಾದರೂ ದೋಷ ಹೊರಿಸ್ತಾರೇನು?"

"ಇಲ್ಲ, ಇಲ್ಲ, ಖಂಡಿತ ಇಲ್ಲ."

"ನಾನೇನೂ ಹಳ್ಳಿಗೆ ಹೊರತಾದವನಲ್ಲ. ಆದರೆ ಒಂದು ವಿಚಾರ ಮೊದಲೇ ಹೇಳಿಬಿಟ್ಟಿರ್ತೀನಿ. ಈಗ ನೀವು ಹೇಳಿದ ಹಾಗೆ ನಾವು ಮಾಡ್ತೀವಿ. ಆದರೆ ಆಮೇಲೆ ನಮ್ಮ ಕುತ್ತಿಗೇಗೆ ಯಾವುದೂ ಚೂರಿ ಇರಿಯೋಲ್ಲ ತಾನೇ?"

—ಕಾಳೀಚರಣ ಕೇಳಿದ.

“ಅದರ ಜವಾಬ್ದಾರಿ ನನಗಿರಲಿ. ನಾನು ಆಗಲೇ ಹೇಳಿದೆನಲ್ಲಾ, ಎಲ್ಲಾ ಆಟವೂ ನನ್ನ ಕೈಯಲ್ಲಿದೆ.”

“ಹಾಗಾದರೆ ಸರಿ, ನಾನೇನೂ ಹಳ್ಳಿಗೆ ಹೊರತಾದವನಲ್ಲವಲ್ಲ.”

‘ಆದರೆ ಎಲ್ಲರೂ ಮೊದಲೇ ಕೇಳಿಬಿಡಿ. ಹಳ್ಳಿಯ ಹೊರಗಿನ ಮನುಷ್ಯರ್ಯಾರಾದರೂ ನಮ್ಮ ಮೇಲೆ ಆಕ್ರಮಣ ಮಾಡಿದರೆ, ನಾವೆಲ್ಲಾ ಒಟ್ಟಿಗೆ ಸೇರಿ ಅವರನ್ನು ಇದಿರಿಸಬೇಕು. ಹೊರಗಿನ ಮನುಷ್ಯರು, ಈ ಹಳ್ಳಿಯ ಜಮೀನಿನ ಮೇಲೆ ಆಕ್ರಮಣ ಮಾಡಿದರೆ, ಎಲ್ಲರೂ ಒಬ್ಬರಿಗೊಬ್ಬರು ಸಹಾಯ ಮಾಡಬೇಕು ....ಹಳ್ಳಿಯ ಜಮೀನು ಹಳ್ಳಿಯಲ್ಲೇ ಇರಬೇಕು. ಹೊರಗಿನವರು ಅದನ್ನು ಕಿತ್ತುಕೊಳ್ಳಬಾರದು, ತಿಳಿಯಿತೇನು?”

“ಸರಿ, ಸರಿ. ತುಂಬಾ ಕತ್ತಲಾಯಿತು. ಆಕಾಶದಲ್ಲಿ ಮೋಡ ತುಂಬಿಕೊಂಡಿದೆ. ಮಳೆ ಬರುತ್ತೆ....ಇಂದ್ರದೇವನ ದಯೆಯಿಂದ ಮಳೆ ಬೀಳಲಿ.”

ಪ್ರತಿವರ್ಷ ಮಳೆಗಾಲದಲ್ಲಿ ಇದೇ ಪುನರಾವರ್ತನೆಯಾಗುತ್ತದೆ. ಭಗವಂತನ ವಶದಲ್ಲಿರುವ ವಿಚಾರವನ್ನು ಮನುಷ್ಯನೇನು ಬಲ್ಲ. ಇಂದ್ರನ ಪ್ರಾರ್ಥನೆ ನಡೆಯುತ್ತದೆ—ಮಳೆ ಸುರಿಸು: ಇಂದ್ರದೇವ....ಆಕಾಶದ ಯಾವುದಾದರೊಂದು ಮೂಲೆಯಲ್ಲಿ ಕಪ್ಪು ಮೋಡಗಳು ಸೇರಿದರೆ, ಮಿಂಚಿದರೆ ಸಾಕು, ‘ಮಳೆ’ ಮಳೆ ಎನ್ನುವ ಕೂಗು ಮನೆ ಮನೆಯಲ್ಲೂ ಕೇಳಿಬರುತ್ತದೆ. ಜಮೀನು ಇರುವವರು, ಇಲ್ಲದವರು ಎಲ್ಲರ ರೊಟ್ಟಿಯ ಪ್ರಶ್ನೆ ಇದೆ. ಒಂದು ವೇಳೆ ಒಂದೇ ಸಮನೆ ಐದು ದಿನಗಳವರೆಗೆ ಬಿರುಸಾದ ಮಳೆ ಬಿದ್ದರೆ ಗದ್ದೆಗಳ ಉತ್ಪನ್ನವೆಲ್ಲಾ ಹಾಳು.... ಸ್ವಲ್ಪ ಒಂದು ವಾರ ತಡೆಯಬಾರದೆ?

ಇಂದ್ರದೇವನ ಇಚ್ಛೆ ಅವನ ಮನಸ್ಸು ಸರಿಯಾಗಿದ್ದರೆ ಜನರ ಪ್ರಾರ್ಥನೆಯನ್ನು ಮನ್ನಿಸಿ ಒಂದುವಾರ ಮಳೆಯನ್ನು ತಡೆದರೂ ತಡೆಯುತ್ತಾನೆ. ಸರಿಯಾದ ಸಮಯದಲ್ಲಿ ಮಳೆ ಬೀಳುತ್ತದೆ, ಬಿಸಿಲು ಕಾಯುತ್ತದೆ. ಇಡುವುದಕ್ಕೆ ಜಾಗ ಸಾಲದಷ್ಟು ಬತ್ತ ಬೆಳೆಯುತ್ತದೆ....ತಹಸೀಲ್ದಾರ ವಿಶ್ವನಾಥಪ್ರಸಾದರ ಹತ್ತಿರ ಪಂಚಾಂಗ ಇದೆ. ಪಂಚಾಂಗದಲ್ಲಿ ಲೆಕ್ಕ ಹಾಕಿನೋಡಿ ಈ ಪಕ್ಷದಲ್ಲಿ ಮಳೆ ಆಗುತ್ತದೆಯೋ ಇಲ್ಲವೋ ಹೇಳಿಬಿಡುತ್ತಾರೆ....ನಕ್ಷತ್ರಗಳ ಗಣನೆಯಲ್ಲಿ ಸ್ತ್ರೀ-ಸ್ತ್ರೀಯ ಸಂಯೋಗವಾದರೆ ಶೂನ್ಯ, ಪುರುಷ-ಪುರುಷನ ಸಂಯೋಗವಾದರೆ ಶೂನ್ಯ, ಒಂದು ತೊಟ್ಟು ಮಳೆಯೂ ಬೀಳುವುದಿಲ್ಲ. ಸುಮ್ಮನೆ ಕೂಗಿಕೊಂಡರೆ ಏನು ಪ್ರಯೋಜನ?

ತತಮಾ ಪಂಗಡ, ಪಾಸವಾನ ಪಂಗಡ, ಧನುಕ—ಕುರ್ಮಿ ಪಂಗಡ ಮತ್ತು ಕೋಯರೀ ಪಂಗಡದ ಹೆಂಗಸರು ಪ್ರತಿವರ್ಷ ಈ ಸಮಯದಲ್ಲಿ ಇಂದ್ರ ದೇವನನ್ನು ಸಂತೋಷಪಡಿಸಲು, ಮೋಡಗಳನ್ನು ಒಲಿಸಲು 'ಜಾಟ-ಜಟ್ಟಿನ್' ಆಡುತ್ತಾರೆ.

ಇಂದೂ 'ಜಾಟ-ಜಟ್ಟಿನ್'ನ ಸಿದ್ಧತೆ ನಡೆದಿದೆ. ನಿನ್ನೆ ಪಿಛಯಾರೀ ಪಂಗಡದ ಹೆಂಗಸರು ನಡೆಸಿದ್ದರು. ಮೋಡದ ತುಣಕೊಂದು ಚಂದ್ರನನ್ನು ಅಡ್ಡಗಟ್ಟಿತ್ತು. ಇಂದು ಪೂರ್ಣಿಮೆ, ನಾಳೆಯೂ ಮಳೆ ಬೀಳದಿದ್ದರೆ ಇಡೀ ಪಕ್ಷ ಒಣ ಹವೆಯೇ ಇರುತ್ತದೆ. . . . ತತಮಾ ಪಂಗಡದ ಹೆಂಗಸರು ಬಾಬೂ ಪಂಗಡದ ಹೆಂಗಸರಿಗೆ ಆಮಂತ್ರಣ ನೀಡಿದ್ದಾರೆ: "ಎಲ್ಲರೂ ಒಟ್ಟಿಗೆ ಸೇರಿ 'ಜಾಟ-ಜಟ್ಟಿನ್' ಆಡೋಣ. ಖಂಡಿತ ಮಳೆ ಬರುತ್ತದೆ."

ಗುವರ್ ಪಂಗಡ ಮತ್ತು ಕಾಯಸ್ಥ ಪಂಗಡದ ಮಧ್ಯೆ ಹದಿನೈದು ಹಗ್ಗ ಮೈದಾನ ಖಾಲಿಯಿದೆ. ಹೆಂಗಸರೆಲ್ಲಾ ಅಲ್ಲಿಯೇ ಸೇರಿದ್ದಾರೆ.

. . . . ಜಾಟನ ಹತ್ತಿರ ಸಾವಿರಾರು ಎಮ್ಮೆಗಳಿವೆ. ಅವುಗಳನ್ನು ಮೇಯಿಸಲು ಅವನು ಕೋಸೀ ನದಿಯ ದಡಕ್ಕೆ ಹೋಗುತ್ತಾನೆ. 'ಜಟ್ಟಿನ್,' ಮನೆಯಲ್ಲೇ ಇರುತ್ತಾಳೆ, ಹಾಲು, ತುಪ್ಪ, ಮೊಸರುಗಳನ್ನು ಮಾರಿ ಲೆಕ್ಕವಿಡುವುದು ಅವಳ ಕೆಲಸ. . . . ಅತ್ತೆ ಅಥವಾ ಗಂಡನೊಡನೆ ಜಗಳವಾಡಿಕೊಂಡು, ಸಿಟ್ಟು ಮಾಡಿಕೊಂಡು ಅವಳೀಗ ತವರುಮನೆಗೆ ಹೊರಟುಹೋಗಿದ್ದಾಳೆ. ಜಾಟ ಅವನನ್ನು ಹುಡುಕಿಕೊಂಡು ಹೊರಟಿದ್ದಾನೆ. ಜಟ್ಟಿನ್ ತುಂಬಾ ಸುಂದರಿ, ಎಲ್ಲೆಲ್ಲೂ ಅವಳ ಸೌಂದರ್ಯದ ಚರ್ಚೆಯೇ ನಡೆದಿದೆ.

ಸುನರೀ ಹಮರ ಜಟನಿಯಾಂ ಹೋ ಬಾಬೂಜೀ,
ಪಾತರೀ ಬಾಂಸ್ ಕೇ ಥೌಂಕಿನಿಯಾ ಹೋ ಬಾಬೂಜೀ,
ಗೋರೀ ಹಮಾರ ಜಟನಿಯಾಂ ಹೋ ಬಾಬು ಜೀ,
ಚಾನನೀ ರಾತ್ ಕೆ ಇಂಜೋರಿಯಾ ಹೋ ಬಾಬೂಜೀ
ನಾನೀ- ನಾನೀ ದಂತವಾ, ಪಾತಲ ಠೋರವಾ . . .
ಛಟಕೆ ಜೈಸನ್ ಬಿಜಲಿಯಾ . . . .

(ಹೇ ಬಾಬೂಜೀ ನನ್ನ ಹೆಂಡತಿ ಜಾಟನೀ ಬೆತ್ತದ ಚೂಪಾದ ಕೊನೆಯಂತೆ ಚುರುಕಾದವಳು. ಬಳ್ಳಿಯ ಮೈಯವಳು, ಬೆಳದಿಂಗಳ ರಾತ್ರಿಯ ಪುಷ್ಪ. ಸಣ್ಣ ಸಣ್ಣ ಹಲ್ಲುಳ್ಳವಳು, ಸುಂದರಿ, ಮಿಂಚಿನ ಹೊಳಪುಳ್ಳವಳು. . . .)

ಆದ್ದರಿಂದ ಜಾಟರ ಹಳ್ಳಿಯ ಪ್ರತಿ ನಾಯಕರ, ಯಜಮಾನರ ಮೇಲೆ ಸಂದೇಹ.....ಜಟ್ಟನ್ ತವರು ಮನೆಗೆ ಹೋಗಲಾರಳು. ಖಂಡಿತ ಯಾರೋ ಅವಳನ್ನು ತಮ್ಮ ಮನೆಯಲ್ಲೇ ಅಡಗಿಸಿಟ್ಟಿರಬಹುದು....ರಸ್ತೆಯಲ್ಲಿ ಎಷ್ಟು ಹಳ್ಳಿಗಳಿವೆ, ಎಷ್ಟು ನದಿಗಳಿವೆ, ಎಷ್ಟು ಘಟ್ಟಗಳಿವೆ, ಎಷ್ಟು ಕೊಳಗಳಿವೆ ಎಲ್ಲ ಕಡೆಯೂ ಹುಡುಕುತ್ತಾನೆ. ರಸ್ತೆಯಲ್ಲಿ ಸಿಕ್ಕುವ ಪ್ರತಿ ಹಳ್ಳಿಯ ಯಜಮಾನ ಮತ್ತು ನಾಯಕನ ಮನೆಗೆ ಹೋಗುತ್ತಾನೆ.

ನಾಯಕಜೀ ಹೋ ನಾಯಕ ಹೋ,
ಖೋಲ್ ದೇಹೋ ಕಿವಡಿಯಾ ಹೋ ನಾಯಕಜೀ,
ಢೂಂಢೆ ದೇಹೋ ಜಟನಿಯಾಂ ಹೋ ನಾಯಕಜೀ....

(ಹೇ ನಾಯಕರೇ ಬಾಗಿಲು ತೆರೆಯಿರಿ. ನನ್ನ ಜಾಟನಿಯನ್ನು ಹುಡುಕಿ ಕೊಳ್ಳಲು ಅವಕಾಶ ಕೊಡಿ.)

ರಾಮಪಿಯರಿಯಾ ಜಟ್ಟನ್, ಕೋಯರೀ ಪಂಗಡದ ಮುಖನೀ ಜಾಟ್ ಆಗಿದ್ದಾರೆ. ಮುಖನೀ ನಿಜವಾದ ಗಂಡಸಿನ ಹಾಗೇ ಕಾಣಿಸುತ್ತಿದ್ದಳು.

'ಜಾಟ್-ಜಟ್ಟನ್' ಅಭಿನಯದ ಜೊತೆಗೆ ಸಾಮಾಜಿಕ ವಿಷಯುಗಳನ್ನೊಳ ಗೊಂಡ ಬೇರೆ ಅಭಿನಯಗಳೂ, ವ್ಯಂಗ್ಯ–ನಾಟ್ಯಗಳೂ ಮಧ್ಯೆ ಮಧ್ಯೆ ನಡೆಯು ತ್ತವೆ....ಫುಲಿಯಾ ಡಾಕ್ಟರ್ ಆಗಿದ್ದಾಳೆ. ಕಮಲದ ಹೂವುಗಳ ದಂಟುಗಳ ನ್ನೆಲ್ಲಾ ಹೇಗೋ ಜೋಡಿಸಿಕೊಂಡು ಕೊರಳಿಗೆ ಹಾಕಿಕೊಂಡಿದ್ದಾಳೆ. ಅದೇ ಸ್ಟೆತಾಸ್ಕೋಪ್. ಸನಿಚ್ಚರನಿಂದ ಹೊಸ ಪೈಜಾಮಾ ತೆಗೆದುಕೊಂಡು ಬಂದಿದ್ದಾಳೆ. ಬಿಹುಲಾ ನರ್ತಕರಿಂದ ಸಾಹೇಬರ ಟೋಪಿಯನ್ನು ತಂದಿದ್ದಾಳೆ.

"ಏ ಮ್ಯಾನ್, ಈ ಕಡೆ ಬಾ, ಏನಾಗ್ತಿದೆ ನಿನಗೆ?"

"ಹುಜೂರ್ ಸ್ವಲ್ಪ ತಲೆ ನೋಯ್ತಿದೆ. ಸ್ವಲ್ಪ ಕಣ್ಣೂ ನೋಯ್ತಿದೆ. ಸ್ವಲ್ಪ ಕಿವಿಯಲ್ಲೂ ನೋವಿದೆ. ಜೊತೆಗೆ ಹೃದಯ, ಧಡ-ಧಡ ಬಡಿದುಕೊಳ್ಳು ತ್ತಿದೆ. ಚಳಿಯೂ ಆಗುತ್ತೆ, ಶೆಖೆಯೂ ಆಗುತ್ತೆ. ಹಸಿವೆ ಆಗೋಲ್ಲ. ಹಸಿವೆ ಆದಾಗ ಊಟ ಸಿಗೋದಿಲ್ಲ...."

ರೋಗಿಯಾಗಿದವಳು ಧಾನುಕ ಪಂಗಡದ ಸುರತೀ. ಚೆನ್ನಾಗಿ ಮಾತು ಜೋಡಿಸುತ್ತಾಳೆ.

"ಇಂಥ ರೋಗ ಎಂದೂ ಕಂಡೇ ಇರಲಿಲ್ಲವಲ್ಲ. ಎಲ್ಲಿ ನಿನ್ನ ನಾಡಿ ನೋಡೋಣ. (ನೋಡಿ) ಊಹೂಂ....ನೀನು ಬದುಕೋಲ್ಲ. ನಿನಗೆ ಇಂಜಕ್ಷನ್

ಬಿಡುತ್ತದೆ—ನಾಚಿಕೆಯಿಂದಲೋ, ಭಯದಿಂದಲೋ....ಆದರೆ ವಿರಹ ಬಾಣ ದಿಂದ ಜರ್ಝರಿತವಾಗಿದ್ದ ಲಕ್ಷ್ಮಿಯ ಮನಸ್ಸು ಅಳುತ್ತಾ ಹೇಳುತ್ತದೆ:

ವಿರಹ ಬಾಣ ಜಿಹಿ ಲಾಗಿಯ
ಓಷಧ ಲಗ್ಯೆ ನ ತಾಹಿ
ಸುಸುಕಿ ಸುಸುಕಿ ಮರಿ ಮರಿ ಜಿವೈ
ಉಠೆ ಕರಾಹಿ ಕರಾಹಿ

(ವಿರಹ ಬಾಣ ತಗುಲಿರುವವರಿಗೆ ಯಾವ ಔಷಧದಿಂದಲೂ ಪ್ರಯೋಜನ ವಿಲ್ಲ. ನರಳುತ್ತಲೇ ಅವರು ಜೀವಿಸುತ್ತಾರೆ, ನರಳುತ್ತಲೇ ಮೇಲೇಳುತ್ತಾಳೆ.) ಬಾಲದೇವನಿಗೆ ಇದೆಲ್ಲಾ ಏನು ಗೊತ್ತು ?....ಈಗ ಲಕ್ಷ್ಮಿ ಏನು ಮಾಡಬೇಕು.

....ಟರ್‍ರ್—ಮೇಂಕ್, ಮೇಂಕ್ ಝೀ....ಈ ಟಂಕ್ ಟಂಕ್—ಝೀರಿಂ....

ಇಲ್ಲ, ಲಕ್ಷ್ಮಿ ಇನ್ನು ಸಹಿಸಲಾರಳು. ಅವಳು ಬಾಲದೇವನ ಹತ್ತಿರ ಹೋಗಲೇಬೇಕು. ಬಾಲದೇವನ ಹತ್ತಿರ ಸೊಳ್ಳೆಪರದೆ ಇಲ್ಲ, ಸೊಳ್ಳೆಗಳು ಕಚ್ಚು ತ್ತಿರಬಹುದು....ಇಲ್ಲ, ಇಲ್ಲ ಅವಳು ಹೋಗುವುದಿಲ್ಲ. ಅವಳೇಕೆ ಹೋಗ ಬೇಕು?....

ಪಾನೀ ಪ್ಯಾವತ ಕ್ಯಾ ಫಿರೋ ಘರ್ ಘರ್
ಸಾಯರ ಬಾರಿ ಕೃಪಾವಂತ ಜೋ ಹೋಯಿಗಾ,
ಪೀವೆಗಾ ಝುಖಿ ಮಾರೀ....

(ನೀರು ಕುಡಿಸುತ್ತಾ ಯಾಕೆ ಓಡಾಡುತ್ತೀ ? ಬಾಯಾರಿಕೆಯಾದವನು ತಾನೇ ತಕ್ಷಣ ನೀರು ಕುಡಿಯುತ್ತಾನೆ.)

ರಾಮದಾಸ—ಮಹಂತ ರಾಮದಾಸ. ಈಗ ಲಕ್ಷ್ಮಿಯೊಡನೆ ಹೆಚ್ಚು ಮಾತನಾಡುವುದೇ ಇಲ್ಲ. ಅವನು ಹೆಸರಿಗೆ ಮಹಂತ. ಅವನಿಗೆ ಏನೂ ಗೊತ್ತಿಲ್ಲ. ಏನೂ ಅರ್ಥವಾಗುವುದಿಲ್ಲ, ಏನೂ ತಿಳಿದಿಲ್ಲ. ಮಠಕ್ಕೆ ಎಷ್ಟು ಉತ್ಪಾದನೆ ಇದೆ, ಎಷ್ಟು ಖರ್ಚಿದೆ ಅವನಿಗೇನು ಗೊತ್ತು? ಇಪ್ಪತ್ತಕ್ಕಿಂತ ಹೆಚ್ಚಾಗಿ ಎಣಿಸುವುದಕ್ಕೂ ಬರುವುದಿಲ್ಲ. ಇಪ್ಪತ್ತರವರೆಗೆ ಮಾತ್ರ ಲೆಕ್ಕ ಹೇಳಬಲ್ಲ. ಲಕ್ಷ್ಮಿ ಒಂದು ದಿನ ಮಠ ಬಿಟ್ಟು ಹೋದರೂ, ಆ ಒಂದು ದಿನವೂ ತಾನು ಮಠದಲ್ಲಿ ಇರುವುದು ಸಾಧ್ಯ ವಿಲ್ಲ ಎನ್ನುವ ವಿಚಾರ ರಾಮದಾಸನಿಗೂ ಗೊತ್ತಿತ್ತು. ಲಕ್ಷ್ಮಿಗಾದರೆ ಮಾಯ

ಮಂತ್ರ ಗೊತ್ತು. ಕಾಗದ ಪತ್ರ, ಗದ್ದೆ ಹೊಲ, ಅಧಿಕಾರಿ-ಮಹಾಜನ, ಎಲ್ಲರ, ಎಲ್ಲದರ ಪರಿಚಯವೂ ಅವಳಿಗಿದೆ. ಆರಾಮವಾಗಿ ಕುಳಿತು ಹಾಲಿನ ಕೆನೆ ತಿನ್ನುತ್ತಿರಬೇಕಾದರೆ, ಲಕ್ಷ್ಮಿಗೆ ಸ್ವಲ್ಪವೂ ಅಸಮಾಧಾನವಾಗದಂತೆ ನೋಡಿ ಕೊಳ್ಳಬೇಕೆಂಬುದೂ ರಾಮದಾಸನಿಗೆ ಅರ್ಥವಾಗಿತ್ತು····ದೇಹದ ತಾಪ ಆಗಾಗ ಮನಸ್ಸನ್ನು ಚಂಚಲಗೊಳಿಸುತ್ತಿರುತ್ತದೆ. ಆದರೆ ಏನು ಮಾಡುವುದು? ಬೇರೆ ಒಬ್ಬ ದಾಸಿಯನ್ನಿಟ್ಟುಕೊಳ್ಳುವುದಕ್ಕಾದರೂ ಲಕ್ಷ್ಮಿ ಒಪ್ಪಿಗೆ ಕೊಟ್ಟರೆ····?

ಗಾಡಗಾಡ ಗಾಡ್····ಗಡ್ ಗಡ್····ಗುಡುಗು ಗುಡುಗಿತು. ಮಿಂಚು ಮಿಂಚಿತು, ಬಿರುಸಾದ ಮಳೆ ಸುರಿಯಲಾರಂಭವಾಯಿತು.

ಹೂಂ....ಇನ್ನು ನಾಳೆಯಿಂದ ಬೀಜ ಬಿತ್ತಬೇಕು····ಜೈ ಇಂದ್ರದೇವ ಮಳೆ ಸುರಿಸು····ಆದರೆ ಬಿತ್ತುವುದಕ್ಕೆ ಬೀಜ ಎಲ್ಲಿಂದ ಬರುತ್ತದೆ? ಈವತ್ತೇನೋ ಪಂಚಾಯತಿಯಲ್ಲಿ ಎಲ್ಲಾ ದೊಡ್ಡ ಮನುಷ್ಯರೂ ದೊಡ್ಡ ದೊಡ್ಡ ಮಾತುಗಳ ನ್ನಾಡಿದರು. ನಾಳೆ ನೋಡಬೇಕು....ನಮ್ಮ ಖರ್ಚಿಗೆ ಬೀಜವಿಲ್ಲಾ ಎನ್ನು ತ್ತಾರೋ ಅಥವಾ ಮೊದಲು ನಮ್ಮ ಗದ್ದೆ ಆರಂಭಿಸಿ ಎನ್ನುತ್ತಾರೋ!

ಗಡಗಡ ಗಡ ಗಡ್····ಗುಡುಮ್

"ಭತ್ತದ ಬೀಜವನ್ನು ಮಾಲೀಕರೇ ಕೊಡಬೇಕು. ಯಾವಾಗಲೂ ಅವರೇ ಕೊಡುವುದು, ಈ ಬಾರಿ ಯಾಕೆ ಕೊಡುವುದಿಲ್ಲ?"—ಆಫೀಸಿನಲ್ಲಿ ಮಲಗಿದ್ದ ಕಾಳೀಚರಣ, ನಿದ್ರೆ ಮಾಡಿದ್ದ ಅರೆ ನಿದ್ರೆಯಲ್ಲಿದ್ದ ಜನರಿಗೆ ಹೇಳುತ್ತಿದ್ದ: "ಮಿಕ್ಕ ಸಮಯದಲ್ಲೆಲ್ಲಾ ಎರಡರಷ್ಟು ತೆಗೆದುಕೊಳ್ಳುತ್ತಿದ್ದರು, ಉತ್ತನೆಯ ಬೀಜಕ್ಕೆ ಎರಡರಷ್ಟು ಈಗ ಅದೆಲ್ಲಾ ನಡೆಯೋದಿಲ್ಲ. ತಹಸೀಲ್ದಾರ ಮಾವ ಆ ರೀತಿ ವ್ಯವಸ್ಥೆ ಮಾಡಿದ್ದರೆ ಮತ್ತೆ ಸಂಘರ್ಷ"

ಮಿಂಚು ಗುಡುಗಿನೊಡನೆ ಮಳೆ ಸುರಿಯುತ್ತಿದೆ.

ಮಂಗಳ ಈಗ ಕಾಳೀಚರಣನ ಮನೆಯಲ್ಲೇ ಇದ್ದಾಳೆ. ಕಾಳೀಚರಣನ ತಾಯಿಗೆ ಕಣ್ಣು ಕಾಣಿಸುವುದಿಲ್ಲ. ಮಧ್ಯ ವಯಸ್ಸಿನ ಒಬ್ಬ ವಿಧವೆ ಸೋದರತ್ತೆಯೂ ಅಲ್ಲಿಯೇ ಇದ್ದಾಳೆ. ಮಂಗಳೆಯ ಮಧುರವಾದ ಮಾತು ಕೇಳಿದರೆ ತಾಯಿಯ ಕಣ್ಣುಗಳು ಸಜಲವಾಗುತ್ತವೆ. ಅತ್ತೆಯ ಕಣ್ಣುಗಳು ಕೆಂಪ ಗಾಗುತ್ತವೆ. ಮಿಂಚಿದಾಗೆಲ್ಲಾ ಪಶ್ಚಿಮದ ಮನೆಯ ಕೈಸಾಲೆಯಲ್ಲಿ (ವರಾಂಡದಲ್ಲಿ) ಮಲಗಿದ್ದ ಅತ್ತೆ ಪೂರ್ವದ ಮನೆಯ ಕಡೆ ನೋಡುತ್ತಿದ್ದಳು····ಅದೇನು? ಮನುಷ್ಯನ ನೆರಳೇ? ಇಲ್ಲ····ಬೊಂಬು. ಪೂರ್ವದ ಮನೆಯಲ್ಲಿ ಮಲಗಿರುವ

ಮಂಗಳೆಗೂ ನಿದ್ದೆ ಬಂದಿಲ್ಲ. ಚಿಕ್ಕಂದಿನಿಂದಲೂ ಅವಳಿಗೆ ಗುಡುಗು, ಮಿಂಚು, ಬಿರುಗಾಳಿಗಳೆಂದರೆ ಭಯ. ಇಲ್ಲಿನ ಮಳೆಯಂತೂ···· ! ಮತ್ತೆ ಮಿಂಚಿತು: ····" ಯಾರು:" ಮಂಗಳ ಪಿಸುದನಿಯಲ್ಲಿ ಕೇಳಿದಳು: " ಯಾರು?"

ಒದ್ದೆಯಾದ ಕಾಲುಗಳ ಸಪ್ಪಳ ಮಿಂಚಿನ ಬೆಳಕಿನಲ್ಲಿ ಸ್ಪಷ್ಟವಾಗಿ ಕಾಣಿಸಿತು. ಸೋನಾಯಿ ಯಾದವ ತನ್ನ ಗುಡಿಸಿಲಿನಲ್ಲಿ 'ಬಾರಹ ಮಾಸಾ' (ಋತುವರ್ಣನೆ) ಹಾಡುಗಳನ್ನು ಹಾಡುತ್ತಿದ್ದ.

ಎಹಿ ಪ್ರೀತಿ ಕಾರನ ಸೇತ ಬಾಂಧಲ್<br>
ಸಿಯಾ ಉವೇ ಸ ಸಿರೀ ರಾಮ ಹೇ<br>
ಸಾವಾನ ಹೈ ಸಖೀ, ಸಬದ ಸುಹಾವನ್<br>
ರಿಮ ಝಿಮಿ ಬರಸತ ಮೇಘ ಹೇ....

(ಈ ಪ್ರೀತಿಯಿಂದಾಗಿಯೇ ಶ್ರೀರಾಮ ಸೀತೆಗಾಗಿ ಸೇತುವೆ ಕಟ್ಟಿಸಿದ. ಹಿತಕರವಾದ ಶಬ್ದ ಕೇಳಿಸುತ್ತಿದೆ. ಇನ್ನೇನು ಝುರಝುರನೆ ಮಳೆ ಸುರಿಯುತ್ತದೆ.)

'ರಿಮಝಿಮ್' ಎಂದು ಮಳೆ ಸುರಿಯುತ್ತಿದೆ....ಕಮಲೆಗೆ ಡಾಕ್ಟರ್ ನೆನಪು ಬರುತ್ತಿದೆ. ಕಿಟಕಿಗಳೇನೂ ತೆರೆದಿಲ್ಲ ತಾನೇ? ಡಾಕ್ಟರ್ ಮಲಗುವುದು ಕಿಟಕಿಯ ಹತ್ತಿರವೇ. ಹಾಸಿಗೆಯೆಲ್ಲಾ ಒದ್ದೆಯಾಯಿತೋ ಏನೋ. ನಿನ್ನೆಯಿಂದ ಜ್ವರವಿದೆ....ಶೀತವಾಗಿದೆ....ಡಾಕ್ಟರಿಗೆ ಏನಾಗಿದೆಯೋ ಏನೋ:... ಚಿಕ್ಕಮ್ಮ ನಿಜವಾಗಿಯೂ ಡಾಕಿಣಿ ಅಲ್ಲಾ ತಾನೇ? ಡಾಕ್ಟರಿಗೆ ಮೋಡವೆಂದರೆ ತುಂಬಾ ಇಷ್ಟ. "ಮಳೆಯಲ್ಲಿ ನೆನೆದು ಸ್ನಾನ ಮಾಡಬೇಕೆಂದು ನನ್ನ ಇಷ್ಟ" ಎಂದು ನಿನ್ನೆ ಹೇಳುತ್ತಿದ್ದರು.

ಥರಾರ್, ಥರಾರ್····ಗುಡುಗು ಭೂಮಿಗಿಳಿದು ಓಡುತ್ತಿರುವಂತೆ ಭಾಸವಾಗುತ್ತಿದೆ....ಥಹರ್....ಥಹರ್....ಥಹರ್....

ಬಿರಸಾ ಮಾಂಜಿ ಇನ್ನು ಮಲಗಿರಲಾರ····ಮೊನ್ನೆ ಹಳ್ಳಿಯವರೆಲ್ಲಾ ಮೀಟಿಂಗ್ ಮಾಡಿದರು. " ಹೊರಗಡೆ ಮನುಷ್ಯರ್‍ಯಾರಾದರೂ ನಮ್ಮ ಮೇಲೆ ಆಕ್ರಮಣ ಮಾಡಿದರೆ, ಎಲ್ಲರೂ ಒಟ್ಟಾಗಿ ಎದಿರಿಸಬೇಕು, ಎಂದು ಕಾಳೀಚರಣನೂ ಇದ್ದ. ಬಾಲದೇವನೂ ಇದ್ದ....ಸಂಥಾಲರೂ ಹೊರಗಡೆಯ ಜನ.

ತಹಸೀಲ್ದಾರ ಹರಗೌರಿಯ ಸಿಪಾಯಿ ಜಮೀನನ್ನೆಲ್ಲಾ ಪರೀಕ್ಷಿಸುತ್ತಿದ್ದ: ಭಾದ್ರಪದ ಮಾಸದ ಭತ್ತ ಪಕ್ವವಾಗಿದೆ, ಕೊಯಿಲು ಮಾಡುವುದೆ! ಯಾವ

ಗದ್ದೆಯಲ್ಲಿ ಯಾವ ಭತ್ತ ನೆಡುವುದು....ಹಾಗಾದರೆ ನಿಜವಾಗಲೂ ತಹಸೀಲ್ದಾರರ ಸಂಥಾಲರ ಭೂಮಿಯನ್ನು ಕಿತ್ತುಕೊಳ್ಳುತ್ತಾರೇನು? ಜಮೀನ್ದಾರೀ ಪದ್ಧತಿ ನಾಶವಾಯಿತು, ಆದರೆ ತಹಸೀಲ್ದಾರರು ಭೂಮಿಯಿಂದ ಬಿಡಿಸಬಹುದು ....ಏನೋ ಒಂದೂ ಅರ್ಥವೇ ಆಗುವುದಿಲ್ಲ....ಏನಾಗುತ್ತದೋ?.... ನಾಳೆಯೇ ನೋಡಬೇಕು.

ಭೂಮಿಗೆ ನೇಗಿಲು ತೆಗೆದುಕೊಂಡು ತಹಸೀಲ್ದಾರರು ಬರುತ್ತಾರೆ, ಭಾದ್ರ ಪದದ ಭತ್ತವನ್ನು ಕತ್ತರಿಸಲು ಬರುತ್ತಾರೆ. ಆಗ ನೋಡೋಣ. ಈಗಿನಿಂದ ಯಾಕೆ ಯೋಚಿಸಬೇಕು?....ಇನ್ನು ಅವನಿಗೆ ನಿದ್ದೆ ಬರುವುದಿಲ್ಲ.....ಮಲಗಿ ದ್ದಂತೆಯೇ ಥಕ್ಕೆಯ ಮೇಲೆ ಅವನ ಕೈ ಓಡುತ್ತದೆ—ರಿಂ ರಿಂ ತಾ ಧಿನ್ ತಾ

ಗುಡುಗುಡುಮ್—ಗುಡುಮ್—ಗುಡುಮ್
ಬಿಜಲಿಯಾಂ ಚಮಕತೀ ಹೈ

(ಗುಡುಗುಡು ಶಬ್ದಮಾಡುತ್ತಾ ಮಿಂಚು ಮಿಂಚುತ್ತಿದೆ.)

ನಾಳೆ ಉಳುವುದಕ್ಕೆ ಬಿಡುತ್ತಾರೋ ಇಲ್ಲವೋ....ಬಾಲದೇವನನ್ನು ಸೊಳ್ಳೆ ಗಳು ಯಾಕೆ ಕಚ್ಚಲಿಲ್ಲ? ಕಾಳೀಚರಣನ ಸೋದರತ್ತೆ ನಿದ್ದೆ ಯಾಕೆ ಮಾಡಲಿಲ್ಲ, ಡಾಕ್ಟರರ ರೂಮಿನ ಕಿಟಕಿ ಮುಚ್ಚಿದೆಯೋ ತೆರೆದಿವೆಯೋ ಈ ಎಲ್ಲ ಪ್ರಶ್ನೆಗಳ ಉತ್ತರ ನಾಳೆ ಸಿಗುತ್ತದೆ. ಆದರೆ ಈಗ ಬಾರಹ ಮಾಸ (12ನೇ ತಿಂಗಳು) ಹಾಡುತ್ತಿರುವ ಈ ಸೋನಾಯಿ ಯಾದವನಿಗೆ ಏನನ್ನೋಣ? ಇವನೊಬ್ಬ ವಿಚಿತ್ರ ಮನುಷ್ಯ 'ಕುಮರ ಬಿಜ್ಬೈಮಾನ' ಅಥವಾ 'ಲೋರಿಕ್' ಹಾಡುವುದನ್ನು ಬಿಟ್ಟು ಬಾರಹ ಮಾಸ ಹಾಡುತ್ತಿದ್ದಾನೆ. ಗದ್ದೆಯಲ್ಲಿ ಬೀಜ ನೆಡುವಾಗ ಹೇಳುವ ಹಾಡು 'ಬಾರಹ ಮಾಸ' ಭತ್ತದ ಗದ್ದೆಗಳಲ್ಲಿ ಪಾದದ ಛಪ್ ಛಪ್ ಶಬ್ದದ ಜೊತೆಗೆ, ಮೈಮರೆಯುವಷ್ಟು ಮಧುರವಾಗಿ ಈ ಗೀತೆ ಕೇಳಿಬರುತ್ತದೆ.....ಸಂಥಾಲ ಪಂಗಡದಲ್ಲಿ ಥಕ್ಕೆ ಯಾಕೆ ನುಡಿಸುತ್ತಿದ್ದಾರೆ? ಅದೂ ಕಾರಣವಿಲ್ಲದೆ? ಈ ಕಡೆ ಈ ಸೋನಾಯಿ ಬಾರಹಮಾಸ ಹಾಡುತ್ತಿದ್ದಾನೆ. ಹೇಗೋ ಹಾಡುತ್ತಿದ್ದಾನೆ. ನಾಲ್ಕು ಸಾಲುಗಳಾದರೂ ಕಿವಿಗೆ ಬೀಳಲಿ. ತಪ್ಪು ತಾಳ ಯಾಕೆ ನುಡಿಸುತ್ತಿದ್ದೀ? ಮಳೆಯ ಛಪ್ ಛಪ್ ಶಬ್ದ ಮತ್ತು ಗುಡಿಗಿನ ಗುಡುಗು ಶಬ್ದದಿಂದಾಗಿ, ದೇವಸ್ಥಾನದ ಶಬ್ದ ಸ್ಪಷ್ಟವಾಗಿ ಕೇಳುವುದಿಲ್ಲ. ಸೋನಾಯಿ ಮತ್ತೆ ಬಾರಹ ಮಾಸ ಪ್ರಾರಂಭಮಾಡಿದರೆ!

**ಅರೆ ಫಾಗುನ ಮಾಸ ರೆ ಗವನಾ ಮೋರಾ ಹೋಯಿಳ್**
**ಕಿ ಪಹಿರು ಬಸಂತೀ ರಂಗ ಹೇ,**
**ಬಾಟ ಚಲೈತ— ಅ ಕೋಠಿಯಾ ಸಂಭಾರಿ ಬಾನು**
**ಅಂಥೇರಾ ಹೈ ಪವನ ಝುರೆ ಹೇ....**

(ಫಾಲ್ಗುಣ ಮಾಸದಲ್ಲಿ ನನ್ನ ಮದುವೆಯಾಯ್ತು. ನಾನು ವಸಂತದ ವರ್ಣವನ್ನು ಹಾಕಿಕೊಂಡಿದ್ದೆ, ಸುತ್ತಲೂ ಕತ್ತಲೆ ಹರಡಿದೆ. ಗಾಳಿ ಬೀಸುತ್ತಿದೆ.)

ಡಾಕ್ಟರಿಗೆ ಈಗ ಹಳ್ಳಿಯ ಭಾಷೆ ಚೆನ್ನಾಗಿ ಅರ್ಥವಾಗುತ್ತದೆ. ಮಾತ ನಾಡಲೂ ಬಲ್ಲರು. ಗ್ರಾಮ್ಯ ಗೀತೆಗಳು ಕಿವಿಯ ಮೇಲೆ ಬಿದ್ದರೆ ಅವರು 'ಕೇಸ್—ಹಿಸ್ಟ್ರಿ' ಬರೆಯವುದನ್ನೂ ನಿಲ್ಲಿಸಿಬಿಡುತ್ತಾರೆ. ಗೀತೆಗಳ ಅರ್ಥ ಬಹುಶಃ ಅವರಿಗೇ ಹೆಚ್ಚು ಚೆನ್ನಾಗಿ ಅರ್ಥವಾಗುತ್ತದೆ. ಸೋನಾಯನಿಗಿಂತ ಚೆನ್ನಾಗಿ ....ಅಂಚರಾ ಹೇ ಪವನ ಝುರೆ ಹೈ....(ಗಾಳಿಗೆ ಸೆರಗು ಹಾರಿತು).... ಆಂಚಲ ಉಡಿ ಉಡಿಜಾಯ್....(ಸೆರಗು ಮೇಲೆ ಹಾರಿತು.)

....ಹಳ್ಳಿಯ ಮಿಕ್ಕವರು ರಾತ್ರಿ ನಿಂತು ನಿಂತು ಮಳೆ ಬಂತೆಂದು ಹೇಳಿದರೆ, ಇಡೀ ರಾತ್ರಿ ಮಳೆ ಬಂತೆಂದು ಡಾಕ್ಟರ್ ಹೇಳುತ್ತಾರೆ. ಒಂದು ಕ್ಷಣವೂ ತುಂತುರು ನಿಲ್ಲಲಿಲ್ಲ. ವಿಶಾಲ ಆಲದ ಮರದ ಕೆಳಗೆ ಟನ್ನಿನ ಮೆಲ್ಛಾವಣಿಯ ಮನೆಯಲ್ಲಿ ಮಳೆಯ ಹನಿಗಳು ಬೀಳುತ್ತಲೇ ಇದ್ದವು. ಕೋಠಿಯ ತೋಟದಲ್ಲೂ ಮರ ಮರ ಶಬ್ದ ನಿಲ್ಲಲೇ ಇಲ್ಲ....

ಬೆಳಗಾಯಿತು.....ಸೋನಾಯ ಗದ್ದೆಯಲ್ಲಿ ಹಾಡಲು ಪ್ರಾರಂಭಿಸಿದ. ಈಗ ಸೋನಾಯ ಒಂಟಿಯಾಗಿಲ್ಲ. ನೂರಾರು ಕಂಠಗಳಲ್ಲಿ ಒಬ್ಬೊಬ್ಬ ವಿರಹಿಣಿ ಮೈಥಿಲೀ ನಾರಿಯೇ ಹಾಡುತ್ತಿದ್ದಾಳೆ.

**ಆಮ್ ಜೆ ಕಟಹಲ್, ತೂತ್ ಜೆ ಬಡಹಲ್**
**ನೆಬುವಾ ಅಧಿಕ ಸೂರೇಜ್**
**ಮಾಸ ಆಸಾಢ್ ಹೋ ರಾಮಾ ಪಂಥ ಜನಿ ಚಢಹ,**
**ದೂರ್ ಹೀಸೆ ಗರಜತ ಮೇಘಾ ರೇ ಮೋರೋ**

(ಮಾವು, ಹಲಸು, ಸೇಬು ಮುಂತಾದ ಹಣ್ಣುಗಳು ಬಿಟ್ಟಿವೆ. ಆಷಾಢ ಮಾಸ ಬಂದಿದೆ. ದೂರದಲ್ಲಿ ಗುಡುಗಿನ ದನಿ ಕೇಳುತ್ತಿದೆ.)

ತೋಟದಲ್ಲಿ ಮಾವು, ಹಲಸು, ಹಿಪ್ಪಲಿ, ನೇರಳೆ, ಬಡಹಲಗಳಲ್ಲದೆ, ತೆಳುವಾದ ಸಿಪೆಯುಳ, ನಿಂಬೇಗಿಡದ ರೆಂಬೆಗಳೂ ತೂಗಾಡುತ್ತಿವೆ. ದೂರದಲ್ಲಿ ಮೇಘಗಳು

ಗರ್ಜಿಸಿ ಹೇಳುತ್ತಿವೆ: "ಓ ಪಥಿಕ ಮುಂದೆ ಹೋಗಬೇಡ....ಜನ ದೂರದಿಂದ ಜೊತೆಗಾರರನ್ನು ತಮ್ಮಲ್ಲಿಗೆ ಕರೆಯುತ್ತಿದ್ದಾರೆ. ವಿರಹದಿಂದ ಒದ್ದಾಡುತ್ತಿದ್ದಾರೆ, ಮೇಘ ಮಾಲಿಕೆಯ ಮೂಲ ಸಂದೇಶ ಕಳುಹಿಸುತ್ತಾರೆ. ಮನೆಗೆ ಬಂದಿರುವ ಪರದೇಶಿ, ಹೊರಗಡೆ ಹೋಗಲು ಬಯಸುತ್ತಿದ್ದಾನೇನು ? ಇಲ್ಲ, ಇಲ್ಲ.... ಮಿಂಚಿದಾಗಲೆಲ್ಲಾ ಬೆಚ್ಚಿಬೀಳುತ್ತಾನೆ. ಗುಡುಗಿದಾಗಲೆಲ್ಲಾ ಅವನ ಹೃದಯದ ಬಡಿತವೂ ಜೋರಾಗುತ್ತದೆ.

ಅರೆ ಮಾಸ ಅಸಾಢ ಹೇ ಗರಜಿ ಘನ
ಬಿಜೂರೀ—ಈ ಚಮಕೆ ಸಖಿ ಹೇ ಏ ಏ
ಮೋಹೆ ತಜಿ ಕಂತಾ ಜಾಯೆ ಪರ-ದೇಸಾ ಅ..ಅ..
ಕಿ ಉಮಡ್ ಕಮಲಾ ಮಾಯೀ ಹೇ
....ಹೈ ರೇ ಹೈರೇ....

(ಆಷಾಢಮಾಸ, ಗುಡುಗಿನ ದನಿ ಕೇಳುತ್ತಿದೆ. ಮಿಂಚು ಮಿಂಚುತ್ತಿದೆ. ಹೇ ಸಖಿ, ನನ್ನ ಕಾಂತ ಪರದೇಶಕ್ಕೆ ಹೋಗಿದ್ದಾನೆ....ಕಮಲಾ ನದಿಯಲ್ಲಿ ಪ್ರವಾಹ ಏರಿ ಬರಲಿ....)

(ಕಮಲಾ ನದಿಯಲ್ಲಿ ಪ್ರವಾಹ ಬಂದರೆ ಪ್ರಿಯತಮ ತನ್ನನ್ನು ಬಿಟ್ಟು ಹೋಗುವುದಿಲ್ಲ. ಆದ್ದರಿಂದಲೇ ಕಮಲಾ ನದಿಯಲ್ಲಿ ಪ್ರವಾಹ ತುಂಬಲಿ ಎಂದು ಆಹ್ವಾನ ನೀಡುತ್ತಾರೆ.)....ಪರದೇಶದಿಂದ ಯಾರ ಪ್ರಿಯತಮ ಹಿಂತಿರುಗಿ ಬಂದಿದ್ದಾರೋ ಅವರ ಸಂತೋಷಕ್ಕಂತೂ ಪಾರವೇ ಇಲ್ಲ. 'ಝುಲನೀ ರಾಗಿಣಿ' ಆ ಸೌಭಾಗ್ಯವತಿಯರ ಹೃದಯಗಳ ಮಿಲನೋಚ್ಛ್ವಾಸವೇ ಗದ್ದೆಯಲ್ಲೆಲ್ಲಾ ತುಂಬಿಕೊಂಡಿದೆ.

ಮಾಸ ಅಸಾಢ ಜಥಲ ಬರಸಾತೀ
ಘರ ಘರ ಸಖೀ ಸಬ ಝೂಲನೀ ಲಗಾತೀ
ಝೂಲೀ ಗಾವೆ,
ಝೂಲೀ ಗಾವತಿ ಮಂಗ ಲಬಾನೀ
ಸಾವನ ಸಖಿ ಅಲಿ ಹೇ ಮಸ್ತ ಜವಾನಿ....
ದೇಖೋ, ದೇಖೋ
ದೇಖೋ ದೇಖೋ ಸಖೀ ರೀ ಬ್ರಿಜಬಾಲಾ
ಕಹಾಂಗೆಯೆ ಜಸೋದ ಕುಮಾರ್, ನಂದಲಾಲಾ
... ದೇಖೋ, ದೇಖೋ.

(ಆಷಾಢಮಾಸ, ಮಳೆ ಸುರಿಯುತ್ತಿದೆ. ಮನೆಮನೆಯಲ್ಲೂ ಉಯ್ಯಾಲೆ ತೂಗುತ್ತಿದೆ. ಉಯ್ಯಾಲೆ ತೂಗುತ್ತಾ ನಾರಿಯರು ಹಾಡುತ್ತಿದ್ದಾರೆ. ಶ್ರಾವಣ ಮಾಸ ಮಾದಕತೆಯನ್ನು ತುಂಬಿಕೊಂಡು ಬರುತ್ತಿದೆ. ಹೇ ಸಖೀ ವ್ರಜಬಾಲೆ, ನಂದಲಾಲ ಯಶೋದಾಕುಮಾರ ಎಲ್ಲಿ ಹೋದ, ನೋಡು.)

ಪ್ರಿಯತಮ ಊರಿನಲ್ಲೇ ಇದ್ದೂ ಮನೆಗೆ ಬರುವುದನ್ನೂ ಮರೆತಿರಬಹುದೇ? ....ನೋಡು, ನೋಡು ಎಲ್ಲಿಗೆ ಹೋದರು? ಯಾರ ಮನೆಯ ಉಯ್ಯಾಲೆ ಯಲ್ಲಾದರೂ ತೂಗಾಡುತ್ತಿಲ್ಲ, ತಾನೇ?

"ಚಹಾ"

"ಯಾರು? ಕಮಲಾ" ಡಾಕ್ಟರ್ ಕಕ್ಕಾಬಿಕ್ಕಿಯಾಗಿ ಕೇಳಿದರು:

"ಯಾಕೆ? ಯಾಕೆ ಬೆಚ್ಚಿದೀರಿ? ನಿಮಗೂ ಇಂಜಕ್ಷನ್ನಿನ ಭಯವೇನು? ಇದು ಸಿಹಿ ಔಷಧ ಅಲ್ಲ, ಸಿಹಿ ಚಹ ಡಾಕ್ಟರ್ ಬಾಬೂ, ಬರೀ ಚಹಾ ಕುಡಿದೇ ಬದುಕಿರೋದು ಅಂತ ತೀರ್ಮಾನ ಮಾಡಿರೋವಾಗ ಕಣ್ಣು ತೆರೆಯುವ ಹೊತ್ತಿಗೆ ಚಹಾದ ಕಪ್ಪು ಮುಂದೆ ಇರೋದು ಒಳ್ಳೇದು."

ಕಮಲಾ ಹತ್ತಿರದಲ್ಲಿದ್ದ ಕುರ್ಚಿಯ ಮೇಲೆ ಕುಳಿತು ಚಹಾ ಮಾಡಿದಳು, ಪ್ಯಾರು, ನಿಂತಲ್ಲೇ ನಿಂತು ನಗುತ್ತಿದ್ದ....ಪ್ಯಾರು ಇಷ್ಟು ಸಂತೋಷವಾಗಿರು ವುದು ಬಹಳ ಕಡಮೆ....ಈಗ ಗೊತ್ತಾಗುತ್ತೆ. ಎಲ್ಲದಕ್ಕೂ 'ಬೇಡಾ,' 'ಬೇಡಾ' ಅನ್ನೋದಕ್ಕೆ ಇವಳು, ಪ್ಯಾರು ಅಲ್ಲ, 'ಚಹ ಕೊಟ್ಟರೆ' 'ಬೇಡ' 'ಮೊಟ್ಟೆ' ಕೊಟ್ಟರೆ 'ಬೇಡ' ಊಟ ಬೇಡ....ಈಗ ಗೊತ್ತಾಗುತ್ತೆ....

# 39

ಸಂಥಾಲರು ಆ ಊರಿನವರಲ್ಲ, ಬೇರೆ ಊರಿನವರು.

····ಸ್ವಲ್ಪ ನೀನೇ ಯೋಚನೆ ಮಾಡಿ ನೋಡು. ಇವನೇ ತಂತ್ರಿಮಾ ಪಂಗಡದ ಸರದಾರ ಮಗಹಿಯವನು ಅಲ್ವಾ? ಒಳ್ಳೇದು ನೀನೇ ಹೇಳು. ನಿನ್ನ ತಾತನೂ ಪಶ್ಚಿಮದಿಂದ ಬಂದ, ಈಗ ನೀನು ನಿನ್ನ ಮಗಳನ್ನು ತಿರಹುತ್‌ನ ತಂತ್ರಿಮಾ ಪಂಗಡದವನಿಗೆ ಕೊಟ್ಟು ಮದುವೆ ಮಾಡಿದ್ದೀ. ಮಗಹಿಯ ನಡತೆ—ಪದ್ಧತಿ ಎಲ್ಲಾ ಮರೆತುಬಿಟ್ಟಿದ್ದೀ. ಈಗಂತೂ ತಿರಹುತ ಮತ್ತು ಮಗಹೀ ಎರಡೂ ಒಂದಾಗಿಹೋಯ್ತು: ಸಂಥಾಲರಲ್ಲೂ ಕಮ್ಮಾರರಿದ್ದಾರೆ, ಅಂಬಿಗರಿದ್ದಾರೆ. ಆದರೆ ಎಂದಾದರೂ ಅವರು ಇಲ್ಲಿನ ಕಮ್ಮಾರರು, ಅಂಬಿಗರ ಜೊತೆ ಸೇರಿದ್ದಾರೇನು? ಇಲ್ಲ. ಅವರು ಸದಾ ನಮ್ಮನ್ನೇ ಹೀನಾಯವಾಗಿ ಕಾಣುತ್ತಾರೆ. ಹಳ್ಳಿಯ ಹೊರಗಡೆಯೇ ವಾಸಮಾಡುತ್ತಾರೆ....ಹಾಡು ಹೇಳಿ ಅಂದ ಕೂಡಲೇ ಸಂಥಾಲರು ಹಾಡೋದೂ ವಿದೇಶೀ ಹಾಡುಗಳನ್ನೇ. ಅಬ್ಬಬ್ಬಾ ಎಂದರೆ 'ಕಡಿಚೈತೀ' (ಚೈತ್ರದಲ್ಲಿ ಹಾಡುವ ಲೋಕಗೀತೆ) ಹಾಡುತ್ತಾರೆ. ನಮ್ಮ ಹಾಡನ್ನು ಎಂದೂ ಹಾಡುವುದಿಲ್ಲ. ಇಲ್ಲಿನ ಔಷಧಿ ಕುಡಿಯುವುದಿಲ್ಲ. ಕುಡಿದರೆ "ಪಂಜಾಯ" (ಒಂದು ರೀತಿಯ ಮದ್ಯ) ಒಂದನ್ನೇ. ನೀವೇ ಯೋಚನೆ ಮಾಡಿ."—ತಹಸೀಲ್ದಾರರು, ಉತ್ತುವ ಬೀಜವನ್ನು ಪಡೆಯಲು ಬಂದಿದ್ದ ರೈತರಿಗೆ ಹೇಳುತ್ತಿದ್ದರು....ನೂರೈವತ್ತಕ್ಕಿಂತ ಹೆಚ್ಚು ಜನ ಸೇರಿದ್ದರು. ಅವರಲ್ಲಿ ಕಾಳೀಚರಣನೂ ಇದ್ದ, ಬಾಲದೇವನೂ ಇದ್ದ

ತಹಸೀಲ್ದಾರರು ಹೇಳುತ್ತಿರುವುದು ಪೂರ್ತಿ ಸರಿಯಾಗಿದೆ....ಏನಾದರೂ ಹೇಳಣ್ಣಾ, ಈ ಹಳ್ಳಿಯ ಒಳ್ಳೇದು–ಕೆಟ್ಟದನ್ನು ಯೋಚಿಸುವವರು ತಹಸೀಲ್ದಾರರೊಬ್ಬರೇ....ತಹಸೀಲ್ದಾರರು ಹೇಳಿದ್ದು ಸರಿಯಾಗಿಯೇ ಇದೆ. ಒಂದೇ ಬಾರಿಗೆ ಬಾಗಿಲಿನ ಕಡೆ ತೋರಿಸಿಬಿಟ್ಟಿದ್ದಾರೆ:

"ಸರಿ, ಈ ಸಲ ಇದ್ದಕ್ಕಿದ್ದ ಹಾಗೆ ನಿಮಗೆ ಸಂಶಯ ಯಾಕೆ ಬಂತು? ನನ್ನ ಗುತ್ತಿಗೆದಾರರಿಗೆಂದು ಬೀಜವನ್ನು ನಾವು ಕೊಡಲೇಬೇಕು. ನನ್ನ ಗುತ್ತಿಗೆದಾರರಲ್ಲದವರನ್ನಾದರೂ, ಯಾವ ವರ್ಷವಾದರೂ ನಾನು ಬರಿಗೈಯ್ಯಲ್ಲಿ ಕಳುಹಿಸಿದ್ದೇನೇನು? ಅವರನ್ನೇ ಕೇಳಿ. ಇನ್ನೂ ಒಂದು ವಿಚಾರ. ಕಳೆದ ವರ್ಷ

ಬೆಳೆ ಎಷ್ಟಾಯಿತು ಅನ್ನೋದು ನಿಮಗೆಲ್ಲಾ ಗೊತ್ತೇ ಇದೆ. ಇದರ ಮೇಲೆ ಲೆವಿ ಕಾನೂನು ಬೇರೆ ಜಾರಿಗೆ ಬಂತು. ತುಂಬಾ ಪ್ರಯತ್ನಪಟ್ಟು, ಅಂತೂ ಒಂದು ನೂರು ಮಣ ತಂದಿದೀನಿ. ಹರಗೌರಿಯ ದಯೆಯಿಂದ ಐನೂರು ಮಣ ಸೇರಿತು. ಅವರ ಹತ್ತಿರ ಬಹುಶಃ ಇನ್ಸ್‌ಪೆಕ್ಟರ್ ಕೇಳಿದರೂ ಅಂತ ಕಾಣುತ್ತೆ. ಅವರು ಹೇಳಿದ್ರು ಐದು ಸಾವಿರ ಮಣ ಆಗುತ್ತೇ ಅಂತ. ಕಡೆಗೆ ಕಾಂಗ್ರೆಸ್ ಸೆಕ್ರೆಟರಿಯ ಪ್ರಯತ್ನದಿಂದ ಅವರಿಗೆ ಒಂದು ನೂರು ಮಣ ಸಿಕ್ಕಿತು ....ನಿನ್ನೆ ಹರಗೌರಿಬಾಬುವನ್ನು ಕೇಳುತ್ತಿದ್ದರು ; ಐನೂರು ಮಣ ಬತ್ತವನ್ನು ಈಗಲೇ ಕೊಟ್ಟುಬಿಟ್ಟರೆ, ಹಳ್ಳಿಯವರಿಗೆ ಉಳುವುದಕ್ಕೆ ಖರ್ಚಿಗೆ ಎಲ್ಲಿಂದ ಬತ್ತ ಬರುತ್ತದೆ ? ಸುಮ್ಮನೆ ತಹಸೀಲ್ದಾರರಾದ ಮಾತ್ರಕ್ಕೆ ಏನಾಯಿತು ?"

ಸರಿಯಾದ ಮಾತು, ಸರಿಯಾದ ಮಾತು....ತಹಸೀಲ್ದಾರರು ಹೇಳುವುದು ಉಚಿತವಾಗಿಯೇ ಇದೆ.

....ಕಾಳೀಚರಣನ ಮನಸ್ಸಿನಲ್ಲಿ ಅನೇಕ ಪ್ರಶ್ನೆಗಳು ಮೇಲೇಳುತ್ತಿವೆ. ಆದರೆ ಈಗವನು ಏನನ್ನೂ ಕೇಳುವುದಿಲ್ಲ. ಆ ದಿನ ಸೆಕ್ರೆಟರಿ ಸ್ಪಷ್ಟವಾಗಿ ಹೇಳಿದ್ದಾನೆ :

"ಕಾಮ್ರೇಡ್ ಈಗಲೇ ಸಂಘರ್ಷ ಆರಂಭಿಸಬೇಡಿ. ಎಲ್ಲದಕ್ಕಿಂತ ಮೊದಲು ಒಂದು ಇಲಾಖೆಯಲ್ಲಿ ಒಂದು ವಿಭಾಗ ತೆಗೆದುಕೊಂಡು 'ಎಕ್ಸ್‌ಪೆರಿಮೆಂಟ್' ಮಾಡುತ್ತೇವೆ. ಅದಾದನಂತರ ಬೇರೆ ಕಡೆಗಳಿಗೆ ಆಜ್ಞೆ ಮಾಡುತ್ತೇವೆ. ಅಲ್ಲದೆ ಸಂಘರ್ಷಕ್ಕೆ ಒಂದು ತಿಂಗಳು ಮೊದಲೇ ಅರ್ಜಿಹಾಕಿಕೊಳ್ಳಬೇಕು. ಆಮೇಲೆ ಎನ್‌ಕ್ವೈರಿ, ಎಕ್ಸಿಕ್ಯುಟೀವ್ ಕಮಿಟಿ ಮೀಟಿಂಗ್ ಎಲ್ಲಾ ನಡೆದ ಮೇಲೆ ಸಂಘರ್ಷ ಮಾಡಬೇಕೋ ಬೇಡವೋ ಎಂಬುದಾಗಿ ಸಲಹೆ ನೀಡುತ್ತೇವೆ. ಅದುವರೆಗೆ ಬೇರೆಯವರೊಂದಿಗೆ ಹೊಂದಿಕೊಂಡು, ಪಂಚಾಯತಿಯ ಮೂಲಕ ಎಷ್ಟು ಸಾಧ್ಯವೋ ಅಷ್ಟು ಕೆಲಸ ಮಾಡಿ ಕೆಲವು ದಿನಗಳ ನಂತರ ಪಾರ್ಟಿ ಒಮ್ಮೆಲೇ ಹೋರಾಟ ಘೋಷಿಸುತ್ತದೆ."

"ಹೌದು ತಹಸೀಲ್ದಾರರು ಹೇಳುವುದು ಸರಿಯಾಗಿದೆ" ಕಾಳೀಚರಣನೂ ಹೇಳುತ್ತಾನೆ, ಬಾಲದೇವನೂ ಹೇಳುತ್ತಾನೆ....ಬಾವನದಾಸ ಎಲ್ಲಿ ? ಪೂರ್ಣಿಯಾದಿಂದ ಇನ್ನೂ ಬಂದಿಲ್ಲವೇನು ?

ಕಪ್ಪುಟೋಪಿ ಯುವಕರ ಲಾಠಿಗಳಿಂದ ಕಾನೂನಿನ ತಂತ್ರಗಳು ಹೆಚ್ಚು ಭಯಂಕರ ಎನ್ನುವುದನ್ನು ಹರಗೌರಿ ಚೆನ್ನಾಗಿ ಅರ್ಥಮಾಡಿಕೊಂಡಿದ್ದಾನೆ.

ಈ ವಿಚಾರದಲ್ಲಿ ತಹಸೀಲ್ದಾರ ವಿಶ್ವನಾಥಪ್ರಸಾದರು ನಿಪುಣರು. ಆದ್ದರಿಂದ ಈಗಲೇ ಅವರನ್ನು ಎದುರು ಹಾಕಿಕೊಳ್ಳುವುದು ಒಳ್ಳೆಯದಲ್ಲ.

ಸಿಂಘಜೀಗೆ ಹರಗೌರಿಯ ತಹಸೀಲ್ದಾರಿಯಲ್ಲಿ ಪೂರ್ಣ ಭರವಸೆಯಿತ್ತು. ಕಪ್ಪುಟೋಪಿಯವರ ಸಂಚಾಲಕರಲ್ಲೂ ಪೂರ್ಣ ಭರವಸೆಯಿತ್ತು....ಆದರೆ ತಹಸೀಲ್ದಾರ ವಿಶ್ವನಾಥಪ್ರಸಾದರು ಬೀಸಿದ ಕಾನೂನಿನ ಬಲೆಯಿಂದ ಯಾವ ರೈತನೂ ನುಣುಚಿಕೊಳ್ಳುವಂತಿಲ್ಲ. ಅದರ ಮುಂದೆ ರಾಜಪೂತರ ಭಲ್ಲೆ ಭರ್ಜಿಗಳೂ ಏನು ಮಾಡಬಲ್ಲವು?....ಮೇಲೆ ನೋಡುವುದಕ್ಕೆ ಎಂತಹ ನಗುಮುಖ, ಎಷ್ಟು ಮಧುರವಾದ ಮಾತು ತಹಸೀಲ್ದಾರ ವಿಶ್ವನಾಥರದು, ಆದರೆ ಹೊಟ್ಟೆಯಲ್ಲಿ ಭಾರಿ ಮಡುವೇ ಇದೆ. ರಾಜ್ಯದ ಹೊಸ ಸರ್ಕಲ್ ಮ್ಯಾನೇಜರ್ ಆಶ್ಚರ್ಯದಿಂದ ತಲೆ ದೂಗಿದ, ಕಾನೂನು ಬಲ್ಲ ಎಂತಹ ಮನುಷ್ಯ!....ರಾಜೀನಾಮೆ ಕೊಡಿ ಅಂದ ಕೂಡಲೇ ರಾಜೀನಾಮೆ ಕೊಟ್ಟರು, ಕಾಂಗ್ರೆಸ್ಸಿನ ಮುಖಂಡರಾಗಿಬಿಟ್ಟರು. ವಿಪರೀತ ಚಾಣತನದ ಮನುಷ್ಯ ಇವರಿಂದ ತಪ್ಪಿಸಿಕೊಳ್ಳುವುದು ಕಷ್ಟ.

ಹರಗೌರಿ, ಸಿಂಗಜೀಯ ಹೆಸರಿನಲ್ಲಿ ಸಂಥಾಲ ಪಂಗಡಕ್ಕೆ ಸೇರಿದ್ದ ಇಪ್ಪತ್ತೈದು ಎಕರೆ ಜಮೀನಿನಿಂದ ಅವರನ್ನು ಬಿಡಿಸಿಬಿಟ್ಟ. ಆದರಲ್ಲಿ ಎರಡು ಎಕರೆ ಸಿಂಘಜೀಗೆ ಸಿಗುತ್ತದೆ.

ಖೇಲಾವನ್ನನೂ ಐದು ಬೀಘಾ ಭೂಮಿಯಿಂದ ಸಂಥಾಲರನ್ನು ಓಡಿಸಿದ.

ವೈರ್‌ಲೆಸ್ ಸುಮರಿತದಾಸ ಕೋಯರೀ ಪಂಗಡದವರೊಂದಿಗೆ ಹೇಳಿಕೊಂಡ:

"ತಹಸೀಲ್ದಾರ ಹರಗೌರಿ, ವಿಶ್ವನಾಥಪ್ರಸಾದರ ಹೆಸರಿಗೆ ಇನ್ನೂರು ಬೀಘಾ, ನನ್ನ ಹೆಸರಿಗೆ ಐವತ್ತು ಬೀಘಾ ಜಮೀನು ಬರೆದುಕೊಡದಿದ್ದರೆ ಆಗ ನೋಡುತ್ತೀರಿ. ಕಾಯಸ್ಥರೆಂದರೆ ವಿನೋದವಲ್ಲ:"

ವೈರಲೆಸ್ ಸುಮರಿತದಾಸ ಈಗ ಮತ್ತೆ ತಹಸೀಲ್ದಾರ ವಿಶ್ವನಾಥಪ್ರಸಾದರ ಜೊತೆ ಓಡಾಡುತ್ತಿದ್ದಾನೆ. ಈಗ ಎಷ್ಟಾದರೂ ಹರಗೌರಿಯೂ ಒಂದೇ, ವಿಶ್ವನಾಥ ಪ್ರಸಾದರೂ ಒಂದೇ. ಆದರೆ ಒಂದೇ ಷರತ್ತು....

ಸಂಥಾಲರಿಗೆ ಎಲ್ಲಾ ಅರ್ಥವಾಗಿದೆ. ಈಗ ಬಾಲದೇವ, ಬಾವನದಾಸ, ಕಾಳೀಚರಣ ಎಲ್ಲಾ ಒಂದಾಗಿಬಿಟ್ಟರು. ಸಂಥಾಲರಿಗೆ ಎಲ್ಲಾ ಅರ್ಥವಾಗಿದೆ, ಯಾರೂ ತಮ್ಮ ನೆರವಿಗೆ ಬರುವವರಿಲ್ಲ. ಧರ್ಮಪುರದಲಿ ನೋಡಲಿಲವೇನು?

ಅಲ್ಲೂ ಹೀಗೇ ಆಯಿತು. ಆದ್ದರಿಂದಲೇ ಹಿರಿಯರು ಹೇಳುವುದು, ಇಲ್ಲಿನ ಜನರನ್ನು ನಂಬಬಾರದು ಅಂತ. ಯಾರಿಂದಲಾದರೂ, ಯಾವ ಲಾಭವಾದರೂ ಆಗುವುದಾ ವರೆ ಅದನ್ನು ಪಡೆದುಕೊಂಡು ತೆಪ್ಪಗಿರಬೇಕು. ಆದರೆ ಯಾರ ಜೊತೆಯೂ ಬೆರೆಯ ಬಾರದು; ಎಷ್ಟಾದರೂ ಸಂಥಾಲರು ಸಂಥಾಲರೇ, 'ದಿಕ್ಕೂ' ಗಳು ದಿಕ್ಕೂಗಳೇ. (ಸಂಥಾಲರು ಬೇರೆ ಜಾತಿಯವರನ್ನು ದಿಕ್ಕೂಗಳೆಂದೇ ಕರೆಯುವುದು) 'ಪಂಜಾಯ್,' ದೇಹವನ್ನು ಕಲ್ಲಿನ ಹಾಗೆ ಗಟ್ಟಿ ಮಾಡುತ್ತದೆ. ಅದೇ ಇಲ್ಲಿನ ಹೆಂಡ ಕುಡಿದರೆ ಕಲ್ಲೂ ಕರಗಿಹೋಗುತ್ತದೆ.....ಖಂಡಿತ 'ದಿಕ್ಕೂ' ಮನುಷ್ಯ ರನ್ನು ಭಟ್ಟಿಯ ಮದ್ಯವನ್ನೂ ಎಂದಿಗೂ ನಂಬಬಾರದು······ಅಯ್ಯೋ ಬಿಡು, ಬಾಣ ಒಂದಿದೆಯಲ್ಲ ಅದೇ ನಿಜವಾದ ಜೊತೆಗಾರ. ಆ ಜೊತೆಗಾರ ಎಂದೂ ನಮ್ಮ ಜೊತೆ ಬಿಡುವುದಿಲ್ಲ, ಬಾಣ ಎಂದೂ ಗುರಿ ತಪ್ಪುವುದಿಲ್ಲ....

ಚುನಕಾ ಅಂಬಿಗ ಏನು ಹೇಳುತ್ತಾನೆ?····ಅವನು ಡಾಕ್ಟರನ್ನು ಏನು ಕೇಳಲು ಹೋಗಿದ್ದ? ಕೇಳುವುದಿದ್ದರೆ ಕಾಳೀಚರಣನನ್ನು, ಬಾಲದೇವನನ್ನು, ತಹಸೀಲ್ದಾರರನ್ನು ಕೇಳಬೇಕಾಗಿತ್ತು.

ಬಾಲದೇವ, ಕಾಳೀಚರಣರು ತಹಸೀಲ್ದಾರರಿಂದ ಜನರಿಗೆ ಬತ್ತ ಕೊಡಿಸು ತ್ತಿದ್ದರು.

"ಡಾಕ್ಟರ್ ಹೇಳಿದರು. ನೀವೇ ಜಮೀನಿನ ನಿಜವಾದ ಮಾಲೀಕರು. ಕಾನೂನಿದೆ, ಮೂರು ವರ್ಷದಿಂದ ಭೂಮಿಯನ್ನು ಉತ್ತು ಬಿತ್ತಿದವರು ಯಾರೋ ಭೂಮಿ ಅವರದೇ ಆಗುತ್ತದೆ."

"ಡಾಕ್ಟರ್ ಹೇಳಿದರೇ?"

ಡಾಕ್ಟರ್?......ಸೀನಿಯಾಮುಸುಮುನತೆ ನಕ್ಕಳು......ಹೆ ಹೆ ಹೆ "ಡಾಕ್ಟರ್ ನಮ್ಮ ಕುಣಿತ ನೋಡಬೇಕಂತೆ. ದಿನಾ ಕೇಳ್ತಾರೆ."

ಯುವಕ ಜೋಗಿಯಾ ಅಂಬಿಗ, ಬಾಣದ ಕೊನೆಗೆ ಕಾಡಿನ ಹಂಸದ ರೆಕ್ಕೆ ಗಳನ್ನು ಕಟ್ಟುತ್ತಾ ಹೇಳಿದ:

"ಡಾಕ್ಟರ್ ಒಂದು ಮೊಲಕ್ಕೆ ಹತ್ತು ರೂಪಾಯಿ ಕೊಟ್ಟರು. ಒಂದು ಡಜನ್ ಇಲಿಗೆ ಹನ್ನೆರಡು ರೂಪಾಯಿ....ಎರಡು ನರಿಗಳ ಮರಿಗೆ ಐವತ್ತು ರೂಪಾಯಿ. ಇಷ್ಟೊಂದು ದುಡ್ಡು ಬೇರೆ ಯಾರಾದರೂ ಶ್ರೀಮಂತರು ಕೊಡ್ತಾ ರೇನು?....ಡಾಕ್ಟರ್ ಸರ್ಕಾರಿ ಮನುಷ್ಯ. ಆದರೆ ಲಂಚಕೋರರಲ್ಲ."

ಏಕಾಂತದಲ್ಲಿ ಮಂಗಳಾದೇವಿ ಕಾಳೀಚರಣನಿಗೆ ಹೇಳಿದಳು. ಅನುನಯದಿಂದ ಬೇಡಿಕೊಳ್ಳುತ್ತಾ ಹೇಳಿದಳು: "ನೀವು ಹೋಗಬೇಡಿ. ಸಂಥಾಲರು ಸುಮ್ಮನಿರೋದಿಲ್ಲ. ಖಂಡಿತ ಬಾಣ ಬಿಡ್ತಾರೆ. ನನಗೆ ಗೊತ್ತು, ನಿಮಗೆ ಗೊತ್ತಿಲ್ಲ, ಕಾಳೀಬಾಬು. ಅವರ ಮುಖ ನೋಡಿ ಭ್ರಮೆ ಪಡಬೇಡಿ. ನೋಡೋದಕ್ಕೆ ತುಂಬಾ ಸರಳವಾಗಿ ಕಾಣ್ತಾರೆ. ಆದರೆ....ನೀವು ಹೋಗಬೇಡಿ ಕಾಳೀಬಾಬು ನನ್ನ ಮೇಲೆ ಆಣೆ."

ಸರಿಯಾಗಿಯೇ ಇದೆ. ಮುಖ್ಯ ಸದಸ್ಯರೆಲ್ಲಾ ಅವರನ್ನು ನೋಡೋದಕ್ಕೆ ಯಾಕೆ ಹೋಗಬೇಕು:....ವಾಸುದೇವ, ಸುನರಾ, ಸನಿಚ್ಚರ ಯಾರೂ ಹೋಗುವುದಿಲ್ಲ,...ಹೌದು, ಪ್ಯಾರೆಯೂ ಹೋಗುವುದಿಲ್ಲ:....ಸೋಮಾ ಜಟ್ ಹೋಗುತ್ತಾನಂತೇನು?....ಹೋಗಲಿ ಬಿಡು, ಅವನೇನೂ ಸದಸ್ಯನಲ್ಲ.

ಬಾಲದೇವನಂತೂ ಇಂತಹ ಜಾಗಕ್ಕೆ ಹೋಗುವವನೇ ಅಲ್ಲ. ಅಲ್ಲಿ, ಹಿಂಸೆಯ ಭಯವಿದೆ. ಅವನು ಹೋಗಲಾರ....ತಹಸೀಲ್ದಾರರು ಲೀಡರಾಗಿದ್ದಾರೆ. ಅವರೇ ಹೋದರೂ ಆಯಿತು, ಲಾಠಿಯವರನ್ನು ಕಳುಹಿಸಿದರೂ ಆಯಿತು. ಹಿಂಸೆಯಾದರೂ ಮಾಡಲಿ, ಅಹಿಂಸೆಯಾದರೂ ಮಾಡಲಿ ಬಾಲದೇವ ನಾಲ್ಕಾಣೆ ಸದಸ್ಯ ಅಷ್ಟೆ. ಬಾವನದಾಸ ಇದ್ದಿದ್ದರೆ ಅವನೊಬ್ಬನೇ ತಹಸೀಲ್ದಾರರ ಕಾನೂನನ್ನು ಎದುರಿಸಿಬಿಡುತ್ತಿದ್ದ. ಆದರೆ ಅವನಿಗೆ ತಲೆ ಕೆಟ್ಟಿರಬೇಕು, ಕಾಗದ ಬರೆಸುವುದಕ್ಕೆಂದು ಹೋಗಿ ಏಳು ದಿನಗಳಾದವು. ಇನ್ನೂ ಹಿಂತಿರುಗಿ ಬಂದಿಲ್ಲ.... ಗಾಂಧೀಜೀಗೆ ಕಾಗದ ಕಳುಹಿಸುತ್ತಾನಂತೆ....ಇವನಿಗೆ ಉತ್ತರ ಬರೆಯುವಷ್ಟು ಗಾಂಧೀಜೀಗೆ ಬಿಡುವೆಲ್ಲಿದೆ? ಆದರೆ ಬಾವನ ಅವರಿಗೆ ಅನೇಕ ಸಲ ಕಾಗದ ಬರೆಸಿದ್ದಾನೆ, ಪ್ರತಿ ಬಾರಿಯೂ ಅವರಿಂದ ಉತ್ತರ ಬಂದಿದೆ: "ಬಾವನದಾಸ ಜೀ, ನಿಮ್ಮ ಕಾಗದ ತಲುಪಿತು." ಒಂದು ಬಾರಿ ಸಸಾಂಕ ಎಲ್ಲರಿಗೂ ಓದಿ ಹೇಳಿದ. ಗಾಂಧೀಜೀ ಬಾವನದಾಸನಿಗೆ ಸ್ವತಃ ಕಾಗದ ಬರೆದಿದ್ದರಂತೆ.....ಅವರೂ ಅವನನ್ನು 'ಭಗವಾನ್' ಎನ್ನುತ್ತಾರೆ.....ಬಾವನ ನಿಜವಾಗಲೂ ಅವತಾರೀ ಮನುಷ್ಯ....ಅವನು ಹೇಳಿದ್ದು ಸರಿಯೇ—"ಭಾರತ ಮಾತೆ ಮೊದಲಿಗಿಂತ ಗಟ್ಟಿಯಾಗಿ ಅಳುತ್ತಿದ್ದಾಳೆ."

"ಅಯ್ಯೋ ಅಮ್ಮಾ....."

ಅಳುತ್ತಿರೋದು ಯಾರು?....ರಾಮಪಿಯರಿಯ ಅಳುತ್ತಿದ್ದಾಳೆ. ಅವಳ ಅಣ್ಣ ಗಸೋರಿಗೆ ಬಾಣ ಚುಚ್ಚಿದೆಯೇ? ಎಲ್ಲಿಗೆ ತಗುಲಿದೆ? ಯಾರು ಬಿಟ್ಟರು? ....ಸಂಥಾಲರೇ? ಎಲ್ಲಿ? ಜನ ಯಾಕೆ ಓಡಿ ಬರುತ್ತಿದ್ದಾರೆ?....

ಹಳ್ಳಿಯ ನಾಯಿಗಳು ಬಗುಳುತ್ತಿವೆ. ಕಾಗೆಗಳು 'ಕಾ-ಕಾ' ಎನ್ನುತ್ತಿವೆ. ....ಜೋಯಿಸರೂ ಹೇಳಿದ್ದು ಸರಿ—ಹಳ್ಳಿಯಲ್ಲಿ ಹದ್ದು ಕಾಗೆಗಳು ಹಾರುತ್ತವೆ. ....“ಕೊಡಲಿ ದೊಣ್ಣೆ ತೆಗೆದುಕೊಳ್ಳಿ.”

“ಕೊಡಲಿ ಎಲ್ಲಿದೆ?”

“ಚೂರಿಯನ್ನೂ ತೆಗೆದುಕೋ.”

“ಕೊಡಲಿ ಎಲ್ಲಿದೆ? ಏನು ಗಲಭೆ? ಏನು ಸಮಾಚಾರ?”

“ಸಂಥಾಲರು ತಹಸೀಲ್ದಾರ ವಿಶ್ವನಾಥ ಪ್ರಸಾದರ ನಲವತ್ತು ಬೀಘಾ ಜಮೀನಿನಲ್ಲಿ. ಬಿತ್ತನೆಯ ಬತ್ತವನ್ನೆಲ್ಲಾ ಲೂಟಿ ಮಾಡುತ್ತಿದ್ದಾರೆ.”

“ಹೊಸ ವ್ಯವಸ್ಥೆಯ ಜಮೀನಿನಲ್ಲೇ.”

“ಇಲ್ಲ, ಇಲ್ಲ. ತಮ್ಮ ಜಮೀನಿನಲ್ಲೇ. ಕೋಠಿಯ ಹತ್ತಿರವಿರುವ ಜಮೀನಿನಲ್ಲಿ...ದೊಣ್ಣೆ ತೆಗೆದುಕೋ.”

“ಗನ್ನೋರೀ ಅವರನ್ನು ಎದುರಿಸಿದ. ಅವರು ಬಾಣ ಬಿಟ್ಟರು. ತೊಡೆಗೆ ಬಾಣ ನೆಟ್ಟಿದೆ. ರಕ್ತದ ನದಿಯೇ ಹರಿಯುತ್ತಿದೆ. ಎಚ್ಚರ ತಪ್ಪಿದ್ದಾನೆ. ಆಸ್ಪತ್ರೆಯಿಂದ ಡಾಕ್ಟರ್ ಬಂದಿದ್ದಾರೆ....ಸಂಥಾಲರು ನಿರ್ಭಯವಾಗಿ, ಬೆಳೆದ ಬತ್ತವನ್ನೆಲ್ಲಾ ಲೂಟಿ ಮಾಡ್ತಿದಾರೆ.”

ನಡೀರಿ ನಡೀರಿ ಹೊಡೀರಿ....ಅಯೋಗ್ಯ ಸಂಥಾಲರು.....ಪ್ರಾಣ ಹೋದರೂ ಪರವಾಗಿಲ್ಲ....ತಹಸೀಲ್ದಾರ ವಿಶ್ವನಾಥಪ್ರಸಾದರ ಜಮೀನನ್ನೇ ಲೂಟಿ ಮಾಡ್ತಿದಾರೆಯೇ?

....ನಡೆಯಿರಿ, ನಡೆಯಿರಿ.....

ಬೌ ಬೌ ಬೌ ಬೌ: ನಾಯಿಗಳು ಅಶಾಂತಿಯಿಂದ ಬೊಗಳುತ್ತಿವೆ.

....ರಿಂಗ್ ರಿಂಗ್ ರಿಂಗ್ ರಿಂಗ್.

... ಡಾ ಡಾ ಡಾ ಡಾ ಡಾ ಡಾ.

ಸಂಥಾಲರ ಢಕ್ಕೆ ಮತ್ತು ಡೋಲು ಬಡಿದುಕೊಂಡವು—ರಿಂಗ್ ರಿಂಗ್ ರಿಂಗ್ ರಿಂಗ್ : ಡಾ ಡಾ ಡಾ ಡಾ.

ಇಂದು 'ರಿಂಗ್ ರಿಂಗ್ ತಾ ಧಿನ್ ತಾ' ಅಥವಾ 'ಡಾ ಡಿಗಾ ಡಾ ಡಿಗ್ಗಾ' ಇಲ್ಲ. ಕೇವಲ ರಿಂಗ್ ರಿಂಗ್ ರಿಂಗ್ ರಿಂಗ್...., ಡಾ ಡಾ ಡಾ ಡಾ....

ಗದ್ದೆಯಲ್ಲಿ ಶಬ್ದ ಮಾಡುತ್ತಾ, ಅವು ಸಂಥಾಲ ಸ್ತ್ರೀಯರಿಗೂ ಎಚ್ಚರಿಕೆ ಕೊಡುತ್ತಿವೆ: 'ನೀವೂ ಸಿದ್ಧವಾಗಿರಿ' ಡಾ....ಡಾ....ಡಾ....ಡಾ.... ಅದಕ್ಕೆ ಸಂಥಾಲ ಸ್ತ್ರೀಯರು ಉತ್ತರ ಕೊಡುತ್ತಿದ್ದಾರೆ. "ರಿಂ ರಿಂ ರಿಂ ರಿಂ ಅರ್ಥಾತ್ 'ಸಿದ್ಧವಾಗಿದ್ದೇವೆ' ತುರುಬಿಗೆ ಹೂವು ಮುಡಿಯುವುದಕ್ಕೆ ಎಷ್ಟು ಸಮಯಬೇಕಾಗುತ್ತದೆ. ನಾವು ಸಿದ್ಧವಾಗೇ ಇದ್ದೇವೆ."

"ಕಾಳೀಮಾತಾ ಕೀ ಜೈ."

ಇನ್ನೂರು ಜನರ ಕಂಠಗಳ ಧ್ವನಿಕೇಳಿ ಕಾಳೀಮಂದಿರದ ಆಲದ ಮರದ ಮೇಲೆ ಕೂತಿದ್ದ ಕಾಗೆಗಳು 'ಕಾ ಕಾ' ಎನ್ನುತ್ತಾ ಹಾರಿಹೋದವು. ನಾಯಿಗಳು ಮತ್ತಷ್ಟು ಜೋರಾಗಿ ಬೊಗುಳಲಾರಂಭಿಸಿದವು.

"ಕಾಳೀ ಮಾತಾ ಕೀ, ಜೈ."

"ಮಹಾತ್ಮಾ ಗಾಂಧೀ ಕೀ, ಜೈ."

"ಇಂಕಿಲಾಬ್ ಜಿಂದಾಬಾದ್."

"ಭಾರತಮಾತಾ ಕೀ, ಜೈ."

"ಸೋಷಲಿಸ್ಟ್ ಪಾರ್ಟಿ ಜಿಂದಾಬಾದ್."

"ಹಿಂದೂ ರಾಜ್ಯದ ಬಾವುಟಕ್ಕೆ ಜೈ."

"ಭಾರತ ಮಾತಾ ಕೀ ಜೈ."

"ತಹಸೀಲ್ದಾರ ವಿಶ್ವನಾಥ ಪ್ರಸಾದ್ ಕೀ ಜೈ."

"ಬಾಲದೇವಜೀ ಕೀ ಜೈ."

"ನಾಲ್ಕು ಕಡೆಗಳಿಂದಲೂ ಸುತ್ತುಗಟ್ಟಿರಿ. ಯಾರೂ ತಪ್ಪಿಸಿಕೊಳ್ಳ ಬಾರದು....ಈಗ ಘೋಷಣೆಗಳಲ್ಲ. ಬರಿಯ ಬಾಣ ಬಿಡುತ್ತಿದ್ದಾರೆ. ಮಲಗಿ ಬಿಡಿ....ಬಾಣ ಬಿಡಲಿ."

"ಹೊಡಿ, ಕಲ್ಲು ಎಸಿ."

"ಬಿರಸಾ ಅಂಬಿಗ ಓಡಿ ಹೋಗ್ತಿದಾನೆ ಭರ್ಜಿ ಎಸಿ."

...."ಬಿರಸಾ ನೀರಿಗೆ ಬಿದ್ದುಬಿಟ್ಟ.....ಭರ್ಜಿ ಚುಚ್ಚಿತೇನು?"

...."ಸುಖಾನೂಗೆ ಏನಾಯ್ತು? ಎದೇಗೆ ಬಾಣ ತಗುಲಿತೇ?"

ಸಂಥಾಲ ಸ್ತ್ರೀಯರೂ ಬಾಣ ಬಿಡುತ್ತಾರೆ.

ಮಕ್ಕಳೂ?

"ಬಿರಸಾ ಅಂಬಿಗ ಬಿದ್ದುಬಿಟ್ಟೆಲ್ಲೋ!"—ಡಾ ಡಾ ಡಾ ಡಾ,.... ರಿಂ ರಿಂ ರಿಂ ರಿಂ—"ಬೀಳಲಿ, ನೀನೂ ಬೀಳು."

"ಸುಮ್ಮನೆ ಕುಳಿತುಕೊಂಡು ಬಾಣ ಬಿಡು ಸೋನಿಯಾ."

"ಸುಖೀ ಮಾರಮಾ ಬಿದ್ದುಬಿಟ್ಟ. ಡಾ ಡಾ ಡಾ ಡಾ."

"ಏ ಜಗಾರೀ, ಸರಿಯಾಗಿ ಗುರಿ ಇಡೋ—ಹರಗೌರೀ ತಹಸೀಲ್ದಾರನ ಎದೆಗೇ, ಹಾಗೇ....."

....ಡಾ ಡಾ ಡಾ ಡಾ ಹರಗೌರಿ ತಹಸೀಲ್ದಾರ ಬಿದ್ದುಬಿಟ್ಟ, "ಬೀಳಲಿ ಬಿಡು"—ರಿಂ ರಿಂ ರಿಂ ರಿಂ.

...."ತಹಸೀಲ್ದಾರ? ಹರಗೌರಿ ತಹಸೀಲ್ದಾರ ಬಿದ್ದುಬಿಟ್ಟನೇ?.... ಓಡಬೇಡಿ. ಏ ಕೇಳಿಲ್ಲಿ, ನಿಮಗೆಲ್ಲಾ ನಿಮ್ಮ ತಾಯಿ ತಂಗಿಯರ ಮೇಲಾಣೆ. ಗುರು ದೇವತೆಗಳ ಮೇಲಾಣೆ ಕಾಳೀ ಕಿರಿಯಾ—ಓಡಿದವನು ಹೇಡಿ....ಸಂಥಾಲರ ಬಾಣಗಳು ಮುಗಿದುಹೋಗುತ್ತಿವೆ. ಈಗ ಅವರನ್ನು ಸುತ್ತುಗಟ್ಟಿ ಹೊಡೀರಿ: ....ಮಂಗಳದಾಸನನ್ನು ಸುಧಾರಿಸಿ. ನಡೀರಿ ಜೈ, ಕಾಳೀ ಮಾತಾ ಕೀ ಜೈ."

"ಭರ್ಜಿ ಎಸೀರಿ. ಮಗುವೇನೂ ಅಲ್ಲ. ಇವನೇ ತಹಸೀಲ್ದಾರನನ್ನು ಹೊಡೆದಿದ್ದು."

"ಭಲೇ ವೀರ ಸರಿ.....ಈಗ ಆ ಮುದುಕನ ಮೇಲೆ ಕಲ್ಲು ಎಸೀರಿ. ಭಡವಾ ಢಕ್ಕೆ ಬಾರಿಸ್ತಿದ್ದ." ಓಡುತ್ತಿದ್ದಾನೆ. ಎಲ್ಲರೂ ಓಡುತ್ತಿದ್ದಾರೆ ಸುತ್ತುಗಟ್ಟಿ. ಓಡಿಹೋಗಲು ಬಿಡಬೇಡಿ. ಸಂಥಾಲ ಹೆಂಗಸರೆಲ್ಲಾ ಸೆಣಬಿನ ಗದ್ದೆಯಲ್ಲಿ ಬಚ್ಚಿಟ್ಟುಕೊಂಡಿದ್ದಾರೆ....ಸುತ್ತುಗಟ್ಟಿ....'

....ಪೂರಾ ಸ್ವಾತಂತ್ರ್ಯ! ಮನಸ್ಸಿಗೆ ಬಂದದ್ದು ಮಾಡಿ, ಮುದುಕಿ, ಯುವತಿ, ಹುಡುಗಿ ಯಾರು ಸಿಕ್ಕರೂ ಸರಿ! ಸ್ವಾತಂತ್ರ್ಯವಿದೆ. ಸೆಣಬಿನ ಗದ್ದೆಯಲ್ಲೇ ಪರವಾಗಿಲ್ಲ. ಗಲ್ಲಿಯೋ ಆಗಲಿ, ಅಂಡಮಾನಿಗೆ ಕಳುಹಿಸಲಿ ಬಿಡಬೇಡ....

ಸಂಥಾಲ ಸ್ತ್ರೀಯರು ಅಳುತ್ತಾರೆ, ನೋವಿನಿಂದ ಚಡಪಡಿಸುತ್ತಾರೆ.... ಕಿರುಚಿಕೊಂಡು ಅಳುತ್ತಾರೆ....ಅಳುತ್ತಾರೋ, ಹಾಡುತ್ತಾರೋ.....

....ಸೆಣಬಿನ ಗದ್ದೆಯಲ್ಲಿ ಕೋಠಿಯ ಕಾಡಿನಲ್ಲಿ ಗಲಾಟೆಯೋ ಗಲಾಟೆ! ಒಂದು ಕಡೆ ಇನ್ನೂರು ಜನ, ಇನ್ನೊಂದು ಕಡೆ ಎರಡು ಡಜನ್ ಸಂಥಾಲರು, ಒಂದೂವರೆ ಡಜನ್ ಸಂಥಾಲ ಸ್ತ್ರೀಯರು. ಒಬ್ಬ ಹುಡುಗನ ಸ್ಥಿತಿ ಚಿಂತಾಜನಕ ವಾಗಿದೆ. ಸಂಥಾಲ ಸ್ತ್ರೀಯರು ನೋವಿನಿಂದ ನರಳುತ್ತಿದ್ದಾರೆ....

ತಹಸೀಲ್ದಾರರ ಗದ್ದೆಯಲ್ಲಿ ಹತ್ತು ಜನ ತಣ್ಣಗಾದರು; ಹನ್ನೆರಡು ಜನಕ್ಕೆ ವಿಪರೀತ ಗಾಯ, ಮೂವತ್ತು ಜನಕ್ಕೆ ಸಾಧಾರಣ ಗಾಯ.

ಸಂಥಾಲರ ಗುಡಿಸಿಲುಗಳನ್ನು ಲೂಟಿ ಮಾಡಿದ್ದಾಯಿತು. ತಹಸೀಲ್ದಾರ ಹರಗೌರಿಯ ಸ್ಥಿತಿ ತುಂಬಾ ಶೋಚನೀಯವಾಗಿದೆ, ಬಹುಶಃ ಬದುಕಲಾರ.

## 40

ಜೋಲಿಯಿಸರು ಹೇಳಿದ್ದು ಸರಿಯಾಗಿಯೇ ಇದೆ. ಹಳ್ಳಿಯಲ್ಲಿ ಹದ್ದು ಕಾಗೆಗಳು ಹಾರಾಡುತ್ತಿವೆ. ಪೊಲೀಸ್ ಅಧಿಕಾರಿಗಳು ರಸ್ತೆ ರಸ್ತೆಗಳಲ್ಲಿ ಸುತ್ತು ತ್ತಿದ್ದಾರೆ....

ಪೋಲೀಸ್ ಇನ್ಸ್‌ಪೆಕ್ಟರ್, ಹವಾಲ್ದಾರ್ ಮತ್ತು ಸೈನಿಕರು, ನಾಲ್ಕು ನಾಲ್ಕು ಹವಾಗಾಡಿಯ (ಏರೋಪ್ಲೇನು) ತುಂಬಾ ಬಂದಿಳಿದಿದ್ದಾರೆ.

ಇ. ಎಸ್. ಪಿ. ಕಲೆಕ್ಟರ್, ನ್ಯಾಯಾಧೀಶರು ಈಗ ಬರುತ್ತಾರೆ.

ಹೆಣ....ಹೆಣ....ಇನ್ನು ಇಂಗ್ಲೀಷಿನವರ ರಾಜ್ಯ ಇರುವುದಿಲ್ಲ ಎಂದು ಹೇಳುವ ಸಾಹಸ ಯಾರಿಗಿದೆ?

"ತಹಸೀಲ್ದಾರ ಹರಗೌರಿಯೂ ಸತ್ತು ಹೋದನೆ?....ಅಯ್ಯೋ.... ಯಾರೂ ಮನೆಯಿಂದ ಹೊರಗಡೆ ಕಾಲಿಡಬೇಡಿ....ಜಲಬಾಧೆ, ಮಲಬಾಧೆ ಎಲ್ಲಾ ಮನೆಯಲ್ಲೇ ಮುಗಿಸಿಕೊಳ್ಳಿ. ಮನೆಯಿಂದ ಹೊರಟರೆ ಸೆರೆಹಿಡಿಯು ತ್ತಾರೆ. ಕಾಳೀಮಾತೆಯೇ ಕಾಪಾಡಬೇಕು."

ಬಾಲದೇವನನ್ನು ಇನ್ಸ್‌ಪೆಕ್ಟರ್ ಕರೆಸಿದ್ದಾರೆಯೇ? ಕಲಿಯಾ—ಅಲ್ಲಾ, ಕಾಳೀಚರಣನನ್ನು ಕರೆಸಿದ್ದಾರೇನು?....ಈ ಇಬ್ಬರೂ ಯಾರಿಗೂ ಹೆದರುವವ ರಲ್ಲ. ನೋಡೋಣ, ಏನಾಗುತ್ತದೋ ಇಬ್ಬರೂ ಲೀಡರುಗಳಲ್ಲವೇ?"

"ಓ: ಇಲ್ಲಿನ ಲೀಡರುಗಳು ನೀವೇನೋ" ಇನ್ಸ್‌ಪೆಕ್ಟರ್ ಬಾಲದೇವ ನನ್ನು ಕೇಳಿದ ಆಸ್ಪತ್ರೆಯ ಖಾಲೀಜಾಗದಲ್ಲಿ ಇನ್ಸ್‌ಪೆಕ್ಟರ್ ತನ್ನ ಆಫೀಸನ್ನು ತೆರೆದು ಕೂತಿದ್ದ, ಸೈನಿಕರು ಸಂಥಾಲರನ್ನೆಲ್ಲಾ ಸೆರೆ ಹಿಡಿದಿದ್ದರು. ಗಾಯ ಗೊಂಡಿದ್ದವರು, ಮುದುಕರು, ಮಕ್ಕಳು ಒಬ್ಬರನ್ನೂ ಬಿಡದೆ ಸೆರೆ ಹಿಡಿದಿದ್ದ ರೇನು? ನಿನ್ನೆಯೇ ಡಾಕ್ಟರ್ ಸಾಧಾರಣವಾಗಿ ಗಾಯವಾಗಿದ್ದವರಿಗೆ ಔಷಧಿ ಹಚ್ಚಿ, ಬಟ್ಟೆ ಕಟ್ಟಿದ್ದಾರೆ. ಹೆಚ್ಚು ಗಾಯವಾಗಿರುವ ಇಬ್ಬರು ಸಂಥಾಲರು ಮತ್ತು ಹದಿನಾಲ್ಕು ಜನ ಬೇರೆಯವರನ್ನು ಪೂರ್ಣಿಯಾದ ದೊಡ್ಡ ಆಸ್ಪತ್ರೆಗೆ ನಿನ್ನೆಯೇ ಕಳುಹಿಸಿದ್ದಾಯಿತು. ಸತ್ತವರ ಹೆಣಗಳನ್ನೂ ನಿನ್ನೆಯೇ ಕಳುಹಿಸ ಲಾಯಿತು, ಸಿಂಘಜೀ, ಶಿವಶಂಕರಸಿಂಹ, ಪ್ರತಿ ಪಂಗಡದ ನಾಲ್ಕಾರು ಜನ ಹೆಣಗಳ ಜೊತೆ ಹೋಗಿದ್ದಾರೆ. ಆಸ್ಪತ್ರೆಯಿಂದ ಹೆಣ ಮತ್ತೆ ಸಿಗುವುದು ಯಾವಾಗಲೋ? ಹೆಣವನ್ನು ಕತ್ತರಿಸಿರುತ್ತಾರೆ....ಅಯ್ಯೋ ದೇವರೇ!

ಬಾಲದೇವ ಏನು ಉತ್ತರ ಕೊಡುತ್ತಾನೆ? ಲೀಡರಂತೆ! ...ಯಾರ ಲೀಡರ್? ಸಂಥಾಲರ ಲೀಡರೋ?....ಕೆಮ್ಮಿ ಗಂಟಲು ಸರಿಪಡಿಸಿಕೊಂಡು, ಹಿಂದೆ ಹರಗೌರಿಗೆ ಹೇಳಿದ ಉತ್ತರವನ್ನೇ ಬಾಲದೇವ ಇಂದೂ ಹೇಳಿದ: "ಇಲ್ಲ ಹುಜೂರ್ ನಾನೊಬ್ಬ ಮೂರ್ಖ, ಬಡ ಮನುಷ್ಯ, ಮೂರ್ಖ ಬಡವ ಮನುಷ್ಯ ಎಂದಾದರೂ ಲೀಡರ್ ಆಗಿದ್ದುಂಟೆ ಹುಜೂರ್?"

ಇನ್ಸ್‌ಪೆಕ್ಟರ್ ಬಾಲದೇವನನ್ನು ಕುರ್ಚಿಯ ಮೇಲೆ ಕುಳಿತುಕೊಳ್ಳಲು ಆದೇಶ ನೀಡಿ ಹೇಳಿದ: "ಓ ಬಾಲದೇವಜೀ, ನೀವು ನನಗೆ ಗೊತ್ತು, ಮೊದಲು ಕುಳಿತುಕೊಳ್ಳಿ."

ವಾಸುದೇವ ಮತ್ತು ಸುಂದರ ಒಬ್ಬರ ಮುಖವನ್ನೊಬ್ಬರು ನೋಡಿ ಕೊಂಡರು....ಕಾಳೀಚರಣನನ್ನು ಮಾತಾನಾಡಿಸಲೇ ಇಲ್ಲ....ಅಂ.... ತಹಸೀಲ್ದಾರರು ತಪ್ಪನ್ನು ಸರಿಪಡಿಸುತ್ತಿದ್ದಾರೆ:

"ಇನ್ಸ್‌ಪೆಕ್ಟರ್ ಸಾಹೇಬರೇ. ಇವನು ಕಾಳೀಚರಣ. ಇಲ್ಲಿನ ಸೋಷಲಿಸ್ಟ್ ಪಾರ್ಟಿಯ ಲೀಡರ್, ತುಂಬಾ ಸಾಹಸಿ, ಬರೀ ಸಾಹಸೀ ಅಷ್ಟೇ ಅಲ್ಲ; ಬುದ್ಧಿ ವಂತನೂ ಹೌದು."

"ಓಹೋ ಕಾಳೀಚರಣರೋ, ಬನ್ನಿ ಸಾಹೇಬರೇ ನೀವಂತೂ ದೊಡ್ಡ ಸಾಹೇಬರು ಏನಂತೀರಿ?"

—ಇನ್ಸ್‌ಪೆಕ್ಟರ್ ಬಾಯಿಗೆ ಅಡಿಕೆ ಹೊಗೆಸೊಪ್ಪನ್ನು ಹಾಕಿಕೊಳ್ಳುತ್ತಾ ಮಾತನಾಡಿದರು "ಇಲ್ಲಿ ನೀವು ತುಂಬಾ ಬುದ್ಧಿವಂತಿಕೆಯಿಂದ ಕೆಲಸ ಮಾಡಿದೀರೀ ಅಂತ ತಿಳೀತು. ಬೆಳಗ್ಗೆ ಬಂದ ಕೂಡಲೇ ನನಗೆ ವಿಚಾರವೆಲ್ಲಾ ತಿಳೀತು. ನಿಜವಾಗಲೂ ಮೆಚ್ಚಬೇಕಾದ್ದೇ....ಭಲೇ....ಕೂತ್ಕೊಳಿ."

ಕಾಳೀಚರಣ ಕುಳಿತುಕೊಳ್ಳುತ್ತಾ ಹೇಳಿದ:

"ನೋಡಿ ಇನ್ಸ್‌ಪೆಕ್ಟರ್ ನಮ್ಮ ನಮ್ಮ ಮಾತುಕತೆಯಲ್ಲಿ ಪಂಚಾಯತಿಯಲ್ಲಿ ಎಲ್ಲಾ ತೀರ್ಮಾನವಾಗಿ ಹೋದರೆ ನಾವ್ಯಾಕೆ ಜಗಳ ಆಡೋಣ? ಹುಚ್ಚು ನಾಯಿಗಳೇನು?"

"ಪಂಚಾಯತಿಯಲ್ಲಿ ತೀರ್ಮಾನವೇ? ಈ ಖೂನೀ ಕೇಸು....?" ಇನ್ಸ್‌ಪೆಕ್ಟರ್ ಎಲೆಡಿಕೆ ತುಂಬಿದ ಮುಖ ಒಮ್ಮೆಲೇ ಉಬ್ಬಿಕೊಂಡಿತು.

"ಅಲ್ಲ, ಅಲ್ಲ, ಇದಲ್ಲ....ಬೀಜ ಹಂಚುವ ವಿಚಾರ"

"ಓ" ಎಲೆಡಿಕೆ ರಸವನ್ನು ಉಗುಳುತ್ತಾ ಇನ್ಸ್‌ಪೆಕ್ಟರ್ ಹೇಳಿದರು: "ಓ: ಹಾಗಾದರೆ ಸರಿ. ನೀವು ಸೋಷಲಿಸ್ಟ್ ಪಾರ್ಟಿಯವರು, ನೀವೇ ಹೇಳಿ. ನಾಲ್ಕು ಜನರ ಮಾತುಕಥೆಯಿಂದ: ಪಂಚಾಯತಿಯಿಂದ ನಡೆಯದ ವಿಚಾರ, ಹೊಡೆದಾಟ—ಬಡಿದಾಟಗಳಿಂದ ಸಾಧ್ಯವೇನು?"

"ಹಿಂಸೆಯ ಮಾರ್ಗದಲ್ಲಿ ಎಂದೂ ಹೋಗಬಾರದು." ಬಾಲದೇವ ಗಂಭೀರವಾಗಿ ಹೇಳಿದ.

"ಏನಂದಿರಿ?" ಇನ್ಸ್‌ಪೆಕ್ಟರ್ ಬಾಲದೇವನ ಮಾತನ್ನು ಅರ್ಥಕ್ಕೆ ತಡೆಯುತ್ತಾ ಮತ್ತೆ ಕೇಳಿದರು: "ಏನಂದಿರಿ?" ಇನ್ಸ್‌ಪೆಕ್ಟರ್ ಮಾತಾನಾಡುವಾಗ ಕೈಯ್ಯನ್ನು—ತುಂಬಾ ತಿರುಗಿಸುತ್ತಾರೆ. ಹುಬ್ಬನ್ನು ಆಡಿಸುತ್ತಿರುತ್ತಾರೆ.

ವಾಸುದೇವ ಮತ್ತು ಸುಂದರ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು.... "ಏನಾದರೂ ಅನ್ನುವುದಕ್ಕೆ ಬಾಲದೇವನಿಗೆ ಗೊತ್ತಿರುವುದಾದರೂ ಏನು? ನೋಡಿದ್ಯೋ ಇಲ್ವೋ ಕಾಳೀಚರಣ, ಹೇಗೆ ಬಡ ಬಡ ಅಂತ ಉತ್ತರ ಕೊಟ್ಟುಬಿಟ್ಟ."

ಕಾಳೀಚರಣ ಬಾಲದೇವನಿಗೆ ಉತ್ತರ ಹೇಳಿದ:

"ಹಿಂಸೆ ಅಹಿಂಸೆಯ ವಿಚಾರವಲ್ಲ ಬಾಲದೇವ, ಮುಖ್ಯವಾದದ್ದು ಬುದ್ಧಿ, ಇಲ್ಲೇ ನಮ್ಮ ಪಾರ್ಟಿಯ ಬೇರೆ ಯಾರಾದರೂ ಕಾಮ್ರೇಡ್ ಇದ್ದಿದ್ದರೇ, ಅದೇ ಬೇರೆ ವಿಚಾರ ಆಗುತ್ತಿತ್ತು. ಬುದ್ಧಿ ಮುಖ್ಯ."

ಕಾಳೀಚರಣ ಮತ್ತು ಬಾಲದೇವ ಇಬ್ಬರೂ ತಮಗೆ ಬುದ್ಧಿ ಇದೆಯೆಂದು ಇನ್ಸ್‌ಪೆಕ್ಟರಿಗೆ ತೋರಿಸಿಕೊಂಡರು. ವಯಸ್ಸು ನೋಡಿ ಮೈ ಮರೆಯಬೇಡಿ ಇನ್ಸ್‌ಪೆಕ್ಟರ್...."ಅದು ಹಾಗಿರಲಿ, ಬಾಲದೇವ ಈ ಘಟನೆ ನಡೆದಾಗ ನೀವು ಎಲ್ಲಿದ್ದಿರಿ?" ಇನ್ಸ್‌ಪೆಕ್ಟರ್ ಪ್ರಶ್ನಿಸಿದರು:

ಬಾಲದೇವ ಮತ್ತೆ ಕೆಮ್ಮಿದ...."ನಾನು....ಹುಜೂರ್....ನಾ.... ನು....ನಾನು ಮಠದಲ್ಲಿದ್ದೆ. ವಿಚಾರ ಏನೂ ಅಂದರೆ ನಾನು ವೈಷ್ಣವ. ಆ ದಿನ ನನಗೆ ಗುರು ಜಪಮಾಲೆ ಕೊಡುವವರಿದ್ದರು. ಬೆಳಗ್ಗೆಯೆಲ್ಲಾ ಬತ್ತ ಕೊಡಿಸು ವುದರಲ್ಲೇ ಕಳೆದುಹೋಯಿತು. ಮಧ್ಯಾಹ್ನ ನಾನಾಗಿ ಗುರುವಿನಿಂದ ಜಪಮಾಲೆ ತೆಗೆದುಕೊಂಡು ಏಳುವ ಹೊತ್ತಿಗೆ....ತತಮಾ ಸಂಗಡದ ರಾಮುಪಿಯರಿಯಾ ಅಳುತ್ತಾ ಬಂದಳು."

ಇನ್ಸ್‌ಪೆಕ್ಟರ್ ಗಂಭೀರವಾಗಿ ಪ್ರಶ್ನಿಸಿದರು: "ಓ ಹಾಗಾದರೆ ಮೊದಲು ನಿಮಗೆ ಏನೂ ಗೊತ್ತೇ ಇರಲಿಲ್ಲವೇನು ?"

"ಇವನಿಗೆ ಮಾತ್ರವೇನು ? ಯಾರಿಗೂ ಗೊತ್ತಿರಲಿಲ್ಲ." ಖೇಲಾವನ ಯಾದವ ತುಂಬಾ ಧೈರ್ಯವಹಿಸಿ ಮಾತನಾಡಿಯೇಬಿಟ್ಟ. ಇನ್ಸ್‌ಪೆಕ್ಟರಿ ಗೋಸ್ಕರ ಊಟದ ಏರ್ಪಾಡು ಮಾಡಿರುವುದೆಲ್ಲಾ ಅವನೇ ಅಲ್ಲವೇ! ಇನ್ಸ್‌ಪೆಕ್ಟರ್ ಜೊತೆ ಅವನೇಕೆ ಮಾತನಾಡಬಾರದು? ತಹಸೀಲ್ದಾರರು ಏನೂ ಮಾತನಾಡಲಿಲ್ಲ.

"ಓ ಖೇಲಾವನ್ ಬನ್ನಿ ಕುಳಿತುಕೊಳ್ಳಿ." "ನಾನು ಇಲ್ಲೇ ಇದೀನಿ.... ತಾವು ಸ್ವಲ್ಪ ಬೇಗ ಬೇಗ ಮುಗಿಸಿದರೆ ಒಳ್ಳೇದು ಊಟವೆಲ್ಲಾ ತಣ್ಣಗಾಗುತ್ತೆ." ಕೇವಲ ಇಲ್ಲಿರುವ ಇಬ್ಬರು ಲೀಡರುಗಳು ಮಾತ್ರವೇ ಬುದ್ಧಿವಂತರಲ್ಲ. ಬೇರೆ ಯವರಿಗೂ ಬುದ್ಧಿ ಇದೆ....

"ಹುಜೂರ್ ನನ್ನ ಮಗ ಇಲ್ಲಿ ಇದ್ದಿದ್ದರೆ ತಮ್ಮ ಜೊತೆ ಇಷ್ಟು ಹೊತ್ತಿಗೆ ಇಂಗ್ಲೀಷಿನಲ್ಲೇ ಮಾತಾಡುತ್ತಿದ್ದ 'ರಮೈನ' ಹಾಗೇ ಒಂದು ಪುಸ್ತಕ ಇದೆ. ಕೆಂಪಗೆ, ದಪ್ಪಕ್ಕೆ....ಅದನ್ನು ನೋಡ್ಕೊಂಡು ಅವನು ನಿಮ್ಮ ಹತ್ತಿರ ಮಾತಾಡಿ ರ್ತಿದ್ದ." ಖೇಲಾವನಸಿಂಹ ಯಾದವ ಹೇಳಿದ.

"ಓಹೋ ನಿಮ್ಮ ಮಗ ಇಂಗ್ಲೀಷ್ ಮಾತಾಡ್ತಾನೇನು?"

"ಹೌದು, ಡಾಕ್ಟರ್ ಬಾಬುವಿನ ಜೊತೆ ಯಾವಾಗಲೂ ಇಂಗ್ಲೀಷಿನಲ್ಲೇ ಮಾತಾಡ್ತಿರ್ತಾನೆ."

ಬಾಲದೇವ ಹೇಳಿದ:

"ಮೊಕದ್ದಮೆ ತೀರ್ಮಾನವನ್ನೂ ಓದಿ ಹೇಳುತ್ತಾನೆ." "ಏಯ್ತ್ ಕ್ಲಾಸಿನಲ್ಲಿ ಓದ್ತಿದಾನೆ." ಕಾಳೀಚರಣನೂ ಮಾತು ಜೋಡಿಸಿದ.

"ನೀವು ಎಲ್ಲಿಯವರೆಗೆ ಓದಿದೀರಿ ಕಾಳೀಚರಣ? . . . . ಯಾವ ಸ್ಕೂಲಿನಲ್ಲೂ ಓದಿಲ್ವೇ? . . . . ಭೇಷ್ ನಿಮ್ಮ ಮಾತನ್ನು ಕೇಳಿದರೆ ನೀವು ಅವಿದ್ಯಾವಂತರೂ ಅಂತ ಯಾರೂ ಹೇಳೋದಕ್ಕೆ ಆಗೋದಿಲ್ಲ. ಏನಂದಿರಿ? ಓದೋದಕ್ಕೆ ಬರೆಯೋದಕ್ಕೆ ಬರುತ್ತೇನು? ಪತ್ರಿಕೆಯನ್ನು ಓದ್ತೀರೇನು? ಓಹೋ 'ರಮೈನೂ' ಓದ್ತೀರಾ? ಮಹಾಭಾರತಾನೂ? ಸರಿ ಹಾಗಾದ್ರೇ· · · —"

"ಬಾಲದೇವನೂ ಪತ್ರಿಕೆ ಓದುತ್ತಾನೆ ಹುಜೂರ್."

ಖೇಲಾವನಸಿಂಹ ಹೇಳಿದ. 'ಪತ್ರಿಕೆಯನ್ನು ನಾವುಗಳೂ ಓದ್ತೀವಿ. . . . ಆದರೆ ಪತ್ರಿಕೆಗಳಲ್ಲಿ ತುಂಬಾ ಸುಳ್ಳು ಸುಳ್ಳು ಬರ್ತಿರ್ತಾವೆ, ಹುಜೂರ್, ಒಂದು ಸಲ ಬರೆದಿದ್ರು ಒಬ್ಬಳು ಹೆಂಗಸು, ಸ್ವಲ್ಪ ದಿನಗಳಾದ ಮೇಲೆ ಗಂಡಸಾಗಿಬಿಟ್ಟಳಂತೆ, ಎಂಥ ಸುಳ್ಳು ನೀವೇ ನೋಡಿ.'

"ಕಾಳೀಚರಣ, ಆ ಘಟನೆ ನಡೆದಾಗ ನೀವು ಎಲ್ಲಿದ್ದಿರಿ?"

—ಸೊಂಟದ ಪಟ್ಟಿಯನ್ನು ಸಡಿಲಗೊಳಿಸುತ್ತಾ ಇನ್ಸ್‌ಪೆಕ್ಟರ್ ಹೇಳಿದರು:

ಇನ್ಸ್‌ಪೆಕ್ಟರ್ ಸೊಂಟದ ಪಟ್ಟಿಯನ್ನು ತೆಗೆದು ಬಾಲದೇವ, ಕಾಳೀಚರಣರನ್ನು ಹೊಡೆದುಬಿಡುತ್ತಾರೇನೋ ಎಂದು ಅಗಮೂ ಚೌಕೀದಾರನಿಗೆ ಭಯವಾಯಿತು. ಇನ್ಸ್‌ಪೆಕ್ಟರ್ ಬೆಲ್ಟನ್ನು ತೆಗೆದ ಕೂಡಲೇ ಅವನ ಮುಖದ ಬಣ್ಣವೇ ಹಾರಿಹೋಯಿತು. ಇಲ್ಲ ಇಲ್ಲ ಇನ್ಸ್‌ಪೆಕ್ಟರ್ ಹಾಗೆ ಮಾಡಲಾರರು.

"ಹುಜೂರ್, ಆ ದಿನ ಬೆಳಗ್ಗೆ ನಾನು ರೈತರಿಗೆ ಭತ್ತವನ್ನು ಕೊಡಿಸಿ ಆದ ಮೇಲೆ ಹನ್ನೆರಡು ಗಂಟೆಗೆ ಸರಿಯಾಗಿ ಪೂರ್ಣಿಯಾಗೆ ಹೊರಟುಹೋದೆ. ಆ ವಿಚಾರ ತಹಸೀಲ್ದಾರ ಹರಗೌರಿ, ಅಲ್ಲ ಅಲ್ಲ ತಹಸೀಲ್ದಾರ ವಿಶ್ವನಾಥ ಪ್ರಸಾದರಿಗೂ ಗೊತ್ತು."

ದೀರ್ಘವಾಗಿ ಉಸಿರೆಳೆದು ಇನ್ಸ್‌ಪೆಕ್ಟರ್ ಹೇಳಿದರು: "ಓಹೋ! ಸರಿ ನೀವು ಪೂರ್ಣಿಯಾಗಿ ಹೋಗಿದ್ದಿರಿ."

"ಮಧ್ಯಾಹ್ನದ ಮೇಲೆ ಕೆಲಸ ಮುಂದುವರಿಸಿ ಇನ್ಸ್‌ಪೆಕ್ಟರೇ," ತಹಸೀಲ್ದಾರರು ಹೇಳಿದರು.

"ಇಲ್ಲಾ ತಹಸೀಲ್ದಾರರೇ. ಎಸ್. ಪಿ. ಬರುವವರಿದ್ದಾರೆ. ನಾವು ಈಗಲೇ ಎಲ್ಲಾ ಕೆಲಸಾನೂ ಮುಗಿಸಿಬಿಡಬೇಕು." ಸಾಕ್ಷಿಗಳ ಸಹಿ....

"ನಿಜವಾದ ಸಾಕ್ಷಿಗಳು ಇಬ್ಬರು ಮೂರು ಜನ ಇದ್ದಾರೆ. ಅವರ ಸಹಿ ತೊಗೊಳ್ಳಿ. ಮಿಕ್ಕವರದ್ದು ಆಮೇಲೆ ತೊಗೊಂಡರಾಯ್ತು. ಕಾಳೀಚರಣ, ಬಾಲದೇವ ನೀವು ಸತ್ಯವಾದ ವಿಚಾರವನ್ನೇ ಹೇಳಿದೀರಿ, ಸುಳ್ಳು ಸಾಕ್ಷಿ ಕೊಟ್ಟಿಲ್ಲ. ಹೌದು ತಾನೇ? ಇವರಿಬ್ಬರ ಹೇಳಿಕೆಯನ್ನು ಬರೆದುಕೊಳ್ಳಿ. ಇಬ್ಬರಿಗೂ ಸಹಿ ಮಾಡೋದು ಬರುತ್ತೆ."

"ನಿಮ್ಮ ಅಭಿಪ್ರಾಯ ಏನು?" ಇನ್ಸ್‌ಪೆಕ್ಟರ್ ಕೇಳಿದರು "ಸಹಿ ಹಾಕೋದ್ರಲ್ಲಿ ತೊಂದರೆಯೇನು?" ಕಾಳೀಚರಣ ಹೇಳಿದ.

—ಕಾಳೀಚರಣ ಕೈ ಕೊಡವಿಕೊಂಡು ಸಹಿ ಹಾಕಿದ. ಬಾಲದೇವ ತುಂಬಾ ಪ್ರೀತಿಯಿಂದ ನಿದಾನವಾಗಿ ತನ್ನ ಹೆಸರನ್ನು ಬರೆದ. —ಬಾಲದೇವ ನಿಜವಾದ ಸಾಧು!

"ಬಾಲದೇವ" ಇನ್ಸ್‌ಪೆಕ್ಟರ್ ಹೇಳಿದರು.

"ಬಾಲದೇವ, ಸ್ವಲ್ಪ 'ಬ'ಗೆ ದೀರ್ಘಕೊಡಿ, 'ದ' ಮೇಲೆ ಏಕಾರ ಸ್ವಲ್ಪ ಕತ್ತಿಹಾಗೆ ಬರೀರಿ...."

"ಇನ್ಸ್‌ಪೆಕ್ಟರೇ ಬಾಲದೇವ ತಮ್ಮ ಹೆಸರಿನಲ್ಲೂ ಕತ್ತಿ ದೊಣ್ಣೆ ಒಂದೂ ಹಾಕ್ಕೊಳ್ಳೋದಿಲ್ಲ. ಹಿಂಸಾವಾದ...." ಕಾಳೀಚರಣ ನಗುತ್ತಾ ನುಡಿದ.

ಇನ್ಸ್‌ಪೆಕ್ಟರ್ ಗಟ್ಟಿಯಾಗಿ ನಕ್ಕರು. ಅವರು ನಕ್ಕಮೇಲೆ ಬೇರೆಯವರೂ ನಕ್ಕರು.

ಸರಿಯಾದ ಮಾತು ಹೇಳಿದ ಕಾಳೀಚರಣ....ಇನ್ಸ್‌ಪೆಕ್ಟರೂ ನಕ್ಕೂ ನಕ್ಕು ಸುಸ್ತಾದರು.

ನೋಡಿದ್ರಾ? ಬುದ್ಧಿ ಇದೆಯೋ ಇಲ್ಲವೋ?

# 41

ಒಂಭತ್ತು ಜನರನ್ನು ಪೋಲೀಸ್ ಸ್ಟೇಷನ್ನಿಗೆ ರವಾನಿಸಲಾಯಿತು.

ಒಂಭತ್ತು ಜನ ಸಂಥಾಲರಲ್ಲದೆ ಗಾಯಗೊಂಡು ಆಸ್ಪತ್ರೆಯಲ್ಲಿ ಮಲಗಿರುವವರೂ ಬಂಧಿತರಾಗಿದ್ದಾರೆ. ಪೂರ್ಣಿಯಾ ಆಸ್ಪತ್ರೆಯಲ್ಲಿ ಬಂದೂಕುಧಾರಿ ಸೈನಿಕರ ಪಹರೆಯಿದೆ.

ಸಂಥಾಲರಲ್ಲದ ಇತರರು ಒಬ್ಬರೂ ಬಂಧಿತರಾಗಿಲ್ಲ.... ಅಂದ ಮಾತ್ರಕ್ಕೆ ಇದು ಸುಲಭವಾಗಿ ಸಾಧ್ಯವಾಯಿತೂ ಎಂದು ತಿಳಿಯಬೇಡಿ.... ಇನ್ಸ್‌ಪೆಕ್ಟರ್‌ರಾಗ ಎಳೆದಿದ್ದರು: "ಖೇಲಾವನ್ನರೇ, ನಿಮ್ಮ ವಿಚಾರದಲ್ಲಿ ಎಸ್.ಪಿ. ಸಾಹೇಬರಿಗೆ ಅನುಮಾನ ಬಂದುಬಿಟ್ಟದೆ. ನೀವೇ ಎಲ್ಲಾ ಯಾದವರಿಗೂ ಮಚ್ಚು, ಕೊಡಲಿ ತೊಗೊಂಡು ಹೋಗಿ ಅಂತ ಅಪ್ಪಣೆ ಮಾಡಿದೀರಿ ಅನ್ನೋದು ಅವರ ಸಂದೇಹ." ಈ ಮಾತನ್ನು ಕೇಳಿ ಖೇಲಾವನ್ನನ ಮುಖದ ಬಣ್ಣವೇ ಕೆಟ್ಟು ಹೋಯಿತು. ಅಲ್ಲೇ ತಹಸೀಲ್ದಾರರು ಇದ್ದದ್ದರಿಂದ ಐದು ಸಾವಿರ ರೂಪಾಯಿಗಳಿಗೇ ವಿಷಯ ತೀರ್ಮಾನವಾಯಿತು. ಇಲ್ಲದಿದ್ದರೆ?.... ಇಲ್ಲದಿದ್ದರೆ ಇಷ್ಟು ಹೊತ್ತಿಗೆ ಖೇಲಾವನ್ನನ್ನೂ ದೊಡ್ಡ ಮನೆಯ ಗಾಳಿ ಕುಡಿಯುತ್ತಿರಬೇಕಾಗಿತ್ತು, ಸಿಂಘಜೀ ಮನೆಯಲ್ಲಿಲ್ಲ, ಶಿವಶಂಕರ ಸಿಂಹನೂ ಮನೆಯಲ್ಲಿಲ್ಲ. ಸಿಂಘಜೀಯ ಮನಸ್ಸಿನಲ್ಲಿ ಏನಿದೆಯೋ ಯಾರಿಗೆ ಗೊತ್ತು.... ಇನ್ಸ್‌ಪೆಕ್ಟರೂ ರಾಜಪೂತರು. ಮನುಷ್ಯನ ಮನಸ್ಸಿನ ವಿಚಾರ ಯಾರು ಹೇಳೋದಕ್ಕಾಗುತ್ತೆ? ಯಾವಾಗ, ಹೇಗೆ ತಿರುಗುತ್ತದೋ?.... ಎಲ್ಲರ ಬಿಡುಗಡೆ ಬಿಟ್ಟಿಯಾಗೇನೂ ಆಗಿಲ್ಲ.... ಐದು ಸಾವಿರ!

ತಹಸೀಲ್ದಾರ ವಿಶ್ವನಾಥರಿಗೆ ಏನಾದರೂ ಅನ್ನಿಸಿತೋ ಇಲ್ಲವೋ?.... ಸುಮರಿತದಾಸನ ಹೊಟ್ಟೆಯಲ್ಲಿ ಮೂರು ದಿನಗಳಿಂದ ಶೂಲ ಹೊಕ್ಕಿರಬೇಕು. ಇಲ್ಲದಿದ್ದರೆ ಅವನು ಹಾಗೆ ಬಾಯಿ ಮುಚ್ಚಿಕೊಂಡು ಇರುವವನೇ ಅಲ್ಲ.... ನೂರು ವರ್ಷ, ಸುಮರಿತದಾಸನಿಗೆ ನೂರು ವರ್ಷ ಆಯುಸ್ಸು.

"ಹಾಗಾದರೆ ಈಗ ನನ್ನ ವಯಸ್ಸು ಎಷ್ಟಿರಬಹುದು ಹೇಳಿ ನೋಡೋಣ."

"ನಲವತ್ತಿರಬಹುದು."

" ನಲವತ್ತಲ್ಲ, ಮೂವತ್ತೈದು. ನೇರಳೆ ಹಣ್ಣಿನ ರಸವನ್ನು ನೀರು ಹಾಕಿ ಕೊಳ್ಳದೆ ಕುಡಿದುಬಿಟ್ಟೆ. ಅದಕ್ಕೆ ಹಲ್ಲುಗಳೆಲ್ಲಾ ಉದುರಿಹೋದವು."

" ಸರಿ. ಸುಮರಿತದಾಸರೇ. ನಿಮಗೇನಾದರೂ ವಿಚಾರ...."

" ನಾನೇನು ಹೊಟ್ಟೆನೋವಿನಿಂದ ಮನೆಯಲ್ಲಿ ಸುಮ್ಮನೆ ಮಲಗಿದ್ದೆ ಅಂದು ಕೊಂಡರೇನು ? ಏನು ಕೇಳಬೇಕೋ ಕೇಳಿ, ಹೇಳ್ತೀನಿ."

" ತಹಸೀಲ್ದಾರರೂ ದುಡ್ಡು ಕೊಟ್ಟರೇನು ? "

" ತಹಸೀಲ್ದಾರ ವಿಶ್ವನಾಥಪ್ರಸಾದರನ್ನು ಅಂಥ ಮೂರ್ಖರೂ ಅಂದು ಕೊಂಡರೇನಯ್ಯಾ? ಅವನು ಇನ್ಸ್‌ಪೆಕ್ಟರ್ ಆದರೆ, ಇವರು ತಹಸೀಲ್ದಾರರು. 'ನೀನು ಕಾಗೆಯಾದರೆ ನಾನು ಮರ, ಈ ಕಥೆ ಕೇಳಿಲ್ವಾ ? "

" ಪಾಪ ತಹಸೀಲ್ದಾರ ಹರಗೌರಿ."

" ಅತಿ ಸಂಘರ್ಷ ಕರೆ ಜೋಕೋವು, ಅನಲ ಪ್ರಗಟ ಚಂದನ ತೇ ಹೋಹಿ (ಅತಿಯಾಗಿ ಸಂಘರ್ಷ ಮಾಡಿದರೆ ಚಂದನದಿಂದಲೂ ಬೆಂಕಿ ಹುಟ್ಟುತ್ತದೆ). ಸಿಯಾವರ ರಾಮಚಂದ್ರ ಕೀ ಜೈ"

" ಆದರೆ ರಾಜಪೂತ ಸಂಗಡದವರನ್ನು ಎಸ್.ಪಿ. ಸಾಹೇಬರೂ ಬಿಡುವುದಿಲ್ಲ. ಎಸ್.ಪಿ. ಸಾಹೇಬರು ಏನು ಹೇಳಿದರಂತೆ ಗೊತ್ತೇನು?....ತಹಸೀಲ್ದಾರ ವಿಶ್ವನಾಥಪ್ರಸಾದರ ಜಮೀನಿನಲ್ಲಿ ಬೀಜ ಬಿತ್ತಿಸೋದಕ್ಕೆ ತಹಸೀಲ್ದಾರ ಹರಗೌರಿ ಯಾಕೆ ಹೋಗಿದ್ದರೋ ಅರ್ಥವಾಗ್ತಿಲ್ಲ ಅಂದರಂತೆ. ಏನೋ ರಹಸ್ಯ ಇರಬಹುದೂ ಅಂತ ಅವರಿಗೆ ಅನುಮಾನ....ಸಿಂಘಜೀಯವರಿಗೂ ಸ್ವಲ್ಪ ನಷ್ಟವಾಗುತ್ತೆ."

" ಸಾಕ್ಷಿಗಳಲ್ಲಿ ಯಾರು ಯಾರ ಹೆಸರಿದೆ ? "

" ಸಾಕ್ಷಿ ವಿಚಾರ ಹಾಗಿರಲಿ ನಿಷ್ಪಕ್ಷಪಾತ ದೃಷ್ಟಿಯಿಂದ ನೀನೇ ಹೇಳು, ಸಂಥಾಲರು ಗಲಾಟೆ ಮಾಡಿದ್ದು ನಿಜ ತಾನೇ ? "

" ಅದರಲ್ಲಿ ಸಂಶಯವೇನು ? "

" ಅಂದಮೇಲೆ ಸಾಕ್ಷಿಯ ವಿಚಾರ ಯೋಚನೇನೇ ಇಲ್ಲ....ಆದರೆ ಹಳ್ಳಿಯ ಅದೃಷ್ಟದ ಬಾಗಿಲು ತೆರೆದಿದೆ ಕಣಯ್ಯಾ. ಇಷ್ಟು ದೊಡ್ಡ ಕೇಸು ಎಂದೂ ನಡೆದಿರಲಿಲ್ಲ. ಇದರಲ್ಲಿ ಸಾಕ್ಷಿ ಹೇಳೋದಕ್ಕೆ ಹೋದವರಿಗೆಲ್ಲಾ ಮೂರು ಮೂರು ಜನ ತಿನ್ನಿಸೋರು ಸಿಗ್ತಾರೆ, ಮೂರು ಕೇಸುಗಳು ಒಂದಕ್ಕೊಂದು ಜೋಡಿಸಿಕೊಂಡಿವೆ. ಗೊತ್ತಾಯಿತೆ?....ಹುಷಾರ್ ನನ್ನ ಹೆಸರನ್ನು ಮಾತ್ರ

ಎತ್ತಬೇಡಿ....ಹೂಂ....ನನ್ನ ತೀರ್ಮಾನ ಇನ್ನೂ ಆಗಿಲ್ಲವಲ್ಲ? ಜನ ನನಗೇನು ಕೊಡ್ತಾರೆ! ಕಾಗದ ಪತ್ರ, ಬರವಣಿಗೆ–ರುಜುವಾತು ಎಲ್ಲ ಸುಮರಿತದಾಸನ ಕೊರಳಿಗೆ ಬೀಳುತ್ತಿತ್ತು....ಆದರೆ ಈ ಸಲ ಹಾಗೆ ಆಗೊಲ್ಲ. ಮೊದಲ ವಿಷಯ ತೀರ್ಮಾನ ಆಗಲಿ."

"ಸಂಥಾಲರಲ್ಲಿ ಯಾರು ಯಾರು ಸಾಕ್ಷಿ ಕೊಟ್ಟರು?"

"ಸರಿ, ಸಂಥಾಲ ಪಂಗಡದಲ್ಲಿ ಸಾಕ್ಷಿ ಹೇಳೋದಕ್ಕೆ ಬರೋರು ಯಾರಿದಾರೆ? ಎಲ್ಲಾ ಅಪರಾಧಿಗಳೇ. ಬಡಕಾ ಅಂಬಿಗನ ಹನ್ನೆರಡು ವರ್ಷದ ಮಗನೂ ಸೆರೆಸಿಕ್ಕಿದಾನೆ....ಇನ್ಸ್‌ಪೆಕ್ಟರ್ 'ಧಾನ್ಯ ಎಲ್ಲಾ ಯಾಕೆ ಲೂಟಿ ಮಾಡ್ತಿದ್ರೀ' ಅಂತ ಕೇಳಿದ್ದಕ್ಕೆ ಬಿರಸಾ 'ಅದನ್ನೆಲ್ಲಾ ಬೆಳೆದದ್ದು ನಾವೇ' ಅಂತ ಉತ್ತರ ಕೊಟ್ಟ. ಆಮೇಲೆ ಇನ್ಸ್‌ಪೆಕ್ಟರ್ ಗದರಿಸಿ ಬೆದರಿಸಿ ಕೇಳಿದ ಮೇಲೆ ಮಿಕ್ಕವರೆಲ್ಲಾ 'ಆ ಜಮೀನು ತಹಸೀಲ್ದಾರ ವಿಶ್ವನಾಥ ಪ್ರಸಾದರಿಗೆ ಸೇರಿದ್ದೂ' ಅಂತ ತಕ್ಷಣ ಒಪ್ಪಿಕೊಂಡರು. ಹೆಂಗಸರೂ ಮಕ್ಕಳೂ ಅದು ತಹಸೀಲ್ದಾರರ ಜಮೀನು ಅಂತ ಒಪ್ಪಿಕೊಂಡರು. "ಹಾಗಾದರೆ ಬಲವಂತವಾಗಿ ಬೆಳೆ ಯಾಕೆ ಕಿತ್ತಿದ್ರೀ?" ಅಂದಿದ್ದಕ್ಕೆ ಅವರು ಹೇಳಿದರು: "ಜಮೀನ್ದಾರೀ ಪದ್ಧತಿ ನಾಶವಾಗಿ ಹೋಯಿತು. ಆದರೆ ನಮ್ಮ ಹಳ್ಳೀಲಿ ಮಾತ್ರ ಜಮೀನ್ದಾರರೆಲ್ಲಾ ಸೇರ್ಕೊಂಡು ನಮ್ಮನ್ನು ಭೂಮಿಯಿಂದ ಬಿಡಿಸ್ತಿದಾರೆ. ಅದಕ್ಕೋಸ್ಕರ ಲೂಟಿ ಮಾಡಿದೆವು."

"ಸರಿಯಾಗಿದೆ ಉತ್ತರ! 'ಜಮೀನಿನಿಂದ ಬಿಡಿಸಿಬಿಟ್ಟರು, ಅದಕ್ಕೆ ಲೂಟಿ ಮಾಡಿಬಿಟ್ಟೆವು!' ಕಾಲೀ ಕಿರಿಯ ನಿಜವಾಗಲೂ ಹಾಗೇ ಉತ್ತರ ಕೊಟ್ಟನೇನು?"

"ಮತ್ತೆ ಸುಮರಿತದಾಸ ಸುಳ್ಳು ಹೇಳ್ತಾನೇ ಅಂದುಕೊಂಡರೇನು? ಸಂಥಾಲರು ಹಾಗೆ ಹೇಳಿಕೆ ಕೊಡದೇ ಇದ್ದಿದ್ರೆ ನೀವು ಇದುವರೆಗೂ ಮನೇಲಿ ಕೂತು 'ಹಾ ಹಾ—ಹೀ ಹೀ' ಅಂತಿರೋದಕ್ಕೆ ಸಾಧ್ಯವಾಗ್ತಿತ್ತೂ ಅಂದು ಕೊಂಡರೇನು? ಇಷ್ಟುಹೊತ್ತಿಗೆ ಜೈಲಿನಲ್ಲಿ ಗಾಣದ ಎತ್ತಿನ ಹಾಗೆ ತಿರುಗ್ತಿದ್ರಿ. ಗೋತ್ತಾಯ್ತೇನು! 'ಬೆಂಕಿ ಬಿದ್ದ ಮನೇಲಿ ಸಿಕ್ಕಿದಷ್ಟೇ ಲಾಭ' ಅಂತ ಇನ್ಸ್‌ಪೆಕ್ಟರೂ ಯೋಚಿಸಿದರು. ಅದಕ್ಕೇ ಹೇಳಿದ್ದು, ತಹಸೀಲ್ದಾರರೇನೂ ಮೂರ್ಖರಲ್ಲ, ಅಂತ. ಇನ್ಸ್‌ಪೆಕ್ಟರಿಗೆ ಸೇರಿದ ಜಿಲ್ಲೆ ಗದರಿಸಿ ಬೆದರಿಸಿ ಎಲಡಿಕೇ ವಸೂಲು ಮಾಡೋದಕ್ಕೆ ಅವರಿಗೆ ಹಕ್ಕಿದೆ. ಅದಕ್ಕೆ ತಹಸೀಲ್ದಾರರು ಏನು ಮಾಡೋದಕ್ಕೆ ಆಗುತ್ತೆ?....ಸಿಂಘಜೀಗೆ ಐದು ಸಾವಿರ, ಶಿವಶಂಕರ ಸಿಂಹ ಐದು ಸಾವಿರ

ಕೊಡಬೇಕಾಗುತ್ತೆ.... ಇನ್ಸ್‌ಪೆಕ್ಟರ್ ಡಾಕ್ಟರನ್ನು ಕೇಳಿದರಂತೆ. ಇಂಗ್ಲೀಷಿನಲ್ಲಿ ಅದೇನು ' ಟಿಸ್‌ಪಿಸ್ ' ಅಂತ ಮಾತು ಕತೆ ಆಯ್ತೋ, ಯಾರಿಗೆ ಗೊತ್ತು? ಎಸ್.ಪಿ. ಸಾಹೇಬರೂ ಡಾಕ್ಟರ ಜೊತೆ ಇಂಗ್ಲಿಷಿನಲ್ಲೇ ಮಾತಾಡ್ತಿದ್ರು. ಡಾಕ್ಟರೂ ತುಂಬಾ ಯೋಗ್ಯ ಮನುಷ್ಯ: ····ಪ್ರತಿಯೊಂದು ಹೆಣದ ವಿಚಾರಕ್ಕೂ ಏನು ಬರೆದಿದ್ದಾರೆ ಗೊತ್ತೇನು? ಒಂದರ ಮೇಲೆ ಸಂಥಾಲರ ಪೆಟ್ಟಿನಿಂದ ಗಾಯವಾಗಿದೆ ಅಂತ, ಗಾಯವನ್ನು ನೋಡಿದರೆ, ತನ್ನ ಪ್ರಾಣ ಉಳಿಸಿಕೊಳ್ಳುವುದಕ್ಕಾಗಿಯೇ ಇವರ ಮೇಲೆ ಆಕ್ರಮಣ ಮಾಡಿದ ಹಾಗೆ ಕಾಣುತ್ತೇ ಅಂತ, ಬರೆದಿದಾರೆ-····ಇತ್ಯಾದಿ ಈ ಕಡೆಯವರ ಹೆಣದ ಮೇಲೆ ಬರೆದಿದಾರೆ····"

"ಹೆಣದ ಮೇಲೆ?"

"····ಹೌದು ಹೆಣದ ಮೇಲೆ! ಪೋಲೀಸ್ ಇನ್ಸ್‌ಪೆಕ್ಟರ್ ಸೈನಿಕ! ಬಡಿದಾಟ! ಜೈಲು!....ಕರೀನೀರಿನ ಶಿಕ್ಷೆ ಇಲ್ಲ, ಫಾಸೀ····ನಿಜವಾಗಲೂ ಈವತ್ತೇನಾದರೂ ತಹಸೀಲ್ದಾರ ವಿಶ್ವನಾಥಪ್ರಸಾದರೂ ಇಲ್ಲದಿದ್ದಿದ್ದರೆ ಎಲ್ಲರಿಗೂ ಫಾಸೀ ಆಗ್ತಿತ್ತು. ಕಾಳೀಚರಣನ ಆಫೀಸಿಗೆ ಹೋದರೆ ಇನ್ನೂ ಹೆಚ್ಚು ವಿಚಾರ ತಿಳಿಯತ್ತೆ.

ಸೋಷಲಿಸ್ಟ್ ಪಾರ್ಟಿಯ ಆಫೀಸಿನಲ್ಲಿ ಜನಗಳ ಗುಂಪು ಸೇರಿದೆ. ಈವತ್ತು ಕಾಂಗ್ರೆಸ್ಸಿನವರ, ಸೋಷಲಿಸ್ಟ್ ಪಾರ್ಟಿಯವರ ಮತ್ತು ದೇವರ ಕೀರ್ತನೆ ಮೂರು ನಡೆಯುತ್ತದೆ. ಎಲ್ಲದಕ್ಕಿಂತ ಮೊದಲು ಹಳೆಯ ಕಾಲದ ಕೀರ್ತನೆ "ಸಾರದೀ—ಭರಿಯಾಲೀ" ನಡೆಯುತ್ತದೆ....ವೃದ್ಧರ ಕಂಠದಲ್ಲಿ ಈಗಲೂ ಆಕರ್ಷಣೆಯಿದೆ.

ಆಜೂ ಸೆ ಬಿರಾಜೂ ಶ್ಯಾಮ ಕದಲೀ ಕೆ ಛೈಯ್ಯಾ
ಅವತ ಮೋಹನಲಾಲ ಬಂಶೀ ಬಜೈಯಾ,
ಪೀತ ಬಸನ ಮಕರಾಕೃತ ಕುಂಡಲ....

ಇದೇ 'ನಾರದೀ' ಕೀರ್ತನೆ. ಮೃದಂಗ ನುಡಿಯುತ್ತಿದೆ. ಧಿಧನಕ—ತಿಧನಕ ಧಿದನಕ—ತಿಧನಕ....

"ಈಗ ಕ್ರಾಂತಿ ಕೀರ್ತನೆ···· 'ಗಂಗಾ ರೇ ಜಮುನವಾಂ' ತುಂಬಾ ಹಳೆಯದಾಯಿತು. ಆ ಅಳುವ ಹಾಡು ಹೇಳಬೇಡ ಕಾಳೀಚರಣ."

"ಬಮ್ ಥೋಡ್‌ದಿಯಾ ಫೌಟಿಕ್ ಸೆ ಮಸ್ತಾನಾ ಭಗತ ಸಿಂಹ"

....ಶಹಬ್ಬಾಸ್ ಸುನರಾ! ಚೆನ್ನಾಗಿ ಹಾಡ್ತಾನೆ: ಭಾರತದ ವೀರ ಹೋರಾಟಗಾರ, ಸಾಹಸಿ ಭಗತಸಿಂಗ್....ಸಿಂಹ? ಹಾಗಾದರೆ ಭಗತ ಸಿಂಹ ಯಾವ ಜಾತಿಯವನು? 'ಸಾಹಸಿ ಭಗತಸಿಂಹ ಯಾರು ಗೊತ್ತೇನು?'.... ಕಾಳೀಚರಣ ಹೇಳಿದ: "ಐದು ಸಾರಿ ಗಲ್ಲಿನ ಹಗ್ಗವನ್ನು ಎಳೆದರು, ಹತ್ತು ಜನಗಳನ್ನು ಒಂದೊಂದು ಕಡೆ ನೇತು ಹಾಕಿದ್ರು, ಹಗ್ಗ ಎಳೆದರು, ಎಳೀತಾನೇ ಇದ್ದರು, ಭಗತಸಿಂಹನ ಬಾಯಿಯಿಂದ ಒಂದೇ ಮಾತು ಬರುತ್ತಿತ್ತು, "ಇಂಕಿಲಾಬ್ ಜಿಂದಾಬಾದ್"

"ಇಂಕಿಲಾಬ್ ಜಿಂದಾಬಾದ್."

"ಜೈ ಜೈ."

—ಈವತ್ತು ಇಷ್ಟು ಗಟ್ಟಿಯಾಗಿ ಘೋಷಣೆಗಳನ್ನು ಕೂಗ್ತಾ ಇರೋರು ಯಾರು? ಸೋಮಾಜಟ್?....ಓಹೋ ಮೂರು ದಿನಗಳಿಂದ ಪತ್ತೇನೇ ಇರಲಿಲ್ಲ, ಇವಕ್ಕಿದ್ದ ಹಾಗೆ ಮಾಯವಾಗಿಬಿಟ್ಟಿದ್ದ. ಕೊಡಲಿಯಿಂದ ಹೆಚ್ಚು ಏಟು ಕೊಟ್ಟವನು ಯಾರು ಗೊತ್ತೇನು? ನಾಲ್ಕು ಜನರನ್ನು ಸೋಮಾ ಒಬ್ಬನೇ ಹೊಡೆದು ಉರುಳಿಸಿದ...ಆದರೆ ಎಚ್ಚರಿಕೆ! ಯಾರೂ ಸೋಮಾಜಟ್ಟನ ಹೆಸರೆತ್ತಬೇಡಿ ಅಂತ ತಹಸೀಲ್ದಾರರು ಅಪ್ಪಣೆ ಮಾಡಿದಾರೆ....ಪೋಲೀಸರ ಲಿಸ್ಟಿನಲ್ಲಿ ಸೇರಿರೋನು ತಾನೇ? ಆದರೆ ಈಗೀಗ ಬದಲಾಯಿಸಿದಾನೆ. ಕಾಳೀಚರಣ ಅವನನ್ನು ಪೂರ್ತಿ ಬದಲಾಯಿಸಿಬಿಡ್ತಾನೆ....

ಇನ್ನು ಒಂದು ಕಾಂಗ್ರೆಸ್ ಕೀರ್ತನೆ ಆಗಬೇಕು. ಹೌದಣ್ಣಾ, ಎಲ್ಲ ಸಂತರಿಗೂ ಜಯವಾಗಲೀ ಅಸ್ಸಿ. ಹಳ್ಳಿಯ ದೇವತೆಗಳ ಪ್ರಭಾವದಿಂದ, ಕಾಳೀಮಾತೆಯ ಕೃಪೆಯಿಂದ, ಮಹಾತ್ಮಾಜಿಯ ದಯಯಿಂದ ಮತ್ತು ಕ್ರಾಂತಿ.... 'ಇಂಕಿಲಾಬ್ ಜಿಂದಾಬಾದಿ'ನಿಂದ ಹಳ್ಳಿಯ ಜನರೆಲ್ಲಾ ಸುಖವಾಗಿ ಪಾರಾದರು, ಎಲ್ಲಾ ಕೀರ್ತನೆಗಳೂ ನಡೆಯಬೇಕು....

ಭಾರತ ಕಾ ಡಂಕಾ ಲಂಕಾ ಮೇಂ
ಬಜವಾಯಾ ವೀರ್ ಜವಾಹಿರ್‌ನೆ

ರಾಜಬಲ್ಲೀ ಮಹತೋ ಕೂಡ ಹಾರ್ಮೋನಿಯಂ ನುಡಿಸುತ್ತಾನೆ, ಎಲ್ಲಿ ಕಲಿತನೋ?....ಮುಂದಿನ ಎರಡು ಹಲ್ಲುಗಳು ಮಾತ್ರ ದೊಡ್ಡದಾಗಿವೆ....

ಹಾಡುವಾಗ ಮುಖ ಪಿಶಾಸಿಯ ಹಾಗೆ ಕಾಣುತ್ತದೆ.... ಭಾರತ ಕಾ ಡಂಕಾ ಲಂಕಾ ಮೇ....

....ಬಾಲದೇವ ಎಲ್ಲಿ?....ಬಾಲದೇವ ಸಾಧು ಆಗ್ತಿದಾನಂತೆ: ....ಜಪಮಾಲೆ ತೆಗೆದುಕೊಂಡನಂತೆ. ಜಪಮಾಲೆ ಎಣಿಸುತ್ತಾ ಯಾರ ಹೆಸರನ್ನು ಜಪಿಸುತ್ತಾನೆ? ಮಹಾತ್ಮಾಜಿಯವರದೋ? ಸದ್ಗುರುವಿನದೋ?

ಚರಖಾ ಸ್ಕೂಲಿನ ಅಧ್ಯಾಪಕಿ ಎಷ್ಟು ದಪ್ಪಗಾಗಿಬಿಟ್ಟಿದಾಳೆ. ಕಾಳೀ ಚರಣನ ಹತ್ತಿರ ಮಾತ್ರ ನಗುತ್ತಾ ಮಾತಾಡ್ತಾಳೆ....ಕಾಳೀಚರಣ ಈಗೀಗ ಕುರ್ತಾದ ಮೇಲೆ ಗುಂಡು ಗುಂಡಗೆ ಅದೇನು ಹಾಕಿಕೊಂಡಿದಾನೆ? ಸೋಷಲಿಸ್ಟ್ ಪಾರ್ಟಿಯ ಮುದ್ರೆಯೇ....ನೋಡಿದ್ಯಾ, ಕಾಳೀಚರಣ ಮುದ್ರೆಯ ಲೀಡರ್ ಆಗಿಬಿಟ್ಟಾ? ಬಾಲದೇವನ ಹತ್ತಿರ ಬಾವನದಾಸನ ಹತ್ತಿರ ಅಥವಾ ತಹಸೀಲ್ದಾರರ ಹತ್ತಿರ ಅಂಥ ಮುದ್ರೆಗಳಿವೆಯೇನು? ಅಧ್ಯಾಪಕಿ ಅವನ ಅಂಗೀಗೆ ಅದೇನೋ ಹಾಕ್ತಿದಾಳಲ್ಲ ಓಹ್ ಹೂವು! ಈಗ ಇನ್ನೂ ಚೆನ್ನಾಗಿ ಕಾಣುತ್ತೆ! ಹೂವಿನ ಮುದ್ರೆ ....ಡಾಕ್ಟರ್ ನೌಕರ ಬರ್‍ತಿದಾನಲ್ಲಾ, ಯಾಕೆ... ಸ್ವಲ್ಪ ಸುಮ್ಮನಿರಯ್ಯ ಶಾಂತೀ ಶಾಂತೀ....

"ಕಾಳೀಚರಣನನ್ನು ಡಾಕ್ಟರ್ ಕರೀತಿದಾರೆ." ಪಾರೂ ಮಂಗಳಾ ದೇವಿಯ ಹತ್ತಿರ ಹೇಳಿದ. "ಓ....ಕಾಳೀ, ಡಾಕ್ಟರ್ ಬಾಬುವನ್ನು ಸಭೆಗೆ ಕರೆದಿಲ್ವೇನು? ತಹಸೀಲ್ದಾರರು, ಜೇಲಾವನ ಕಛೇರಿಗೆ ಹೋಗಿದ್ರು. ಆದರೆ ಡಾಕ್ಟರ್ ಇದ್ದರಲ್ಲ. ಹೋಗಿ ನಿಮ್ಮನ್ನು ಕರೀತಿದಾರಂತೆ."

ಏನು ಸಮಾಚಾರ? ಖಂಡಿತ ಏನೋ ಸಮಾಚಾರ ಇರಬೇಕು.... ವೈರಲೆಸ್ ಸುಮರತದಾಸ ಎಲ್ಲಿ? ಒಂದು ಸಲ ಎಲ್ಲಾ ಪ್ರೀತಿಯಿಂದ ಹೇಳಿ:

ಕಾಳೀ ಮಾತೆಗೆ ಜಯವಾಗಲಿ

ಮಹಾತ್ಮಾ ಗಾಂಧೀಜಿಗೆ ಜಯವಾಗಲಿ

ಸೋಷಲಿಸ್ಟ್ ಪಾರ್ಟಿಗೆ ಜಯವಾಗಲಿ

"ಇಂಕಿಲಾಬ್...."

"ಕಾಳೀಚರಣ?"

"ಏನು ಡಾಕ್ಟರ್?"

"ತಪ್ಪು ತಿಳಿದುಕೊಳ್ಳದಿದ್ದರೆ ಒಂದು ಮಾತು ಹೇಳಲೇನು?.... ಹರಗೌರಿ ಬಾಬುವಿನ ತಾಯಿ ಅಳ್ತಿದಾಳೆ. ಬೇರೆ ಜಾತಿಯವರ ಹೆಂಗಸರೂ ಅಳ್ತಿದಾರೆ. ನೀವಿಲ್ಲಿ ಕೀರ್ತನೆ ಮಾಡ್ತಿದೀರಿ. ಇದು ಸರಿಯಾಗಿ ಕಾಣಿಸ್ತಿಲ್ಲ. ನನಗಂತೂ ಅನ್ನಿಸ್ತಿದೆ, ಈ ದಿನದ ಕೀರ್ತನೆಯಿಂದ ನಿಮ್ಮ ದೇವರಿಗೂ ಸಂತೋಷ ವಾಗುವುದಿಲ್ಲ."

"ನಾವು ದೇವರನ್ನು ನಂಬೋದಿಲ್ಲ." —ಕಾಮ್ರೇಡ್ ವಾಸುದೇವ ಮಧ್ಯದಲ್ಲೇ ಮಾತನಾಡಿದ.

"ನೀನು ಸುಮ್ಮನಿರು." ಕಾಳೀಚರಣ ಅವನನ್ನು ತಡೆದ. "ಎಲ್ಲಾ ವಿಚಾರದಲ್ಲೂ ಬಾಯಿ ಹಾಕಬೇಡ."

ಎಲ್ಲ ಸುಮ್ಮನಿದ್ದರು. ಹರಗೌರಿಯ ತಾಯಿ ಅಳುತ್ತಿದ್ದಳು: ನನ್ನ ದೊರೆ ಮಗನೇ ....ಗೌರೀ"

ಕಾಳೀಚರಣನ ಕಣ್ಣುಗಳಲ್ಲೂ ನೀರು ತುಂಬಿತು. ಬಾಲ್ಯದಿಂದಲೂ ಅವನು ಹರಗೌರಿಯ ಜೊತೆಯಲ್ಲೇ ಆಡಿ ಬೆಳೆದವನು. ಪೂಂಜೀವಾದಿಯೋ, ಬೂರ್ಜ್ವಾನೋ, ಏನಾದರೂ ಅವನು ಬಾಲ್ಯದ ಗೆಳೆಯ ಎನ್ನುವುದಂತೂ ಸುಳ್ಳಲ್ಲ. ಅವನ ತಾಯಿ ಅಳುತ್ತಿದ್ದಾಳೆ. ಅಳುತ್ತಿರುವುದು ಹರಗೌರಿಯ ತಾಯಿ ಅಲ್ಲ. ಕೇವಲ 'ತಾಯಿ'

"ವಾಸುದೇವ."

"...."

"ಕೀರ್ತನೆ ನಿಲ್ಲಿಸುವಂತೆ ಹೋಗಿ ಹೇಳಿಬಿಡು. ....ಕೋಠಿಯ ತೋಟ ದಲ್ಲಿ ನಾಳೆ ಶೋಕ ಸಭೆ ನಡೆಯುತ್ತದೆ. ಅದನ್ನು ಸಭೆಗೆ ತಿಳಿಸಿಬಿಡು. ಅರ್ಥ ವಾಯ್ತೇನು?"

ವಾಸುದೇವ ಯೋಚಿಸಿದ. ಮಿಕ್ಕ ವಿಚಾರಗಳೇನೋ ಅರ್ಥವಾಯಿತು, ಆದರೆ ಶೋಕ ಸಭೆ ಅಂದರೆ ಏನರ್ಥ? ಅಲ್ಲಿ ಗೀತೆಗಳನ್ನು ಹಾಡುವ ಹಾಗಿಲ್ಲ. ಭಾಷಣ ನಡೆಯೋದಿಲ್ಲ....ಸುಮ್ಮನೆ ಐದು ನಿಮಿಷ ಮೌನವಾಗಿ ನಿಂತಿರೋದು ....ಒಳ್ಳೇ ಸಭೆ!

## 42

ಹರಗೌರಿಯ ತಾಯಿ ಅಳುತ್ತಿದ್ದಾಳೆ—"ನನ್ನ ದೊರೆಯಂತಹ ಮಗನೇ.... ಗೌರೀ...."

ಹರಗೌರಿಯ ಹದಿನಾರು ವರುಷದ ಹೆಂಡತಿ ನಿಷೇಕಪ್ರಸ್ತ ಆಗುವುದಕ್ಕೆ ಮುಂಚೆಯೇ ಬಂದಿದ್ದಾಳೆ. ಅವಳು ತುಂಬಾ ಮೆಲ್ಲನೆ ಅಳುತ್ತಿದ್ದಾಳೆ. ಸೆರಗಿನ ಮರೆಯಲ್ಲಿ ಅವಳ ಕಣ್ಣಿನಿಂದ ಸತತವಾಗಿ ನೀರು ಸುರಿಯುತ್ತಲೇ ಇದೆ.

ಶಿವಶಂಕರಸಿಂಹ ಪೂರ್ಣಿಯಾದಿಂದ ಹಿಂತಿರುಗಿ ಬಂದಿದ್ದರು. ಪುತ್ರನ ದಹನ ಕರ್ಮ ಮುಗಿಸಿ ಬಂದಿರುವ ತಂದೆಯನ್ನು ನೋಡಿದರೇ ಭಯವೆನಿಸುತ್ತದೆ. ಬಗ್ಗಿದ ಸೊಂಟದ ಮೇಲೆ ಕೈಯಿಟ್ಟು ನಡೆಯುವ ಶಿವಶಂಕರಸಿಂಹರನ್ನು ನೋಡಿದರೆ ದುಃಖವೆನಿಸುತ್ತದೆ. ಎರಡು ದಿನಗಳಿಂದಲೂ ಮನೆಯಲ್ಲಿ ಎರಡು ಎತ್ತುಗಳೂ ಹುಲ್ಲು ನೀರು ಮುಟ್ಟದೆ ನಿಂತಿವೆ. ಕಣ್ಣುಗಳಲ್ಲಿ ನೀರು ತುಂಬಿಕೊಂಡು, ಆಗಾಗ ಬೆಚ್ಚುತ್ತಾ ಸುತ್ತಮುತ್ತ ನೋಡುತ್ತವೆ. ಅನಂತರ ಒಮ್ಮೆ ದೀರ್ಘವಾಗಿ ನಿಟ್ಟುಸಿರು ಬಿಟ್ಟು ಒಂದನ್ನೊಂದು ನೋಡುತ್ತಾ ನಿಲ್ಲುತ್ತವೆ. ತಮಗೆ ತಾವೇ ಧೈರ್ಯ ಹೇಳಿಕೊಳ್ಳುವಂತೆ ಒಂದನ್ನೊಂದು ನಾಲಿಗೆಯಿಂದ ನೆಕ್ಕುತ್ತವೆ..... ಹರಗೌರಿ ಅವುಗಳನ್ನು ಎಷ್ಟು ಪ್ರೀತಿಸುತ್ತಿದ್ದ. ಅವು ಎರಡು ತಿಂಗಳ ಕರುಗಳಾಗಿದ್ದಾಗಿಸಿಂದ ಅವುಗಳ ಜೊತೆ ಆಟವಾಡುತ್ತಿದ್ದ. ಅವನ ಧ್ವನಿ ಕೇಳಿದ ಕೂಡಲೇ ಎರಡೂ ಸಂತೋಷದಿಂದ ಕುಣಿಯುತ್ತಿದ್ದವು. ತನ್ನ ಪ್ರಾಣಕ್ಕಿಂತ ಹೆಚ್ಚಾಗಿ ಅವುಗಳನ್ನು ಪ್ರೀತಿಸುತ್ತಿದ್ದ ಹ[illegible]ರಿ....

ಶಿವಶಂಕರಸಿಂಹರ [illegible]ಣ್ಣುಗಳು ಕಣ್ಣೀರಿನಿಂದ ಮಬ್ಬಾಗಿವೆ. ಹರಗೌರಿಯ ಶವ ಸಿಗುವವರೆ[illegible] ಅವರಿಗೆ ತಾವು ಬಂಧಿತರಾಗುವ ಭಯವಿತ್ತು. ದಹನ ಕ್ರಿಯೆ ಮುಗಿಸಿದ ಮೇಲೆ ವಕೀಲರು ರಾಮಕೃಪಾಲ ಸಿಂಹರನ್ನು ತಡ[illegible]. ಆಗ ಶಿವಶಂಕರ ಸಿಂಹರಿಗೆ ತಾವು ನಿಂತ ಸೇತುವೆ ಕೆಳಗೆ ಬೀಳುತ್ತಿರುವಂತೆ, [illegible]ನ ಭೂಮಿ ಕುಸಿಯುತ್ತಿರುವಂತೆ ತೋರಿತು.

ಇನ್ಸ್‌ಪೆಕ್ಟರ್, ರಾಮಕೃಪಾಲಸಿಂಹರನ್ನು ಸೆರೆ ಹಿಡಿದು ಕರೆದುಕೊಂಡು ಹೋದರು. ಶಿವಶಂಕರಸಿಂಹ ತಮ್ಮ ಜೊತೆಯವರೊಂದಿಗೆ ಹಿಂತಿರುಗಿ ಬಂದರು. ಸ್ಟೇಷನ್ನಿನವರೆಗೆ ಓಡುತ್ತಲೇ ಬಂದಿದ್ದರು. ಯಾರಿಗೆ ಗೊತ್ತು? ಪೋಲೀಸ್

ಇನ್ಸ್‌ಪೆಕ್ಟರ ಮನಸ್ಸು ಯಾವ ಗಳಿಗೆಗೆ ಹೇಗೆ ತಿರುಗುತ್ತದೆಯೋ....ಅದೃಷ್ಟ, ಬಿರಜೂಸಿಂಹ ಬಿದ್ದುಬಿಟ್ಟ, ಆದ್ದರಿಂದ ರೈಲು ನಿಂತುಬಿಟ್ಟಿತು. ಇಲ್ಲದಿದ್ದರೆ ಶಿವಶಂಕರಸಿಂಹ ಅಲ್ಲೇ ಪ್ಲಾಟ್‌ಫಾರಂನಲ್ಲೇ ನಿಂತಿರಬೇಕಾಗಿತ್ತು. ಮಿಕ್ಕವರೇನೋ ಹಾರಿ ಹಿಡಿಯನ್ನು ಹಿಡಿದುಕೊಂಡರು. ಸಿಂಘಜೀ ಹಿಡಿ ಹಿಡಿದುಕೊಳ್ಳಲು ಕೈ ಹಾಕುವ ಹೊತ್ತಿಗೆ, ಒಬ್ಬ ಕರಿ ಕೋಟಿನವನು ಅವರನ್ನು ಹಿಡಿದೆಳೆದ. ಹಿಂದಿದ್ದ ಬಿರಜೂಸಿಂಹ ಜಾರಿ ಬಿದ್ದ, ರೈಲು ನಿಂತಿತು. ಬಡಪಾಯಿ ಬಿರಜೂ ಸಿಂಘನ ಒಂದು ಕೈಯೇ ಕತ್ತರಿಸಿ ಹೋಯಿತು. ಗಾರ್ಡ್ ಅವನನ್ನು ಕಟಿಹಾರದ ಆಸ್ಪತ್ರೆಗೆ ಕರೆದುಕೊಂಡು ಹೋದರು. ಮನೆಯೊಳಗೆ ಕಾಲಿಡುವವರೆಗೆ ಶಿವಶಂಕರ ಸಿಂಹರಿಗೆ ನಂಬಿಕೆ ಇರಲಿಲ್ಲ. ಯಾರಿಗೆ ಗೊತ್ತು, ಎಲ್ಲಿಂದ ಯಾವ ಕೆಂಪು ಟೋಪಿಯ ಪೋಲೀಸಿನವನು ಕಾಣಿಸಿಕೊಳ್ಳುತ್ತಾನೋ? 'ಹಸಲಗಾಂವ'ನ ಸಂತೆಯ ಹತ್ತಿರ ಕೆಂಪು ಪಗಡಿಯವನು ಕಾಣಿಸಿದ್ದಕ್ಕೆ ಅವರ ಎದೆ 'ಧಕ್ ಧಕ್' ಎಂದಿತ್ತು ...ಒಳ್ಳೆ ಮನುಷ್ಯ, ಕೆಂಪು ಬಟ್ಟೆಯಲ್ಲಿ ಪಗಡೀ ಯಾಕೆ ಕಟ್ಟಿಕೊಳ್ಳಬೇಕು!

ಮನೆಗೆ ಬಂದಾಗ ಹರಗೌರಿಯ ತಾಯಿ ಎದೆ ಬಡಿದುಕೊಂಡು, ನೆಲದ ಮೇಲೆ ಉರುಳುರುಳಿ ಅಳುತ್ತಿರುವುದನ್ನು ನೋಡಿದ ಕೂಡಲೇ ಅವರೂ ಮಕ್ಕಳಂತೆ, ಬಿಕ್ಕಿ ಬಿಕ್ಕಿ ಅಳಲಾರಂಭಿಸಿದರು. ಪೂರ್ವದ ಕೋಣೆಯ ಜಗಲಿಯಲ್ಲಿ ಹರಗೌರಿಯ ವಿಧವೆ ಸೆರಗು ಮುಚ್ಚಿಕೊಂಡು ಅಳುತ್ತಿದ್ದಳು. ಇದಿರಿಗೆ ಗೋಡೆಯ ಮೇಲೆ ಹರಗೌರಿಯ ಫೋಟೋ ಹಾಕಿತ್ತು. ರೌತಹಟ್ಟ ಜಾತ್ರೆಯಲ್ಲಿ ತೆಗೆಸಿಕೊಂಡದ್ದು—ತಲೆಗೆ ಪಗಡೀ ಸುತ್ತಿಕೊಂಡು ಕೈಯಲ್ಲಿ ಕತ್ತಿ ಹಿಡಿದು ನಿಂತಿದ್ದ ಹರಗೌರಿ.

"ಅಯ್ಯೋ....ಗೌರೀ....ಹೋದ್ಯಲ್ಲೋ"

"ಶಿವಶಂಕರಸಿಂಹ ಎತ್ತಿನ ಕುತ್ತಿಗೆ ಹಿಡಿದುಕೊಂಡು ಅಳಲಾರಂಭಿಸಿದರು: "ಗೌರಿ....ಅಯ್ಯೋ"

ಎಲ್ಲರಿಗಿಂತ ಮೊದಲು ಸುಮರಿತದಾಸನ ಕಿವಿಗೆ ಈ ಶಬ್ದ ತಲುಪಿತು. ಅವನು ಅಂದುಕೊಂಡ: 'ಬಹುಶಃ ಶಿವಶಂಕರಸಿಂಹ ಬಂದುಬಿಟ್ಟಿರಬಹುದು.'

"ಅಳಬೇಡಿ ಶಿವಶಂಕರ ಬಾಬು. ಎದೆ ಕಲ್ಲು ಮಾಡಿಕೊಳ್ಳಿ....ನೀವೇ ಇಷ್ಟು ಧೈರ್ಯ ಕೆಟ್ಟರೆ ಹೆಂಗಸರಿಗೆ ಧೈರ್ಯ ಹೇಳೋರು ಯಾರು?..

ಹರಗೌರಿಯ ತಾಯಿ ಸತ್ತು ಹೋಗುತ್ತಾಳೆ. ಅವರಿಗೆ ಸ್ವಲ್ಪ ಸಮಾಧಾನ ಮಾಡಿ. ಅಳಬೇಡಿ. . . .''

ಸುಮರಿತದಾಸ ಶಿವಶಂಕರಸಿಂಹರನ್ನು ಎರಡು ಕೈಗಳಿಂದಲೂ ತಬ್ಬಿ ಕೊಂಡು ಹಿಡಿದುಕೊಂಡು ಬಂದ. ಅವರಿಗೆ ಸಮಾಧಾನ ಮಾಡುತ್ತಾ ಅಕ್ಕಪಕ್ಕ ದವರನ್ನು ನೋಡಿ ಹೇಳಿದ: ''ಏನು ಸಮಾಧಾನ ಹೇಳೋದಕ್ಕಾಗುತ್ತೆ ಅಣ್ಣಾ. ಏನು ಹೇಳೋದು? ಯಾರಿಗೆ ಹೇಳೋದು ? ಪುತ್ರಶೋಕಕ್ಕಿಂತ ದೊಡ್ಡ ಶೋಕ ಬೇರೆ ಯಾವುದಿದೆ ಹೇಳಿ. ನಾನು ಏನು ತಾನೇ ಸಮಾಧಾನ ಹೇಳಬಲ್ಲೆ? ನನಗಂತೂ . . . . ಸ್ವತಃ ಅನುಭವಿಸಿದೀನಿ. . . . ಒಬ್ಬೊಬ್ಬರಾಗಿ ನಾಲ್ಕು ಮಕ್ಕಳನ್ನು ಕಮಲಾ ನದಿಯ ದಡದಲ್ಲಿ ನನ್ನ ಕೈಯ್ಯಾರೆ ದಹನ ಮಾಡಿ ಬಂದಿದೀನಿ. ಎದೆ ಕಲ್ಲಾಗಿ ಹೋಗಿದೆ. ಪುತ್ರ ಶೋಕ! ದೇವರೇ ಯಾರಿಗೂ ಈ ದುಃಖ ಮಾತ್ರ ಕೊಡಬೇಡ''

ಶಿವಶಂಕರಸಿಂಹ ಮೊದಲಿಗಿಂತ ಗಟ್ಟಿಯಾಗಿ ಅಳಲಾರಂಭಿಸಿದರು. ಕ್ರಮೇಣ ಗುಂಪು ದೊಡ್ಡದಾಯಿತು. ಎಲ್ಲರಿಗೂ ಒಂದೇ ಕುತೂಹಲ, ಇಲ್ಲಿಂದ ಹೋದಮೇಲೆ ಏನಾಯಿತು? . . . . ಹರಗೌರಿಯ ಮೃತ್ಯುವಿಗಿಂತ ಹೆಚ್ಚು ಆಕರ್ಷಕ ವಿಚಾರ ರಾಮಕೃಪಾಲಸಿಂಹನ ಬಂಧನ! ಯಾಕೆ ಸೆರೆ ಹಿಡಿದರು? ಹೇಗೆ ಸೆರೆ ಹಿಡಿದರು? ಮತ್ತೆ ಯಾರ ಮೇಲೆ ವಾರಂಟ್ ಇದೆ? ತಹಸೀಲ್ದಾರ ವಿಶ್ವನಾಥರ ಮೇಲೂ ಇದೆಯೇ? ''ತಹಸೀಲ್ದಾರರು ಬರುತ್ತಿದ್ದಾರೆ. ದಾರಿ ಬಿಡಿ''

ತಹಸೀಲ್ದಾರರನ್ನು ನೋಡಿದ ಕೂಡಲೇ ಶಿವಶಂಕರಸಿಂಹ ಮತ್ತೆ ಭೂಮಿಯ ಮೇಲೆ ಉರುಳಿ ಮತ್ತಷ್ಟು ಗಟ್ಟಿಯಾಗಿ ಅಳತೊಡಗಿದರು: ''ವಿಶ್ವನಾಥಣ್ಣ ಎದೆ ಚೂರು ಚೂರಾಗುತ್ತಿದೆ. ಅಯ್ಯೋ. . . . ಎದೆ. . . .''

ತಹಸೀಲ್ದಾರರು ಸಮಾಧಾನ ಮಾಡಿದರು: ''ಶಿವಶಂಕರಸಿಂಹ, ಅಳಬೇಡಿ, ಅಳೋದು ಇನ್ನು ಜೀವನ ಪೂರ್ತಿ ಇದೇ ಇದೆಯಲ್ಲಾ ಒಂದು ದಿನ ಅತ್ತ ಮಾತ್ರಕ್ಕೆ ಈ ದುಃಖ ತಣ್ಣಗಾಗುತ್ತೇನು? ಆದರೆ ಇದು ಅಳುವ ಸಮಯ ಅಲ್ಲ. ಮೊಕದ್ದಮೆ ದಾರಿಬಿಟ್ಟರೋ ಹಾಗೆ ಕಾಣಿಸುತ್ತಿದೆ. ಸಿಂಘಜೀಯನ್ನು ಸೆರೆಹಿಡಿದಿದ್ದಾರೆ. ಈಗ ಯಾರ ತಲೆ ಮೇಲೆ ಯಾವ ಆಪತ್ತು ಬರುವುದೋ ಯಾರಿಗೆ ಗೊತ್ತು? ಖೂನಿ ಕೇಸು. ಏಳಿ, ನಿಮ್ಮ ಹತ್ತಿರ ಖಾಸಗಿಯಾಗಿ ಮಾತನಾಡಬೇಕಾಗಿದೆ.''

ಶಿವಶಂಕರಸಿಂಹ ತಕ್ಷಣ ಮೇಲೆದ್ದು ನಿಂತರು, ತಹಸೀಲ್ದಾರರ ಜೊತೆ ಬಾಗಿಲಿನಿಂದ ದೂರ ನಡೆದರು. ಸುಮರಿತದಾಸನೂ ಪ್ರೈವೇಟ್ ಮಾತನ್ನು

ಕೇಳುತ್ತಾನೇನು?....ಹಾಗಾದರೆ ಸರಿ. ಇರೋ ವಿಚಾರ ತಕ್ಷಣ ತಿಳಿದು ಬಿಡುತ್ತದೆ....

ಬಾಗಿಲಲ್ಲಿ ನಿಂತ ಪ್ರತಿಯೊಬ್ಬನೂ ನಿಟ್ಟುಸಿರೆಳೆದ: ಯಾರ ತಲೆ ಮೇಲೆ ಯಾವ ಆಪತ್ತು ಬರುತ್ತೋ ಯಾರಿಗೆ ಗೊತ್ತು? ದೇವರೇ

"ನಮಸ್ಕಾರ ಜೋಯಿಸರೇ."

ಜೋಯಿಸರ ಜೊತೆ ಖೇಲಾವನ್ನನು ಬಂದಿದ್ದ. ಜೋಯಿಸರು ಅಲ್ಲೇ ಖಾಲಿಯಿದ್ದ 'ಮೋಡಾ'ದ ಮೇಲೆ ಕುಳಿತರು. ಖೇಲಾವನ್ನನೂ ತಹಸೀಲ್ದಾರರ ಜೊತೆ ಪ್ರೈವೇಟ್ ಮಾತಾಡಲು ಒಳಗೆ ಹೋದ. ಜೋಯಿಸರು ಅಲ್ಲಿ ನಿಂತಿದ್ದ ಜನರಿಗೆ ನಿದಾನವಾಗಿ ಹೇಳಿದರು: ನೀವೆಲ್ಲಾ ಇಲ್ಲಿ ನಿಂತು ಏನು ಮಾಡು ತ್ತಿದೀರಪ್ಪಾ?" ಅವರು ಹೇಳುತ್ತಿದ್ದ ರೀತಿಯಲ್ಲಿ ಆ ಮಾತಿನ ಅರ್ಥ ಬರು ತ್ತಿದ್ದುದು. "ನಿವ್ಯಾಕೆ ಅನ್ಯಾಯವಾಗಿ ತೊಂದರೆಗೆ ಸಿಕ್ಕಿಹಾಕಿಕೊಳ್ಳುತ್ತೀರಿ? ಇಲ್ಲಿಂದ ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ಪರಾರಿಯಾಗಿ. ಇಲ್ಲದಿದ್ದರೆ, ಯಾರಿಗೆ ಗೊತ್ತು...."

ಎಲ್ಲಾ ಬೇಗ ಬೇಗ ಎದ್ದು ಹೊರಟರು. ಜೋಯಿಸರು ಹೇಳಿದರು: "ಇಲ್ಲೇ ಬನ್ನಿ ತಹಸೀಲ್ದಾರರೇ ಎಲ್ಲರೂ ಹೊರಟುಹೋದರು."

"....ಆದರೆ ಎಸ್.ಪಿ. ಒಂದೇ ಮಾತು ಹಿಡಿದುಬಿಟ್ಟಿದ್ದಾರೆ. ತಹಸೀಲ್ದಾರ ವಿಶ್ವನಾಥಪ್ರಸಾದರ ಜಮೀನಿನಲ್ಲಿ ಬೀಜ ನೆಡೋವಕ್ಕೆ ತಹಸೀಲ್ದಾರ ಹರಗೌರಿ ಯಾಕೆ ಹೋಗಿದ್ದ." ತಹಸೀಲ್ದಾರರು ಹೇಳಿದರು.

"ರಾಮಕೃಪಾಲ ಇಲ್ಲಿಲ್ಲ. ನಾನು ನಿಮಗೆ ಏನು ಹೇಳಲಿ?....ಆದರೆ ಮೊಕದ್ದಮೆ ನಿಮ್ಮದು, ಆದ್ದರಿಂದ ಖರ್ಚನ್ನೆಲ್ಲಾ ನೀವೇ ಕೊಡಬೇಕಾಗುತ್ತೆ ...." ಶಿವಶಂಕರಸಿಂಹ ಬೇಡುವವನಂತೆ ಹೇಳಿದ.

ಜೋಯಿಸರು ಏನೋ ಹೇಳಬೇಕೆಂದು ಗಂಟಲು ಸರಿಪಡಿಸಿಕೊಳ್ಳುವಷ್ಟರಲ್ಲಿ, ವೈರ್‌ಲೆಸ್ ಸುಮರಿತದಾಸ ಮಧ್ಯದಲ್ಲೇ ಉತ್ತರ ಕೊಟ್ಟ: ಶಿವಶಂಕರಸಿಂಹರೇ, ಮೊಕದ್ದಮೆ ತಹಸೀಲ್ದಾರ ವಿಶ್ವನಾಥರದಲ್ಲ, ತಹಸೀಲ್ದಾರ ಹರಗೌರಿಯದು. ಹೇಗೆ ಅಂತೀರೇನು? ವಾಸ್ತವವಾಗಿ ಭೂಮಿಯಿಂದ ಜನರನ್ನು ಬಿಡಿಸೋದು, ಹರಾಜು, ಇದನ್ನೆಲ್ಲಾ ಆರಂಭಿಸಿದ್ದೇ ಹರಗೌರಿ ಬಾಬು. ನನಗಿಂತ ಚೆನ್ನಾಗಿ ಇದೆಲ್ಲಾ ಬೇರೆ ಯಾರಿಗೆ ಗೊತ್ತು? ರೈತರನ್ನು ಭೂಮಿಯಿಂದ ಬಿಡಿಸೋದು,

ಬೇರೆಯವರಿಗೆ ಕೊಡೋದು ಈ ಮಾತು ಪ್ರಾರಂಭವಾಗದಿದ್ದಿದ್ದರೆ ಈ ಲಂಕಾ ಕಾಂಡ ನಡೆಯುತ್ತಲೇ ಇರಲಿಲ್ಲ. ತಹಸೀಲ್ದಾರ ವಿಶ್ವನಾಥರು ಅವರಿಗೆ ಸಹಾಯ ಮಾಡಿದರು, ಅಂತ ಸಂಥಾಲರು ಇವರ ಜಮೀನಿನಲ್ಲಿ ಗಲಾಟೆ ಆರಂಭಿಸಿದರು. ಈಗ ನೀವೇ ಹೇಳಿ, ಈ ಮೊಕದ್ದಮೆ ಯಾರದೂ ಅಂತ? ವಾಸ್ತವ ವಿಚಾರ ನನಗೆ ಗೊತ್ತು. . . . ಇನ್ಸ್‌ಪೆಕ್ಟರಿಗೆ ಹತ್ತು ಸಾವಿರ ಕೊಡಲೇಬೇಕಾಗುತ್ತದೆ.''

ಖೇಲಾವನ ಹೇಳಿದ: '' ತಹಸೀಲ್ದಾರರೇ ಈಗ ಎಲ್ಲರ ಜೊತೆ ಮಾತು-ಕಥೆ ಆಡಿ, ಹೇಗಾದರೂ ಮಾಡಿ ಹಳ್ಳಿಯನ್ನು ಈ ಗ್ರಹಗಳಿಂದ ಪಾರುಮಾಡಿ.''

'' ರಾಮಕೃಪಾಲಸಿಂಹ ಇಲ್ಲ, ನಾನು ಏನು ಮಾಡಲಿ? '' ಶಿವಶಂಕರಸಿಂಹ ಎಲ್ಲದಕ್ಕೂ ಇದೊಂದೇ ಉತ್ತರ ಹೇಳುತ್ತಿದ್ದರು.

ಕೊನೆಗೆ, ಮೊಟ್ಟಮೊದಲು ರಾಮಕೃಪಾಲಸಿಂಹರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿಸಬೇಕೆಂದೂ, ಅನಂತರ ಎಲ್ಲರೂ ಸೇರಿ ಉಚಿತವಾದದ್ದನ್ನು ಯೋಚಿಸಬೇಕೆಂದೂ ತೀರ್ಮಾನವಾಯಿತು. ಇದಕ್ಕೆ ಆಗುವ ವೆಚ್ಚವನ್ನೆಲ್ಲಾ ಸಿಂಹಜೀಯವರೇ ಕೊಡಬೇಕು.

ಜೋಯಿಸರು ನಗುತ್ತಾ ನುಡಿದರು.

'' ಈನತ್ತು ಸೋಷಲಿಸ್ಟ್ ಪಾರ್ಟಿಯವರು ಶೋಕ ಸಭೆ ಆಚರಿಸುವುದಕ್ಕೆ ಹೋದರು. ಅಲ್ಲಿ ಒಬ್ಬ ಮನುಷ್ಯನೂ ಇರಲಿಲ್ಲ. ಜನಕ್ಕೆ ಈಗ ಸಭೆಗಳ ಅರ್ಥ ತಿಳಿದಿರಬೇಕು. . . . ಏನು ನಡೆದರೂ ಅದಕ್ಕೊಂದು ಸಭೆ. ನಾನು ಮೊದಲೇ ಹೇಳಿರಲಿಲ್ಲವೇನು ?—ಹಳ್ಳಿಯಲ್ಲಿ ಒಂದು ದಿನ ಹದ್ದು ಕಾಗೆಗಳೇ ಹಾರಾಡುತ್ತವೆ.''

'' ಜೋಯಿಸ ಚಿಕ್ಕಪ್ಪ, ಸಭೆ, ಮೆರವಣಿಗೆ ಮೇಲೆ ಯಾಕೆ ದೋಷ ಹೊರಿಸ್ತೀರಿ? ''—ಕಾಳೀಚರಣ ಪಕ್ಕದಲ್ಲಿ, ಕತ್ತಲೆಯಲ್ಲಿ ನಿಂತಿದ್ದ.

'' ಬಾ ಕಾಳೀ? '' ತಹಸೀಲ್ದಾರರು ನಗುತ್ತಾ ಅವರಿಗೆ ಹೇಳಿದರು: '' ನೀನು ಸಾಕ್ಷಿ ಹೇಳಬೇಕಾಗುತ್ತೆ, ಗೊತ್ತಿದೇತಾನೇ? ಬಾಲದೇವನೂ ಕೊಡಬೇಕು. ನೀವಿಬ್ಬರು ಲೀಡರುಗಳ ಸಾಕ್ಷಿಯ ಮೇಲೆ ಇಡೀ ಮೊಕದ್ದಮೆ ನಿಂತಿದೆ.''

ಕಾಳೀಚರಣನೂ ಒಂದು ಮೋಡಾದ ಮೇಲೆ ಕುಳಿತುಕೊಳ್ಳುತ್ತಾ ಹೇಳಿದ: ' ಸಾಕ್ಷಿ ಕೊಡಬೇಕಾದರೆ ಕೊಟ್ಟರಾಯಿತು. ಗೊತ್ತಿರೋ ವಿಚಾರ ಹೇಳುವುದ

ಕ್ಕೇನು ಇನ್ಸ್‌ಪೆಕ್ಟರ್? ಆಗಲಿ, ಎಸ್.ಪಿ. ಯೇ ಬರಲಿ. ಇಲ್ಲ ಮ್ಯಾಜಿಸ್ಟ್ರೇಟ್ ಕಲೆಕ್ಟರ್ ಯಾರಾದರೂ ಸರಿ, ನಿಜವಾದ ವಿಚಾರ ಹೇಳೋದಕ್ಕೆ ಯಾರದೇನು ಭಯ ?''

"ಸರಿಯಾದ ಮಾತು ಸರಿಯಾದ ಮಾತು" ಜೋಯಿಸರನ್ನು ಬಿಟ್ಟು ಮಿಕ್ಕ ಎಲ್ಲರೂ ಹೇಳಿದರು: "ಸರಿಯಾದ ಮಾತು."

ತಹಸೀಲ್ದಾರರ ನೌಕರ ಏದುಬ್ಬಸ ಪಡುತ್ತಾ ಓಡುತ್ತಾ ಬಂದ: "ಕಮಲೀ ಅಕ್ಕನಿಗೆ ಮತ್ತೆ....''

"ಅದಕ್ಕೆ ಇಲ್ಲಿ ಯಾಕೆ ಬಂದೆ? ಡಾಕ್ಟರ ಹತ್ತಿರ ಹೋಗಿ." ತಹಸೀಲ್ದಾರರು ಬೇಸರದಿಂದ ಹೇಳಿದರು: "ಈ ಡಾಕ್ಟರ್‌ಗಳು ಅದೇನು ಔಷಧಿ ಕೊಡ್ತಾರೋ ದೇವರಿಗೇ ಗೊತ್ತು. ಇಷ್ಟು ದಿನಗಳಾದವು. ಹದಿನಾರಾಣೆಯಲ್ಲಿ ಹನ್ನೆರಡಾಣೆ ಯಷ್ಟು ವಾಸಿಯಾಗಿಲ್ಲ."

....ಹಾಗಾದರೆ ಇರುವ ವಿಚಾರ ಹೊರಬಿತ್ತು, ಅಂದಹಾಗಾಯಿತು, ಈ ಮೊಕದ್ದಮೆಯ ಹದಿನಾರಾಣೆ ಭಾಗವೂ ಈಗ ಕಾಳೀಚರಣ ಮತ್ತು ಬಾಲದೇವರ ಕೈಯಲ್ಲೇ ಇದೆ.

"ಶಿವ ಶಿವಾ: ಶಿವ ಶಿವಾ:" ಮೇಲೆ ಏಳುತ್ತಾ ಜೋಯಿಸರು ಹೇಳಿದರು: ಕಾಳೀಬಾಬು. ನಾಳೆ ಸ್ವಲ್ಪ ನಿನ್ನ ಕೈ ತೋರಿಸು ನಿನ್ನ ಕೈಯಿನ ರೇಖೆ ಏನು ಹೇಳುತ್ತೋ ನೋಡೋಣ. ಜನ್ಮದಿನ, ತಿಂಗಳು ಎಲ್ಲಾ ಜ್ಞಾಪಕ ಇದೆ ತಾನೇ ?''

ಜೋಯಿಸರ ಹೊಟ್ಟೆಯಲ್ಲಿ ಭಯದ ಭೂತ ಸೇರಿಕೊಂಡಿತ್ತು. ಕಾಳೀಚರಣ ಮತ್ತು ಬಾಲದೇವನ ಕೈಯಲ್ಲೇ ಎಲ್ಲಾ ಇರುವುದಾದರೆ, ಅವರು ಯಾರ ಹೆಸರು ಹೇಳಿದರೆ ಅವರು ತಕ್ಷಣ ಬಂಧಿತರಾಗುತ್ತಾರೆ....ಕಾಳೀಚರಣ ಮಾತ್ರವೇನು, ಬಾಲದೇವನಿಗೂ ಅವರ ಮೇಲೆ ಮನಸ್ಸಿನಲ್ಲೇ ಅಸಮಾಧಾನ ಇದೆ....ಬಾಲದೇವನ ವಿಚಾರ ಹೆಚ್ಚು ಹೆದರಬೇಕಾದ್ದಿಲ್ಲ. ಆದರೆ ಈ ಕಾಳೀ ಚರಣ....ಶಿವ ಶಿವಾ ಶಿವ ಶಿವಾ....

# 43

ಲಕ್ಷ್ಮೀದಾಸಿ ಇಂದು ಮನಸ್ಸು ತೆರೆಯಲು ನಿಶ್ಚಯಿಸಿದ್ದಾಳೆ. ಒಂದು ಲಕ್ಷ ದ್ವಾರಗಳು:

"ಬಾಲದೇವಜೀ"

"ಅಂ?"

"ರಾಮದಾಸ ಮತ್ತೆ ಹುಚ್ಚನಾಗಿದಾನೆ. ನಿನ್ನೆ ಭಂಡಾರಿ ಹತ್ತಿರ ಹೇಳಿದನಂತೆ: ಒಬ್ಬ ದಾಸಿಯನ್ನು ಇಟ್ಟುಕೊಳ್ಳೋದಕ್ಕೆ ಒಪ್ಪಿಗೆ ಕೊಡಬೇಕೆಂದು ಲಕ್ಷ್ಮಿಗೆ ಹೇಳು ಅಂತ.... ನೀವೇ ಹೇಳಿ, ಇದು ಸರಿಯೇ?"

ಬಾಲದೇವ ಏನು ತಾನೇ ಉತ್ತರ ಕೊಡಬಲ್ಲ? ದಾಸಿಯನ್ನು ಇಟ್ಟುಕೊಳ್ಳುವುದು, ಧರ್ಮಕ್ಕೆ ವಿರುದ್ಧ ಎನ್ನುವುದು ಅವನಿಗೆ ಗೊತ್ತಿಲ್ಲ.... ಅವನು ಜಪಮಾಲೆ ತೆಗೆದುಕೊಂಡು ಇನ್ನೂ ಎರಡು ಮೂರು ತಿಂಗಳುಗಳು ಮಾತ್ರ ಆದವು. ಮಠದ ನಿಯಮ, ಧರ್ಮ ರೀತಿನೀತಿಗಳ ಬಗ್ಗೆ ಅವನೇನು ಹೇಳುವುದಕ್ಕೆ ಸಾಧ್ಯ! ಅಲ್ಲದೆ ಮಹಂತ ಸೇವಾದಾಸನೂ.....

ಲಕ್ಷ್ಮಿ ಹೇಳಿದಳು: "ನೀವು ಅವನಿಗೆ ಬುದ್ಧಿ ಹೇಳಿ. ಅವನಿಗೆ ತಲೆ ಕೆಟ್ಟಿದೆ. ಈಚೀಚೆಗೆ ತತಮಾ ಸಂಗಡಕ್ಕೆ ಹೋಗಿಬರುವುದು ಹೆಚ್ಚುತ್ತಿದೆ. ಭಗವಾನ್ ಭಗತ ನಿನ್ನೆ ಲೆಕ್ಕಹಾಕಿ ಹೇಳಿದ: ರಾಮಪಿಯರಿಯಾ ತಾಯಿಗೆ ನಾಲ್ಕು ಸೇರು ಅಕ್ಕಿ ಕೊಡಿಸಿದಾನೆ. ನಾನು ಕೇಳಿದ್ದಕ್ಕೆ 'ಮಠದ ಹಳೇ ನೌಕರರು, ಹಸಿವಿನಿಂದ ಸಾಯಬೇಕೇನು" ಅಂತ ಕೇಳಿದ ದಿನವೆಲ್ಲಾ ಕುಳಿತು, 'ಬೀಜಕ' ಓದಬೇಕಾದವನು ಹಾಲು ಕೆನೆ ತಿನ್ನುತ್ತಿದ್ದರೆ ಇನ್ನೇನಾಗುತ್ತೆ?" ಲಕ್ಷ್ಮಿ ಹೇಳಿದಳು.

ಬಾಲದೇವ ಇತ್ತೀಚೆಗೆ 'ಮತಿಶೂನ್ಯ' ನಾಗಿದ್ದಾನೆ. ಸರಳವಾದ ಮಾತು ಅವನಿಗೆ ಅರ್ಥವಾಗುವುದಿಲ್ಲ; ಏನೂ ಅರ್ಥವಾಗುವುದಿಲ್ಲ. ತೀರ ಸರಳ ಮನುಷ್ಯ: "ನೀವು ಮಠದಲ್ಲಿರುವುದೂ ಅವನಿಗೆ ಇಷ್ಟವಿಲ್ಲ." ಲಕ್ಷ್ಮಿ ಬಾಲದೇವನ ಮುಖ ನೋಡಿದಳು.

"ಹಾಗಾದರೆ ನಾನು ಹೊರಟು ಹೋಗುತ್ತೇನೆ, ನಾನು ಇರುವುದರಿಂದ ಮಠದ ನಿಯಮಕ್ಕೆ ಭಂಗ ಬರುವುದಾದರೆ ನಾನು ಹೋಗೋದೆ ಒಳ್ಳೇದು."

"ಎಲ್ಲಿಗೆ ಹೋಗುತ್ತೀರಿ?"

"ಚನ್ನಪಟ್ನೇಗೆ."

ಲಕ್ಷ್ಮಿಯ ಎದೆ ಧಸಕ್ಕೆಂದಿತು....ಧಕ್....ಈಗೀಗ ಬಾಲದೇವ ತುಂಬಾ ಉದಾಸೀನವಾಗಿ ಇರುತ್ತಾನೆ. ಊಟ ತಿಂಡಿಯೂ ಬಹಳ ಕಡಮೆ. ಸುತ್ತಾಡುವುದಕ್ಕೂ ಹೋಗುವುದಿಲ್ಲ. ಆಸನದಲ್ಲಿ ಬಿದ್ದುಕೊಂಡು 'ಬೀಜಕ ಪಾಠ' ಓದುತ್ತಿರುತ್ತಾನೆ. "ಬಾಲದೇವನ ಸಾಕ್ಷಿಯ ಮೇಲೆ ಮೊಕದ್ದಮೆ ನಿಂತಿದೆ" ಎಂದು ತಹಸೀಲ್ದಾರರು ಹೇಳಿ ಹೋದರು. ಆದರೆ ಬಾಲದೇವ 'ಸಾಕ್ಷಿ ಹೇಳಲು ನಾನು ಕೋರ್ಟಿನ ಕಟಕಟೆ ಹತ್ತುವುದಿಲ್ಲ' ಎನ್ನುತ್ತಿದ್ದಾನೆ. ಮಹಾತ್ಮಾಜೀ ಹೇಳಿದ್ದಾರಂತೆ. 'ಝಗಡೋಂಕೆ ಜಾಹೂ ಕಚಹರಿಯಾ, ಬೆಯಿ ಮಾನವಾಂ ಕೆ ಠಾಠ್ ಜಹಾಂ' (ಬರೀ ಆಡಂಬರ ತುಂಬಿರುವ ಕೋರ್ಟಿಗೆ ಜಗಳ ತೆಗೆದುಕೊಂಡು ಹೋಗಬೇಡ).....ಇಂದು, ಮಠ ಖಾಲಿಯಾಗಿದೆ. ಲಕ್ಷ್ಮಿ ಬಾಲದೇವನಿಗೆ ಎಲ್ಲಾ ಹೇಳಿಬಿಡುತ್ತಾಳೆ. ..

"ನೀವು ಚನ್ನಪಟ್ನಗೆ ಹೊರಟು ಹೋದರೆ, ನಾನು?"

"ನೀವು?"

ಲಕ್ಷ್ಮಿ ಬಾಲದೇವನ ಕಣ್ಣುಗಳಲ್ಲಿ ಕಣ್ಣುನೆಟ್ಟು ನೋಡಿದಳು. ಅವಳು ಹೀಗೆ ನೋಡಿದಾಗಲೆಲ್ಲಾ ಬಾಲದೇವ ಮೈಮರೆತುಬಿಡುತ್ತಾನೆ.....ಒಂದು ಮನಮೋಹಕ ಸುಗಂಧ ಗಾಳಿಯಲ್ಲಿ ಹರಡುತ್ತದೆ. ಪವಿತ್ರ ಸುಗಂಧ! 'ಬೀಜಕ' ದಿಂದ ಹೊರಡುವಂತಹ ಸುಗಂಧ!

"....ಹೌದು, ನಾನು ಎಲ್ಲಿಗೆ ಹೋಗಲಿ ನನ್ನ ಗತಿ ಏನಾಗುತ್ತೆ? ಮಹಂತನ ದಾಸಿಯಾಗಿಯೇ ನಾನು ಮಠದಲ್ಲಿ ಇರಬೇಕು." ಲಕ್ಷ್ಮಿಯ ಕಣ್ಣು ಗಳಲ್ಲಿ ನೀರು ತುಂಬಿಬಂತು.

"ಇಲ್ಲ ಲಕ್ಷ್ಮಿ, ನೀನು....ನೀನು ರಾಮದಾಸನ ದಾಸಿ ಆಗಲಾರೆ. ನೀನು....."

"ಬಾಲದೇವ" ಲಕ್ಷ್ಮಿ ಹುಚ್ಚಿಯಂತೆ ಬಾಲದೇವನನ್ನು ತಬ್ಬಿಕೊಂಡಳು. "ನನ್ನ ಕಾಪಾಡಿ, ಬಾಲದೇವ. "ನಿನ್ನನ್ನು ರಾಮದಾಸನ ದಾಸಿಯನ್ನಾಗಿ ಮಾಡೊಲ್ಲಾ" ಅಂತ ಒಂದು ಸಲ ಮಾತು ಕೊಡಿ. ಚನ್ನಪಟ್ನೇಗೆ ಹೋಗೋಲ್ಲ ಅಂತ ಹೇಳಿ. ನನ್ನ ಬಿಟ್ಟು ಹೋಗಬೇಡಿ. ಬಾಲದೇವ ನನ್ನಾಣೆ"

"ಲಕ್ಷ್ಮಿ" ಬಾಲದೇವ ಲಕ್ಷ್ಮಿಯನ್ನು ಸುಧಾರಿಸುತ್ತಾ ಹೇಳಿದ: "ಯಾರಾದರೂ ನೋಡ್ತಾರೆ."

ಲಕ್ಷ್ಮಿ ಬಾಲದೇವನ ಕೊರಳಿನಿಂದ ಕೈತೆಗೆದು ದೂರ ಸರಿದು ಕುಳಿತಳು. ತಲೆ ಬಾಗಿಸಿ ಕುಳಿತು ಅಳಲಾರಂಭಿಸಿದಳು.

ಬಾಲದೇವನ ಇಡೀ ಶರೀರ 'ಝುಣ—ಝುಣ' ಎನ್ನುತ್ತಿದೆ. ಕಿವಿಯ ತುದಿಯಲ್ಲಿ, ಕಾದ ಉಪ್ಪಿನ ಗಂಟು ಇಟ್ಟಹಾಗೆ ಅನ್ನಿಸುತ್ತಿದೆ.....

ಹಿಂದೆ ಒಂದು ಬಾರಿ ಆಶ್ರಮದಲ್ಲಿ ಅವನಿಗೆ ಕಿವಿನೋವು ಬಂದಿತ್ತು. ಗಂಗೂಲೀ ಉಪ್ಪಿನ ಶಾಖ ಕೊಡುವಂತೆ ಹೇಳಿದ್ದರು.....ಎದೆ ಧಡಗುಟ್ಟುತ್ತಿದೆ ....ಲಕ್ಷ್ಮಿಯ ಬಾಹು ಬಾಲದೇವನ ಮೂಗಿಗೆ ಸರಿಯಾಗಿ ತಗುಲಿಕೊಂಡಿತ್ತು. ....ಲಕ್ಷ್ಮಿಯ ರೋಮ ರೋಮಗಳಿಂದಲೂ ಪವಿತ್ರ ಸುಗಂಧ ಹೊರಡುತ್ತದೆ. ....ಚಂದನದಂತೆ ಪವಿತ್ರವಾದ ಶೀತಲ ಸುಗಂಧ ಹರಡುತ್ತಿತ್ತು. ಬಾಲದೇವನ ಮನಸ್ಸು ಈ ಸುಗಂಧದಲ್ಲಿ ತೇಲುತ್ತಾ ಮುಳುಗುತ್ತಾ ಇತ್ತು. ಅವನು ಲಕ್ಷ್ಮಿಯನ್ನು ಬಿಟ್ಟು ಚನ್ನಪಟ್ಟಿಯಲ್ಲಿ ಹೇಗೆ ತಾನೇ ಇರಬಲ್ಲ?"... ರೂಪಮತಿ, ಮಾಯಜೀ, ಲಕ್ಷ್ಮಿ..

"ಮಹಾತ್ಮಾಜಿಯ ಮಾರ್ಗವನ್ನು ಬಿಡಬೇಡಿ ಬಾಲದೇವ್. ಮಹಾತ್ಮಾಜೀ ಅವತಾರೀ ಪುರುಷರು. ಈಗೀಗ ಉದಾಸೀನವಾಗಿ ಇರುತ್ತೀರಲ್ಲಾ ಯಾಕೆ? ಮಹಾತ್ಮಾಜಿಯ ಮೇಲೆ ಭರವಸೆ ಇಡಿ. ಮಹಾತ್ಮಾಜಿಯ ದರ್ಶನ ಪಡೆದ ಕಣ್ಣುಗಳಿಗೆ ಪಾಪದ ದೃಶ್ಯವನ್ನು ಕಾಣಲು ಬಿಡಬೇಡಿ. ಮಹಾತ್ಮಾಜಿಯ ಉಪದೇಶ ಕೇಳಿದ ಕಿವಿಗಳಿಗೆ ಮಾಯೆಯ ಮಧುರ ವಾಣಿ ಕೇಳಲು ಬಿಡಬೇಡಿ. ಮಹಾತ್ಮಾಜೀ ಸದ್ಗುರುವಿನ ಭಕ್ತರು."

—ಲಕ್ಷ್ಮಿ ಕಣ್ಣು ಮುಚ್ಚಿಕೊಂಡು ಧ್ಯಾನ ಮಾಡುವವಳಂತೆ ಕುಳಿತಿದ್ದಳು. ಬಿಳಿಯ ಮಲ್ಲಿನ ಸೀರೆ. ಕೆದರಿದ ಉದ್ದನೆಯ ಕಪ್ಪು ಕೂದಲು....ಮಧ್ಯೆ ಬಿಳಿಯ ಮುಖ ಮಂಡಲ. ಧ್ಯಾನ ಆಸನದಲ್ಲಿ ಕುಳಿತು ಈ ರೀತಿ ಉಪದೇಶ ಕೊಡುತ್ತಿರುವ ಈ ಲಕ್ಷ್ಮಿ ಬೇರೆ ಯಾರೋ ಇರಬೇಕು:....ಬಾಲದೇವನ ಕೈಗಳು ತನಗೆ ತಾನೇ ಜೋಡಿಸಿಕೊಂಡವು.....

ಲಕ್ಷ್ಮಿಯ ಪವಿತ್ರ ಆತ್ಮದ ವಾಣಿ ಪುನಃ ಮುಖರಿತವಾಯಿತು: "ಪ್ರಪಂಚದ ಗುಣ ದೋಷಗಳನ್ನು ನೋಡುವುದಕ್ಕೆ ಮೊದಲು ನಿನ್ನನ್ನು ನೀನು ನೋಡಿಕೋ. ಮನಸ್ಸು ಕೊಳೆ, ದೇಹ ಚೊಕ್ಕಟ, ಜಗತ್ತಿನ ರೀತಿಯೆಲ್ಲಾ

ತಲೆಕೆಳಗು....ಮೊದಲು ಮನಸ್ಸನ್ನು ಚೊಕ್ಕಟ ಮಾಡಿಕೊ. ಮನಸ್ಸು ಪವಿತ್ರ ವಾಗಿಲ್ಲ. ಆದ್ದರಿಂದಲೇ ದುಃಖ ನಿರಾಶೆಗಳು. ದಾರಿಯಲ್ಲೇ ಬೇಸರದಿಂದ ಯಾಕೆ ಕುಳಿತುಬಿಟ್ಟೆದ್ದೀ?...ಯಾವ ಹೆದರಿಕೆ?...."

ಚಲತೆ ಚಲತೆ ಪಗು ಥಕಾ
ನಗರ ರಹಾ ನೌ ಕೋಸ್,
ಬೀಚಹಿ ಮೇಂ ಡೇರಾ ಪರಾಂ
ಕಹಹು ಕೌನ್ ಕಾ ದೋಖ್

(ಹೋಗುತ್ತಾ ಹೋಗುತ್ತಾ ಕಾಲು ನೊಂದಿತು. ಗುರಿ ಮುಟ್ಟಲು ಇನ್ನು ಒಂಭತ್ತು ಹರದಾರಿ ಹೋಗಬೇಕಾಗಿತ್ತು. ಮಧ್ಯದಲ್ಲೇ ನಿಂತುಬಿಟ್ಟರೆ, ಗುರಿ ಮುಟ್ಟುವುದು ಹೇಗೆ? ಗುರಿ ಸೇರದಿದ್ದರೆ ಯಾರ ತಪ್ಪು?)

ಸ್ವತಃ ಭಾರತಮಾತೆಯೇ ಮಾತನಾಡುತ್ತಿದ್ದಾಳೆ, ಎಂದು ಬಾಲದೇವನಿಗನ್ನಿಸಿತು. ಇದೇ ರೂಪ ಹೌದು, ಇದೇ ರೂಪ...ಅವಳ ಕಾಲು ರಕ್ತದಿಂದ ತೇವವಾಗಿತ್ತು....ಕೂದಲು ಕೆದರಿತ್ತು....ಬಾವನದಾಸ ಹೇಳುತ್ತಾನೆ, ಭಾರತ ಮಾತೆ ಜೋರು ಜೋರಾಗಿ ಅಳುತ್ತಿದ್ದಾಳೆ ಎಂದು. ಇಲ್ಲ, ತಾಯಿ ಅಳುತ್ತಿಲ್ಲ. ಮಾರ್ಗ ತೋರಿಸುತ್ತಿದ್ದಾಳೆ. ಉಚಿತ ಮಾರ್ಗದಲ್ಲಿ ಅನುಚಿತ ಕಾರ್ಯ ಮಾಡುತ್ತಿರುವವರನ್ನು ಎಚ್ಚರಿಸುತ್ತಿದ್ದಾಳೆ. ಬಾವನದಾಸ 'ಭ್ರಮೆ'ಯಲ್ಲಿದ್ದಾನೆ ....ಸ್ವತಃ ಬಾಲದೇವ ಮಹಾತ್ಮಾಜಿಯ ಪಥದಲ್ಲಿ ನಿರಾಶೆಯಿಂದ ನಡೆಯುತ್ತಿದ್ದಾನೆ.....

"....ಭಾರತಮಾತಾ ಕೀ ಜೈ, ಮಹಾತ್ಮಾಜೀಕೀ ಜೈ, ಭಾರತಮಾತಾ ..ಭಾರತಮಾತಾ."

ಮಹಂತದಾಸ ಬಹಳ ಹೊತ್ತಿನಿಂದ ಗಿಡದ ಮರೆಯಲ್ಲಿ ನಿಂತು ನೋಡುತ್ತಾ —ಕೇಳುತ್ತಾ ಇದ್ದ...ಧ್ಯಾನಾಸನದಲ್ಲಿ ಕುಳಿತಿದ್ದ ಲಕ್ಷ್ಮಿ ಉಪದೇಶ ಕೊಡುತ್ತಿದ್ದಾಳೆ. ಬಾಲದೇವ ಕೈ ಜೋಡಿಸಿಕೊಂಡು ರೆಪ್ಪೆ ಹೊಡೆಯದಂತೆ ಲಕ್ಷ್ಮಿಯನ್ನೇ ನೋಡುತ್ತಿದ್ದಾನೆ. ಇದ್ದಕ್ಕಿದ್ದಂತೆ ಬಾಲದೇವ ಲಕ್ಷ್ಮಿಯ ಪಾದಗಳನ್ನು ಹಿಡಿದುಕೊಂಡು ಕೂಗಿಕೊಂಡ: "ಭಾರತ ಮಾತಾ ಕೀ ಜೈ."

"ಭಂಡಾರೀ ..ಭಂಡಾರೀ," ರಾಮದಾಸ ಹತ್ತಿರಕಡೆ ಓಡುತ್ತಾ ಕೂಗಿಕೊಂಡ, "ಭಂಡಾರೀ ಬಾಲದೇವನಿಗೆ ಹುಚ್ಚು ಹಿಡಿದಿದೆ. ಓಡು."

ಒಂದೇ ಕ್ಷಣದಲ್ಲಿ ಮಠದಲ್ಲಿ ಗುಂಪು ಸೇರಿತು. ಡಾಕ್ಟರ್, ತಹಸೀಲ್ದಾರರು, ಕಾಳೀಚರಣ, ಖೇಲಾವನಸಿಂಹ ಯಾದವ ಎಲ್ಲಾ ಬಂದಿದ್ದರು. ಬಾಲದೇವನ ಮುದುಕಿ ಚಿಕ್ಕಮ್ಮ, ಹಾಡಿ ಹಾಡಿಕೊಂಡು ಅಳುವ ಸಿದ್ಧತೆ ನಡೆಸಿದ್ದಳು. ಆದರೂ ಇಷ್ಟು ಜನ ಒಟ್ಟಾಗಿ ಗದರಿಸಿದ್ದರಿಂದ ಅವಳು ಸುಮ್ಮನಾಗಿದ್ದಳು. ಒಬ್ಬರಾಗುತ್ತಲೂ ಮತ್ತೊಬ್ಬರ ಮುಖ ನೋಡುತ್ತಾ ನಿಂತಳು. ಸ್ವಲ್ಪ ಹೊತ್ತಿನ ನಂತರ ಮತ್ತೆ ಆರಂಭಿಸಿದಳು: "ಓ....ಬಾಬೂ....."

"ಏ ಮುದುಕಿ ಸುಮ್ಮನೆ ನಿಂತ್ಕೋ."

ಡಾಕ್ಟರ್ ಬಾಲದೇವನ ಕೊರಳಿಗೆ ರಬ್ಬರಿನ ಪಟ್ಟಿ ಕಟ್ಟಿ, ಮುಷ್ಟಿಯಲ್ಲಿ ಒಂದು ಚಿಕ್ಕ ಚೆಂಡನ್ನು ಕೊಟ್ಟರು....ಇದೇ ಯಂತ್ರದಿಂದಲೇ ತಹಸೀಲ್ದಾರರ ಮಗಳು ಕಮಲಿಯ ಪರೀಕ್ಷೆಯನ್ನು ಮಾಡುತ್ತಾರೆ. ಓ.....

ಬಾಲದೇವ ಮಧ್ಯೆ ಮಧ್ಯೆ ತೋಳು ಕೊಡವಿಕೊಂಡು. ಕೈ ಬಿಡಿಸಿಕೊಂಡು ಎದ್ದು ನಿಲ್ಲುತ್ತಾನೆ:

"ನೀವೆಲ್ಲಾ ನಾನು ಹುಚ್ಚನಾಗಿದೀನೀ ಅಂದುಕೊಂಡಿದೀರೇನು? ಖಂಡಿತ ಇಲ್ಲ, ಎಂದೆಂದಿಗೂ ಇಲ್ಲ....ನನ್ನ ಹುಚ್ಚ ಅಂತೀರಾ?....ಈ ಹಳ್ಳಿಯಲ್ಲಿ ಏನಿತ್ತು? ಈ ಹಳ್ಳಿಯ ಹೆಸರೂ ಯಾರಿಗೂ ಗೊತ್ತಿರಲಿಲ್ಲ. ಇದನ್ನು ಇಂಡಿಯಾ ದಲ್ಲೆಲ್ಲಾ ಪ್ರಸಿದ್ಧಿ ಮಾಡಿದ 'ನು ಯಾರು?....ನನ್ನ ಬಿಟ್ಟುಬಿಡಿ. ನಾನು ಮಹಾತ್ಮಾಜಿಯ ಪಂಥದಿಂದ ದ ನ ಸರಿಯಲಾರೆ."

ಗುಂಪಿನಲ್ಲಿ ಯಾರೋ ಹೇ ರು: "ಮಠವಲ್ಲಿ ಗಾಂಜಾ ಕುಡಿಯೋದು ಅಭ್ಯಾಸ ಆಗಿರಬೇಕು."

"ನಾನು ಗಾಂಜಾ ಕುಡೀತೀನೀ ಅಂತ ಯಾರು ಹೇಳಿದ್ದು? ಹೆಂಡ—ಭಂಗಿ—ಗಾಂಜಾಗಳ ಅಂಗಡಿಗಳ ಮುಂದೆ ನಾನು ಪಿಕೆಟಿಂಗ್ ಮಾಡಿದೀನಿ. ನಾನು ಗಾಂಜಾ ಕುಡೀತೀನ್ಯೇ? ಛೀ ಛೀ. ನಾನು ಮಹಾತ್ಮಾಜಿಯ ಮಾರ್ಗವನ್ನು ಎಂದೂ ಬಿಡುವುದಿಲ್ಲ. ಮಹಾತ್ಮಾಜಿ ಸತ್ಯವಂತರು."

ಬಾಲದೇವನ ಚಿಕ್ಕಮ್ಮನಿಗೆ ಇನ್ನು ಸುಮ್ಮನಿರಲಾಗಲಿಲ್ಲ. ಅವಳು ಹಾಡು ಹಾಡಿಕೊಂಡು ಅತ್ತಳು.—"ಡಾಕ್ಟರು ತಹಸೀಲ್ದಾರರ ಮಗಳು ಕಮಲೀಯ ಕಾಯಿಲೆಯನ್ನು ತೆಗೆದು, ಬಾಲದೇವನ ಮೇಲೆ ಏರಿಸಿಬಿಟ್ಟರು! ಇದು ಒಳ್ಳೆಯವರು ಮಾಡೋ ಕೆಲಸವಲ್ಲ. ತಹಸೀಲ್ದಾರರ ಮಗಳು ಇನ್ನೂ ಮದುವೆ

ಯಿಲ್ಲದೆ ನಿಂತಿದಾಳೆ. ಇನ್ನು ಬಾಲದೇವನಿಗೂ ಮದುವೆ ಆಗೋಲ್ಲ. ಅಯ್ಯೋ ದೇವರೇ ?..?."

"ಬಾಲದೇವ" ಲಕ್ಷ್ಮಿ ಹೇಳಿದಳು: "ಮನಸ್ಸನ್ನು ಶಾಂತವಾಗಿಟ್ಟು ಕೊಳ್ಳಿ, ಬಾಲದೇವ."

"ಲಕ್ಷ್ಮಿ....ಲಕ್ಷ್ಮಿದಾಸೀ ಬಂದಗೀ....ನಾನು ಸರಿಯಾಗಿದೀನಿ. ನನಗೆ ಏನೂ ಆಗಿಲ್ಲ. ನನ್ನ ಮೇಲೆ ಒಂದೊಂದು ಸಲ ಮಹಾತ್ಮಾಜಿಯ 'ಆವೇಶ' ಬಂದು ಬಿಡುತ್ತೆ, ಚುನ್ನೀ ಗೋಸಾಯಿಯ ಮೇಲೆ ದಿನಾ ಆವೇಶ ಬರ್‍ತಿತ್ತು."

ಬಾಲದೇವ ಸುಮ್ಮನೆ ಕುಳಿತ.

"ಡಾಕ್ಟರ್. ಈಗೀಗ ಅನೇಕ ದಿನಗಳಿಂದ ಬಾಲದೇವ ತುಂಬಾ ಉದಾಸೀನವಾಗಿ ಇರುತ್ತಿದ್ದರು. ರಾತ್ರಿ ನಿದ್ದೆಯೂ ಬರ್‍ತಿತ್ತೋ ಇಲ್ವೋ ಗೊತ್ತಿಲ್ಲ. ಒಂದು ವಾರಕ್ಕೆ ಮುಂಚೆ ಒಂದು ದಿನ ಜ್ವರ ಬಂದಿತ್ತು. ಜ್ವರದ ಏಳು ಹಳದೀ ಮಾತ್ರೆಗಳನ್ನು ಒಂದೇ ಸಲಕ್ಕೆ ನುಂಗಿಬಿಟ್ಟರು."

"ಹಳದೀ ಮಾತ್ರೆಗಳನ್ನೇ? ಏಳನ್ನೂ ಒಂದೇ ಸಲಿಗೆ ನುಂಗಿಬಿಟ್ಟರೇ?" ಡಾಕ್ಟರ್ ಆಶ್ಚರ್ಯದಿಂದ ಕೇಳಿದರು.

"ಜ್ವರದ ಹಳದೀ ಮಾತ್ರೆ ಹಂಚೋದಕ್ಕೆ ಸಿಕ್ಕಿತ್ತಲ್ಲಾ. ಅವುಗಳಲ್ಲಿ ಏಳನ್ನು ಒಂದೇ ಸಲಕ್ಕೆ ನುಂಗಿದರು. ಪ್ರತಿದಿನ ಯಾರು ನುಂಗುತ್ತಾರೆ, ಒಂದೇ ಸಲಕ್ಕೆ ಏಳು ದಿನದ್ದೂ ನುಂಗಿಬಿಡುತ್ತೇವೆ ಅಂದರು."

ಡಾಕ್ಟರ್ ಗಟ್ಟಿಯಾಗಿ ನಕ್ಕರು: "ಒಳ್ಳೇ ಲೆಕ್ಕಾಚಾರ ಬಾಲದೇವ. ಹತ್ತು ದಿನ ತಂಪಾಗಿ ಶರಬತ್ತು ಕುಡೀರಿ ಸರಿಯಾಗುತ್ತೆ. ನಿಮಗೆ ಏನೂ ಆಗಿಲ್ಲ, ಔಷಧಿ ಶಾಖ ಏರಿದೆ ಅಷ್ಟೆ."

ರಾಮಕೃಪಾಲಸಿಂಹ ಹೇಳಿದರು, "ಬೇಲ, ದಾಳಿಂಬೆ, ಕಿತ್ತಲೆ ಹಣ್ಣುಗಳ ರಸಾನೂ ತಂಪಾಗಿರುತ್ತೆ. ಎರಡು ಬೇಲದ ಹಣ್ಣುಗಳು ನಮ್ಮ ಮನೇಲೇ ಇದೆ."

ಬಾಲದೇವ ಮತ್ತು ಕಾಳೀಚರಣರ ಹೇಳಿಕೆಯ ಮೇಲೆ ಮೊಕದ್ದಮೆ ನಿಂತಿದೆ. ಅವರು ಯಾರನ್ನು ಬೇಕಾದರೂ ಸಿಕ್ಕಿಸಬಹುದು. ಯಾರನ್ನು

ಬೇಕಾದರೂ ಉಳಿಸಬಹುದು. ಬಾಲದೇವನ ಸಾಕ್ಷಿಗೆ ತುಂಬಾ ಬೆಲೆ ಇದೇ ಅಂತ ಸ್ವತಃ ಇನ್ಸ್‌ಪೆಕ್ಟರೇ ಹೇಳುತ್ತಿದ್ದರು :

ಖೇಲಾವನಸಿಂಹ ಯಾದವ ಈಗ ಕಾಳೀಚರಣನ ಹಿಂದೆ ಮುಂದೆ ಓಡಾಡುತ್ತಿರುತ್ತಾನೆ. ಪಾರ್ಟಿ ಆಫೀಸಿನ ಪಕ್ಕದಲ್ಲೇ ಒಂದು ಮನೆಯನ್ನು ಕಟ್ಟಿಸಿ ಕೊಡುತ್ತಾನಂತೆ. 'ಸಾಥೀ ನಿವಾಸ!' ಜಿಲ್ಲಾ ಪಾರ್ಟಿಯ ಆಫೀಸಿನಲ್ಲಿ ಇರುವಂತಹುದೇ ಮನೆ, ಮೀಟಿಂಗಿನ ದಿನ ಬರುವ ಜನವೆಲ್ಲಾ ಆ ಮನೆಯಲ್ಲೇ ಇರಬಹುದು. ಸೆಕ್ರೆಟರಿ ಆ ಆಫೀಸಿನ ಮನೆಯಲ್ಲೇ ಇರುತ್ತಾನೆ.... ಕಾಳೀಚರಣ, ಖೇಲಾವನಸಿಂಹನೊಂದಿಗೆ ಹೇಳಿದ ಕೂಡಲೇ ಅವನು ಕಟ್ಟಿಸಿ ಕೊಡಲು ಸಿದ್ಧನಾದ.

ಜೋಯಿಸ ಚಿಕ್ಕಪ್ಪ ಕಾಳೀಚರಣನ ಕೈ ನೋಡಿ ಹೇಳಿದರು : "ನಕ್ಷತ್ರ ಬಲ ತುಂಬಾ ಚೆನ್ನಾಗಿದೆ. ರಾಜಕಾರ್ಯದಲ್ಲಿ ಯಶಸ್ಸಿದೆ. ಮಕ್ಕಳ ಭಾಗ್ಯವೂ ಇದೆ. ಹಣವೂ ಇದೆ. ಆದರೆ ಒಂದು ಗ್ರಹ ಮಾತ್ರ ತುಂಬಾ ಕ್ರೂರವಾಗಿದೆ ....."

ಸಿಂಘಜೀ ಬಾಲದೇವನಿಗೆ ಬೇಲದ ಹಣ್ಣು, ಕಿತ್ತಲೆಹಣ್ಣು ತಿನ್ನೋದಕ್ಕೆ ಒತ್ತಾಯ ಮಾಡುತ್ತಿದ್ದಾರೆ. "ತಿನ್ನು ಬಾಲದೇವ. ತುಂಬಾ ಪುಷ್ಟಿ ಕೊಡುತ್ತೆ, ಔಷಧಿಯ ಶಾಖವೆಲ್ಲಾ ತಂಪಾಗುತ್ತೆ."

ಈ ಸಾಕ್ಷಿಯ ಪ್ರಸಂಗ, ಬಾಲದೇವನ ಕಳೆದುಹೋಗಿದ್ದ ಬೆಲೆಯನ್ನು ಮೊದಲಿಗಿಂತ ಮೇಲೇರಿಸಿಬಿಟ್ಟಿತ್ತು.

ಬಾಲದೇವ ಹೇಳಿದ : ಮಹಾತ್ಮಾಜಿಯ ಮಾರ್ಗವನ್ನು ನಾನು ಬಿಡಲಾರೆ.

"ಝಗಡೂ ನ ಜಾಹೂ ಕಚಹರಿಯಾ, ದಲಲವಾತಾತ್ ಚಹಾಂ"

(ಮೋಸವೇ ತುಂಬಿರುವ ಕೋರ್ಟಿಗೆ ಹೋಗಲೇಬಾರದು.)

ಆದ್ದರಿಂದ ನಾನು ಕೋರ್ಟಿಗೆ ಬರೋದಿಲ್ಲ.

ಆದರೆ ಬಾಲದೇವ ಕೋರ್ಟಿನಲ್ಲಿ ಏನೂ ಮಾತಾಡಲೇಬೇಕಾಗಿಲ್ಲ. ಅವನು ಸಹಿ ಮಾಡಿದ್ದು ನಿಜವೋ ಸುಳ್ಳೋ ಅಂತ ಕೇಳ್ತಾರೆ "ಹೌದು" ಅಂದುಬಿಟ್ಟರೆ ಮುಗೀತು. ಇನ್ನೇನೂ ಹೇಳಬೇಕಾಗಿಲ್ಲ. ಬಾಲದೇವ ಹಸ್ತಾಕ್ಷರ ಹಾಕಿರೋದು ನಿಜ, ಇದರಲ್ಲಿ ಸುಳ್ಳೇನೂ ಇಲ್ಲವಲ್ಲ. ಕಾಳೀಚರಣನೂ ಹಾಕಿದಾನೆ.

....ಹೇಗಾದರೂ ಮಾಡಿ, ಬಾಲ್ದೇವನನ್ನು ಸಾಕ್ಷಿ ಹೇಳೋದಕ್ಕೆ ಒಪ್ಪಿಸಲೇಬೇಕು. ಇಲ್ಲದಿದ್ದರೆ ಇಡೀ ಹಳ್ಳಿಗೆ ತೊಂದರೆಯಾಗುತ್ತೆ....ಕೊಠಾರಿನ್ ಲಕ್ಷ್ಮಿಗೆ, ತಹಸೀಲ್ದಾರರೇ ತಿಳಿಸಿದರೆ ಎಲ್ಲಾ ಸರಿಯಾಗುತ್ತೆ.

## 44

ಈಗ ಕೆಲವು ದಿನಗಳಿಂದ ಡಾಕ್ಟರ್ ಚಿಕ್ಕಮ್ಮನ ಮನೆಯಲ್ಲಿ ಹೆಚ್ಚು ಹೊತ್ತು ಕುಳಿತಿರುತ್ತಾರೆ. ಅವರ ಮನೆಯಲ್ಲಿ ಇರುವವರೆಗೂ ತಾವು ಶೀತಲ ಛಾಯೆಯ ನೆರಳಿನಲ್ಲಿ ಇರುವಂತೆ ಅವರಿಗೆ ಭಾಸವಾಗುತ್ತದೆ, ಕೆಲಸದಲ್ಲೂ ಉತ್ಸಾಹವಿಲ್ಲ. ತಮ್ಮ ಉತ್ಸಾಹವೆಲ್ಲಾ ಸ್ಪಿರಿಟ್ಟಿನಂತೆ ಆವಿಯಾಗಿ ಹೋಯಿತೇನೋ ಎಂದು ಅವರಿಗೆ ಅನ್ನಿಸುತ್ತಿದೆ. ಮಾನವನ ಸೇವೆಯಿಂದ ಆಗಬೇಕಾದುದೇನು? ಕರಿ ಜ್ವರಕ್ಕೆ ತಾವು ಒಂದು ರಾಮಬಾಣದಂತಹ ಔಷಧಿಯನ್ನು ಕಂಡುಹಿಡಿದರು ಎಂದೇ ಇಟ್ಟುಕೊಳ್ಳೋಣ. ಅಮೃತದ ಒಂದು ಶೀಷೆಯನ್ನೇ ಸಂಪಾದಿಸಿದರೂ ಎಂದು ಭಾವಿಸೋಣ. ಆದರೆ ಮುಂದೆ? ಇದುವರೆಗೆ ಆಗುತ್ತಿರುವುದೇ ಮುಂದೆಯೂ ಆಗುತ್ತದೆ. ಐದು ಆಣೆಯ ವಸ್ತು ಐವತ್ತು ರೂಪಾಯಿಗೆ ಮಾರಾಟವಾಗುತ್ತದೆ. ....ಇಷ್ಟಕ್ಕೂ ಇಲ್ಲಿ ಮನುಷ್ಯ ಬದುಕಿನಲ್ಲೇ ಮಾಡುವುದೇನು? ಇಂತಹ ಜೀವನ ವನ್ನೇ ತಾನೇ? ಪಶುಗಳಿಗಿಂತಲೂ ಅಜ್ಞಾನಿಗಳು ಈ ಮನುಷ್ಯರು! ಪಶು ಗಳಿಗಿಂತಲೂ ಭಯಂಕರರು ಈ ಮನುಷ್ಯರು!....ಹೊಟ್ಟೆ! ಅದೇ ಇವರ ದುರ್ಬಲತೆ. ಸಧ್ಯದ ಸಾಮಾಜಿಕ ನ್ಯಾಯವಿಧಾನ, ಇವರನ್ನು ತನ್ನ ನೂರಾರು ಬಾಹುಗಳಿಂದ ತಬ್ಬಿ ಹಿಡಿದಿದೆ, ಇವರಿಗೆ ಮಿಸುಕಾಡಲೂ ಸಾಮರ್ಥ್ಯವಿಲ್ಲ. ....ಆದರೆ ಈ ಜನ ಬದುಕಲು ಆಸೆ ಪಡುತ್ತಾರೆ. ಡಾಕ್ಟರೂ ಅವರನ್ನು ಬದುಕಿಸಲು ಇಚ್ಛಿಸುತ್ತಾರೆ. ಆದರೆ, ಅದರಿಂದ ಏನು ಪ್ರಯೋಜನ?

ಚಿಕ್ಕಮ್ಮ ಹೇಳಿದಳು: "ಮಗೂ, ನೀನು ಭಾಗವತ, ಗೀತೆಯನ್ನು ಓದುವು ದಿಲ್ಲವೇನು?

ಡಾಕ್ಟರು ಚಿಕ್ಕಮ್ಮನ ಕಡೆ ಕಕ್ಕಾಬಿಕ್ಕಿಯಾಗಿ ನೋಡಿದರು. ಜೈಲಿನಲ್ಲಿ ದ್ದಾಗ ಅವರು 'ಗೀತಾರಹಸ್ಯ' ವನ್ನು ಓದಲು ಪ್ರಯತ್ನಿಸಿದ್ದುಂಟು. ಮಮತೆಯೂ

ಸದಾ 'ಗೀತೆ' ಮತ್ತು 'ರಾಮಕೃಷ್ಣ ಚರಣಾಮೃತ'ವನ್ನು ಚೀಲದಲ್ಲಿಟ್ಟುಕೊಂಡು ಓಡಾಡುತ್ತಿರುತ್ತಾಳೆ. ಬಹುಶಃ ಅವುಗಳನ್ನು ಅವಳು ಚೆನ್ನಾಗಿ ಅರ್ಥಮಾಡಿಕೊಂಡಿರಲೂಬಹುದು. ಮಮತಾ ಅನೇಕ ಬಾರಿ ಹೇಳುತ್ತಿರುತ್ತಾಳೆ: "ಬಿಡುವಾದಾಗ ಗೀತೆಯನ್ನು ಖಂಡಿತ ಓದು. ಬರೀ ಓದುವುದಲ್ಲ., ಅದನ್ನು ಅರ್ಥಮಾಡಿಕೋ. ಅದರಲ್ಲಿ ಏನಾದರೂ ಹುಡುಕು. ಒಂದಲ್ಲ ಒಂದು, ನಿನಗೆ ಬೇಕಾದದ್ದು ಗೀತೆಯಲ್ಲಿ ಖಂಡಿತ ಸಿಗುತ್ತದೆ····ಇನ್ನುಮೇಲಾದರೂ ಗೀತೆಯನ್ನು ಓದಬೇಕು····'ಡಾಕ್ಟರ್, ಜೈಹಿಂದ್'

"ಓ, ಬಾ ಕಾಳೀಚರಣ. ಏನು ಸಮಾಚಾರ? ನೀನೂ ಪೂರ್ಣಿಯಾಗೆ ಹೋಗಿದ್ದೆ ಅಲ್ವಾ?"

"ಹೌದು ಈಗತಾನೇ ಬರುತ್ತಿದ್ದೇನೆ, ಹಳ್ಳಿಯವರೆಲ್ಲಾ ಬಿಡುಗಡೆಯಾಗುತ್ತಾರೆ ಎಂಬ ಆಶೆಯಿದೆ. ನಮ್ಮನ್ನು ವಕೀಲ ಸತ್ಯಬಾಬು ಸಿಕ್ಕಿಹಾಕಿಸಿಕೊಳ್ಳುವುದಕ್ಕೆ ತುಂಬಾ ಪ್ರಯತ್ನಪಟ್ಟರು. ಆದರೆ ಅದು ಸಾಧ್ಯವಿಲ್ಲ ಅನ್ನೋದು ಅವರಿಗೂ ಗೊತ್ತಾಯಿತು. ಬಾಲದೇವನ ವಿಚಾರ ನನಗೆ ಗೊತ್ತಿಲ್ಲ. ಆದರೆ ಅವನು ದೃಢವಾಗಿ ಚೆನ್ನಾಗಿ ಉತ್ತರ ಕೊಟ್ಟ ಅಂತ ಕೇಳಿದೆ.····'ನಿನಗೆ ಓದೋದಕ್ಕೆ ಬರೆಯೋದಕ್ಕೆ ಬರುವುದಿಲ್ಲ, ಸಹಿ ಮಾಡೋದಕ್ಕೂ ಬರೋದಿಲ್ಲ' ಅಂದರು. ನಾನು: "ನನಗೆ ಓದೋದಕ್ಕೆ ಬರೆಯೋದಕ್ಕೂ ಬರುತ್ತೆ. ಹಸ್ತಾಕ್ಷರ ಹಾಕೋದಕ್ಕೂ ಬರುತ್ತೇ ಇನ್ಸ್‌ಪೆಕ್ಟರ್, ಮುಂದೆ ನಾನೇ ಹಸ್ತಾಕ್ಷರ ಹಾಕಿದೆ. ಬೇಕೂ ಅಂದರೆ ಈಗ ನಿಮ್ಮ ಮುಂದೇ ಹಾಕುತ್ತೇನೆ. ಅಂದೆ. ನಿನ್ನ "ಹಸ್ತಾಕ್ಷರವನ್ನು ಗುರುತಿಸು" ಅಂತ ಅಧಿಕಾರಿ ಹೇಳಿದ. ನನಗೇನಾದರೂ ಕನ್ನಡಕ ಬೇಕೇನು? ತಕ್ಷಣ ನನ್ನ ಹಸ್ತಾಕ್ಷರ ಗುರುತಿಸಿಬಿಟ್ಟೆ."

"ನೀನು ಹಸ್ತಾಕ್ಷರ ಹಾಕಿದ ಕಾಗದದ ಮೇಲೆ ಏನು ಬರೆದಿತ್ತು?" ಎಂದು ಡಾಕ್ಟರ್ ಕೇಳಿದರು.

"ಏನು ಬರೆದಿತ್ತು?····ಅದನ್ನು····ಅದನ್ನು ನಾನು ಓದಲಿಲ್ಲ. ಇನ್ಸ್‌ಪೆಕ್ಟರ್ ಇಂಗ್ಲೀಷಿನಲ್ಲಿ ಬರೆದುಬಿಟ್ಟಿದ್ದರು····ಸರ್ಕಾರಿ ಕಾಗದದ ಮೇಲೆ ಕಾನೂನಿಗೆ ವಿರುದ್ಧವಾದ ಮಾತೇನೂ ಬರೆದಿರೋಲ್ವಲ್ಲ."

"ಹೋ ಹೋ ಹೋ" ಡಾಕ್ಟರ್ ಗಟ್ಟಿಯಾಗಿ ನಕ್ಕರು: "ಬಾಲದೇವನೂ ಹಾಗೇ ಹೇಳಿರಬೇಕು! "ಹೌದು, ಆದರೆ ಇದರಲ್ಲಿ ನಗೋ ವಿಚಾರ ಏನಿದೆ?" ಕಾಳೀಚರಣ ಸ್ವಲ್ಪ ಒರಟಾಗಿಯೇ ಪ್ರಶ್ನಿಸಿದ.

“ನಿಜಾ ಅಪ್ಪಾ.... ಇದು ನಗೋ ವಿಚಾರ ಅಲ್ಲ. ಅಳೋ ವಿಚಾರಾನೇ ಕಾಳೀಚರಣ—ನಾನು ಏನೂ ಮಾತಾಡಬಾರದು ಆದರೆ.... ಸಂಥಾಲರ ಜಮೀನು ಕಿತ್ತುಕೊಂಡು ಜಮೀನ್ದಾರರು ಸುಮ್ಮನಾಗುತ್ತಾರೆ ಎಂದು ತಿಳಿಯಬೇಡ. ಮುಂದೆ ರೈತರ ಸರದಿ ಬರುತ್ತದೆ. ನಿನ್ನನ್ನು ಮತ್ತು ಬಾಲದೇವನನ್ನು ಅವರು ತಮ್ಮ ಮೊದಲ ಅಸ್ತ್ರವಾಗಿ ಉಪಯೋಗಿಸಿಕೊಂಡಿದಾರೆ. ಇದು ಖಂಡಿತ ಅಳೋ ವಿಚಾರವೇ” ಡಾಕ್ಟರ್ ಒಂದೇ ಉಸಿರಿಗೆ ಇಷ್ಟು ಮಾತುಗಳನ್ನು ಹೇಳಿ ಮುಗಿಸಿದರು.

“ಆದರೆ... ಆದರೆ, ನೀವೂ ಬರೆದಿದೀರಲ್ಲ. ‘ಸಂಥಾಲರ ಗಾಯವನ್ನು ನೋಡಿದರೆ, ಯಾರೋ ತಮ್ಮ ಪ್ರಾಣವನ್ನು ಉಳಿಸಿಕೊಳ್ಳುವುದಕ್ಕಾಗಿಯೇ ಇವರ ಮೇಲೆ ಆಕ್ರಮಣ ಮಾಡಿದ್ದಾರೆ ಎನ್ನಿಸುತ್ತದೆ’ ಅಂತ ಬರೆದಿದ್ದೀರಂತೆ?” ಕಾಳೀಚರಣ ಸಿಟ್ಟಿನಿಂದ ಕೇಳಿದ. “ಹಾಗೆ ನಿನ್ನ ಹತ್ತಿರ ಹೇಳಿದವರು ಯಾರು?” ಆಶ್ಚರ್ಯದಿಂದ ಡಾಕ್ಟರ್‌ರ ಕಣ್ಣುಗಳು ಅರಳಿದವು. ‘ಹಾಗೆ ಯಾರಾದರೂ ಬರೀತಾರೇನು? ನಾನು ಕೇವಲ ಗಾಯಗಳ ವಿಚಾರ ಬರೆದಿದೀನಿ. ಸಂಥಾಲರೋ ಸಂಥಾಲರಲ್ಲವೊ ಅದು ನನಗೆ ಸಂಬಂಧಪಟ್ಟ ವಿಚಾರವಲ್ಲ. ನನಗೆ ಗೊತ್ತಿರುವುದು ಗಾಯ ಮತ್ತು ರೋಗಗಳ ಜಾತಿ ಮಾತ್ರ.” ಡಾಕ್ಟರ್ ಉತ್ತೇಜಿತರಾಗಿ ಹೇಳಿದರು: “ಕಾಳೀಚರಣ ನೀವು ಮಾಡಿದ್ದು ಸರಿಯಾಗಲಿಲ್ಲ. ಆದರೆ ನಾನು ನಿಮ್ಮ ಮೇಲೂ ತಪ್ಪು ಹೊರಿಸಲಾರೆ.”

“ತಹಸೀಲ್ದಾರರನ್ನು ಕಂಡರೆ ನಿಮಗೆ ತುಂಬಾ ಗೌರವ” ಕಾಳೀಚರಣ ಯಾವಾಗಲೂ ನೇರವಾಗಿ ಮಾತನಾಡುವವನು. “ಕಮಲಾ ಅಕ್ಕನೂ....”

“ನಿನ್ನ ಮಾತಿನ ಅರ್ಥವೇನು?” ಡಾಕ್ಟರ್ ಮಧ್ಯದಲ್ಲೇ ಪ್ರಶ್ನಿಸಿದರು.

....“ನಿನ್ನ ಮಾತಿನ ಅರ್ಥವೇನು? ಕಮಲೀ ಅಕ್ಕನಿಗೂ ನನ್ನ ಕಂಡರೆ ತುಂಬಾ ಗೌರವ. ಅವಳ ತಾಯಿಯೂ ನನಗೆ ಮರ್ಯಾದೆ ಮಾಡುತ್ತಾಳೆ. ನನಗೆ ಉಪಚಾರ ಮಾಡುತ್ತಾಳೆ. ಇದೇ ತಾನೇ?” ಹೌದು: ಕಾಳೀಚರಣ ತನ್ನ ಭಾವನೆಗೆ ಮಾತಿನ ಆಧಾರ ಸಿಕ್ಕಿದುದರಿಂದ ತೃಪ್ತನಾಗಿ ಹೇಳಿದ. “ಆದರೆ, ಆದರಿಂದರೇನು? ತಹಸೀಲ್ದಾರರು ಹಳ್ಳಿಯ ಶ್ರೀಮಂತರು. ವಯಸ್ಸಿನಲ್ಲಿ ನನಗಿಂತ ತುಂಬಾ ದೊಡ್ಡವರು. ಕಮಲಿಯ ಕಾಯಿಲೆಯ ಕಾರಣದಿಂದಾಗಿ ನಾನು ಅವರ ಮನೆಗೆ ಹೆಚ್ಚು ಹೋಗಬೇಕಾಯಿತು. ಅಂದಮಾತ್ರಕ್ಕೆ ತಹಸೀಲ್ದಾರರು ಮಾಡಿದ ಅನ್ಯಾಯವನ್ನೆಲ್ಲಾ ನಾನು ಸಮರ್ಥನೆ ಮಾಡುತ್ತೇನೆ ಅಂತ ಅರ್ಥವೇನು?”

ಕಮುಲ ಬಹಳ ಹೊತ್ತಿನಿಂದ ಚಿಕ್ಕಮ್ಮನ ಮನೆಯ ಅಂಗಳದಲ್ಲಿ ನಿಂತು ಕೇಳುತ್ತಿದ್ದಳು. ಡಾಕ್ಟರ್ ಕೊನೆಯ ಮಾತುಗಳನ್ನು ಕೇಳಿ ಅವಳ ಎದೆ ಧಕ್ ಎಂದಿತು. ಅವಳಿಗೆ ತನ್ನನ್ನು ತಾನು ಹಿಡಿತದಲ್ಲಿಟ್ಟುಕೊಳ್ಳುವುದು ಸಾಧ್ಯವಾಗಲಿಲ್ಲ.

ಅವಳ ಮೇಲೆ ನಡೆದ ಘಟನೆಗಳ ಪ್ರತಿಕ್ರಿಯೆ ತುಂಬಾ ತೀವ್ರಗತಿಯಿಂದ ಆದವು. ನಾಟಕೀಯವಾಗಿ ಒಳಗೆ ಪ್ರವೇಶಿಸುತ್ತಾ ಅವಳೆಂದಳು: ಆದ್ದರಿಂದಲೇ ಈ ನಡುವೆ ನೀವು ನಮ್ಮ ಮನೆಗೆ ಬರುವುದಿಲ್ಲ. ಆದ್ದರಿಂದಲೇ ಅವತ್ತು ನೀವು ತಹಸೀಲ್ದಾರರಿಗೆ ಹೇಳಿಕಳುಹಿಸಿದಿರಿ, ಕಮಲೀನ ಪಾಟ್ನಾಗೆ ಕರ್ಕೊಂಡು ಹೋಗಿ ಇಲ್ಲಿ ಔಷಧಿ ಕೊಡೋದು ಸಾಧ್ಯವಿಲ್ಲಾ ಅಂತ ಅಲ್ವಾ?"

ಎಲ್ಲರೂ ಒಟ್ಟಿಗೆ ಬೆಚ್ಚಿದರು. ಚಿಕ್ಕಮ್ಮ ನಕ್ಕು ಹೇಳಿದಳು: ನೀನಿವತ್ತು ಜಗಳ ಆಡಬೇಕೂ ಅಂತಾನೇ ಸೊಂಟಕಟ್ಟಿ ಬಂದಿರೋ ಹಾಗಿದೆಯಲ್ಲ ಹುಚ್ಚಿ.... ಮೊದಲು ಕುಳಿತುಕೋ.

ಡಾಕ್ಟರ್. ಕಮಲೆಯ ಕಡೆ ರೆಪ್ಪೆ ಹೊಡೆಯದೆ ನೋಡುತ್ತಿದ್ದರು, ಅವಳ ಮುಖ ಕೆಂಪಗಾಗಿತ್ತು. ಕಣ್ಣುಗಳಲ್ಲಿ ನೀರು ತುಂಬಿತ್ತು....ಗಂಟಲಿನ ಹತ್ತಿರವಿದ್ದ ನರ ತೀವ್ರವಾಗಿ ಬಡಿದುಕೊಳ್ಳುತ್ತಿತ್ತು....ಡಾಕ್ಟರ್‌ರಿಂದ ದೊಡ್ಡ ಅನ್ಯಾಯವಾಯಿತು. ರಕ್ತದ ಒತ್ತಡ ಖಂಡಿತ ಹೆಚ್ಚಾಗಿರಬಹುದು. ಕಮಲೆಯ ತುಟಿಗಳು ಕಂಪಿಸುತ್ತಿದ್ದವು.

"ಕಮಲಾ" ಡಾಕ್ಟರ್ ಗಟ್ಟಿಯಾಗಿ ಹೇಳಿದರು: "ನಿನಗೆ ಒಂದೂ ಗೊತ್ತಿಲ್ಲ, ಏನೂ ಇಲ್ಲದೆ ಬೈಗಳ ಮಳೆಯನ್ನೇ ಸುರಿಸೋದಕ್ಕೆ ಆರಂಭಿಸಿಬಿಟ್ಟೆಯಲ್ಲಾ? ನಾನು ಕಾಳೀಚರಣನಿಗೆ ಹೇಳುತ್ತಿದ್ದೆ, ನಾನೇನಾದರೂ ಯಾವುದಾದರೂ ರಾಜನೈತಿಕ ಪಕ್ಷದಲ್ಲಿದ್ದರೆ ಹೀಗೆ ಮಾಡುತ್ತಿರಲಿಲ್ಲ ಅಂತ....."

ಡಾಕ್ಟರ್ ವಾತಾವರಣವನ್ನು ಹಗುರ ಮಾಡಲು ಪ್ರಯತ್ನಿಸಿದರು. ಕಮಲಾ ಸಿಟ್ಟಾಗಿದ್ದರೆ ಒಳ್ಳೆಯದಾಗುತ್ತಿತ್ತು. ಆ ದಿನಕ್ಕಾಗಿಯೇ ಅವರು ಕಾಯುತ್ತಿದ್ದರು. ಹಾಗಾಗಿದ್ದಿದ್ದರೆ ಅವಳನ್ನು ಪೂರ್ತಿ ಗುಣಪಡಿಸುವುದು ಸಾಧ್ಯವಿತ್ತು. ಆದರೆ ಗುರಿ ತಪ್ಪಿತು....ಇನ್ನು ಪರಿಣಾಮವನ್ನು ಇದಿರಿಸಲೇಬೇಕು.

ಡಾಕ್ಟರ್ ಮಾತನಾಡುತ್ತಿರುವವರೆಗೂ, ಕಮಲಾ ಮೌನವಾಗಿ ಕೇಳುತ್ತಿದ್ದಳು. ಒಮ್ಮೆಲೇ ಅವಳ ಮುಖಮಂಡಲವನ್ನು ಆವರಿಸಿದ್ದ ಮೋಡಗಳು ಚದುರಿದವು. ತೆಳುವಾದ ಮೃದು ಮಂದಹಾಸ ತುಟಿಗಳ ಮೇಲೆ ತೇಲಿತು.

ಮೂಗಿನ ಪಕ್ಕದಲ್ಲಿದ್ದ ನೀಲಿ ರೇಖೆ, ನಿಧಾನವಾಗಿ ಅರಳುತ್ತಿದ್ದಂತೆ ತೋರಿತು— ಕಮಲದ ದಳಗಳು ಅರಳುತ್ತಿರುವಂತೆ

ಚಿಕ್ಕಮ್ಮ ನೀರವವಾಗಿ ಒಮ್ಮೆ ಕಮಲೆಯ ಕಡೆ, ಒಮ್ಮೆ ಡಾಕ್ಟರ್ ಕಡೆ ನೋಡುತ್ತಿದ್ದಳು. ಅವಳ ತುಟಿಗಳ ಮೇಲೂ ಮುಗುಳ್ನಗೆ ಮಿಂಚುತ್ತಿತ್ತು.

"ಪ್ಯಾರು, ನನ್ನ ಹತ್ತಿರ ಎರಡು ಸಲ ಹುಡುಕಿಕೊಂಡು ಬಂದಿದ್ದ. ಬಹುಶಃ ಈವತ್ತೂ ಯಾವುದೋ ಮೊಲ ಕಳೆದು ಹೋಗಿರಬಹುದು"— ಕಮಲೀ ಮೌನಭಂಗ ಮಾಡುತ್ತಾ ಹೇಳಿದಳು, ಅವಳ ಸ್ವರ ಸಹಜವಾಗಿತ್ತು.

ಕಾಳೀಚರಣ ಕಮಲೆಯ ಮುಖದಲ್ಲಿ ಏನನ್ನೋ ಕಂಡು ಚಕಿತನಾದ. ಅವನೊಡನೆ ಮಾತನಾಡುವಾಗ ಒಮ್ಮೊಮ್ಮೆ ಮಂಗಳೆಯ ಮುಖದ ಮೇಲೂ ಇದೇ ಭಾವ ಮೂಡಿರುತ್ತದೆ. ಹೀಗೆ ತಡೆದು ತಡೆದು ಮಾತಾಡುತ್ತಾಳೆ.... ಅವನು ಡಾಕ್ಟರ ಕಡೆ ನೋಡಿದ. ಅನಂತರ ಮೇಲೆದ್ದು ಹೇಳಿದ: "ಒಳ್ಳೇದು ಡಾಕ್ಟರ್ ನಾನಿನ್ನು ಹೋಗ್ತೀನಿ....ನಾಳೆ ಮತ್ತೆ ನೋಡ್ತೀನಿ."

ಚಿಕ್ಕಮ್ಮನು ಎದ್ದು ಒಳಗೆ ಹೋಗುತ್ತಾ ಹೇಳಿದಳು: "ನೀವು ಚಹಾ ಕುಡೀತೀರೀತಾನೇ?" ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನೆ ಕುಳಿತಿದ್ದರು.... ಕಮಲಾ ಹತ್ತಿರದಲ್ಲಿ ಬಿದ್ದಿದ್ದ ಹೂಕುಂಡವನ್ನು ಪರೀಕ್ಷಿಸುತ್ತಿದ್ದಳು. ಡಾಕ್ಟರ್ ನಗುತ್ತಾ ಕೇಳಿದರು "ಒಂದು ಮಾತು ಕೇಳಲೆ ಕಮಲಾ? ತಪ್ಪು ತಿಳೀಬಾರದು? ತಮ್ಮ ತಂದೆಯ ಮೇಲೆ ದೋಷ ಹೊರಿಸುವುದನ್ನು ಯಾರೂ ಸಹಿಸಲಾರರು, ಅಲ್ವಾ?"

"ಯಾರು ತಾನೇ ಹೇಗೆ ಸಹಿಸೋದಕ್ಕೆ ಆಗುತ್ತೆ?"

"ನನಗೇನು ಗೊತ್ತು ನನಗೆ....ನನಗೆ ನನ್ನ ತಂದೆಯ ನೆನಪೂ ಇಲ್ಲ...."

ಕಮಲಾ ನಗುತ್ತಲೇ ನುಡಿದಳು: "ಮದುವೆಯ ಹಾಡಿನಲ್ಲಿ....ಒಂದು ಕಡೆ ಬರುತ್ತೆ....ಶಿವ, ಪಾರ್ವತಿಯ ತಂದೆಯ ಮೇಲೆ ಒಂದು ರಾಶಿ ದೋಷ ಆರೋಪಿಸುತ್ತಾನೆ.

**ಏಕ ಬೇರ ಗೇಲೀಂ ಗೌರಾ ತೋಹರೋ**
**ನೈಹರವಾ ಸೇ,**
**ಬಯುಕೆ ಲೇ ದೇಲಕ ಫೂಅರ್,**
**ಕೋದೋ ಕೆ ಖಿಚುಡಿ ರಂಘಾ ಓಲ್ ಮೈನಾಸಾನೂ....**

(ಗೌರಿ, ಒಂದು ಬಾರಿ ನಿನ್ನ ತವರು ಮನೆಯಲ್ಲಿ, ನನಗೆ ಒಣಗಿದ ಧಾನ್ಯ ಕೊಟ್ಟರು. ಕೆಟ್ಟ ಅನ್ನ, ಕಿಚಡೀ ಬಡಿಸಿದರು.)

ಇಬ್ಬರೂ ಒಟ್ಟಿಗೆ ನಕ್ಕರು. ಪಕ್ಷಿಯ ಜೋಡಿ ಒಟ್ಟಿಗೆ ಹೃದಯಪೂರ್ವಕವಾಗಿ ಕಿಲಕಿಲ ನಗುತ್ತಿರುವಂತೆ ನಕ್ಕರು. ಸ್ತ್ರೀ ಪುರುಷರ ನಡುವಣ ಪವಿತ್ರ ಆಕರ್ಷಣೆಯ ಬೆಳ್ಳಿಯ ಹಗ್ಗ, ಚಕಚಕ ಹೊಳೆಯುತ್ತಿತ್ತು. ಪುರುಷ ಮುಂದುವರಿದ....ನಾರಿಯನ್ನು ಹತ್ತಿರಕ್ಕೆಳೆದುಕೊಂಡ....

ದೊಡ್ಡ ದೊಡ್ಡ, ಆಕರ್ಷಕ ಕಣ್ಣುಗಳ ಜೊತೆ ನಕ್ಕು ಕೇಳಿದವು.... "ನೀವು....?"

ನನ್ನ ಮೇಲೆ ಬೇರೆಯವರು ದೋಷ ಹೊರಸಿದರು ಸಹಿಸುತ್ತಿರೇನು?"

"ದಿನವೂ ಸಹಿಸ್ತಾನೇ ಇದೀನಲ್ಲಾ" ಎರಡು ನಿಶ್ಚಿಂತ ಕಣ್ಣುಗಳು ಛೇಡಿಸುವಂತೆ ಉತ್ತರ ಕೊಟ್ಟವು: "ಕಮಲೀ ಔಷಧಿ ಕುಡಿಯೋದಿಲ್ಲ. ಕಮಲೀ ರಾತ್ರಿ ತುಂಬಾ ಹೊತ್ತು ಕುಳಿತು ಓದುತ್ತಿರುತ್ತಾಳೆ,····ಕಮಲೀ ಹುಚ್ಚಿ ಕಮಲೀ ಹುಚ್ಚಿ····ನೀನು ಹುಚ್ಚಿ ನೀನು ನನ್ನ ಹುಚ್ಚಿ ಹುಚ್ಚ–ಹುಚ್ಚಿ····"

····ಅಧರಕ ಮಧು ಜಬ ಚಾಖಲ ಕಾನ,
ತೋಹರ ಶಪಥ ಹಮ–ಕಿಛು ಯದಿ ಜಾನಿ

(ಅಧರ ಮಧುವನ್ನು ಹೀರಿದ ಕೃಷ್ಣ. ನಿನ್ನ ಶಪಥ ನಮಗೂ ಗೊತ್ತಿದ್ದರೆ.)

# ಸ್ವರಾಜ್ಯ ಸಿಕ್ಕಿಬಿಟ್ಟಿತೇ ?

“ಇನ್ನೂ ಸಿಕ್ಕಿಲ್ಲ. ಅದು ಹದಿನೈದನೇ ತಾರೀಖು ಸಿಗುತ್ತದೆ. ಹೆಚ್ಚು ಸಮಯವೇನೂ ಇಲ್ಲ. ಮುಂದಿನ ವಾರವೇ ಸಿಗುತ್ತದೆ. ದೆಹಲಿಯಲ್ಲಿ ಮಾತುಕತೆ ನಡೆಯಿತು....ಹಿಂದೂಗಳು ಹಿಂದೂಸ್ಥಾನದಲ್ಲೇ ಇರುತ್ತಾರೆ. ಮುಸಲ್ಮಾನರು ಪಾಕಿಸ್ಥಾನಕ್ಕೆ ಹೊರಟುಹೋಗುತ್ತಾರೆ.”

ಬಾವನದಾಸ ಮತ್ತೊಂದು ವರ್ತಮಾನ ತಂದ. ಹೊಸ ವರ್ತಮಾನ:

ಬಾವನದಾಸ, 40ನೇ ಸೆಕ್ಷನ್ನಿನ ಕಾನೂನಿನಂತೆ ಇದು ಒಂದು ಸುಳ್ಳು ವರ್ತಮಾನ ತಂದಿಲ್ಲ ತಾನೇ?....ಸುಳ್ಳಲ್ಲ. ನಿಜವಾದ ವಿಚಾರ. ಡಾಕ್ಟರ ರೇಡಿಯೋದಲ್ಲೂ ಹೇಳಿತು.

“ಆ ದಿನ ತಹಸೀಲ್ದಾರರು ಊಟ ಹಾಕಿಸುತ್ತಾರಂತೆ” ವೈರಲೆಸ್ ಸುಮರಿತದಾಸ ಮನೆ ಮನೆಗೂ ಸುದ್ದಿ ಮುಟ್ಟಿಸಿದ. ಎಲ್ಲಾ ವ್ಯವಸ್ಥೆಯನ್ನೂ ಗಟ್ಟಿಮಾಡಿಕೊಂಡು ಈಗತಾನೇ ನಾನು ಅಲ್ಲಿಂದ ಬರುತ್ತಿದ್ದೇನೆ. ಪೂರೀ. ಜಿಲೇಬಿ, ಹಲ್ವಾ, ಮೊಸರು, ಸಕ್ಕರೆ.”

ಜಯವಾಗಲಿ, ಜಯವಾಗಲೀ

ಮಹಾತ್ಮಾ ಗಾಂಧಿಜೀಯವರಿಗೆ ಜಯವಾಗಲಿ

ಮಹಂತ ಸಾಹೇಬರ ಮಠದಲ್ಲೂ ಊಟ ಹಾಕುತ್ತಾರೆ. ಮೂರು ರೀತಿಯ ನಾಟ್ಯ ನಡೆಯುತ್ತದೆ—ಬಲವಾಹೀ, ವಿದೇಶೀ, ಕಮಲಾ, ಸುಹಮುದೀಯ ನೌಟಂಗೀ ಕಂಪನಿಯ ನಾಟ್ಯಗಳು.

ಕಾಳೀಚರಣನಿಂದ ಸೋಷಲಿಸ್ಟ್ ಪಾರ್ಟಿಯ ಕೀರ್ತನೆಗಳು ನಡೆಯುತ್ತವೆ. ಪೂರ್ಣಿಯಾದಿಂದ ಇಂಗ್ಲೀಷ್ ಬ್ಯಾಂಡ್ ಬರುತ್ತದೆ....ಅರೆ, ಇಂಗ್ಲೀಷ್ ಬ್ಯಾಂಡ್ ಗೊತ್ತಿಲ್ವೇನು? ರೌತಹಟ್ ಜಾತ್ರೆಯಲ್ಲಿ ಸರ್ಕಲ್ಲಿನಲ್ಲಿ ಆಗುತ್ತಿದ್ದ ನಾಟ್ಯದಲ್ಲಿ ನುಡಿಸುತ್ತಿದ್ದರಲ್ಲಾ!—ಭೆಕರ್ ಭೆಕರ್ ಭೇಂ ಭೇಂ! ಸಂಕರಪುರದ

ಥಮವಾಹನಿಂದ ವಿದ್ಯಾಪತಿ ನಾಟಕ! ಬಂಸಗಾಡಾದ ಬಲವಾಹಿಗಳ ಭಠಯಾಲೀ ಕೀರ್ತನೆ, ಓರಾಹಿಯಿಂದ ನಾರದೀ ಕೀರ್ತನೆ, ಕೊಯಲೂ ಖೋಲವಾಹ ಮತ್ತು ಸೀತಾನಾಥರಿಂದ ದೇಶಭಕ್ತಿ ಗೀತೆಗಳು! ಸೀತಾನಾಥ ಮುದುಕನಾದರೂ ಅವನ ಧ್ವನಿ ಎಷ್ಟು ಚುರುಕಾಗಿದೆ!

"ಮುಸಲ್ಮಾನರ ಭಾಗವೆಲ್ಲಾ ಸ್ವರಾಜ್ಯ ಬಂದ ಮೇಲೆ ಪಾಕಿಸ್ಥಾನಕ್ಕೆ ಹೊರಟುಹೋಗುತ್ತದೇನು?....ಸರಿಯಾಗಿ ಕತ್ತರಿಸಿ ಭಾಗ ಮಾಡ್ತಾರೆ...."

"ಹೌದು, ಹಿಂದು ಮುಸಲ್ಮಾನರು ಅಣ್ಣತಮ್ಮಂದಿರು ಅಂದಮೇಲೆ ಅಣ್ಣತಮ್ಮಂದಿರ ಪಾಲನ್ನು ಸಮ ಸಮವಾಗಿ ಹಂಚಬೇಕಲ್ಲಾ"

"ಬಾವನದಾಸ ಸ್ವರಾಜ್ಯ ಹಂಚಿದ್ದನ್ನು ನೋಡಿದನಂತೋ ಇಲ್ಲವೆ, ಸುಮ್ಮನೆ ಊಹೆಯಿಂದ ಹೇಳ್ತಿದಾನೋ. ಕೇಳಿದೆಯಾ?"

ಬಾವನದಾಸ ಹೇಳಿದ, "ಸ್ವರಾಜ್ಯ ಅಂದರೆ ಕುಂಬಳಕಾಯಿ, ಹಲಸಿನ ಕಾಯಿ ಅಂದುಕೊಂಡರೇನು. ಸಮ ಸಮವಾಗಿ ಕತ್ತರಿಸಿ ಕೊಡೋದಕ್ಕೆ?"

"ಹಾಗಾದರೆ ಕಾಂಗ್ರೆಸ್ ಹಾಡಿನಲ್ಲಿ ಹಾಗೇ ಹೇಳಿದೆಯಲ್ಲ....ಜಬ ತಕ್ ವೆಲ ಸುರಾಜ ನಹಿಂ ಪಾವೆ, ಗಾಂಧಿಜೀ ಚರಖಾ ಚಲಾವೇ ಮೋಹನ ಹೋ ಚರಖಾ ಚಲಾವೇಂ....(ಸ್ವರಾಜ್ಯ ಎನ್ನುವ ಹಣ್ಣನ್ನು ಪಡೆಯುವವರೆಗೆ ಗಾಂಧೀಜಿ ಚರಖಾ ತಿರುಗಿಸುತ್ತಲೇ ಇರುತ್ತಾರೆ)...."

"ಹಾಡಿನ ವಿಚಾರ ಬಿಡು. ಸ್ವರಾಜ್ಯ ಅಂದರೆ...." ಬಾವನದಾಸ ವಿವರಿಸಿದ. "ಸ್ವರಾಜ್ಯ ಅಂದರೆ ನಮ್ಮ ರಾಜ್ಯ. ಭಾರತೀಯ ರಾಜ್ಯ. ಇನ್ನುಮೇಲೆ ಇಂಗ್ಲೀಷಿನವರು ಇಲ್ಲಿ ರಾಜ್ಯ ಆಳುವುದಿಲ್ಲ....ಏ ಬ್ರಿಟಿಷರೇ, ದೇಶ ಬಿಟ್ಟು ತೊಲಗಿ "ಎಂದು ಗಾಂಧೀಜಿ ಹೇಳಿದ್ದೇಕೆ? ಇದಕ್ಕೇ...."

ನಮ್ಮ ಹಳ್ಳಿಯ ರಾಜ್ಯವಂತೂ ತಹಸೀಲ್ದಾರರಿಗೇ ಸಿಗೋದು. ಪಾರಬಂಗ ರಾಜ್ಯದ ತಹಸೀಲ್ದಾರ ಹರಗೌರಿಯಂತೂ ಸತ್ತುಹೋದ.

ಬಾಲದೇವನ ಮನಸ್ಸು ತುಂಬಾ ಶಾಂತವಾಗಿದೆ. ಬೈರಾಗಿ ಧರ್ಮ ಸ್ವೀಕಾರ ಮಾಡಿದ ದಿನದಿಂದ ಅವನ ತಲೆ ತಣ್ಣಗಾಗಿದೆ. ಲಕ್ಷ್ಮಿ ಮೂರು–ನಾಲ್ಕು 'ಸತ್ಸಂಗ' ಆಚರಿಸಿದಳು. ಕೊನೆಗೆ ಬಾಲದೇವ ಸೋತುಹೋದ. ಈಗ ಬಾಲದೇವ ಗೃಹಸ್ಥನಲ್ಲ, ಸಾಧುವಾಗಿಬಿಟ್ಟ....ಮೀಸೆ ಎಲ್ಲಾ ತೆಗೆದುಹಾಕಿಕೊಂಡ. ಬಾಲದೇವನ ಮುಖ ಹದಿನಾರಾಣೆ ಪಾಟ್ನಾ ಆಲೂಗಡ್ಡೆಯ ಹಾಗೆ ಕಾಣುತ್ತದೆ.

"ಸಾಹೇಬ್ ಬಂದಗೀ, ಬಾಲದೇವ"

"ಸಾಹೇಬ್ ಬಂದಗೀ, ಜೈ ಹಿಂದ್" ಈಗೀಗ ಬಾಲದೇವ ಎರಡನ್ನೂ ಒಟ್ಟಿಗೆ ಸೇರಿಸಿ ಹೇಳುತ್ತಾನೆ.

"ಜೈ ಹಿಂದ್ ಕಾಮ್ರೇಡ್ ಬಾಲದೇವ" ಕಾಳೀಚರಣ ಮುಷ್ಟಿ ಬಿಗಿದು ಹೇಳಿದ—ಕಾಮ್ರೇಡ್ ?

"ಹಾಗನ್ನಬೇಡ. ನಾನು ಕಾಮ್ರೇಡ್ ಅಲ್ಲ." ಮೂಗು ನಿಮಿರಿಸಿ ಬಾಲದೇವ ಹೇಳಿದ: "ನನ್ನನ್ನು ಕಾಮ್ರೇಡ್ ಅಂತ ಕರೀಬೇಡ."

"ಕಾಮ್ರೇಡ್ ಅಂದರೆ ನಿಂದನೆ ಅಲ್ಲ ಬಾಲದೇವ. ಕಾಮ್ರೇಡ್ ಅಂದರೆ ಸ್ನೇಹಿತ, ಜೊತೆಗಾರ ಅಂತ ಅರ್ಥ.... ದೇಶದ ಕೆಲಸ, ಪಬ್ಲಿಕ್ ಕೆಲಸ ಮಾಡುವವರೆಲ್ಲಾ ಕಾಮ್ರೇಡ್‌ಗಳೇ"—ಕಾಳೀಚರಣ ನಗುತ್ತಾ ಹೇಳಿದ.

"ನಿನಗೆ ಗೊತ್ತಿಲ್ಲ." ಬಾಲದೇವ ರೇಗಿದ: "ನೀವೆಲ್ಲಾ ಈವತ್ತು ಬಂದವರು." ನಾನು ಮೂವತ್ತನೇ ಇಸವಿಯಿಂದ ಇದ್ದೀನಿ. ಮೀಸೆ ತೆಗೆಸಿ, ಕೋಳೀ ಮೊಟ್ಟೆ ತಿನ್ನಿಸಿ ಕಾಮ್ರೇಡ್ ಮಾಡ್ತಾರೆ. ಜೈಲಿನಲ್ಲಿ ಎಷ್ಟು ಜನ ಕಾಮ್ರೇಡ್‌ಗಳಾಗಿದ್ದದ್ದನ್ನು ನೋಡಿದೀನಿ.... ಮೊಜಪ್ಫರಪುರದ ಒಬ್ಬ ಸೋಷಲಿಸ್ಟ್ ನಾಯಕ ಇದ್ದ. ಮೀಸೆ ಕತ್ತರಿಸೋದೇ ಅವನ ಕೆಲಸ. ಜೇಬಿನಲ್ಲಿ ಯಾವಾಗಲೂ ಕತ್ತರಿ ಹಿಡ್ಕೊಂಡೇ ಇರ್‍ತಿದ್ದ. ಜಾತಿ ನೋಡಿದರೆ ಬ್ರಾಹ್ಮಣ .... ಹೀಗೆ ಇರೋವಾಗ ನೀನು ನನಗೆ 'ಕಾಮ್ರೇಡ್' ಅನ್ನೋದರ ಅರ್ಥ ಹೇಳಿಕೊಡುತ್ತಿದ್ದೀಯಲ್ಲಾ."

ಬಾಲದೇವನಿಗೆ ಮತ್ತೆ ಹುಚ್ಚು ರೇಗುತ್ತಿದೆ ಎನಿಸುತ್ತಿದೆ.

ಮಿಕ್ಕವರೆಲ್ಲಾ ಒಟ್ಟಾಗಿ ಹೇಳಿದರು: "ಬಿಡು, ಕಾಳೀಚರಣ, ನೀನು ಮಾಡಿದ್ದು ತಪ್ಪು. ಈವತ್ತೇನೋ ನೀನು ಲೀಡರ್ ಆಗಿರಬಹುದು. ಅದು ಸಂತೋಷದ ವಿಚಾರಾನೇ. ಆದರೆ ಎಷ್ಟಾದರೂ ನೀನು ಬಾಲದೇವನ ಶಿಷ್ಯ ಅನ್ನೋದನ್ನು ಮರೀಬೇಡ. ನೀನು ಒಪ್ಪಲೀ ಬಿಡಲಿ, ಬಾಲದೇವ ಹೇಳಿದ್ದು ಸರಿಯಾಗಿದೆ."

ಕಾಳೀಚರಣ ನಾಚಿಕೊಂಡ.... ಹಾಗಾದರೆ ಆದಿನ, ತಂದೆ ಮಗ ಇಬ್ಬರೂ 'ಕಾಮ್ರೇಡುಗಳಾಗಬಹುದೆಂದು ಸೆಕ್ರೆಟರಿ ಹೇಳಿದರಲ್ಲಾ ?.... ಅಥವಾ ನಾನು ಅರ್ಥ ಮಾಡಿಕೊಂಡಿದ್ದೇ ತಪ್ಪಿರಬಹುದು.... ಅವನು ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತಾನೆ.

"ಹೌದು, 'ಅಭಿಮನ್ಯು ವಧೆ' ನಾಟಕದಲ್ಲಿ ಅರ್ಜುನ ದ್ರೋಣಾಚಾರ್ಯರ ಕಾಲಿಗೆ ಹೂವಿನ ಬಾಣ ಬಿಡುತ್ತಾನೆ."

ಶಹಬ್ಬಾಸ್ ಕಾಳೀಚರಣ! ಈಗ ಅವನಿಗೆ ವಿಚಾರ ಅರ್ಥವಾಯಿತು. ಮೊದಲೆಲ್ಲಾ, ಮಾತು ಅರ್ಥ ಮಾಡಿಕೊಳ್ಳುವುದಕ್ಕೆ ಮುಂಚೆಯೇ ಜಗಳ ಆರಂಭ ಮಾಡಿಬಿಡುತ್ತಿದ್ದ!

ಬಾಲದೇವನೂ ನಕ್ಕ. ಅವನೆಂದ: "ಸ್ವರಾಜ್ಯ ಉತ್ಸವ ಆಚರಿಸೋ ವಿಚಾರದಲ್ಲಿ ನಿಮ್ಮ ಪಾರ್ಟಿಯಿಂದ ಹುಕುಂ ಬಂದಿದೆಯೇನು?"

"ಹೂಂ ಮತ್ತೆ, ಸ್ವರಾಜ್ಯ ಕೇವಲ ಕಾಂಗ್ರೆಸ್ ಪಾರ್ಟಿಗೆ ಮಾತ್ರ ಸಿಕ್ಕಿದೆಯೇನು?"

"ಸ್ವರಾಜ್ಯ ಉತ್ಸವದ ದಿನ ಇರ್ತೀಯೋ, ಇಲ್ವೋ?" ಬಾಲದೇವ ಕೇಳಿದ.

"ಖಂಡಿತ ಇರುತ್ತೇನೆ. ಆ ದಿನ ಆನೆಯ ಮೇಲೆ ಭಾರತಮಾತೆಯ ವಿಗ್ರಹ ಕೂರಿಸಿ ಮೆರವಣಿಗೆ ಮಾಡುತ್ತೇವೆ." ಕಾಳೀಚರಣ ಹೆಮ್ಮೆಯಿಂದ ಹೇಳಿದ: "ನಮ್ಮ ಹಳ್ಳಿಯ ಮೆರವಣಿಗೆ, ಕಟಿಹಾರ ಜಿಲ್ಲೆಯಲ್ಲಿ ಮಾತ್ರವಲ್ಲ, ಇಡೀ ಇಂಡಿಯಾದಲ್ಲೇ ಫಸ್ಟ್ ಆಗಿರಬೇಕು. ವಿಗ್ರಹ ಮಾಡೋದಕ್ಕೆ ಆರ್ಡರ್ ಕೊಟ್ಟುಬಿಟ್ಟಿದೀನಿ."

ಬಾಲದೇವನ ಕಣ್ಣು ಮುಂದೆ ಭಾರತಮಾತೆಯ ವಿಭಿನ್ನ ರೂಪಗಳು ಬಂದು ನಿಂತವು. ತಾಯಿ, ರೂಪಮತಿ, ಮಾಯಾಜೀ ಮತ್ತು ಲಕ್ಷ್ಮಿ.

....ಲಕ್ಷ್ಮಿಯನ್ನು ಆನೆಯ ಮೇಲೆ ಕೂರಿಸಬಾರದೇನು?....ಭಾರತ ಮಾತೆಯ ರೂಪ? ಈ ನಡುವೆ ಲಕ್ಷ್ಮಿಯೂ ಖದ್ದರ ಧರಿಸಲು ಪ್ರಾರಂಭಿಸಿದ್ದಾಳೆ. ಚರಖಾದಲ್ಲಿ ನೂಲು ತೆಗೆಯುತ್ತಾಳೆ. ತೆಳುವಾಗಿ ನೂಲು ತೆಗೆಯುವುದಂತೂ ಅವಳಿಗೆ ಮೊದಲಿನಿಂದಲೂ ಗೊತ್ತು.

ಜೈ ಭಾರತಮಾತಾ ಕೀ ಜೈ.

## 2

ಮೊಕದ್ದಮೆಯಲ್ಲೂ ಜಯ ದೊರಕಿತು.

ಎಲ್ಲಾ ಸಂಥಾಲರಿಗೂ ಆಜೀವ ಕಾರಾಗೃಹವಾಸ ಶಿಕ್ಷೆ ವಿಧಿಸಲ್ಪಟ್ಟಿತು. ಸೆಷನ್ ಕೋರ್ಟಿನಲ್ಲೂ ಆಡಂಬರದಿಂದ ಮೊಕದ್ದಮೆ ನಡೆಯಿತು. ಸಂಥಾಲರ ಪರವಾಗಿ ವಾದಮಾಡಲು ಬ್ಯಾರಿಸ್ಟರ್ ಬಂದಿದ್ದ. ಸಂಥಾಲ ಸ್ತ್ರೀಯರು ತಮ್ಮ ಒಡವೆಗಳನ್ನು ಮಾರಿ ಬ್ಯಾರಿಸ್ಟರ್ ಹಣ ತುಂಬಿದ್ದರು. ಬ್ಯಾರಿಸ್ಟರ್ ಮೇಲೆ ಇನ್ನೊಬ್ಬ ಬ್ಯಾರಿಸ್ಟರ್! ತಹಸೀಲ್ದಾರರಂತಹ ಕಾನೂನು ಬಲ್ಲ ಮನುಷ್ಯ ಇಲ್ಲ ದಿದ್ದರೆ ಈ ಖೂನೀ ಕೇಸಿನಲ್ಲಿ ಶಿವಶಂಕರಸಿಂಹ, ರಾಮಕೃಪಾಲಸಿಂಹ, ಖೇಲಾವನ ಸಿಂಹ ಎಲ್ಲಾ ಸಿಕ್ಕಿಹಾಕಿಕೊಳ್ಳುತ್ತಿದ್ದರು...ಖರ್ಚು? ಅಯ್ಯೋ ಬಿತಣ್ಣಾ, ಬದುಕಿದ್ದರೆ ತಾನೇ ಭವಿಷ್ಯ! ಗಲ್ಲಿನ ಶಿಕ್ಷೆ ಆಗಿದ್ದರೆ ಭೂಮಿ–ಕಾಣಿ, ರೂಪಾಯಿ–ಕಾಸುಗಳಿಂದ ಏನು ಪ್ರಯೋಜನ ಆಗುತ್ತಿತ್ತು?

ರಾಮಕೃಪಾಲ ಸಿಂಹ, ಸಂಥಾಲ ಪಂಗಡಕ್ಕೆ ಸೇರಿದ್ದ ಭೂಮಿಯಲ್ಲಿ ಹತ್ತು ಎಕರೆಯಷ್ಟು ಭೂಮಿಯನ್ನು ವಿಶ್ವನಾಥಪ್ರಸಾದರ ಹೆಸರಿಗೆ ಬರೆದುಕೊಟ್ಟರು. ಅಂದಹಾಗೆ ವೈರಲೆಸ್ ಸುಮರಿತದಾಸನಿಗೂ ನಾಲ್ಕು 'ಬಿಸ್ವಾ' (ಭೂಮಿಯ ಒಂದು ಅಳತೆ) ಜಮೀನು ಸಿಕ್ಕಿತು....ಖೇಲಾವನಸಿಂಹನಿಗೂ ದೇಣಿಗೆ ಕೊಡಬೇಕಾಯಿತು....ಆಗದೆ ಇನ್ನೇನಾಗುತ್ತೆ ಹೇಳಿ....ಕೈಯಲ್ಲಿದ್ದ ದುಡ್ಡೆಲ್ಲಾ ಇನ್ಸ್‌ಪೆಕ್ಟರ್ ಎಲೆ-ಅಡಿಕೆ ಖರ್ಚಿಗೇ ಮುಗಿದುಹೋಯಿತು. ಹಳೆಯ ಸೆಣಬೆಲ್ಲಾ ಖರ್ಚಾಗಿ ಹೋಗಿತ್ತು. ಆದ್ದರಿಂದ ಖೇಲಾವನ ಸುಮಾರು ಒಂದೂವರೆ ಸಾವಿರದಷ್ಟು ಸಾಲ ತೆಗೆದುಕೊಳ್ಳಬೇಕಾಯಿತು. ತಹಸೀಲ್ದಾರರು ಹೇಳಿದರು, "ಕಾಗದ ಬರೆಯೋ ಅವಶ್ಯಕತೆಯೇನೂ ಇಲ್ಲ. ಸೆಣಬು ಮಾರಾಟ ಆದಮೇಲೆ ಹಣ ಕೊಟ್ಟರಾಯ್ತು."

ಮೊಕದ್ದಮೆಯ ಜಯದ ಉತ್ಸವವೂ ಸ್ವರಾಜ್ಯದ ಉತ್ಸವದ ದಿನವೇ ನಡೆಯುತ್ತದೆ. ಸ್ವರಾಜ್ಯೋತ್ಸವ ಹಗಲಿನಲ್ಲಿ, ಜಯೋತ್ಸವ ರಾತ್ರಿ.

ತಹಸೀಲ್ದಾರರು ಹೇಳಿದರು, "ಒಂದು ನೂರೊ ಎರಡು ನೂರೊ, ಎಷ್ಟೇ ತೆಗೆದುಕೊಳ್ಳಲಿ. ಮಹಮದೀಯ ನಾಟಕರ ಕಂಪನಿಯಿಂದಲೇ ಆದಿನ ನಾಟಕ ಆಡಿಸುವುದು." ಅದರಲ್ಲಿ ಒಂದು ಗುಟ್ಟಿದೆ. ಆಮೇಲೆ ಹೇಳುತ್ತೇನೆ, ಎನ್ನುತ್ತಿದ್ದ ಸುಮರಿತದಾಸ.

-ಮಹಮದೀಯ ಕಂಪನಿಯವರು ಪೂರಾ ಸಿದ್ಧತೆ ನಡೆಸುತ್ತಿದ್ದಾರೆ. ಹಣ ಕೊಟ್ಟು ಲಕ್ನೋದಿಂದ 'ಬಾಯೀಜೀ' (ನಟಿ) ಯನ್ನು ಕರೆಸಿದ್ದಾರೆ. ನಿತಲ ರೈನನೂ ಆ ಕಂಪನಿಯಲ್ಲೇ ಇದ್ದಾನೆ. ಲಕ್ಷ್ಮಿ ತನ್ನ ಕಣ್ಣಾರೆ ಅವನನ್ನು ನೋಡಿದ್ದಾಳೆ.....

ಈ ಜಿಲ್ಲೆಯ ಮಧ್ಯಮ ವರ್ಗದ ರೈತರ ಕೈಯ್ಯಲ್ಲಿ ಸ್ವಲ್ಪ ಹಣ ಉಳಿದಿರುತ್ತದೆ—ತಂಬಾಕು, ಭತ್ತ, ಸೆಣಬು, ಸಾಂಬಾರ ಪದಾರ್ಥಗಳ ಬೆಲೆ ಏರಿದರೆ ಮಾತ್ರ ಸಾಧ್ಯ—ಮನೆಯಲ್ಲಿ ಮದುವೆ ಮುಂಜಿ ನಡೆಯದೇ ಇದ್ದರೆ, ಅವನ ಸ್ಥಿತಿ ಮತ್ತಷ್ಟು ಉತ್ತಮವಾಗುತ್ತದೆ. ಗೃಹಸ್ಥ ಯುವಕನಾಗಿದ್ದರೆ ತಕ್ಷಣ ಹಣ ಉಡಾಯಿಸುವುದಕ್ಕೆ ಆರಂಭಿಸುತ್ತಾನೆ. ಹಾರ್ಮೋನಿಯಂ, ಜಮಖಾನ, ಚದುರಂಗ, ಲೈಟ್, ಪೆಟ್ರೋಮ್ಯಾಕ್ಸ್, ಗುಡ್ಡ ಗಾಡಿನ ಕುದುರೆ, ಟೇಬಲ್ ಕುರ್ಚಿಗಳನ್ನು ಕೊಂಡು ಮನೆಯಲ್ಲೇ ರಾಶಿ ಹಾಕುತ್ತಾನೆ. ಆದರೂ ಬಿಸಿ ಆರದಿದ್ದರೆ ಬಂದೂಕಿನ ಲೈಸನ್ಸಿಗೆಂದು ಅಧಿಕಾರಿಗಳ ಸೇವೆ ಪ್ರಾರಂಭಿಸುತ್ತಾನೆ.

ಲಾಲ್‌ಬಾಗ್ ಜಾತ್ರೆಯ ಸಮಯದಲ್ಲಿ ರಾತ್ರಿಯೆಲ್ಲಾ 'ಮುಜರೆ' ಕೇಳುತ್ತಾನೆ, ಹಗಲೆಲ್ಲಾ ಅಧಿಕಾರಿಗಳ ಹಿಂದೆ ಆಫೀಸಿನಲ್ಲಿ ಓಡಾಡುತ್ತಿರುತ್ತಾನೆ..... ಬಂದೂಕಿನ ಲೈಸೆನ್ಸ್ ಸಿಕ್ಕಮೇಲೆ ನಾಟಕ ಕಂಪನಿ ಪ್ರಾರಂಭಿಸುತ್ತಾನೆ. ಆದರೂ ಹಣದ ಮದ ಇಳಿಯದಿದ್ದರೆ ಯಾವುದಾದರೂ ಕೊಲೆ ಮೊಕದ್ದಮೆಯಲ್ಲಿ ಸಿಕ್ಕಿ ಹಾಕಿಕೊಂಡರೆ, ಅಲ್ಲಿಗೆ ಎಲ್ಲಾ ಮುಕ್ತಾಯವಾಗುತ್ತದೆ.....ಮಹಮದೀಯ ಕಂಪನಿಯಲ್ಲಿ ನಿತಲರೈನನೂ ಇದ್ದಾನೆ. ತಹಸೀಲ್ದಾರರು ಮುಂಗಡ ಹಣ ಕೊಟ್ಟು ನಾಟಕ ಕಂಪನಿಯಿಂದ ನಾಟಕ ಆಡಿಸುತ್ತಾರೆ.

"ಇದರಲ್ಲಿ ದೊಡ್ಡ ರಹಸ್ಯ ಇದೆಯಪ್ಪಾ"—ವೈರ್‌ಲೆಸ್ ಸುಮರಿತದಾಸನ ಹೊಟ್ಟೆಯಲ್ಲಿ ಮಾತು ಎಷ್ಟು ಹೊತ್ತು ಇರಬಲ್ಲದು. "ಪೂರಾ ಪ್ರೈವೇಟ್ ವಿಚಾರ, ಅವರನ್ನೇ ಯಾಕೆ ಕರೆಸುತ್ತಿದ್ದಾರೆ ಗೊತ್ತೇನು? ನಾಟಕ ಕಂಪನಿಯಲ್ಲಿ ಬಾಯೀಜೀ ಇದಾಳೆ. ಈಗ ಅರ್ಥವಾಯ್ತೇನು?"

ಸಂಥಾಲರೂ ಸ್ವರಾಜ್ಯ ಉತ್ಸವದಲ್ಲಿ ಕುಣಿಯುತ್ತಾರೆ....ಕುಣಿಯುತ್ತಿರುವಾಗಲೇ ಬಾಣ ಬಿಟ್ಟರೆ?.....ಡಾಕ್ಟರು ಹೇಳಿದ್ದಾರೆ. ಸ್ವತಃ ಸಂಥಾಲ ಸ್ತ್ರೀಯರೇ ಬಂದು ನರ್ತನ ಮಾಡುತ್ತೇವೆ ಎಂದು ಹೇಳಿದರಂತೆ. ಇದರಲ್ಲಿ ತಹಸೀಲ್ದಾರರಿಗೂ ವಿರೋಧವೇನೂ ಇಲ್ಲ.....ಏನಾದರೂ ಹೇಳಯ್ಯ, ಸಂಥಾಲ ನೃತ್ಯ ನೋಡುತ್ತಿದ್ದರೆ ಮೈಮೇಲೆ ಎಚ್ಚರವೇ ಇರೋದಿಲ್ಲ. ತುರುಬಿನಲ್ಲಿ ಹೂವಿನ ಗೊಂಚಲು,

ಸುದೃಢ ಶರೀರ, ಆ ದಂತ ಪಂಕ್ತಿಯ ಹೊಳಪು, ಬಿಳಿಯ ಸೆರಗು ಕುಲುಕುತ್ತಾ ಬಳುಕುತ್ತಾ ಅವರು ಕುಣಿಯುತ್ತಿದ್ದರೆ, ನಾವೂ ಅವರೊಂದಿಗೆ ಕುಣಿಯೋಣ ಎನ್ನಿಸುತ್ತದೆ.

ಡಾ ಡಿಗ್ಗಾ ಡಾ ಡಿಗ್ಗಾ ರಿಂ ರಿಂ ತಾ ಧಿನ್ ತಾಃ

ಈವತ್ತಿನಿಂದಲೇ ಪ್ರಾಕ್ಟೀಸ್ ಮಾಡುತ್ತಿದ್ದಾರೆ.....ಆದರೆ ಡೋಲು ಮತ್ತು ಢಕ್ಕೆಯ ಧ್ವನಿ ಕೇಳಿದರೆ ಭಯವಾಗುತ್ತದೆ. ಆ ಘಟನೆ ನಡೆದ ದಿನವಂತೂ ಯಮರಾಜನೇ ನಗಾರಿ ಬಾರಿಸುತ್ತಿದ್ದಂತೆ, ಯಮದೂತರು ಆ ತಾಳಕ್ಕೆ ತಕ್ಕಂತೆ ಬಾಣ ಬಿಡುತ್ತಿರುವಂತೆ ತೋರುತ್ತಿತ್ತು!

## 3

"ಜೋಕೆ, ಬಿಸಿ ಜಲೇಬಿ ತಿನ್ನಬೇಡಿ!"

ಈಚೀಚೆಗೆ ಸುಮಂತದಾಸನ ಪ್ರಭಾವವೇ ಜಾಸ್ತಿಯಾಗಿದೆ. ಪ್ರತಿದಿನ ಒಂದಲ್ಲ ಒಂದು ಹೊಸ ಸುದ್ದಿ ತರುತ್ತಲೇ ಇರುತ್ತಾನೆ. ಈಗ ಯಾವ ಗುಂಪಿನ ಯುವಕರನ್ನು ನೋಡಿದರೂ ಅವನು ತಕ್ಷಣ ನಕ್ಕು ವಿನೋದ ಮಾಡುತ್ತಾನೆ.

"ಜೋಕೆ, ಬಿಸಿ ಜಲೇಬಿ ತಿನ್ನಬೇಡಿ."

"ಅಂದರೆ?"

"ಅಂದರೇನು, ಹೇಳಬೇಕೇನು? ಬಿಸಿ ಜಲೇಬಿಯ ಪ್ರಭಾವವು ಬಿಸಿಯಾಗಿರುತ್ತೆ. ಶೀತದಿಂದ ಮೂಗು ಕಟ್ಟಿದ್ದರೆ, ತಲೆನೋವಿದ್ರೆ, ಬಿಸಿ ಜಲೇಬಿ ತಿನ್ನು, ತಕ್ಷಣ ಮೂಗು ತೆರೆದುಕೊಳ್ಳುತ್ತೆ. ಅಷ್ಟು ಬೇಗ ಅವರ ಪ್ರಭಾವ ಆಗುತ್ತೆ....ಈವತ್ತು ಡಾಕ್ಟರ್ ಹತ್ತಿರ ಔಷಧ ತರೋದಕ್ಕೆ ಹೋಗಿದ್ದೆ. ಅಲ್ಲಿ ಏನಾಯ್ತು ಗೊತ್ತೆ? ಡಾಕ್ಟರ್ ಬಾಬು—ಫುಲಿಯಾಗೆ ಅದೇ ಮಹಂಗೂ ದಾಸನ ಮಗಳು ಫುಲಿಯಾ ಅವಳ ಮುಖ ಎಲ್ಲಾ 'ದುಮ ದುಮ' ಅಂತಿತ್ತು—ಅವಳಿಗೆ ಡಾಕ್ಟರ್ ಹೇಳಿದರು. 'ಪೂರ್ಣಿಯಾಗೆ ಹೋಗು ನಿನಗೆ ವಾಸಿಯಾಗುತ್ತೆ'

ಅಂತ. ಅದಕ್ಕೆ ನಾನು ಯುವಕರಿಗೆಲ್ಲಾ ಹೇಳುತ್ತಿರೋದು ಬಿಸಿ ಜಿಲೇಬಿ ತಿನ್ನ ಬೇಡಿ ಅಂತ.'' ''ಆದರೆ ಸುಮರಿತದಾಸ, ಯುವಕರಿಗಿಂತ ಮೊದಲು ಮುದುಕರಿಗೆ ಬುದ್ಧಿ ಹೇಳು.''

''ಸುಮ್ಮನಿರು ಸಧ್ಯ ಎಲ್ಲರದೂ ಗುಟ್ಟು ಬಯಲಾಗಿಬಿಡುತ್ತೆ.''

ವೈರ್‌ಲೆಸ್ ಸುಮರಿತದಾಸ, ಗಟ್ಟಿಯಾಗಿ ನಕ್ಕಾಗ ಬಾಯಿಯ ಕೆಂಪು ದವಡೆಯೆಲ್ಲಾ ಕಾಣುತ್ತಿತ್ತು. ವೈರ್‌ಲೆಸ್ ಕೆಂಪುನಗು ನಗುತ್ತಾನೆ....ಅವನು ಮತ್ತೆ ಗಟ್ಟಿಯಾಗಿ ನಕ್ಕು ಹೇಳಿದ:

''ಇನ್ನೊಂದು ವಿಚಾರ ಗೊತ್ತೇನು? ಮಹಂತ ರಾಮದಾಸ, ರಾಮ ಪಿಯರಿಯಾಳನ್ನು ದಾಸಿಯಾಗಿ ಇಟ್ಟುಕೊಳ್ಳುತ್ತಾನಂತೆ. ಕೋಠಾರಿನ್ ಒಪ್ಪಿದ್ದಾಳೆ....ಬಾಲದೇವನಂತೂ ಕೋಠಾರಿನ್‌ಳಿಂದಾಗಿ ಬೈರಾಗಿಯೇ ಆಗಿಬಿಟ್ಟ.''

ಕಾಳೀಚರಣನ ಮುಖ ಒಮ್ಮೆಲೇ ಕಳೆಗುಂದಿತು....ಇನ್ನು ಮಂಗಳೆಯ ವಿಚಾರವನ್ನು ಈ ವೈರ್‌ಲೆಸ್ ಎತ್ತುತ್ತಾನೇನೋ! ಆದರೆ ಎಲ್ಲಿ ಯಾವ ಮಾತನ್ನು ಹೇಳಬೇಕೆಂಬುನ್ನು 'ವೈರ್‌ಲೆಸ್' ಬಲ್ಲ. ಮಾತಿನಲ್ಲಿ ಅವನನ್ನು ಗೆಲ್ಲುವುದು ಕಷ್ಟ.

ಚರಖಾ ಕೇಂದ್ರದ ಉಪಾಧ್ಯಾಯರು—ಉಪಾಧ್ಯಾಯಿನಿಯರಲ್ಲಿ ಜಗಳವಾಯಿತು. ಟುನ್‌ಟುನ್‌ಜೀ ರಾಜಿನಾಮೆ ಕೊಟ್ಟು ಹೊರಟುಹೋದರು. ಇನ್ನೊಬ್ಬ ಮಾಸ್ಟರೂ ಸ್ಕೂಲು ಮುಚ್ಚಿಬಿಟ್ಟು ತಮ್ಮ ಊರಿಗೆ ಹೊರಟುಹೋದರು. ಈಗ ಮಂಗಳಾದೇವಿಯೊಬ್ಬಳೇ ಚರಖಾ ಕೇಂದ್ರದ ಹೆಸರಿನಲ್ಲಿ, ಹಳ್ಳಿಯ ಮನೆ ಮನೆ ಸುತ್ತುತ್ತಾಳೆ. ಗಾಂಧೀಜಿಯ ಮತ್ತು ಜವಹರಲಾಲ ನೆಹರೂ ಅವರ ಸ್ವರಾಜ್ಯದ ಬಗ್ಗೆ ಮಾತನಾಡುತ್ತಾಳೆ....ಕಾಳೀಚರಣ ಹೇಳುತ್ತಿದ್ದಾನೆ. ''ಆನೆಯ ಮೇಲೆ ಭಾರತಮಾತೆಯ ವಿಗ್ರಹದ ಹತ್ತಿರ ಕುಳಿತು ಚಾಮರ ಬೀಸುವಂತೆ ಮಂಗಳಾದೇವಿಗೆ ಹೇಳಬೇಕು....''

ಬಾಲದೇವ ತಹಸೀಲ್ದಾರರ ಹತ್ತಿರ ಹೇಳಿದ: ''ನಮ್ಮ ಹಳ್ಳಿಯಲ್ಲಿ ಯಾರೂ ಹೆಂಗಸರಿಲ್ಲದಿದ್ದರೆ ಹೊರಗಿನ ಹೆಂಗಸರಿಗೆ ಹೇಳಬೇಕು. ಹಳ್ಳಿಯವರೇ ಸಿಕ್ಕಿದರೆ? ಕಮಲಾ ಅಕ್ಕನ್ನೇ....ಕರೆಯಬಹುದು.

''ಬೇಡ ಕಮಲೀಯ ಕಾಹಿಲೆಯದೊಂದು ದೊಡ್ಡ ಭಯ ಇದೆಯಲ್ಲ. ಯಾವಾಗ ಏನಾಗುತ್ತೋ ಹೇಳೋದಕ್ಕೆ ಆಗೋದಿಲ್ಲ.''

"ಹಾಗಾದರೆ ಕೊಠಾರಿನ್‌ಗೆ ಹೇಳೋಣ. ನೇಮ-ವ್ರತಗಳನ್ನು ಮಾಡ್ತಾಳೆ. ಪ್ರತಿದಿನ ಸ್ನಾನ ಮಾಡಿದ ಮೇಲೆ ಮಹಾತ್ಮಾಜಿಯ ಫೋಟೋಕ್ಕೆ ನಮಸ್ಕಾರ ಮಾಡ್ತಾಳೆ."

....ಇದು ನೋಡಿ, ಮಂಗಳಾದೇವಿಗೆ ಆನೆಯೆಂದರೆ ತುಂಬಾ ಭಯ. ಆನೆಯನ್ನು ನೋಡಿದ ಕೂಡಲೇ ಅವಳ ದೇಹವೆಲ್ಲಾ ಥರ-ಥರ ಕಂಪಿಸಲಾರಂಭಿಸುತ್ತದೆ. ಕಾಳೀಚರಣ ಎಷ್ಟೋ ತಿಳಿಸಿ ಹೇಳಿದ. ಧೈರ್ಯ ಹೇಳಿದ. ಆದರೆ ಅವಳು ಸಿದ್ಧಳಾಗಲಿಲ್ಲ. ಕೊನೆಗೆ ಕಾಳೀಚರಣನು ಜೊತೆಗಿದ್ದರೆ ತಾನು ಆನೆಯ ಮೇಲೆ ಕುಳಿತುಕೊಳ್ಳುತ್ತೇನೆ ಅಂದಳು. ಕಾಳೀಚರಣನಿಗೆ ನಾಚಿಕೆಯಾಯಿತು, ಅವನೆಂದ: "ತಥ್"

ದುಲಾರೀ ತುಂಬಾ ಚೆನ್ನಾಗಿ ಮಾತುಗಳನ್ನು ಜೋಡಿಸುತ್ತಾನೆ. ಅಕ್ಕಪಕ್ಕ ನೋಡಿ ಕಣ್ಣು ಹೊಡೆದು ಕೈಕಾಲು ಅಲ್ಲಾಡಿಸುತ್ತಾ ಅವನು ಹೇಳಿದ, "ಮಂಗಳಾ ದೇವಿ ಸೆಲ್ವಾರ್ ತೊಟ್ಟು ಹೋಗುತ್ತಿದ್ದರೆ ಆನೆ ಮರಿಯ ಹಾಗೇ ಕಾಣ್ತಾಳೆ."

"ತುಂಬಾ ಚೆನ್ನಾಗಿದೆ."

ಡಾಕ್ಟರ್ ಸಾಹೇಬರ ಗಡಿಯಾರದಲ್ಲಿ ನೋಡಿ ಸರಿಯಾಗಿ ಮಧ್ಯ ರಾತ್ರಿಯಾಗಿದೆಯೆಂದು ತಿಳಿದು ಕಾಳೀಚರಣ ತಗಡಿನ ತುತ್ತೂರಿ ಊದಿದ.

ಅನಂತರ ಯುವಕರೆಲ್ಲಾ ಕೂಗಿಕೊಂಡರು: "ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿತು."

ಮಠದಲ್ಲಿ ಕಂಜರದ ನಾದ ಧ್ವನಿಸಿತು! ಡಿಮ್ ಡಿಮ್ ಡಿಮಕ್! ಬಾಲದೇವ ಭಾವಾವೇಶದಿಂದ ಚೌಕೀದಾರನಂತೆ ಕೂಗಿಕೊಂಡ: "ಭಾರತ ಸ್ವತಂತ್ರವಾಯಿತು, ಭಾರತ ಸ್ವತಂತ್ರವಾಯಿತು....ಮಹಾತ್ಮಾ ಗಾಂಧೀಕಿ ಜೈ"

ರಿಂ ರಿಂ ತಾ ಧಿನ್ ತಾ ಡಾ ಡಿಗ್ಗಾ

ಸಂಥಾಲ ಪಂಗಡದಲ್ಲಿ ಮದ್ದಳೆ, ಢಕ್ಕೆಯಃ ಧ್ವನಿ ಗರ್ಜಿಸಿತು.

ಚಿಕ್ಕಮ್ಮ ಶಂಖ ಊದಿದಳು: "ತೂ...."

ಏಳು ಮೈಲಿ ದಕ್ಷಿಣದಲ್ಲಿ, ಕಟಿಹಾರದ ಐದು ದೊಡ್ಡ ದೊಡ್ಡ ಮಿಲ್ಲುಗಳಲ್ಲೂ ಸೈರನ್ನುಗಳು ಒಟ್ಟಿಗೆ ಕೂಗಿಕೊಂಡವು. ಶಬ್ದ ಸ್ಪಷ್ಟವಾಗಿ ಕೇಳುತ್ತಿದೆ.

....ದೆಹಲಿಯಲ್ಲಿ ಹಂಚಿಕೆ ನಡೆದು ಸ್ವರಾಜ್ಯ ಸಿಕ್ಕಿತು. ಜೈ, ಜೈ, ಇಸ್ಲಾಂಪುರ ಪಾಕಿಸ್ತಾನದಲ್ಲಿರುತ್ತದೋ ಹಿಂದುಸ್ತಾನದಲ್ಲೋ? ಈಗ

ಪಾಕಿಸ್ಥಾನದಲ್ಲಿ ಸಂತೋಷದಿಂದ ಹಸುಗಳನ್ನು ಕಡಿಯುತ್ತಿರಬಹುದು.... ಥತ್, ಹಸುಗಳು ಏನು ಮಾಡಿದವೋ ದೇವರ ದಯೆ ಮೇರೀಗಂಜ್ ಉಳಿದು ಕೊಂಡಿತು. ಹತ್ತು ಜನ ಮಹಮದೀಯರಿದ್ದಿದ್ದರೂ ಪಾಕೀಸ್ತಾನದವರೇ ಅದನ್ನು ತೆಗೆದುಕೊಳ್ಳುತ್ತಿದ್ದರು.

## 4

ತುತ್ತೂರಿ ಊದಿ ಊದಿ ಕಾಳೀಚರಣನ ಗಂಟಲು ಕಟ್ಟಿತು. ಘೋಷಣೆ ಗಳನ್ನು ಕೂಗಿದಾಗ ತಿದಿಯ ಶಬ್ದದಂತೆ ಸ್ವರ ಹೊರಡುತ್ತದೆ....ಬೆಳಗ್ಗಿನಿಂದ ಕಾಮ್ರೇಡ್ ವಾಸುದೇವ, ಕಾಮ್ರೇಡ್ ಸೋಮಾಜಟ್ ಒಬ್ಬರನಂತರ ಒಬ್ಬರು ಘೋಷಣೆಗಳನ್ನು ಕೂಗುತ್ತಿದ್ದಾರೆ. ಘೋಷಣೆಗಳು ನಿಲ್ಲಲೇಬಾರದು, ನಿರಂತರ ಕೂಗುತ್ತಲೇ ಇರಬೇಕು—ಅಖಂಡ ಭಜನೆಯಂತೆ. ಸ್ವರಾಜ್ಯೋತ್ಸವ ಮುಗಿಯು ವವರೆಗೂ ಘೋಷಣೆ ನಿಲ್ಲಬಾರದು:

ಟನ್ ಟನಾಕ್, ಟನ್ ಟನಾಕ್–ಅಲಂಕರಿಸಿದ ಆನೆ ಹೋಗುತ್ತಿದೆ!

ಥನ್ ಥನ್ ಥನಾಂಗ್ ಥನಾಂಗ್–ಕೀರ್ತನಕಾರರ ಗಂಟೆ ಜಾಗಟೆ ಬಡಿದು ಕೊಳ್ಳುತ್ತಿವೆ!

ಶಂಖನಾದ ಭೋಂ.....ಅಂಗ್ರೇಜೀ ವಾದ್ಯ.

ತರ್ ತರ್ ತರ್ ತರ್ ಧಿನಾಗ್ ಧಿನಾಗ್ಃ, ಅಮಹರಾ ಪಂಗಡದವರ 'ಜಾನಪೋಲ್' ವಾದ್ಯ,

ಚಾಂದೋ ಬನಿಯಂ ಸಾಜಿದೋ ಬರಾತ್ ಓ ಹೋ
ಚಾರ ಲಾಕ್ ಪೈದಲ್, ಮಲಾನಾಲಾ ಲಖಿಂದರ್

(ದಿಬ್ಬಣ ಬರುತ್ತಿದೆ. ನೃತ್ಯ ಮಾಡಿ ನಾಲ್ಕು ಲಕ್ಷ ಜನ ಕಾಲ್ನಡಿಗೆಯಲ್ಲಿ ಬರುತ್ತಿದಾರೆ.)

ತೂತ್ತೂರಿಯಲ್ಲಿ 'ಸತೀ ಬೇಹಲಾ' ನೃತ್ಯದ ಮದುವೆಯ ಹಾಡನ್ನು ನುಡಿಸುತ್ತಿದ್ದಾರೆ.

ಭೂ ಭೂ ಭೂ ಭೂ ಧುತ್ ಧುತ್-ಕರಿಸಾಲ್ ವಾದ್ಯ ನುಡಿಯುತ್ತಿದೆ.

ಕುದುರೆ ಕೆನೆಯುತ್ತಿದೆ.

ಕುದುರೆ ಯಾರದ್ದು? ಧರ್ಮನಾಥನದೋ? ಹರಬಾಬುವಿನದೋ?

ಭಾರತ ಮೇಂ ಆಯಿಲ್ ಸುರಾಜ್
ಚಲು ಸಖೀ ದೇಖನ್ ಕೋ....

ಈ ಹೊಸ ಸ್ವರಾಜ್ಯ ಗೀತೆಯನ್ನು ರಚಿಸಿದವನು ಯಾರು? ಭೇಷ್! ಹೊಸಾ ಹಾಡು ಕೇಳು:

ಕಥಿ ಜೇ ಚಢಿಯೆ ಆಯಿಲ್
ಭಾರತ ಮಾತಾ
ಕಥಿ ಜೇ ಚಢಲ್ ಸುರಾಜ್
ಚಲು ಸಖೀ ದೇಖನ್ ಕೋ
ಕಥಿ ಜೇ ಚಢಿಯೆ ಆ ಫೇಲ್
ವೀರ ಜವಾಹಿರ
ಕಥಿ ಪರ ಗಾಂಧೀ ಮಹರಾಜ ಚಲು ಸಖಿ....
ಹಾಥೀ ಚಢಲ ಆವೆ ಭಾರತ ಮಾತಾ
ಡೋಲೀ ಮೇ ಬೈಠಾಲ್ ಸುರಾಜ್ ಚಲು ಸಖಿ....
ಘೋಡಾ ಚಢಿಯೆ ಆಯೆ ವೀರ ಜವಾಹಿರ್
ಪೈದಲ್ ಗಾಂಧೀ ಮಹರಾಜ್
ಚಲು ಸಖೀ ದೇಖನ್ ಕೋ

(ಆನೆಯನ್ನೇರಿ ಭಾರತಮಾತೆ ಬರುತ್ತಿದ್ದಾಳೆ. ಆನೆಯನ್ನೇರಿ ಸ್ವರಾಜ್ಯ ಬರುತ್ತಿದೆ. ಸಖೀ, ನಾವೂ ನೋಡೋಣ ನಡಿ. ವೀರ ಜವಾಹರ್, ಗಾಂಧೀ ಮಹಾರಾಜ ಎಲ್ಲರೂ ಬರುತ್ತಿದ್ದಾರೆ. ಆನೆಯನ್ನೇರಿ ಭಾರತಮಾತೆ, ಡೋಲಿಯಲ್ಲಿ ಸ್ವರಾಜ್ಯ, ಕುದುರೆಯ ಮೇಲೆ ಜವಾಹರ್, ಕಾಲ್ನಡಿಗೆಯಲ್ಲಿ ಗಾಂಧೀ ಬರತ್ತಿದ್ದಾರೆ. ಸಖೀ, ನಾವೂ ನೋಡೋಣ ನಡಿ.)

ಭೇಷ್ ಚೆನ್ನಾಗಿ ಗೀತೆಯನ್ನು ಜೋಡಿಸಿದ್ದಾನೆ ಉಜಾಡೂ ದಾಸ. ಉಜಾಡೂ ದಾಸ ಗೊತ್ತಿಲ್ವೇನು? ಮಣಿಕಪುರದಲ್ಲಿ ಅವನ ಮನೆ ಇದೆ. ಅವನೂ ಮೂವತ್ತೇಳನೇ ಇಸವಿಯಿಂದ ಚಳುವಳಿಗಾರ ಆಗಿದಾನೆ.

ಕೂ....ಕೂ....ಆನೆ ಸರಿಯಾದ ಸಮಯಕ್ಕೆ ಎಷ್ಟು ಚೆನ್ನಾಗಿ ಘೀಳಿಡುತ್ತೆ! ಭಲೇ.

ಪೈಲ್ವಾನ ಆನೆಗೆ ತುಂಬಾ ಚೆನ್ನಾಗಿ ಅಲಂಕಾರ ಮಾಡಿದಾನೆ. ಹಣೆ ಮೇಲೆ ಸರಿಯಾಗಿ ಕಮಲದ ಹೂವು....ಮೈಗೆಲ್ಲಾ !ಬಣ್ಣ. ಭಾರತಮಾತೆಯ ಮೂರ್ತಿಯಂತೂ ದುರ್ಗಾಮಾತೆಯಂತೆಯೇ ಕಾಣುತ್ತದೆ. ಲಕ್ಷ್ಮಿ, ಸರಸ್ವತಿ, ಪಾರ್ವತಿ, ಭಾರತಮಾತೆ, ಎಲ್ಲಾ ಸ್ವಂತ ಅಕ್ಕತಂಗಿಯರೂ ಕಣಯ್ಯ..... ಅದಕ್ಕೇ ಒಂದೇ ತರಹ ಕಾಣೋದು!

ಬಾಲದೇವ ನೋಡಿದ. ಸರಳವಾದ ಖದ್ದರ್ ಸೀರೆ. ಕೊರಳಿನಲ್ಲಿ ಹೂಮಾಲೆ, ಬೆನ್ನಿನ ಮೇಲೆ ಉದ್ದವಾದ ಕಪ್ಪು ಕೂದಲು ಹರಡಿದೆ. ಭಾರತಮಾತೆಯ ತುಟಿಗಳ ಮೇಲೆ ಮಂದಹಾಸ ಬೆಳಗುತ್ತಿರುವಂತೆಯೇ ಕೊಠಾರಿನ್ ಲಕ್ಷ್ಮಿಯೂ ನಗುತ್ತಾಳೆ. ನಿಧಾನವಾಗಿ ಚಾಮರ ಬೀಸುತ್ತಿದ್ದಾಳೆ.

ಧಿನ್, ತಕ್ ತಕ್ ತಕ್, ತಾಕ್ ಧಿನಾ ಧಿನ್ ಭರಿಂಯಾಲೀ ಗೀತೆಯ ಸ್ವರ ನುಡಿಯುತ್ತಿದೆ—

ತಾಕ್ ಧಿನಾ ಧಿನ್ ತಿನ್ನಕ್ ತಿನ್ನಕ್,
ಹಾಂ ರೇ ಮೋರೀ ರೇ ಏ ಏ ಹಾಂ ಆ ಆ
ಅಂ ಅಂ ಅಂ ಅರೋ ಹೇ
ಬಹು ಕಷ್ಟೆ ಸುರಾಜ್ ಪೈ ಲೋ ರೇ
ಭಾ ರಾ ತಾ ಸಂತಾನ ಓ ರೇ
ಕೋಟಿ ಕೋಟಿ ಭಯಿಲಾ ಫೋಯಲಾ
ದಿಲೋ ಬೋ ಲಿ ದಾನ್ ಅರೆ
ಹಾಂ ರೇ ಮೋರೀ ರೇ ಏ ಏ ಏಃ ಹಾ ಅಂ ಅಂ

(ಹೇ ಭಾರತಮಾತೆಯ ಪುತ್ರರೇ, ತುಂಬಾ ಕಷ್ಟದಿಂದ ಸ್ವರಾಜ್ಯ ದೊರೆತಿದೆ. ಕೋಟಿ ಕೋಟಿ ಜನ ಇದಕ್ಕಾಗಿ ಬಲಿದಾನ ಮಾಡಿದ್ದಾರೆ.)

'ಔರಾಹೀ—ಹಿಂಗನಾ'ದವರ ಭಜನೆ ಕಣಯ್ಯ, ಹುಡುಗಾಟವಲ್ಲ. ಸೀತಾನಾಥ ಬಾಬು 'ಪುವಾ' ಭಾಷೆಯಲ್ಲಿ (ಬಂಗಾಳಿಯ ಒಂದು ಉಪಭಾಷೆ) ಎಷ್ಟು ಚೆನ್ನಾಗಿ ಗೀತೆ ರಚಿಸಿದಾರೆ ನೋಡಿ! ಗೀತೆ ರಚಿಸಿರುವವರು ಸೀತಾನಾಥ ಬಾಬುವೋ ಅವರ ಚಿಕ್ಕಮಗ ಮಹೇಂದ್ರನೋ!....ಮಹೇಂದ್ರನೂ ಚೆನ್ನಾಗಿ ಗೀತೆ ರಚಿಸುತ್ತಾನಂತೆ!

ಝುರಕ್ ಝುರಕ್ ಝುರ್ ಝುರ್ ರ್ ರ್ ರ್....ಏಕಪುರೀ ಡೋಲು ಮಿಕ್ಕ ವಾದ್ಯಗಳನ್ನೆಲ್ಲಾ ಮೆಟ್ಟನಿಂತಿದೆ. ಎಲ್ಲ ವಾದ್ಯಗಳನ್ನೂ ಹಿಮ್ಮೆಟ್ಟಿಸಿದೆ.

ಡಮಾಕ್ ಡಿಮಾಕ್ ಡಿಮ್: ಏಕಪೂರಿ ಡೋಲಿನ ಜೊತೆ ಮತ್ತೊಂದು ಸಣ್ಣ ಡೋಲು ಶಬ್ದ ಮಾಡುತ್ತಿದೆ. ಮಧ್ಯೆ ಮಧ್ಯೆ ತುತ್ತೂರಿಯ ನಾದ!

"ಮಹಾತ್ಮಾ ಗಾಂಧೀ ಕೀ ಜೈ."

"ಜವಹರಲಾಲ್ ನೆಹರೂ ಕೀ ಜೈ."

"ಜೈ ಪ್ರಕಾಶ್, ಜಿಂದಾಬಾದ್."

"ಈ ಸ್ವಾತಂತ್ರ್ಯ ಬರೀ ಸುಳ್ಳು."

"ದೇಶದ ಜನತೆ ಹಸಿದಿದೆ"....ಈ ಹೊಸ ಘೋಷಣೆ ಕೂಗುತ್ತಿರುವವರ್‍ಯಾರು?

"....ಯಾರದು?"

"ಮೊದಲು ವಿಚಾರಿಸು."

"ಈ ಸ್ವಾತಂತ್ರ್ಯ ಸುಳ್ಳಂತೆ, ನಾಲ್ಕು ಬಿಗಿ ಅಯೋಗ್ಯನಿಗೆ. ಹಾಗೆ ಯಾರು ಕೂಗಿದ್ದು?"

"ಈ ಹಳ್ಳಿಯವನು ಖಂಡಿತ ಅಲ್ಲ. ಹೊರಗಿನ ಮನುಷ್ಯನೇ ಇರಬೇಕು."

"ಏ, ವಾದ್ಯಗಳನ್ನೆಲ್ಲಾ ನಿಲ್ಲಿಸಿ."

"ಸರಿಯಿರಿ ಸರಿಯಿರಿ."

"ಏ ಕಾಳೀಚರಣ ಏ ವಾಸುದೇವ....."

"ಬಾಲದೇವ....ಶಾಂತಿಃ ಶಾಂತಿಃ."

"ಏನು ಸಮಾಚಾರ?"

"ಪ್ರತಿ ವಿಚಾರದಲ್ಲೂ ಹೀಗೇ ಯಾವುದಾದರೂ 'ಆದರೆ' ಸೇರಿಸಿರ್‍ತಾರೆ ಈ ಜನ."

"ಕೇಳಿ ತಹಸೀಲ್ದಾರರೇ, ನಡೆದಿದ್ದಷ್ಟು...." ಬಾಲದೇವ ಇಂದು ಮತ್ತೇರಿಗಿದ್ದಾನೆ: "ಕಾಳೀಚರಣನ ಮನಸ್ಸಿನಲ್ಲಿ ಇರುವುದೊಂದು, ಮಾತನಾಡುವುದು ಮತ್ತೊಂದು....ನಾನು, ಮೊದಲೇ ಅವನನ್ನು ಕೇಳಿದ್ದೆ, ಸ್ವರಾಜ್ಯೋತ್ಸವ

ವಿಚಾರದಲ್ಲಿ ನಿಮ್ಮ ಪಾರ್ಟಿಯಿಂದ ಏನು ಹುಕುಂ ಬಂದಿದೇ ಅಂತ?....ಅದಕ್ಕೆ ಸ್ವಾತಂತ್ರ್ಯ ನಿಮ್ಮ ಪಾರ್ಟಿಗೆ ಮಾತ್ರ ಸಿಕ್ಕಿತೊ? ಅಂದ ಈಗ ನೋಡಿ, ಹೊರಗಡೆ ಮನುಷ್ಯನನ್ನು ಕರೆದುಕೊಂಡು ಬಂದು ನಮ್ಮ ಉತ್ಸವವನ್ನು ಭಂಗ ಮಾಡಿಸ್ತಿದಾನೆ. ಇದೆಂಥ ಬುದ್ಧಿ? ಹಿಂಗನಾ ಔರಾಹಿಯವರು ಸೋಷಲಿಸ್ಟರಾದರೆ ಅವರು ಊರಿಗೆ ಹೋಗಿ ಘೋಷಣೆಗಳನ್ನು ಕೂಗಲಿ. ಇಲ್ಲಿ ತಮ್ಮ ಯೋಗ್ಯತೆಯನ್ನು ತೋರಿಸುವ ಆವಶ್ಯಕತೆ ಏನಿತ್ತು? ತಮಗೊಂದು ಬಾಯಿದೇ ಅಂತ ಘೋಷಣೆ ಗಳನ್ನು ಕೂಗೋದಕ್ಕೆ ಶುರು ಮಾಡಿಬಿಟ್ಟರು. ಈ ಸ್ವಾತಂತ್ರ್ಯ ಸುಳ್ಳಂತೆ!"

"ಬಾಲದೇವ ಹೇಳ್ತಿರೋದು ಸರಿ." ಜನರೆಲ್ಲಾ ಒಟ್ಟಿಗೆ ಕೂಗಿಕೊಂಡರು.

"ಓಯೇ ಸೋಯೇ...." ಕಾಳೀಚರಣ ಹೇಳ್ತಿರೋದು ಏನು? ಅರ್ಥವೇ ಆಗ್ತಿಲ್ಲ.

"ಹೌದು, ತಪ್ಪಾಯ್ತು ಅಂತ ಹೇಳ್ತಿದಾನೆ." ಕಾಮ್ರೇಡ್ ವಾಸುದೇವ ತಿಳಿಸಿದ. ಕಾಳೀಚರಣನ ಮಾತನ್ನು ಪುನಃ ಪುನಃ ಪುನರುಚ್ಚರಿಸಿದ. ತಪ್ಪಾಯಿತು, ಅವನಿಗೂ ಗೊತ್ತಿರಲಿಲ್ಲ. ಎಷ್ಟಾದರೂ ಚರ್ಮದ ನಾಲಗೆ, ಮನಸ್ಸಿಗೆ ಬಂದ ಹಾಗೇ ಹೊರಳುತ್ತೆ. ಇದರಲ್ಲಿ ಕಾಳೀಚರಣನ ದೋಷವೇನೂ ಇಲ್ಲ."

ಇಲ್ಲಿನ ಸೋಷಲಿಸ್ಟ್ ಪಾರ್ಟಿಯವರಿಗೂ ನಡೆದ ವಿಚಾರ ಸರಿಯೆನಿಸಿಲ್ಲ. ....ಬೇರೆ ಹಳ್ಳಿಗೆ ಬಂದಿರೋವಾಗ ಘೋಷಣೆಗಳನ್ನು ಕೂಗುವ ಅವಶ್ಯಕತೆ ಏನಿತ್ತು? ಕಾಳೀಚರಣನ ಗಂಟಲು ಕಟ್ಟಿದ್ದರೆ ವಾಸುದೇವ ಮತ್ತು ಸೋಮಾಜಟ ಕೂಗುತ್ತಿದ್ದರು. ಮಧ್ಯದಲ್ಲಿ ಜಗಳ ತಂದುಹಾಕಿ ಎಲ್ಲಾ ಹಾಳು ಮಾಡಿದರು.

"ಇರಲಿ, ಕ್ಷಮಿಸಿಬಿಡಿ."

"ಹೌದು, ಬಿಟ್ಟುಬಿಡಿ. ಈವತ್ತು ಸ್ವಾತಂತ್ರ್ಯ ಬಂದ ದಿನ" ಟನ್ ಟನಾಕ್ ಟನ್—ಆನೆ ಮತ್ತೆ ಮುಂದೆ ಹೊರಟಿತು. ಮೆರವಣಿಗೆ ಮುಂದುವರಿ ಯಿತು. ಎಲ್ಲಾ ಡೋಲು ವಾದ್ಯಗಳು ಒಟ್ಟಿಗೆ ನುಡಿಯಲಾರಂಭವಾದವು.

ಡಿಮ್, ಡಿಮ್—ಝುರ್ರ್ ಝುರ್ರ್—ಪೀ ಓಘೂ

ತಕ ತಕ್ ಧಿನ್ ತಾಕ್ ಧಿನ್ ಧಿನ್ :

ಕುಯೀ ಕುಯೀ ಕೂ ಆನೆಯೂ ತಾಳಕ್ಕೆ ಸರಿಯಾಗಿ ಘೀಳಿಡುತ್ತದೆ.

ಬಾಲದೇವನ ತಲೆ ಮತ್ತೆ ತಿರುಗಿದೆಯೇನು? ಕೈಯ್ಯಲ್ಲಿ ಬಾವುಟ ಹಿಡಿದು ಆನೆಯ ಮುಂದೆ ಮುಂದೆ ಕುಣಿಯುತ್ತಾ ಹೋಗುತ್ತಿದ್ದಾನೆ. ಬಾವುಟವನ್ನು

ಸೈಡ್, ರೈಲಿಗೆ ಗುರುತು ತೋರಿಸುವಂತೆ ಕುಣಿಸುತ್ತಿದ್ದಾನೆ. ಹೂಂ.... ಸ್ವರಾಜ್ಯದ ನಿಜವಾದ ಆಯುಧ, ತ್ರಿವರ್ಣ ಧ್ವಜ. ಹಿಂದಿನ ಕಾಲದಲ್ಲಿ ಕತ್ತಿಗಳಿಂದ ಯುದ್ಧ ನಡೆಯುತ್ತಿತ್ತು. ಆದ್ದರಿಂದ ಕತ್ತಿಯನ್ನು ಕೈಲಿ ಹಿಡಿದು ಕುಣಿಯುತ್ತಿದ್ದರು, ಸ್ವರಾಜ್ಯ ಯುಗದ ಆಯುಧ ಬಾವುಟ! ಆದ್ದರಿಂದ ಬಾವುಟವನ್ನೇ ಕುಣಿಸುತ್ತಿದ್ದಾನೆ ಬಾಲದೇವ. ತಲೆಯೇನೂ ಕೆಟ್ಟಿಲ್ಲ. ಯಾವುದರ ಆಯುಧ ಯಾವುದೋ ಅದನ್ನೇ...."

ಕರ್ ರ್ ರ್ ಧನ ಧನ್ ಧಡಾವ್ ಧಾ ನಾಟಕ ಕಂಪನಿಯ ನಗಾರಿ ಬಾರಿಸುತ್ತಿದೆ.

....ಯಾವ ನಾಟಕ ನಡೆಯತ್ತದೆ? ಏನಂದಿರಿ? ವೀರ ಭಗತಸಿಂಹ. ಭೇಷ್, ಈಗ ಗುಟ್ಟು ಬಿಟ್ಟುಕೊಟ್ಟರು. ಬೆಳಗ್ಗಿನಿಂದ "ಸುಲ್ತಾನಾ ಡಾಕೂ" ಆಡ್ತೇನೀ ಅನ್ನುತ್ತಿದ್ದರು.

ಒಬ್ಬೊಬ್ಬರಿಗೆ ಒಂದೊಂದು ಆಯುಧ....ಭಗತಸಿಂಹನ ಪಾರ್ಟನ್ನು ನಿತಲರೈನನೇ ಅಭಿನಯಿಸುತ್ತಾನೆ. ಬಲಗಡೆ ಕೈಯ್ಯಲ್ಲಿ ಪಿಸ್ತೂಲು, ಎಡಗಡೆ ಕೈಯ್ಯಲ್ಲಿ ಬೇಲದ ಹಣ್ಣಿನಂತೆ ಗುಂಡಗೆ ಇರುವುದು ಏನು? ಬಾಂಬ್....ಅಬ್ಬ ಹೂಂ....ಒಬ್ಬೊಬ್ಬರಿಗೆ ಒಂದೊಂದು ಆಯುಧ. ಭಗತಸಿಂಹನಿಗೆ ಆಯುಧ, ಬಾಂಬು—ಪಿಸ್ತೂಲು!

ಕಿರ್ ರ್ ಧನ್ ಧನ್ ಧಡಾಮ್ ಧಾ
ಅಜೀ ಬೇಟಾ ಹಮ್ ಮುದರೆ ವತನ್ ಭಾರತ ಕಾ
ಹಮ್ ಡರ್ ನಹೀಂ ಫಾಸೀ ಸೂಲೀ ಕಾ....

(ನಾವು ಭಾರತಮಾತೆಯ ಮಕ್ಕಳು. ನಮಗೆ ಫಾಸೀ ಯಾವುದರ ಭಯವೂ ಇಲ್ಲ.)

ಕಿರ್ರ್ ರ್ ಕಿರ್ ಕಿರ್ ಧಡಾವ್ ಧಡಾಮ್ ಧಡಾಮ್

ಭಗತಸಿಂಹ ಕುಣಿಯುತ್ತಿದ್ದಾನೆ. ಒಂದು ಕೈಯ್ಯಲ್ಲಿ ಬಾಂಬು, ಇನ್ನೊಂದು ಕೈಯ್ಯಲ್ಲಿ ಪಿಸ್ತೂಲು? ಕುಣಿಯುತ್ತಾ ಸ್ಟೇಜಿನ ಒಂದು ಕಡೆಯಿಂದ ಮತ್ತೊಂದು ಕೊನೆಗೆ ಓಡಾಡುತ್ತಿದ್ದಾನೆ. ನಗಾರಿ ಬಾರಿಸುವವನೂ ಚೆನ್ನಾಗಿ ಬಾರಿಸುತ್ತಾನೆ —ಪನ್ನಾಲಾಲನ ಕಂಪನಿಯಲ್ಲಿ ನುಡಿಸುತ್ತಾರಲ್ಲಾ ಹಾಗೆಯೇ ಇಟಹರಾದವನು, ಬೇರೆ ಯಾರಿಗೆ ಹೀಗೆ ನುಡಿಸುವುದಕ್ಕೆ ಬರುತ್ತೆ?....ತಾಳ ಕುಟ್ಟುವಾಗ ಮಾತ್ರ

ಸ್ವಲ್ಪ ಭಯವಾಗುತ್ತೆ. ಯಾಕೆಂದರೆ ಧಡಾಮ್ ಧಡಾಮ್ ಎಂದು ತಾಳ ಕುಟ್ಟು ವಾಗ ಭಗತಸಿಂಹ ಬಾಂಬಿನ ಕೈಯ್ಯನ್ನು ಪ್ರೇಕ್ಷಕರ ಕಡೆ ತಿರುಗಿಸುತ್ತಾನೆ. ಬಾಂಬ್ ಹಾಕೇಬಿಡುತ್ತಾನೇನೋ ಎನ್ನಿಸುತ್ತದೆ. ಅವನು ಹಾಗೆ ಮಾಡಿದಾಗಲೆಲ್ಲಾ ಮುಂದೆ ಕುಳಿತಿರುವ ಜನ ಒಬ್ಬರ ಬೆನ್ನ ಹಿಂದೊಬ್ಬರು ಮುಖ ಮುಚ್ಚಿಕೊಳ್ಳು ತ್ತಾರೆ.....ಯಾರಿಗೆ ಗೊತ್ತು? ಬಾಂಬ್ ಹಾಕೇಬಿಟ್ಟರೆ?....ನಕಲೀ ಕತ್ತಿ ಯಿಂದ ದೇಹಕ್ಕೆ ಪೆಟ್ಟಾಗುವುದಿಲ್ಲವೇನು? ಹಾಗೇ ನಕಲೀ ಬಾಂಬಿನಿಂದಲೂ ಗಾಯ ಖಂಡಿತ ಆಗುತ್ತೆ....ಅಂದಹಾಗೆ ನಾಟಕದ 'ಬಾಯೀಜೀ' ಎಲ್ಲಿ? ಅವಳನ್ನು ಮುಂದೆ ಕರೆಯಿರಿ. ಡೋಲಿಯನ್ನು ಅವಿತು ಕುಳಿತಿರೋರು ಯಾರು? ಚಪ್ಪಾಳೆ ತಟ್ಟಿ. ಹೊರಗಡೆ ಬರುತ್ತಾಳೆ.

"ಬಂದಳು, ನೋಡಿದೆಯೇನಯ್ಯಾ ಬಾಯೀಜಿಯನ್ನು?"

"ಹೋಗಿ ಸುಮ್ಮನೆ ನಿಂತುಬಿಟ್ಟಳಲ್ಲಾ"

"ಗಂಟಲಿನಿಂದ ಪತ್ತೆಯಾಗಿ ಬಿಡುತ್ತೆ. ಸ್ವಲ್ಪ ಹಾಡಲಿ ತಾಳು."

"ಪೌಡರ್-ಸ್ನೋ ಎಲ್ಲಾ ಹಚ್ಚಿಕೊಂಡು ಈಗ ಚೆನ್ನಾಗಿ ಕಾಣುತ್ತಿದಾಳಲ್ಲ ಹಗಲಿನಲ್ಲಿ ನೋಡಬೇಕು, ಸುಟ್ಟ ಹೆಂಚಿನ ಹಾಗೆ ಕಾಣಿಸ್ತಾಳೆ!"

"ಹೋ ಹೋ ಹೋ" ದುಲಾರಿ ಮಾತುಗಳನ್ನು ಚೆನ್ನಾಗಿ ಜೋಡಿಸು ತ್ತಾನೆ.

ಬಾಯೀಜೀ ಆರಂಭಿಸಿದಳು:

ಖಾದೀ ಕೆ ಚುನರಿಯಾ ರಂಗದೆ ಛಾಪೆದಾರೆರೆ ರಂಗ ರೇಜಬಾ
ಬಹುತ ದಿನನ ಸೆ ಲಾಗಲ ಬಾ ಮನಹ ಮಾರರೆ ರಂಗರೇ ಜಬಾ
ಧಮ್ ಧಡಾಮ್ ಧಡ್ ಧಡಾಮ್

(ಬಣ್ಣಗಾರ ಖಾದಿಯ ಸೀರೆಗೆ ಬಣ್ಣ ಹಾಕಿಕೊಡು. ಬಹಳ ದಿನಗಳಿಂದ ಮನಸ್ಸಿಗೆ ಬೇಸರವಾಗಿದೆ ಬಣ್ಣ ಹಾಕು.)

"ಕುಣಿಯೋದೇನೋ ಸರಿ. ಆದರೆ ಹಲ್ಲು ಬಿಟ್ಕೊಂಡು ನಗಬೇಕು ಯಾಕೆ?"

"ಅಯ್ಯೋ ರಾಮ ಹಲ್ಲುಗಳಂತೂ ಪೂರಾ ಕಪ್ಪು ಹಾವುಗಳು."

"ಅದೆಲ್ಲಾ ಹಲ್ಲುಗಳಲ್ಲಯ್ಯ. ಕಾಬೂಲಿನ ದಾಳಿಂಬೆಯ ಬೀಜಗಳು."

"....ಚೆನ್ನಾಗಿ ಹೇಳಿದ ದುಲಾರಿ. ಬಾಯೀಜೀ ಹಾಡುತ್ತಿದ್ದಳು:"

ಕಹೀ ಕೆ ಛಾಪೋ ಗಂಧೀ ಮಹತಮಾ
ಚರ್ಖಾ ಮಸ್ತ ಚಲಾತೆ ಹೈ,
ಕಹೀಂ ಪೆ ಛಾಪೋ ವೀರ ಜವಾಹಿರ್
ಜೇಲಕೆ ಭೀತರ್ ಜಾತೆ ಹೈ,
ಅಂಚರಾ ಗೆ ಛಾಪೋ ಝಂಡಾ ತೇರಂಗಾ
ಬಾಂಕಾ ಲಹರದಾರ್ ರೇ ರಂಗ ರೇಜವಾ....
ಕಿರ್ ರ್ ರಿ ರಿಂ ಧಡಕ್ ಧಡಕ್ ಧಡವ್ ಧಾಧದಮ್ ಧ
ಅಜೀ ಅಂಗಿಯಾ ಪರ ಛಾಪೋ

(ಒಂದು ಕಡೆ ಚರಖಾ ತಿರುಗಿಸುತ್ತಿರುವ ಮಹಾತ್ಮ ಗಾಂಧೀಯನ್ನು ಅಚ್ಚು ಮಾಡು, ಇನ್ನೊಂದು ಕಡೆ ಜೈಲಿನೊಳಗೆ ಹೋಗುತ್ತಿರುವ ವೀರ ಜವಾಹರರನ್ನು ಅಚ್ಚು ಮಾಡು, ಸೆರಗಿನಲ್ಲಿ ತ್ರಿವರ್ಣಧ್ವಜ ಇರಲಿ. ಹೇ ಚತುರ ಬಣ್ಣಗಾರ. ರವಿಕೆ ಮೇಲೆ ಅಚ್ಚು ಮಾಡು.)

ಹೋ ಭೇಷ್ ಹೋ ಹೋ....

"ಇವಳ ರವಿಕೆಯ ಮೇಲೆ ಮುದ್ರೆ ಹಾಕಲೇನು?"

"ಹಾಕು, ಹಾಕು"

"ಮುದ್ರೆ ಅಂತ ಯಾಕೆ ಅನ್ನತೀಯಯ್ಯ, ಮೆಡಲ್ ಅನ್ನು. ಹಳ್ಳಿಯವರ ಹಾಗೆ ಮಾತಾಡ್ತೀಯಲ್ಲಾ ಬೆಳ್ಳಿಯ ಮುದ್ರೆಯನ್ನು 'ಮೆಡಲ್' ಅನ್ನಬೇಕು."

"ಅಲ್ಲಿ ಕೇಳು....ಭಗತಸಿಂಹ ಯಾಕೆ ಸ್ಟೇಜಿನ ಮೇಲೆ ಬಂದ?"

"ಪ್ರೀತಿಯ ಸೋದರರೇ, ನೀವೆಲ್ಲಾ ಗಲಾಟೆ ಮಾಡಬೇಡಿ....ಈಗ ಒಂದು ಗೀತೆ:"—

"ಮೋರಾ ಬಾಂಕಾ ಸಿಪೈಹಿಯಾ ಟಟ್ಟೂ ನೇ ಗಿರಾ ಜಾಯ್"

"ಹೂಂ....ಹೂಂ....ಪ್ರಾರಂಭಿಸು."

"ಪೆಟ್ರೋಮ್ಯಾಕ್ಸಿಗೆ ಗಾಳಿ ತುಂಬಯ್ಯ, ಭಕ್ ಭಕ್ ಅಂತಿದೆ."

"ಗಾಳಿ ತುಂಬಿದ್ರೇನು ಪ್ರಯೋಜನ? ಬಿರುಗಾಳಿ ಬೀಸುತ್ತಿದೆ. ಮಳೆಯೂ ಬರಬಹುದು."

ಮತ್ತೆ ಧನ್ ಧನ್ ಧಡಾಮ್ ಧಾ, ಧಡಾಮ್ ಧಾ: ನಗಾರಿ ನುಡಿಯಿತು.

ಗುಡು ಗುಡುಂ ಗುಡಂ ಆಕಾಶ ಗುಡುಗಿತು. ಫಟಾಕ್, ಪಟಾಕಿ ಸಿಡಿಯಿತು.

ಅಜಾ ಭಗತಸಿಂಹ ಹೈ ನಾಮೀ ಇನಮೇಂ ಸರದಾರ್,
ಅಜೀ ಕರನಾ ಹೈ ಉಸಕೋ ಗಿರಫ್ತಾರ್, :
—ಕಿರ್, ಕಿರ್, ಥನ್ ಥನ್ ಥಡಾಮ್ ಥಾ

ಪ್ರಸಿದ್ಧನಾದ ಭಗತಸಿಂಗ ಇವರಿಗೆಲ್ಲಾ ಸರದಾರ. ಅವನನ್ನು ಸೆರೆಹಿಡಿಯ ಬೇಕು.

"ಹೊಡಿ ಬಡವನ್ನ. ಇವನೇ ನಿಜವಾದ ದೇಶದ್ರೋಹಿ"

"ಹೊಡಿ ಹೊಡಿ"

"....ಬಹುಶಃ ಬಿರುಗಾಳಿಯೇ ಬೀಸಲಾರಂಭಿಸಿದೆ. ದನಕರುಗಳನ್ನು ಬಿಚ್ಚಿ ಹೊರಗಡೆ ಬಿಡಬೇಕು. ಒಲೆಯಲ್ಲಿ ಬೆಂಕಿಯನ್ನು ಹಾಗೇ ಬಿಟ್ಟು ಹೆಂಗಸರು ಮಲಗಿಬಿಟ್ಟರ್ತಾರೆ. ಇದೊಂದು ಕೆಟ್ಟ ಅಭ್ಯಾಸ. ಹುಕ್ಕಾ ಸೇದೋದಕ್ಕೋಸ್ಕರ ಕೆಂಡ ಹಾಗೇ ಬಿಟ್ಟಿರ್ತಾರೆ. ಬೇಗ ನಡಿ...ಹುಲ್ಲಿನ ಗುಡಿಸಲುಗಳಿದ್ದು ಏನು ಭೆರವಸೆ?....ಬಿರುಗಾಳಿ ಬಂದರೆ ಹಾರಿಸಿಕೊಂಡು ಹೊರಟುಹೋಗುತ್ತೆ, ಮಳೆ ಬಂದರೆ ಒಳಗೆಲ್ಲಾ ಸೋರುತ್ತೆ. ಒಲೆಯ ಕಿಡಿಯೂ ಹಾರಿಬಿಟ್ಟರೆ ಮುಗಿದೇ ಹೋಯಿತು....ನಡೆಯಿರಿ ನಡೆಯಿರಿ ಇನ್ನು ನಾಟಕ ನೋಡೋದೇನು?

ಗುಡು ಗುಡು ಗುಡುಂ—ಗುಡುಗಿನ ಶಬ್ದ !

ಕಮಲೆಯನ್ನು, ಡಾಕ್ಟರ್ ತಮ್ಮ ಬಾಹುಗಳಲ್ಲಿ ಭದ್ರವಾಗಿ ತಬ್ಬಿಕೊಂಡಿದ್ದಾರೆ....ಹಗಲು ಮೂರು ಗಂಟೆಗೇ ಸಂಥಾಲೀ ನೃತ್ಯವನ್ನು ನೋಡಲು ಆಸ್ಪತ್ರೆಗೆ ಬಂದಳು ಕಮಲಿ. ನಾಟ್ಯ ಮುಗಿಯಿತು. ಅಷ್ಟರಲ್ಲಿ ಸಂಜೆಯಾಗಿತ್ತು. ಅಲ್ಲಿ ನಾಟಕ ಯಾವಾಗ ಆರಂಭವಾಯಿತು ? ಯಾವಾಗ ಮುಗಿಯಿತು ? ಇಬ್ಬರಲ್ಲಿ ಒಬ್ಬರೂ ಹೇಳಲಾರರು.... ಗುಡುಗು ಮಿಂಚಿನೊಡನೆ ಧಾರಾಕಾರವಾಗಿ ಮಳೆಯು ಸುರಿಯಲಾರಂಭವಾದಾಗ ಡಾಕ್ಟರ್ ತಮ್ಮ ಬಾಹುಗಳಿಂದ ಕಮಲೆಯನ್ನು ಭದ್ರವಾಗಿ ತಬ್ಬಿಕೊಂಡರು.

ಕಮಲ ಅವರ ಬಾಹುಗಳಿಂದ ಬಿಡಿಸಿಕೊಳ್ಳಲು ಸ್ವಲ್ಪ ಮಾತ್ರ ಪ್ರಯತ್ನಿಸಿದಳು.

ಮಿಂಚು ಮಿಂಚಿತು.

ಗುಡು ಗುಡುಂ ಗುಡು ಗುಡುಂ ರಿಂ ರಿಂ ತಾ ದಿನ್ ತಾ ಡಿಗ್ಗಾ ಡಾ ಡಿಗ್ಗಾ

ಸಂಥಾಲೀ ನೃತ್ಯದ ಥಕ್ಕೆ, ನಗಾರಿಯ ತಾಳಕ್ಕೆ ಅನುಗುಣವಾಗಿ ಇಬ್ಬರ ಹೃದಯವೂ ಬಡಿದುಕೊಳ್ಳುತ್ತಿತ್ತು. ಥಮ್ಮ—ಥಮ್ಮ:····ಇಂದು ಕಮಲಿ ಈ ಪ್ರಾಂತ್ಯದಲ್ಲಿ ಧರಿಸುವ ಎಲ್ಲ ಆಭರಣಗಳನ್ನೂ ತೊಟ್ಟಿದ್ದಳು····ಬಳೆ, ಝುಮಕೀ, ಝುಣಕ್ ಝುಣಕ್ಕೆಂದು ಶಬ್ದ ಮಾಡುವ ಗೆಜ್ಜೆ ಎಲ್ಲಾ···· ಆ ಗೆಜ್ಜೆಗಳಂತೂ ದೇಹ ಸ್ವಲ್ಪ ನಡುಗಿದರೂ 'ಝುಉನಕ್ ಝುಉನಕ್' ಎನ್ನುತ್ತಿತ್ತು.

ಟುನ್ ಟುನ್ :

ಥಮು ಥಮು ;

ಗುಡು ಗುಡುಮ್—

ಥಮ್ಮ ಥಮು : ಥಮ್ಮ ಥಮ್ :

ಟುನ್ ಟುನ್ :

ಡಾಕ್ಟರ್ ಡಾಕ್ಟರ್ ಓ—ಪ್ರಶಾಂತ ಮಹಾಸಾಗರ !

ರಾಜ ಕಮಲ·· !

## 5

ಬಾವನದಾಸನಿಗೆ ತನ್ನ ಮೇಲೂ ನಂಬಿಕೆ ಇಲ್ಲದಂತಾಗಿದೆ. ···· ಬಾಲದೇವ ಹೇಳುತ್ತಾನೆ, 'ಬಾವನದಾಸನಿಗೆ ಚಿತ್ತ ಚಂಚಲವಾಗಿದೆ' ಅಂತ. ಸ್ವಲ್ಪ ಭ್ರಮೆಯೂ ಆಗಿರಬೇಕು. ಗಾಂಧೀಜೀ ಒಬ್ಬರಲ್ಲಿ ಮಾತ್ರ ಬಾವನ ದಾಸನಿಗೆ ನಂಬಿಕೆ ಇದೆ····ಬಾಪೂಜಿ ಎಲ್ಲರನ್ನೂ ದಡ ಮುಟ್ಟಿಸುತ್ತಾರೆ. ಅತಿ ಕಠಿಣ ಪರೀಕ್ಷೆಗಳಲ್ಲೂ ಬಾಪೂ ಒಬ್ಬರೇ ಎಲ್ಲವನ್ನೂ ಸುಧಾರಿಸಿದ್ದಾರೆ. ಜೈ ಬಾಪೂ: ತಂದೇ....

ಬಾವನದಾಸನ ಹೃದಯದಲ್ಲಿ ಏನು ಅನುಮಾನ ಬಂದಿದೆಯೋ ಪ್ರತಿಯೊಂದರಲ್ಲೂ ಕೆಟ್ಟದ್ದನ್ನೇ ಕಾಣುತ್ತಿದ್ದಾನೆ. ಸಂದೇಹಾತ್ಮಕ ದೃಷ್ಟಿಯಿಂದಲೇ

ಇಡೀ ಪ್ರಪಂಚವನ್ನು ನೋಡುತ್ತಾನೆ. ಬಾಪೂ, ಬಾವನದಾಸನ ಕಾಗದಕ್ಕೆ ಉತ್ತರ ಬರೆದರು: "ಭಗವಾನ್ ಬಾವನದಾಸರೇ, ನೀವೇ ಧೈರ್ಯ ಕೆಟ್ಟರೆ ಶಿಷ್ಯರ ಪಾಡೇನು....ಬಾಪುವಿನ ಪ್ರಣಾಮಗಳು"

ಬಾವನದಾಸ ಒಣನಗೆ ನಕ್ಕು ಹೇಳಿದ:

"ಗಂಗೂಲಿಯವರೇ, ಬಾಪುವಿನ ಕಾಗದ ನೋಡಿದಿರಾ?....ಈಗ ನಾನು ಏನು ಮಾಡಲಿ? ಮನಸ್ಸಿನಲ್ಲಿ ಸಂದೇಹ ಮೂಡಿದೆ, ಉದಾಸೀನ ಭಾವನೆ ಮೂಡಿದೆ, ಹೀಗಿರುವಾಗ ಮನುಷ್ಯನಿಗೆ ತನ್ನ ಕೆಲಸದಲ್ಲಿ ತಾನೇ ಶ್ರದ್ಧೆ ಹೇಗೆ ಬರುತ್ತದೆ? ಬಾಪೂವನ್ನು ಕೇಳಿದರೆ ವಿನೋದವಾಗಿ ಮಾತನ್ನು ಹಾರಿಸಿಬಿಟ್ಟಿದಾರೆ. 'ನೀವೇ ಧೈರ್ಯ ಕೆಟ್ಟರೆ ಹೇಗೇ ಅಂತ ಬರೆದಿದಾರೆ....ದೊಡ್ಡ ಮೋಸಗಾರ ಕಣ್ರೀ' ಪ್ರತಿಜನ್ಮದಲ್ಲೂ ಮೋಸಮಾಡುತ್ತಾನೇ ಇದಾನೆ!! ಒಂದು ಸಲ ರಾಮಾವತಾರ, ಇನ್ನೊಂದು ಸಲ ಕೃಷ್ಣಾವತಾರ, ಈಗ...."

"ಒಂದೊಂದು ಸಲ ವಾಮನ ಅವತಾರ."—ಗಂಗೂಲಿ ತಟಕ್ಕನೆ ಹೇಳಿದರು.

"ನೀವೊಬ್ಬರು....ಹೋ ಹೋ" ಅನೇಕ ದಿನಗಳನಂತರ ಬಾವನದಾಸ ಇಷ್ಟು ಗಟ್ಟಿಯಾಗಿ ಮನಃಪೂರ್ವಕವಾಗಿ ನಕ್ಕಿದ್ದು ಈವತ್ತೇ.

ಬಾವನದಾಸ ಗಟ್ಟಿಯಾಗಿ ನಕ್ಕಾಗ ಅವನ ಕಣ್ಣುಗಳು ತಾವಾಗಿಯೇ ಮುಚ್ಚಿಕೊಳ್ಳುತ್ತವೆ. ಆಗ ದೊಡ್ಡದೊಂದು ಸಿಲಾಲಯಿಡ್ ಬೊಂಬೆ ಅಲ್ಲಾಡು ತ್ತಿರುವಂತೆ ಕಾಣುತ್ತದೆ! ವಾಮನ ಅವತಾರ!

ರಾವಣ ಅವತಾರ—ಈ ಚಲಿತ್ತರ, ರಾವಣ ಅವತಾರವನ್ನೇ ಹೊತ್ತು ಬಂದಿದಾನೆ ಕಣಯ್ಯಾ ಕೇಳಲಿಲ್ವೇನು? 'ಹಸಲಗಂಜ'ನ ಹರಖೂಗಾಣಿಗನ ಮನೆಯಲ್ಲಿ ದರೋಡೆ ಆಗಿಬಿಟ್ಟಿದೆ, ಯಾರಿಗೂ ಗಾಯ ಆಗಿಲ್ಲ ತಾನೇ?.... ಎರಡು ಖೂನಿಗಳಾಗಿವೆ? ಅಯ್ಯೋ....

ವೈರಲೆಸ್ ಸುಮರಿತದಾಸ ಈಗತಾನೇ ಕಟಿಹಾರದಿಂದ ಬಂದಿದಾನೆ.

"ವಿಚಾರ ಇಷ್ಟು. ಹಸಲಗಂಜಿನ ಹರಖೂಗಾಣಿಗನ ಜಿಪುಣತನದ ವಿಚಾರ ಎಲ್ಲರಿಗೂ ಗೊತ್ತೇ ಇದೆ....ಚಲಿತ್ತರ ಕರ್ಮಕಾರ ಅಥವಾ ಬೇರೆ ಯಾರೋ ದೇವರಿಗೇ ಗೊತ್ತು....ಒಂದು ದಿನ ಮಧ್ಯಾಹ್ನದ ಹೊತ್ತಿಗೆ ಅವರ ಮನೆಯ ಬಾಗಿಲಿಗೆ ಬಂದ. ಕುಡಿಯಲು ನೀರು ಕೇಳಿದ್ದಕ್ಕೆ, ಗಾಣಿಗ ಹಣ

ಕೇಳಿದನಂತೆ! ಆದರೆ ಗಾಣಿಗನ ಹೆಂಡತಿ ಹೇಳೋದು ಹೀಗಿದೆ: 'ಅಂಗಡಿಯಲ್ಲಿ ತಿಂಡಿ ತಿಂದು ಕೈ ತೊಳೆದುಕೊಂಡು ಹೊರಟ, ಆಗ ನಾವು ದುಡ್ಡು ಕೇಳಿದೆವು' ಅಂತ. ಒಟ್ಟಿನಲ್ಲಿ ಬಂದವನು, 'ನೀರು ಕುಡಿದಿದ್ದಕ್ಕೂ ದುಡ್ಡು ಕೊಡ ಬೇಕೇನಯ್ಯಾ' ಅಂತ ಗಲಾಟೆ ಮಾಡಿದನಂತೆ. ನಾನು ಹೇಳ್ತಿರೋದೆಲ್ಲಾ ನನ್ನ ಕಿವೀಮೇಲೆ ಬಿದ್ದ ವಿಚಾರ ಅಷ್ಟೆ, ಒಂದೆರಡು ದಿನಗಳಲ್ಲಿ ನಡೆದದ್ದೆಲ್ಲಾ ಸರಿಯಾಗಿ ತಿಳಿಯುತ್ತೆ.... ಸ್ವಾತಂತ್ರ್ಯೋತ್ಸವದ ದಿನ ಒಂದು ಡಜನ್ ಜನರನ್ನು ಕರೆದುಕೊಂಡು, ಕುದುರೆ ಹತ್ತಿಕೊಂಡು ಬಂದನಂತೆ. ಬಂದಕೂಡಲೇ ಸಾಹುಕಾರನ ಹೆಂಡತಿಗೆ ಹೇಳಿದನಂತೆ: "ಪೂರೀ ಮಾಡಿ ಕೊಡಿ" ಅಂತ. ಮಾಡದೇ ಇರೋದು ಹ್ಯಾಗೆ? ಕೈಯ್ಯಲ್ಲಿ ರೈಫಲ್ ಹಿಡಿದು ಎರಡು ಪಕ್ಕದಲ್ಲೂ ನಾಲ್ಕು ನಾಲ್ಕು ಜನ ನಿಂತುಬಿಟ್ಟರು. ಆಮೇಲೆ ಹರಖೂ ಸಾಹುಕಾರನ ಸುತ್ತ ನಿಂತು ಕಟ್ಟೆಯ ಮೇಲೆ ಕೂರಿಸಿ 'ರಮೈನ್' ಓದು ಎಂದರಂತೆ. ಊರಿನೊಳಗೆ ಇಬ್ಬರು ಹೋಗಿ 'ನಾವು ಹರಖೂವಿನ ಮಗಳನ್ನು ನೋಡಿ ಹೋಗಲು ಬಂದಿದ್ದೇವೆ' ಎಂದರಂತೆ....ಬೆಳಗಾಗುವಷ್ಟರಲ್ಲಿ ಎಲ್ಲಾ ಮುಗಿದುಹೋಗಿತ್ತು. ಮಡಕೆ ಯನ್ನು ಎಲ್ಲೆಲ್ಲ ಹೂತಿಟ್ಟದ್ದರೋ ಎಲ್ಲ ಅಗೆದು ತೆಗೆದರು. ಒಂದು ಜಾಗದಲ್ಲಿ ಅಗೆಯೋದು, ಎಣಿಸಿಕೊಂಡು ಗದರಿಸೋದು, "ಏ ಮುದುಕ, ಇನ್ನೂ ಇದೆ. ಎಲ್ಲಿದೆ ಹೇಳು? ಇಲ್ಲದಿದ್ದರೆ ಒಲೇ ಮೇಲೆ ಕೂರಿಸಿ ಸೀಮೇ ಎಣ್ಣೆ ಸುರಿದು ಬಿಡುತ್ತೇವೆ" ಅಂತ. ಸಾಹುಕಾರನ ಹೆಂಡತಿ ರಾತ್ರಿಯೆಲ್ಲಾ ಪೂರಿ, ಮಿಠಾಯಿ ಮಾಡ್ತಾನೇ ಇದ್ದಳಂತೆ, ಮಧ್ಯೆ ಮಧ್ಯೆ ಕೇಳಿಕೊಂಡಳಂತೆ, "ಮಗೂ, ಯಾತ್ರೆ ಮಾಡೋಣಾ ಅಂತ ದುಡ್ಡು ಕೂಡಿಸಿಟ್ಟಿದೀವಿ. ಸ್ವಲ್ಪವಾದರೂ ಬಿಟ್ಟು ಹೋಗಪ್ಪಾ ..." ಅಂತ. ಅವಳಿಗೆ ಒಂದು ಸಾವಿರ ಕೊಟ್ಟುಬಿಟ್ಟರಂತೆ... ಹರಖೂ ವನ್ನು ನೋಡಿ, "ನೀನು ಎಂಟು ವರ್ಷದಿಂದ ಒಂದೇ ಪಂಚೆ ಉಟ್ಟುಕೊಳ್ತಿದೀ. ನಿನಗೆ ಹಣ ಯಾಕೆ ಬೇಕು? ಅಂದರಂತೆ....ಹೆಂಗಸರ ಮೈಯನ್ನು ಮುಟ್ಟಲೂ ಇಲ್ಲ. ಆದರೆ ಹೋಗೋದಕ್ಕೆ ಮುಂಚೆ ಇಬ್ಬರನ್ನು ಕೊಲೆ ಮಾಡಿಬಿಟ್ಟರು."

ಸುಮರಿತದಾಸ ಮಾತನಾಡುತ್ತಾ ಆಡುತ್ತಾ ಸುತ್ತಲೂ ನೋಡುತ್ತಿರುವು ದೇಕೆ? ಮಾತನಾಡುವಾಗ ಮಧ್ಯೆ ಮಧ್ಯೆ ತಡೆಯುತ್ತಾನೆ. ಗಟ್ಟಿಯಾಗಿ ನಗುತ್ತಲೂ ಇಲ್ಲ. ಮುಖ ಗಾಬರಿಯಾಗಿದೆ. ಏನು ವಿಷಯ ಹೀಗೆ ಯಾವತ್ತೂ ಇರಲಿಲ್ಲವಲ್ಲ....? ಸಾಲದ್ದಕ್ಕೆ ಮಾತು ಮಾತಿಗೆ 'ಅಂತೆ, ಅಂತೆಗಳ' ಸುರಿಮಳೆ ಬೇರೆ. ನಿಜವಾದ ವಿಚಾರ ಏನೂ ಅಂತ?....

"ದಾಸರೇ ಏನಾದರೂ ಪ್ರೈವೇಟ್ ವಿಚಾರ ಇದೆಯೇನು?"

"ಪ್ರೈವೇಟ್ ವಿಚಾರ ಏನೂ ಇಲ್ಲ....ದಂಗೆ ಆಗ್ತಿದೆ. ಡಿಲ್ಲಿ, ಕಲ್ಕತ್ತ, ಲಕ್ನೋ, ಪಾಟ್ನಾ ಎಲ್ಲಾ ಕಡೆಗಳಲ್ಲೂ ಹಿಂದೂ ಮುಸಲ್ಮಾನರಲ್ಲಿ ಯುದ್ಧ ನಡೆಯುತ್ತಿದೆ. ಹಳ್ಳಿಗೆ ಹಳ್ಳಿಯೇ ಚೊಕ್ಕಟ! ....ಬೆಂಕಿ ಹಾಕಿಬಿಡುತ್ತಿದ್ದಾರೆ." ಸುಮರಿತದಾಸ ಕೈಯ್ಯಲ್ಲಿ ಚೊಂಬು ಹಿಡಿದು ಬಯಲಿಗೆ ಹೊರಟ.

....ಬಾಲದೇವ ಅನಶನ ಮಾಡುತ್ತಾನಂತೆ. ಯಾಕೆ, ಈ ಸಲ ಏನಾಯಿತು? ಬಾಲದೇವ ಹೇಳಿದ: ಪ್ರೀತಿಯ ಸೋದರರೇ, ನಾನು ಈಗತಾನೇ ಡಾಕ್ಟರ್ ಹತ್ತಿರವಿದ್ದ ರೇಡಿಯೋದಲ್ಲಿ ಕೇಳಿಕೊಂಡು ಬಂದೆ. ಅನರ್ಥವಾಯಿತು. ಜನ ಹುಚ್ಚರಾಗಿಬಿಟ್ಟಿದಾರೆ. ಗಾಂಧೀಜೀ ಖಿಲಾಫತ್ತಿನ ಕಾಲದಿಂದ ಹೇಳುತ್ತಾನೇ ಇದಾರೆ—'ಹಿಂದೂ ಮುಸಲ್ಮಾನರು ಅಣ್ಣ ತಮ್ಮಂದಿರೂ' ಅಂತ. ತಿವಾರಿಯವರೂ, ಹದಿನೈದು ಇಪ್ಪತ್ತು ವರ್ಷಗಳ ಹಿಂದೆಯೇ ತಮ್ಮ ಕವನದಲ್ಲಿ ಹೇಳಿದ್ದಾರೆ:

ಅರೆ, ಚಮಕೆ ಮಂದಿರವಾ ಮೆ ಚಾಂದ್
ಮಸಜಿದವಾ ಮೇಂ ಬಂಸೀ ಬಜೆ
ಮಿಲಿ ರಹೂ ಹಿಂದೂ—ಮುಸಲ್ಮಾನ್
ಮಾನ—ಅಪಮಾನ ತಜೋ

"....ಗಾಂಧೀಜೀಯ ಮಾತನ್ನು ಮೀರಿ ಇಷ್ಟು ಅನರ್ಥವನ್ನೆಲ್ಲಾ ಮಾಡುತ್ತಿರುವ ಈ ಜನಕ್ಕೆ....ಬುದ್ಧಿ, ತನಗೆ ತಾನೇ ಬರುತ್ತೆ....ಬಹುಶಃ ಗಾಂಧೀಜೀಯವರು ಉಪವಾಸ ಮಾಡುತ್ತಾರೆ. ಈಗ ಅವರು ನೌಖಾಲಿಯಲ್ಲಿದ್ದಾರೆ. ಬಾವನದಾಸ ಈಗತಾನೇ ಪೂರ್ಣಿಯಾದಿಂದ ಬರುತ್ತಿದ್ದಾನೆ. ಅವನು ಹೇಳಿದ, ಗಾಂಧೀಜೀ ರಾಮಲಾಲನನ್ನು ನೌಖಾಲಿಗೆ ಕರೆಸಿಕೊಂಡರಂತೆ. ಮೂವತ್ತೇಳರಲ್ಲಿ ಗಾಂಧೀ ಆಶ್ರಮಕ್ಕೆ ಪೂರ್ಣಿಯಾದಿಂದ ಬಂದ ಮನುಷ್ಯನನ್ನು ಕಳುಹಿಸಿಕೊಡೀ ಅಂತ ಗಾಂಧೀಜೀ ಶಿವನಾಥ ಚೌಧರಿಗೆ ಕಾಗದ ಬರೆದಿದ್ದರಂತೆ. ರಾಮಲಾಲ 'ರಘ್ಯೈನ್' ಓದುತ್ತಾನೆ....ರಾಮಲಾಲ ಬಾಬು ರಾಗ ರಾಗವಾಗಿ ಹಾಡುವಾಗ, ಕೇಳುವವರ ಕಣ್ಣಲ್ಲಿ ತಾನಾಗಿಯೇ ನೀರು ಸುರಿಯುತ್ತದೆ...."

ಜೋಯಿಸ ಚಿಕ್ಕಪ್ಪ ಈಗೀಗ ಹೆಚ್ಚು ಮಾತನಾಡುವುದೇ ಇಲ್ಲ. ಆದರೂ ಇಷ್ಟು ದೊಡ್ಡ ದೊಡ್ಡ ಘಟನೆಗಳು ನಡೆದಾಗಲೂ ಅವರು ಸುಮ್ಮನಿರುವುದು ಹೇಗೆ ಸಾಧ್ಯ? ಅವರ ಅಭಿಪ್ರಾಯ ಇಷ್ಟೇ—"ಇದೆಲ್ಲಾ ಸ್ವಾತಂತ್ರ್ಯ ಬಂದುದರ

ಫಲ. ಮಗು ಹುಟ್ಟಿದ ಕೂಡಲೇ ತಾಯಿಯ ಅಂಗ ಭಂಗವಾದರೆ, ಮಾರನೆಯ ದಿನವೇ ಮನೆಗೆ ಬೆಂಕಿ ಬಿದ್ದರೆ, ಅಂಥ ಮಗುವಿನಿಂದ ಮುಂದೆ ಏನೇನು ಆಗುತ್ತದೋ ನೋಡಬೇಕು. ಕಲಿಯುಗ ಈಗ ಮುಕ್ತಾಯ ಘಟ್ಟದಲ್ಲಿದೆ. ಹೀಗೆ ಒಬ್ಬರೊಂದಿಗೊಬ್ಬರು ಕಚ್ಚಾಡಿಕೊಂಡು ಜನರೆಲ್ಲಾ ನಾಶವಾಗುತ್ತಾರೆ.''

ಈಗ ಜನ ಸೋಷಲಿಸ್ಟ್ ಪಾರ್ಟಿಯ ಆಫೀಸಿಗೂ ಅಹವಾಲುಗಳನ್ನು ತೆಗೆದುಕೊಂಡು ಬರುತ್ತಾರೆ. ಜುಮರಾತಿಮಿಯಾ ಅಳುತ್ತಾ ಓಡಿಬಂದ. ಸುಮರಿತ ದಾಸ ಅವನ ಕೈಯ್ಯಿಂದ ಐದು ರೂಪಾಯಿ ಕಿತ್ತುಕೊಂಡನಂತೆ. ''ಕಾಳೀ ಬಾಬು. ದಬ್ಬಾಳಿಕೆ.... ಇನ್ನು ನಮ್ಮಂತಹ ಬಡವರ ಜೀವನ ಹೇಗೆ ?''

''ಇವತ್ತು ಸಂಜೆ ನೀನು ಆಫೀಸಿನಲ್ಲೇ ಇರು. ರಾತ್ರಿ ನಾವು 'ಪಂಚಾಯಿತಿ' ಮಾಡುತ್ತೇವೆ.'' ಕಾಳೀಚರಣ ಅವನಿಗೆ ಧೈರ್ಯ ಹೇಳಿದ

''ಕಾಮ್ರೇಡ್ ವಾಸುದೇವ, ಸುಮರಿತದಾಸನನ್ನು ಕರೆದುಕೊಂಡು ಬಾ.''

ವಾಸುದೇವ ನಿನ್ನೆ ತಾನೇ ಪೂರ್ಣಿಯಾದಿಂದ ಬಂದಿದ್ದಾನೆ. ಬಾಟಾ ಕಂಪನಿಯ ಚಪ್ಪಲಿಗಳನ್ನು ಇಪ್ಪತ್ತನಾಲ್ಕು ರೂಪಾಯಿಗೆ ಕೊಂಡುಕೊಂಡಿದ್ದಾನೆ. ಓಡಾಡುವಾಗ ಚಪ್ಪಲಿ 'ಮಚ್, ಮಚ್,' ಎಂದು ಶಬ್ದ ಮಾಡುತ್ತದೆ. ರಾತ್ರಿಯಲ್ಲೂ ಕಣ್ಣಿಗೆ ಕರಿ ಕನ್ನಡಕ ಹಾಕಿಕೊಂಡು, ಪೈಜಾಮ—ಕುರ್ತಾ ಧರಿಸಿ, ಚಪ್ಪಲಿಯನ್ನು 'ಮಚ್ ಮಚ್' ಶಬ್ದ ಮಾಡುತ್ತಾ ಓಡಾಡುವಾಗ ಅವನಿಗೆ ಸ್ವಲ್ಪ ಮತ್ತೇರಿದಂತಾಗಿದೆ. ಪೆರೇಡ್ ಮಾಡುತ್ತಾ ಹೆಜ್ಜೆ ಹಾಕುತ್ತಿರುವಂತೆ ಭಾಸವಾಗುತ್ತದೆ....ವಾಸುದೇವ ಸ್ಟೇಷನ್ನಿನ '—ಬೀಡಾ—ಬೀಡಿ—ಸಿಗರೇಟ್' ನವನಂತೆ ಗಂಟಲು ದಪ್ಪಮಾಡಿಕೊಂಡು ಕೂಗಿದ: ''ಸೋಮಾಜಟ್''

ಸುಮರಿತದಾಸನಿಗೆ ಗ್ರಹಚಾರ ಕೆಟ್ಟಿರಬಹುದು, ವಾಸುದೇವ ಮನಸ್ಸಿನಲ್ಲೇ ನಕ್ಕು ಕೂಗಿದ, ''ಸೋಮಾಜಟ್'' ಒಂದು ಚಿಕ್ಕ ಕೊಠಡಿಯಲ್ಲಿ ಸುಮರಿತದಾಸ ಎಲ್ಲಿ ಅವಿತಿಟ್ಟುಕೊಳ್ಳಬಲ್ಲ ? ಅಲ್ಲದೆ ವಾಸುದೇವ ಅಷ್ಟರಲ್ಲೇ ಅವನನ್ನು ನೋಡಿದ್ದ. ಅವನ ಕೈ ಹಿಡಿದು ಎಳೆದುಕೊಂಡು ಬಂದ. ಸುಮರಿತದಾಸ ಥರ ಥರ ಕಂಪಿಸುತ್ತಿದ್ದ. ''ಹುಜೂರು....ಕಾ....ಪಾ....ಡಿ....''

''ವೈರಲೆಸ್, ನಿನಗೆ ಕರೆ ಬಂದಿದೆ''—ವಾಸುದೇವ ನಗುತ್ತಾ ಹೇಳಿದ.

''ಯಾ....ಯಾರು? ವಾಸುದೇವ? ಓ—ನನಗೆ ಅರ್ಥವಾಯಿತು.—ಇನ್ಸ್‌ಪೆಕ್ಟರ್ ಇದಾರೆ. ಭೇಷ್, ಚೆನ್ನಾಗಿ ಹೆದರಿಸಿಬಿಟ್ಟೆ....ಚೆನ್ನಾಗಿ ಧ್ವನಿ

ಬದಲಾಯಿಸುತ್ತೀ! ಮಾಡಲೇ ಬೇಕು. ನೀವೆಲ್ಲಾ ದೇಶ-ವಿದೇಶಗಳನ್ನು ಸುತ್ತಿ ವವರು..ಹೂಂ....ನನ್ನ ಯಾರು ಕರೆಸಿದವರು? ಕಾಳೀಚರಣ ತಾನೇ? —ಒಂದು ಮಾತು ತುಂಬಾ ದಿನಗಳಿಂದ ನಿನ್ನ ಕೇಳಬೇಕೂ ಅಂತಿದ್ದೆ.....ನಿಮ್ಮ ಪಾರ್ಟಿಯಲ್ಲೂ ಎರಡು ಪಾರ್ಟಿಗಳಾಗಿವೆಯೇನು?...."

"ಯಾಕೆ?"

"ಮೊದಲು ಹೇಳು." ಸುಮರಿತದಾಸ ಗಟ್ಟಿಯಾಗಿ ನಕ್ಕ.

"ಇಲ್ಲ, ಯಾಕೇ ಅಂತ ಮೊದಲು ನೀವು ಹೇಳಿ"—ವಾಸುದೇವನೂ ಹಠದಲ್ಲಿ ಕಡಮೆಯೇನಿಲ್ಲ.

"ಅದೇ—ಕಾಳೀಚರಣ ಒಂದು ದಿನ ಹೇಳುತ್ತಿದ್ದ. ಸೆಕ್ರೆಟರಿಯವರಿಗೆ ವಾಸುದೇವನಲ್ಲಿ ನಂಬಿಕೆಯಿಲ್ಲ, ಅಂತ ನಾನು ಕೇಳಿದೆ, "ವಾಸುದೇವನಲ್ಲಿ ಏನೂ 'ಡಿಫೆಕ್ಟ್' ಇಲ್ಲವಲ್ಲ" ಅಂತ. ಅದಕ್ಕೆ 'ಒಳಗಿನ ವಿಚಾರ ನಿಮಗೇನು ಗೊತ್ತು?' ಅಂದ....ಅದಕ್ಕೇ ಕೇಳಿದೆ...."

"ಹೂಂ.... ಹೌದು ದಾಸರೇ. ಈಗ ಅರ್ಥವಾಯಿತು. ವಾಸ್ತವವಾಗಿ ಕಾಳೀಚರಣ ಧರ್ಮಪುರಿಯವರ ಪಾರ್ಟಿಯವನು. ಧರ್ಮಪುರಿಯವರೂ ಸೋಷಲಿಸ್ಟ್ ಪಾರ್ಟಿಗೇ ಸೇರಿದವರು. ಆದರೆ ನಮ್ಮ ಸೆಕ್ರೆಟರಿ ಮುಂದೆ ಅವರು ಏನೇನೂ ಅಲ್ಲ. ಬರೀ ತಣ್ಣಗಿನ ವಿಚಾರ ಅವರದ್ದು. ಎಲ್ಲರ ಜೊತೆ ನಗು ನಗುತ್ತಾ ಮಾತಾಡ್ತಾರೆ. ಕಾಂಗ್ರೆಸ್ಸಿನವರ ಜೊತೆ ಕೂತು ಅಂಗಡಿಯಲ್ಲಿ ಮೊಸರು, ಅವಲಕ್ಕಿ.... ಹೀಗೆ ಫಲಹಾರ ಮಾಡುವ ಮನುಷ್ಯ ಕ್ರಾಂತಿ ಪಾರ್ಟಿಯಲ್ಲಿ ಹೇಗಿರೋದು ಸಾಧ್ಯ? ನೀವೇ ಹೇಳಿ ದಾಸರೇ."

"ಓ....ಓ.... ಹಾಗೋ ಸಮಾಚಾರ?" ಸುಮರಿತದಾಸ ಗಂಭೀರ ವಾಗಿ ಹೇಳಿದ.

"ಸರಿಯಾದ ಮಾತು."

"ಈ ಕಾಳೀಚರಣ ಅವರ ಪಾರ್ಟಿಗೇ ಸೇರಿದಾನೆ." ಮತ್ತು ಪಿಸುದನಿ ಯಲ್ಲಿ ವಾಸುದೇವ ಹೇಳಿದ: "ಮಂಗಳಾ ದೇವಿಯ ಜೊತೆಯಂತೂ ಈಗೀಗ ರಾಸಲೀಲೆ ನಡೀತಾನೇ ಇರುತ್ತೆ. ಏನು ಹೇಳೋಣ.... ಇದನ್ನೆಲ್ಲಾ ನಾನು ಸೆಕ್ರೆಟರಿ ಹತ್ತಿರ ಹೇಳಿದೆ. ಕಾಳೀಚರಣನನ್ನು ಸೆಕ್ರೆಟರಿಯವರು ಗದರಿಸಿ ಕೊಂಡಿದಾರೆ. ಆದ್ದರಿಂದ ಅವನು ಹಾಗೆ ಮಾತಾಡುತ್ತಿದಾನೆ, ಅಷ್ಟೆ. ನೋಡುತ್ತಿರಿ. ಈಸಲ ಸಮ್ಮೇಳನದಲ್ಲಿ ಸ್ವಾರಸ್ಯ ವಿಚಾರವಿರುತ್ತೆ."

"ಇದು ಗುಂಪಿನ ಜಗಳ. ಎಲ್ಲ ಕಡೆಯೂ ಇದ್ದೇ ಇದೆ. ಆದರೆ ಎಲ್ಲದಕ್ಕೂ ....ಒಂದು ಮಿತಿಯಿರಬೇಕು. ಧರ್ಮಪುರಿಯವರ ವಿಚಾರ ನೀನು ಹೇಳಿದ್ದು ಸರೀನೇ. ಅಂತಹವರು ಕ್ರಾಂತಿ ಪಾರ್ಟಿಯಲ್ಲಿ ಹೇಗೆ ಇರೋದು ಸಾಧ್ಯ.... ಆಂ....? ನಿಮ್ಮ ಸೆಕ್ರೆಟರಿ ಕಿಸನಕಾಂತರು ಬಿಸಿ ಬಿಸಿ ಮನುಷ್ಯರು ಅಂತ ಕೇಳಿ ದೀನಿ. ಮಾತನಾಡುವಾಗ ಅವರು ಕೈ ಬೀಸಿದರೆ.... ಒಳ್ಳೆಯದು, ಆಫೀಸರ ಅಪ್ಪಣೆ ನನ್ನ ಮೇಲೆ ಯಾಕೆ ಜಾರಿಗೆ ಬಂದಿದೆ? ನನ್ನ ಕರೆಸಿದ್ದೇಕೆ?"

"ಅದೇ ದಾಸರೇ. ಜುಮ್ಮಾರಾತಿಮಿಯಾ ಅದೇನೇನು ಹೇಳಿಕೊಂಡನೋ. ದುಡ್ಡು ಕಿತ್ತುಕೊಂಡುಬಿಟ್ಟರು ಅಂತ ಹೇಳಿಕೊಳ್ಳುತ್ತಿದ್ದ." ವಾಸುದೇವ ಕಪ್ಪು ಕನ್ನಡಕ ಏರಿಸುತ್ತಾ ಹೇಳಿದ: "ಈ ಮುಸಲ್ಮಾನರದ್ದು ಏನು ನಂಬಿಕೆ?"

"ಅರ್ಥ ಮಾಡಿಕೊಂಡೆಯಲ್ಲಾ?" ಸುಮರಿತದಾಸ ಫಕ್ಕನೆ ನಕ್ಕು ಹೇಳಿದ. "ಇದು ಅರ್ಥ ಮಾಡಿಕೊಳ್ಳಬೇಕಾದ ವಿಚಾರಾನೇ."

"ನಾನು ಮನೆಯಲ್ಲಿರಲಿಲ್ಲ ಅಂತ ಹೇಳಿಬಿಡುತ್ತೇನೆ. ದೊಡ್ಡ ಲಾಟ್ ಸಾಹೇಬ್, ಎಲ್ಲರೂ ಇವನ ಮುಂದೆ ಕೈಕಟ್ಟಿ ನಿಲ್ಲಬೇಕು. ನನಗೇನೂ ಯಾರ ಭಯವೂ ಇಲ್ಲ." ವಾಸುದೇವ ಪ್ಯಾಕೆಟ್ಟನಿಂದ ಸಿಗರೇಟ್ ತೆಗೆದು ಬೆಂಕಿ ಕಡ್ಡಿ ಗೀರುತ್ತಾ ಹೇಳಿದ: "ದಿನವೆಲ್ಲಾ ಭಾಷಣ ಕೊಡುತ್ತಿರೋದು, ಸಿಗರೇಟು ಸೇದ ಬೇಡಿ, ಮೊಟ್ಟೆ ತಿನ್ನಬೇಡಿ ಅಂತ. ಒಳಗೊಳಗೇ...."—ವಾಸುದೇವ ಬೆಂಕಿ ಕಡ್ಡಿಯಿಂದ ಸಿಗರೇಟ್ ಹತ್ತಿಸಿಕೊಳ್ಳುತ್ತಾ ಹೇಳಿದ.

....ಬೆಂಕಿ ಕಡ್ಡಿಯ ಬೆಳಕು ಕನ್ನಡಕದ ಎರಡು ಭಾಗಗಳಲ್ಲೂ ಹೊಳೆಯಿತು. ಕಪ್ಪು ಕನ್ನಡಕದ ಮೇಲೆ ಹೊಳೆಯುತ್ತಿರುವ ದೀಪದ ಬೆಳಕು. ಸುಮರಿತದಾಸನ ದೇಹವೆಲ್ಲಾ ಒಮ್ಮೆ ಕಂಪಿಸಿತು, ರೋಮಗಳು ಎದ್ದುನಿಂತವು ....ಆದರೂ ಅವನು ನಗುತ್ತಾ ಹೇಳಿದ:

"ಮುಳುಗಿ ನೀರು ಕೊಡಿ. ಯಾರಿಗೂ ಗೊತ್ತಾಗೋಲ್ಲ."

"ಹೂಂ...." ವಾಸುದೇವ ಹೊಗೆ ಬಿಡುತ್ತಾ ಕೆಮ್ಮಿದ.

"....ಮದ್ಯದ ವಾಸನೆ. ಸುಮರಿತದಾಸನ ಕಣ್ಣುಗಳು ಮಿಂಚಿದವು. "ವಾಸುದೇವ ಬಾಬು, ನೇಪಾಳಿ ಮದ್ಯ ಸಿಕ್ಕಿರೋ ಹಾಗಿದೆಯಲ್ಲ? ನನಗೂ ಸ್ವಲ್ಪ ರುಚಿ ತೋರಿಸಬಾರದೇನು?"

"ಆಲ್ ರೈಟ್, ನಾಳೆ ತೋರಿಸ್ತೀನಿ. ಕೆಂಪುಸಲಾಂ."

'ಮಜ್ ಮಜ್ ಮಜ್'—ಚಪ್ಪಲಿಯ ಶಬ್ದ ದೂರ ಹೋಯಿತು.

## 6

ತಂತ್ರಿವಾ ಪಂಗಡದಲ್ಲಿ ಇಂದು ಅಟ್ಟಹಾಸದಿಂದ ಪಂಚಾಯಿತಿ ನಡೆಯು ತ್ತಿದೆ.

ಬಹಳ ದಿನಗಳಿಂದ ಪಂಚಾಯಿತಿಯಲ್ಲಿ ಯಾರೂ ಮನೆಯ ಭಾಷೆಯನ್ನು ಉಪಯೋಗಿಸಬಾರದೆಂದು ನಿಯಮವಿದೆ. ಕೋರ್ಟು ಕಛೇರಿಗಳಲ್ಲಿ ಉಪಯೋಗಿ ಸುವ ಸರ್ಕಾರಿ ಭಾಷೆ ಎಷ್ಟು ಬಂದರೆ ಅಷ್ಟು ಮಾತನಾಡಬೇಕು. ಪಂಚಾಯಿತಿ ಯಿಂದ ಯಾರನ್ನೂ ದೂರ ಮಾಡುವಂತಿಲ್ಲ. ರಾಮುಪಿಯರಿಯ ದಾಸಿಯಾಗು ವುದನ್ನು ಯುವಕರೆಲ್ಲಾ ತೀವ್ರವಾಗಿ ವಿರೋಧಿಸುತ್ತಿದ್ದಾರೆ. ಅದಕ್ಕೇ ಪಂಚಾಯಿತಿ ಸೇರಿರುವುದು.

"ಇದೇನು ಆಟ ಆಗಿಹೋಯಿತೇನು? ಜಾತೀನೋ, ಹುಡುಗಾಟಾನೋ? ಮನಸ್ಸಿಗೆ ಬಂದವರು ಮನಸ್ಸಿಗೆ ಬಂದವರ ಉಪಪತ್ನಿ—ದಾಸಿ, ಏನು ಬೇಕಾದರೂ ಆಗಿಬಿಡಬಹುದು ಅಂದುಕೊಂಡಿದಾರೇನು?"—ಗರಭೂ ಸಿಟ್ಟಿನಿಂದ ಹೇಳಿದ.

ಪಂಚಾಯಿತಿಯಲ್ಲಿ ಪ್ರತಿಯೊಬ್ಬರಿಗೂ ಮಾತನಾಡುವ ಹಕ್ಕಿದೆ. ಆದ್ದ ರಿಂದಲೇ ಅಟ್ಟಹಾಸದಿಂದ ಈ ಪಂಚಾಯಿತಿ ನಡೆಯುತ್ತಿದೆ.

"ರಾಮುಪಿಯರಿಯ ತಾಯಿ ಎಲ್ಲಿ?"

ಎಲ್ಲರ ದೃಷ್ಟಿ ಝೋಂಪಡಿಯ ಮರೆಯಲ್ಲಿ ನಿಂತಿರುವ ಹೆಂಗಸರ ಕಡೆ ಹೋಯಿತು. ರಮಜೂದಾಸನ ಹೆಂಡತಿ ಕೆಮ್ಮಿ ಗಂಟಲು ಸರಿಪಡಿಸಿಕೊಂಡಳು:

"ರಾಮುಪಿಯರಿಯೊಳ ತಾಯಿಗೆ ಏನು ಹೇಳ್ತೀರಿ?"

"ನೀನು ಮಾತಾಡಬೇಡ."

"ಈ ವಿಚಾರ ಯಾರಿಗೆ ಸಂಬಂಧಪಟ್ಟಿದೆಯೋ, ಅವರೇ ಮಾತಾಡಲಿ."
"ನಾನು ಮಾತಾಡೇ ಆಡ್ತೀನಿ." ರಮಜೂದಾಸನ ಹೆಂಡತಿ ಎದ್ದುನಿಂತಳು.
....ಇಂದು ಹೊಡೆದಾಟ–ಬಡಿದಾಟವೇ ನಡೆಯುತ್ತದೇನೋ ಅನ್ನಿಸುತ್ತಿದೆ.

"ಉಚಿತ, ನೋಖಿ ಇಬ್ಬರೂ ಎಲ್ಲಿ ಹೋದರು? ಅವರು ಛಡೀದಾರರು ಆಗಿರೋದು ಯಾಕಂತೆ?"

"ಹೂಂ, ಛಡೀ ಏಟು ಕೊಡೋದಕ್ಕೆ ಹೇಳಿ··ಛಡೀ ಏಟು ತಿನ್ನದವನು ಜಾರಪುತ್ರ....ರಾಮುಪಿಯರಿಯ ತಾಯಿಗೆ ಮಾತನಾಡುವುದಕ್ಕೆ ಬರುವುದಿಲ್ಲ, ಅವಳ ಪರವಾಗಿ ನಾನೇ ಮಾತನಾಡುತ್ತೇನೆ....ರಾಮುಪಿಯರಿಯಳು ಯುವತಿ, ತನ್ನ ಮನಸ್ಸಿಗೆ ಬಂದದ್ದನ್ನು ಮಾಡುತ್ತಾಳೆ. ಪಂಚಾಯಿತಿಯಲ್ಲಿ ತುಂಬಾ ಬಡಬಡಿಸುತ್ತಿದ್ದೀಯಲ್ಲಾ ಗರಭೂ, ರಾಮುಪಿಯರಿಯ ನಿನ್ನ ಅಣ್ಣನ ಮಗಳೂ ಅನ್ನೋದನ್ನೇ ಮರೆತುಬಿಟ್ಟೇನು ಹೇಳು, ಮಾತಾಡು····ಇನ್ನು ಈ ಛೀತ್ರನ್ ಏಳು ಮಕ್ಕಳ ತಂದೆಯಾಗಿದಾನೆ, ಇವನು ರಾಮುಪಿಯರಿಯ ತಾಯಿಯ ಮನೆಯಲ್ಲಿ ಸದಾ ಯಾಕೆ ಬಿದ್ದುಕೊಂಡಿರ್ತಾನಂತೆ ಕೇಳು. ನ್ಯಾಯ ಇದೇ ಏನು? ಚಿಕ್ಕವಯಸ್ಸಿನವರದ್ದು ಒಂದು ರೀತಿ; ಏನೋ ಅಕಸ್ಮಾತ್ ಕಾಲು ಜಾರಿತೂ ಅನ್ನಬಹುದು, ಈ ಮುದುಕರಿಗೆ ಏನು ಹೇಳ್ತೀರಿ?"

"ಬಾಯ್ಮುಚ್ಚು....ಏ....ಸುಮ್ಮನಾಗು. ಛೀತ್ರನ್ ಎಲ್ಲಿ?"

"ತಲೇ ಮೇಲೆ ಹುಡುಕಿದರೂ ಒಂದೂ ಕರೀ ಕೂದಲಿಲ್ಲ. ಆದರೂ ಆಡೋ ಆಟ ನೋಡಲಿಲ್ಲ....ಏನಯ್ಯ ಛೀತ್ರನ್, ರಾಮುಪಿಯರಿಯಾ ಅಮ್ಮ ಏನಂತಾಳೆ?"

ಛೀತ್ರನನ ಮಗನಿಗೆ ಸಿಟ್ಟು ಬಂತು. ಅವನು ತನ್ನ ಅಭ್ಯಾಸದಂತೆ ತೊದಲುತ್ತಾ ಮಾತನಾಡಿದ: "ಮ....ಮ....ಮರಿಯಾದೆಯಿಂದ ಮ·· ··ಮಾತಾಡು."

"ಹೊಡಿ, ಹಿಡಿದುಕೋ,"

"ಏ, ಏ,"

"ಕೊರಳಿಗೆ ಬಟ್ಟೆ ಸುತ್ತು, ಪೊರಕೆಯಿಂದ ಹೊಡಿ....ಅವನ ಗರ್ವ ನೋಡು."

ನೋಷೆ ಮತ್ತು ಉಚಿತದಾಸರು ಛಡೀದಾರರು. ಪಂಚಾಯಿತಿಯಲ್ಲಿ ಏನಾದರೂ ಗಲಾಟೆ ಆರಂಭವಾದರೆ ಕೈಯ್ಯಲ್ಲಿ ಛಡೀ ಹಿಡಿದು ಎಲ್ಲರಿಗೂ ಶಿಕ್ಷೆ ಕೊಡುವುದು ಅವರ ಕೆಲಸ. ನೋಷೆ ಮತ್ತು ಉಚಿತದಾಸರು ಛೀತ್ರನ್ನನನ್ನು ಹಿಡಿದುಕೊಂಡು ಕೊರಳಿಗೆ ಬಟ್ಟೆ ಹಾಕಿದರು. ಮಹಂಗೂದಾಸ ಚೀಥರೂ, ಮುಸುಹರು, ಅನಪೂ ಮತ್ತು ಫೋತನ್ ಎಲ್ಲರಿಗೂ ಸಮಾಧಾನ ಮಾಡುತ್ತಾ ಹೇಳಿದರು :

"ಹೊಡೀಬೇಡಿ."

"ಎಲ್ಲಾ ಮುದುಕರೂ ಒಂದೇ ರೀತಿ." ಧ್ವನಿಯೊಂದು ಕೇಳಿಬಂತು.

ಈಗ ರಾಮಪಿಯರಿಯ ತಾಯಿಯ ಬದಲು ಛೀತ್ರನದಾಸನ ಪಂಚಾಯಿತಿ ಪ್ರಾರಂಭವಾಯಿತು. ಛೀ, ಛೀ, ನಾಚಿಕೆಗೇಡು ನೀರಿನಲ್ಲಿ ಮುಳುಗಿ ಸಾಯಬೇಕು. ಈ ಬಾರಿ ಐದು ರೂಪಾಯಿ ಜುಲ್ಮಾನೆಯಾಯಿತು. ಅಗ್ಗವಾಗೇ ಬಿಡುಗಡೆ ಆದ ಹಾಗಾಯಿತು.

ಛೀತ್ರನದಾಸನಿಗೆ ಐದು ರೂಪಾಯಿ ಜುಲ್ಮಾನೆ. ಅವನ ಉಗ್ಗಲು ಮಗನಿಗೆ ಐದು ಬಾರಿ 'ಊಠ್–ಬೈಸ್' ಹೊಡೆಯುವ ಶಿಕ್ಷೆಯಾಯಿತು. ನೋಡಿ ಎಣಿಸಿದ. "ಒಂದು, ಎರಡು, ಮೂರು, ನಾಲ್ಕು, ಐದು....ಹೂಂ ಸಾಕು."

ರಾಮಪಿಯರಿಯ ತಾಯಿ ಊಟ ಹಾಕಿಸಬೇಕು. ಮಹಂತರು ಜಾತಿಯಿಂದ ಬಿಡಿಸುತ್ತಿರುವುದರಿಂದ ಅವರೂ ಜಾತಿಯವರಿಗೆ ಒಂದು ಊಟ ಹಾಕಿಸಬೇಕು. ....ರಾಮಪಿಯರಿಯ ತಾಯಿ ಏನಂತಾಳೆ?....ಆಗಲಿ ಎನ್ನುತ್ತಾಳೆಯೇ ....ಹಾಗಾದರೆ ಸರಿ. ಪಂಚ ಪರಮೇಶ್ವರರೇ ಏನಂತೀರಿ?....ಹತ್ತು ಜನ ಹೇಳಿದ ಹಾಗೆ ತೀರ್ಮಾನ."

ಹತ್ತು ಜನರ ವಿಚಾರದಂತೆ ತೀರ್ಮಾನವಾಯಿತು. ರಾಮಪಿಯರಿಯ ದಾಸಿಯಾದಳು. ಜಾತಿಯ ಬಂಧನ ಸ್ವಲ್ಪ ಸಡಿಲವಾದರೂ ಎಲ್ಲಾ ಗಡಿಬಿಡಿಯಾಗಿಬಿಡುತ್ತವೆ. ಹೀಗೆ ಪಂಚಾಯಿತಿ ನಡೀತಿದ್ದರೆ? ಆಗ?....ಇಲ್ಲದಿದ್ದರೆ ಅನ್ಯಾಯವಾಗಿ ಒಂದು ಊಟ ತಪ್ಪಿಹೋಗುತ್ತಿತ್ತು.

ರಮಜಾನನ ಹೆಂಡತಿ ರಾಮಪಿಯರಿಯ ತಾಯಿಯನ್ನು ಅಂಗಳದಲ್ಲಿ ಕೂರಿಸಿಕೊಂಡು ಹೇಳಿದಳು: "ದೂಧ್ ಮಲಾಯಿ, ಬಾಳೆ ಹಣ್ಣಿನ ರಸಾಯನ ತಿಂದು ಕಣ್ಣಿಗೆ ಮತ್ತು ಬಂದಿರುವಾಗ ಈ ಚಿಕ್ಕಮ್ಮನ ಜ್ಞಾಪಕಾನೂ ಬರೋದಿಲ್ಲ ನಿಮಗೆಲ್ಲಾ. ಮಹಂತರಿಗೆ ಹೇಳಿಬಿಡು. ಒಂದು ಜೊತೆ ಸೀರೆ ಮಾತ್ರ ಕೊಟ್ಟರೆ ನಾನು ಸುಮ್ಮನಿರೋದಿಲ್ಲ. ಮೊಸರು, ಮಿಠಾಯಿ ಕೊಟ್ಟರೂ ಸಾಲದು.... ಒಂದು ಸರ ಕೊಡಿಸಲೇಬೇಕು.

ರಾಮಪಿಯರಿಯ ನಕ್ಕಳು. "ಅಂದಿಗೆ [illegible] ನಿನಗೆ ಬೇಕಾದ್ದೆಲ್ಲಾ ಕೊಡಿಸಬಹುದು. ಆದರೆ ಆ ಕೊತಾರಿನ್ ಒಬ್ಬಳು ಇದ್ದಾಳಲ್ಲ...."

ಹೊಸ ಇನ್ಸ್‌ಪೆಕ್ಟರ್ ಉರಿಕಾರುತ್ತಲೇ ಇರುತ್ತಾರೆ, ಗಾಳಿಯನ್ನೂ ನಿಂದಿಸುತ್ತಾರೆ.

"ಸುಡುಗಾಡು ಗಾಳಿ ರಾತ್ರಿಯೆಲ್ಲಾ ಬೀಸುತ್ತಾನೇ ಇತ್ತು. ನಿದ್ದೆಯೇ ಬರಲಿಲ್ಲ. ಸುಡುಗಾಡು ದಿನಕ್ಕೊಂದು ಪಾರ್ಟಿ ಹುಟ್ಟಿಕೊಳ್ಳುತ್ತಾ ಇರುತ್ತೆ.... ನಮ್ಮ ಪ್ರಾಣ ತಿನ್ನೋದಕ್ಕೆ."

ಇನ್ಸ್‌ಪೆಕ್ಟರ್ ಚಿಕ್ಕ ವಯಸ್ಸಿನವರು. ಈ ಜಿಲ್ಲೆಯ ಮೊದಲ ದರ್ಜೆಯ ಐದು ಇನ್ಸ್‌ಪೆಕ್ಟರುಗಳಲ್ಲಿ ತಾವೂ ಒಬ್ಬರೆಂದು ಹೇಳಿಕೊಳ್ಳುತ್ತಾರೆ. ಮಾತ ನಾಡುವಾಗಲೆಲ್ಲಾ ಒಂದು ವಿಚಾರ ಹೇಳುವುದನ್ನು ಖಂಡಿತ ಮರೆಯುವುದಿಲ್ಲ. "ನಾನು ಹೊರಗಡೆಯ ಮನುಷ್ಯನೇನೂ ಅಲ್ಲ. ಇದೇ ಜಿಲ್ಲೆಯವನು." ಒಳ್ಳೇ ಸಮಯದಲ್ಲಿ ಈ ಮಾತನ್ನು ಚೆನ್ನಾಗಿ ಉಪಯೋಗವನ್ನು ಮಾಡಿಕೊಳ್ಳುತ್ತಾರೆ ...."ನಾನು ಒಂದು ಕಾಸು ತಿಂದರೂ ಇದೇ ಜಿಲ್ಲೆಯಲ್ಲಿ ಇರುತ್ತೇನೆ." ಇನ್ಸ್‌ಪೆಕ್ಟರಿಗೆ ದೊಡ್ಡ ತಪ್ಪು ಅಭಿಪ್ರಾಯವೊಂದಿದೆ. ಹೊರಗಿನ ಮನುಷ್ಯರೆಲ್ಲಾ ಇಲ್ಲಿಗೆ ಬಂದು ಅವರ ಭಾಗದ ಸುಖ—ಭೋಗವನ್ನೆಲ್ಲಾ ಲೂಟಿ ಮಾಡುತ್ತಿದ್ದಾರೆ ಎಂದು....ಫಾರಬಿಸ್ ಗಂಜಾದ ಹೊಸ ಮುಖಂಡ ಛೋಟಬಾಬು ಜಿಲ್ಲಾ ಕಾಂಗ್ರೆಸ್ಸಿನ ಸೆಕ್ರೆಟರಿಯಾಗಿದ್ದಾನೆ....ಅವನು ಬರೆದಿದಾನೆ: "ಈ ಡಾಕ್ಟರ್ ಕಮ್ಯೂನಿಸ್ಟ್."

ಇನ್ಸ್‌ಪೆಕ್ಟರ್, ಆಸ್ಪತ್ರೆಯ ಸುತ್ತಲೂ ಹನ್ನೆರಡು ಜನ ಪೋಲಿಸಿನವರನ್ನು ನಿಲ್ಲಿಸಿದ್ದಾರೆ.

"ನಿಮ್ಮ ಮನೆ....ಎಲ್ಲಿದೆ?" ಇನ್ಸ್‌ಪೆಕ್ಟರ್ ಆಶ್ಚರ್ಯದಿಂದ ಕೇಳಿದರು.

"ವಿರಾಟ ನಗರ."

"ವಿರಾಟ ನಗರ ಇರೋದು ನೇಪಾಳದಲ್ಲಿ. ನೀವು ನೇಪಾಳಿಯರೇನು?"

"ಅಲ್ಲ."

"ಹಾಗಾದರೆ?"

"ಇದರಲ್ಲಿ ಅಂಥ ಆಶ್ಚರ್ಯ ಏನಿದೆ ಇನ್ಸ್‌ಪೆಕ್ಟರೇ? ನಾನು ಹೇಳಿದಷ್ಟನ್ನು ನೀವು ಬರೆದುಕೊಳ್ತಾ ಹೋಗಿ."

"ಹೇಳಿದ್ದನ್ನು ಬರೆದುಕೊಳ್ಳಬೇಕಂತೆ. ಭಲೆ, ಏನು ಬರೆದುಕೊಳ್ಳಲಿ?"

"ನಾನು ಕೊಡುವ ಉತ್ತರ ಬರೆದುಕೊಳ್ಳಿ."

"ರಾಮಪಿಯರಿಯನ್ನು ಲಕ್ಷ್ಮಿಯ ದಾಸಿಯನ್ನಾಗಿ ಮಾಡ್ತೀರಿ. ನಮಗೆಲ್ಲಾ ಅರ್ಥವಾಯ್ತು." ಇಲ್ಲ, ಇಲ್ಲ. ಹಾಗಾಗೋದಿಲ್ಲ. ರಾಮಪಿಯರಿಯ ಹೇಳಿದ ಹಾಗೆ ಮಾಡ್ತೀನಿ. ರಾಮದಾಸನ ಎರಡು ಕೈಗಳೂ ಜೋಡಿಸಿಕೊಂಡವು.

....."ರಾಮಪಿಯರಿಯ ಹೇಗೆ ಹೇಳ್ತಾಳೋ ಹಾಗೆ...." ರಾಮದಾಸ ಪ್ರತಿ ಮಾತಿಗೂ ಈಗ ಇದೇ ಮಾತನ್ನೇ ಹೇಳುವುದು: "ರಾಮಪಿಯರಿಯ ಹೇಳಿದ ಹಾಗೆ."

"ರಾಮಪಿಯರಿಯಾಗೆ ಏನು ಗೊತ್ತು?" ಲಕ್ಷ್ಮಿ ರೇಗಿದಳು. ಮಠದ ನಿಯಮ ನೀತಿಗಳನ್ನು ಅವಳಿಗೆ ಹೇಳಿಕೊಡೋದಕ್ಕೆ ಒಂದು ವರ್ಷ ಬೇಕಾಗುತ್ತೆ. ಕೈಯಲ್ಲಿರೋ ಬೆರಳುಗಳನ್ನೆಲ್ಲಾ ಸರಿಯಾಗಿ ಎಣಿಸೋದಕ್ಕೂ ಅವಳಿಗೆ ಬರೋದಿಲ್ಲ. ಅವಳ ಸಾಮಾನು ದುಡ್ಡಿನ ಲೆಕ್ಕ ಏನಿಡ್ತಾಳೆ? ಸದ್ಗುರು ಸದ್ಗುರು.

ರಾಮಪಿಯರಿಯ ದಾಸಿಯಾಗಿ ಮಠಕ್ಕೆ ಬಂದ ದಿನದಿಂದ ಲಕ್ಷ್ಮಿಯ ಮುಖ ಹಂಡೆಯಂತೆ ಊದಿಕೊಂಡಿದೆ....ಮಹಂತ ರಾಮದಾಸನಿಗೆ ಎಲ್ಲವೂ ಗೊತ್ತು. ರಾಮಪಿಯರಿಯಗೆ ಕೆಲಸದವರಿಗೆ ಭತ್ತ ಅಳೆದುಕೊಡುವಂತೆ ಮಹಂತ ಹೇಳಿದ್ದ.

"ಲೆಕ್ಕ ಗೊತ್ತಿಲ್ಲದಿದ್ದರೆ, ಹೇಳಿಕೊಡು. ಓದೋದು, ಬರೆಯೋದು ಒಂದೂ ಹೇಳಿಕೊಡೋದಿಲ್ಲ. ಸುಮ್ಮನೆ ಲೆಕ್ಚರ್ ಕೊಡುತ್ತೀಯ."

"ನಾನೇ ಲೆಕ್ಚರ್ ಕೊಡುವುದು? ಸದ್ಗುರು, ನನ್ನನ್ನು ನಿನ್ನ ಹತ್ತಿರ ಬೇಗ ಕರೆಸಿಕೋ ಪ್ರಭು-...ಹೂಂ....ಅವಳ ಶರೀರಕ್ಕೆ ಒಂದು ಮಣ ಸಾಬೂನು ಮೆತ್ತಿದರೆ ಬಹುಶಃ ಅವಳ ಮೈಯ್ಯಿಂದ ಈರುಳ್ಳಿ ಬೆಳ್ಳುಳ್ಳಿಯ ವಾಸನೆ ಕಡಮೆಯಾಗುತ್ತೇನೋ. ಮೊದಲು ಬೆಳಗ್ಗೆ ಬೇಗ ಏಳೋದಕ್ಕೆ ಹೇಳು. ಮುಖ ವನ್ನಂತೂ ಒಂದು ಬಾರಿಯೂ ತೊಳೆದುಕೊಳ್ಳೋದೇ ಇಲ್ಲ. ಬೀಡಿ ಬೇರೆ ಸೇದ್ತಾಳೆ, ಹೊರಗಡೆ ಹೋಗಿ ಬಂದರೆ ಸ್ನಾನವಂತೂ ಇಲ್ಲವೇ ಇಲ್ಲ. ಎಂಜಲು ಕೈಯ್ಯಲ್ಲೇ 'ಬೀಜಕ' ಮುಟ್ತಾಳೆ. ಇಂತಹವಳಿಗೆ ನಾನು ಏನು ಕಲಿಸಲಿ? ಏನು ಹೇಳ್ತಿದೀ? ಸೆರಗಿನಲ್ಲಿ ಬೀಗದ ಕೈ ಸಿಕ್ಕಿಸಿಕೊಳ್ಳದಿದ್ದರೆ ಏನೂ ಕಲಿಯುವುದು ಸಾಧ್ಯವಿಲ್ಲವೇ? ಹಾಗಾದರೆ ನಿನ್ನ ಉಗ್ರಾಣದ ಬೀಗದಕೈ ನೀನೇ ತೊಗೊ. ನನಗೇನೂ ಬೀಗದಕೈ ತೂಗಾಡಿಸ್ಕೊಂಡು ಓಡಾಡಬೇಕೂ ಅಂತ ಆಸೆಯಿಲ್ಲ, ಸದ್ಗುರುವಿಗೇ ಗೊತ್ತು."

....ಮಹಂತ ರಾಮದಾಸ ನೋಡಿದ, ಅದು ಬರೀ ಉಗ್ರಾಣದ ಬೀಗದ ಕೈ; ಪೆಟ್ಟಿಗೆಯ ಬೀಗದ ಕೈ ಎಲ್ಲಿ?.... "ಬೀಗದ ಕೈ ಯಾಕೆ ಎಸೀತಿದೀ?

ಮಾತು ಮಾತಿಗೂ ಸಿಟ್ಟು ಮಾಡಿಕೊಂಡರೆ ಹೇಗೆ ಆಗುತ್ತೆ?" ರಾಮದಾಸ ಗಂಭೀರವಾಗಿ ಹೇಳಿದ: "ನನ್ನ ಗುರು ಭ್ರಾತೃ ರಾಮಪಿಯರಿಯನ್ನು ಸರಿಯಾದ ದಾರಿಗೆ ತರೋದು ನಿನ್ನ ಕೆಲಸ."

"ದೇಹದ ಕೊಳೆಯನ್ನೂ ನಾನೇ ಚೊಕ್ಕಟಮಾಡಲೇನು? ಬಟ್ಟೇನೂ ನಾನೇ ಒಗೆಯಬೇಕೆ?....ಬಂದು ಹತ್ತು ದಿನ ಆಗಿಲ್ಲ, ಬೀಜಕ ಮತ್ತು ಮಹಂತ ರಿರುವ ಕೊಠಡಿಯ ಗೋಡೆಯೆಲ್ಲಾ ಉಗುಳಿನಿಂದ ಚಿತ್ತಾರವಾಗಿ ಹೋಗಿದೆ! ಅರ್ಧ ಸೇದಿದ ಬೀಡಿಗಳ ರಾಶಿಯೇ ಬಿದ್ದಿದೆ. ಅದನ್ನೆಲ್ಲಾನೂ ನಾನು ಚೊಕ್ಕಟ ಮಾಡಲೇನು? ಈಗ ಇದು ಮಠವಾಗಿ ಉಳಿದಿಲ್ಲ....ಹಂದಿಯ ಡೊಗರು... ."

"ನೀನು ರಾಮಪಿಯರಿಯ ದೇಹ ಶುಚಿ ಮಾಡು ಅಂತ ಹೇಳೋದಕ್ಕೆ ನಾನೇನು ಹುಚ್ಚನೇನು? ನೀನು ಬಾಲದೇವನ ಕತ್ತಿನ ಕೊಳೆಯನ್ನು ತೆಗಿ.... ಮಹಂತ ರಾಮದಾಸ ಯಾಕೆ ಸುಮ್ಮನಿರುತ್ತಾನೆ? ನಿಜವಾದ ಮಾತನ್ನು ಜನ ತಮ್ಮ ತಂದೆಯ ಮುಂದೆ ಹೇಳೋದಕ್ಕೂ ಅನುಮಾನಿಸಬಾರದು."

"ನೀನು ಬಾಲದೇವನ ಹೆಸರೆತ್ತಬೇಡ."

"ಯಾಕೆ ಎತ್ತಬಾರದು? ಮಠವನ್ನು ಹಂದಿಯ ಡೊಗರು ಮಾಡಿದವರು ಯಾರು?"

"ನಾನು ಮಾಡಿದೆನೇನು?"

"ಹೌದು, ನೀನೇ ಮಾಡಿದ್ದು. ನನ್ನ ಹೊಟ್ಟೆ ಉರೀತಿದೆ. ಹೆಚ್ಚು ಮಾತು ಬೆಳಸಬೇಡ."

ಹೊಟ್ಟೆ ಉರೀತಿದ್ರೆ ನನ್ನ ಕೊಂದು ಹಾಕಿ ತಣ್ಣಗೆ ಮಾಡಿಕೋ."

ಹೊಡೆದಾಟದ ಮಾತನ್ನು ಕೇಳಿದ ಮೇಲೂ ಬಾಲದೇವ ಸುಮ್ಮನಿರುವುದು ಹೇಗೆ? ಹಿಂಸಾವಾದದ ಭಯ ಇದೆಯಲ್ಲ "ಮಹಂತರೇ, ಕೊಠಾರಿನ್‌ಜೀ ಶಾಂತೀ! ಶಾಂತಿಯಿಂದ ಮಾತನಾಡಿ."

"ಆಹಾ, ಕೊಠಾರಿನ್‌ಜೀ, ಕೊಠಾರಿನ್" ರಾಮಪಿಯರಿಯಗೆ ಚಿಕ್ಕಂದಿನಿಂದ ಜಗಳವಾಡುವ ಅಭ್ಯಾಸ ಚೆನ್ನಾಗಿಯೇ ಇತ್ತು. ಬಾಗಿಲಿನ ಮರೆಯಿಂದ ಹೊರಗಡೆ ಬಂದು ಕೈ ತಿರುಗಿಸುತ್ತಾ ಅವಳು ಕೇಳಿದಳು. "ಪ್ರತಿದಿನ ಅರ್ಧ ರಾತ್ರಿಲೇ ಕೊಠಾರಿನ್‌ಜೀಯ ಕೊಠಡಿಯ ಬಾಗಿಲು ಯಾಕೆ ತೆಗೆಯುತ್ತೋ?...—

ಸಿಕ್ಕಿ ಸಿಕ್ಕಿದುದನ್ನೆಲ್ಲಾ ಮಾರಿಹಾಕಿಬಿಟ್ಟಿದಾಳೆ. . . . ಪೆಟ್ಟಿಗೆಯ ಬೀಗದಕೈ ಎಲ್ಲಿ? . . . . ಉಗ್ರಾಣದಲ್ಲೇ ಇದೆಯೇನೋ?''

ಲಕ್ಷ್ಮಿಯ ಮೂಗಿನ ಹೊಳ್ಳೆಗಳು ಕಂಪಿಸಲಾರಂಭಿಸಿದುವು. ಬೆತ್ತದ ಸಣ್ಣ ಕೋಲಿನಿಂದ ಯಾರೋ ಅವಳ ಬೆನ್ನಿನ ಮೇಲೆ ಥಳಿಸಿದಂತಾಯಿತು. . . . ಹನ್ನೆರಡು ಗಂಟೆ ರಾತ್ರಿಯಲ್ಲಿ ಕೊಠಡಿಯ ಬಾಗಿಲು ತೆಗೆಯುತ್ತೆ. . . . ಇದ್ದಬದ್ದ ಸಾಮಾನನ್ನೆಲ್ಲಾ ಮಾರಿಬಿಟ್ಟಿದಾಳೆ . . . . ಸದ್ಗುರು. ಯಾವ ಪಾಪಕ್ಕೆ ಈ ಶಿಕ್ಷೆಗಳನ್ನೆಲ್ಲಾ ಕೊಡ್ತಿದೀಯಪ್ಪಾ?''

'' ರಾಮದಾಸ . . . . ಈ ನಿಮ್ಮ ನರೀ ಜಾತಿ ಹೆಣ್ಣಿಗೆ ಬಾಯ್ಮುಚ್ಚು ಅಂತ ಹೇಳು. ಇಲ್ಲದಿದ್ದರೆ ಒಳ್ಳೇದಾಗೋದಿಲ್ಲ. ನಿಮಗೆ ಬೇಕಾಗಿರೋದು ಏನು? . . . . ಪೆಟ್ಟಿಗೆ ಬೀಗದಕೈ ತಾನೇ? ಪೆಟ್ಟಿಗೆಯ ಬೀಗದಕೈಗೋಸ್ಕರ ನಿಮ್ಮ ಎದೆ ಬಡಿದುಕೊಳ್ತುತ್ತಿದ್ದರೆ ತೆಗೆದುಕೊಳ್ಳಿ.'' ಲಕ್ಷ್ಮಿ ಪೆಟ್ಟಿಗೆಯ ಬೀಗದ ಕೈಯನ್ನು ಎಸೆದಳು.

ರಾಮಪಿಯರಿಯಾ ಈಗ ಇನ್ನೊಂದು ಮೆಟ್ಟಲೇರಿದಂತಾಯಿತು. ಅವಳು ಸದಾ ಬಡ ಬಡ ಮಾತನಾಡುತ್ತಲೇ ಇರುತ್ತಾಳೆ . . . . ವಿಪರೀತ ಮಾತು ರಾಮಪಿಯರಿಯದು: ಲವಂಗ–ಮೆಣಸಿನ ಹಾಗೆ ತೀಕ್ಷ್ಣ. ಅವಳ ಮಾತನ್ನು ಕೇಳಿದರೇ ದೇಹವೆಲ್ಲಾ ನಡುಗುತ್ತದೆ: ಮಾತಿನಲ್ಲೂ ಎಂಥ ಜ್ವಾಲೆ!

''ಒಬ್ಬರು ದುಡೀತಾ ಇದ್ದರೆ, ಇನ್ನೊಬ್ಬರು ಸುಮ್ಮನೆ ಕುಳಿತು ತಿಂತಿರೋದೂ: ದಿನವೆಲ್ಲಾ ಕುಳಿತು ಮಹಾತ್ಮಾಜಿ ಮಹಾತ್ಮಾಜಿ ಅಂತಿರ್ತಾನೆ ಈ ಬಾಲದೇವ. ಯಾವಾಗಲಾದರೂ ಒಂದು ಚೆಂಬು ನೀರನ್ನೂ ಒಂದು ಗಿಡಕ್ಕಾದರೂ ಹಾಕುತ್ತಾನೇನು? ಬೆಳಗ್ಗೆಯಿಂದ ಸಂಜೆಯವರೆಗೆ ಕನ್ನಡಿ ಬಾಚಣಿಗೆ ಮುಂದಿಟ್ಟು ಕೊಂಡು ಅಲಂಕಾರ ಮಾಡಿಕೊಳ್ಳುತ್ತಾ ಕುಳಿತಿರುತ್ತಾಳೆ, ಈ ಮಹಾರಾಣಿ! ಇಲ್ಲಿ ಯಾರಾದರೂ ಸೇವಕರನ್ನು ಇಟ್ಟಿದಾಳೇನೋ . . . . ನನ್ನ ದೇಹ ಕೊಳೆಯಾಗಿರಬಹುದು, ಮನಸ್ಸು ಕೊಳೆಯಾಗಿಲ್ಲ. ಮೇಲೆ ಸುವಾಸನೆ ಸೋಪು. ಸಂಪಿಗೆ–ಎಣ್ಣೆ ಹಾಕಿಕೊಂಡುಬಿಟ್ಟರೆ ಆಯಿತೇನು? ಒಳಗಡೆ? ರಾಮ, ರಾಮ. ರಾತ್ರಿಯೆಲ್ಲಾ ಮುಖಕ್ಕೆ ಮುಖ ಇಟ್ಟುಕೊಂಡು ಮಲಗಿರೋಳು, ಬೆಳಗ್ಗೆ ಎದ್ದು ಮುಖ ತೊಳೆದುಕೊಂಡುಬಿಟ್ಟರೆ ಶುದ್ಧ ಆಗಿಬಿಡುತ್ತಾಳೇನು? . . . . ಬೀದಿತಿರುಗುವವಳು, ನಾಚಿಕೆಗೆಟ್ಟವಳು'' ರಾಮಪಿಯರಿಯಾ ಒಂದೇ ಸಮನೆ ಬಡ ಬಡಿಸಿದಳು.

“ರಾಮುಪಿಯರೀ ಹಳಸಿದ ಮಾತು ಆಡಬೇಡ ತಲೆಯೆಲ್ಲಾ ನೋಯುತ್ತೆ” ರಾಮದಾಸ ಹೇಳಿದ: “ಇದೆಲ್ಲಾ ಗೊತ್ತಿದ್ದಿದ್ರೆ····”

ಲಕ್ಷ್ಮಿದಾಸಿ ಏನೂ ಮಾತನಾಡಲಿಲ್ಲ. ಸುಮ್ಮನೆ, ಕಣ್ಣು ಮಿಟುಕಿಸದಂತೆ ನಿಂಬೇಹಣ್ಣಿನ ಗಿಡವನ್ನೇ ನೋಡುತ್ತಿದ್ದಳು.

ರಾಮುಪಿಯರಿಯ ಒಂದೊಂದು ಮಾತೂ ಬಾಣದಂತೆ ಅವಳ ಮರ್ಮಸ್ಥಳವನ್ನು ಚುಚ್ಚುತ್ತಿವೆ····ಸುವಾಸನೆಯ ಸಾಬೂನು····ಸಂಪಿಗೆ ಎಣ್ಣೆ····ಮಹಂತ ಸೇವಾದಾಸ ಅವಳಿಗೆ ಇದೊಂದು ಕೆಟ್ಟ ಅಭ್ಯಾಸ ಮಾಡಿಸಿಬಿಟ್ಟಿದ್ದ. ಸಾಬೂನಿಲ್ಲದೆ ಅವಳಿಗೆ ಸ್ನಾನ ಮಾಡುವುದಕ್ಕೆ ಆಗುತ್ತಿರಲಿಲ್ಲ. ಸಾಬೂನಿಲ್ಲದೆ ಮನಸ್ಸು ನಿರ್ಮಲವಾಗುತ್ತಲೇ ಇರಲಿಲ್ಲ....ಇನ್ನು ಕೇಶರಂಜನ ತೈಲವನ್ನು ತಲೆ ನೋವಿದ್ದ ದಿನ ಮಾತ್ರ ಉಪಯೋಗಿಸುತ್ತಾಳೆ···– ಮಹಂತರು ಪೂರ್ಣಿಯಾದಿಂದ ಹಿಂತಿರುಗಿ ಬರುವಾಗ, ಝೋಲಿಯಲ್ಲಿ ಎಣ್ಣೆ, ಸಾಬೂನು, ಒಣದ್ರಾಕ್ಷಿ, ಅನೇಕ ವಿಧದ ಹಣ್ಣುಗಳು ಎಲ್ಲಾ ತರುತ್ತಿದ್ದರು. ಹೊಸ ಸಾಮಾನು ಯಾವುದು ಮಾರಾಟವಾಗುತ್ತಿದ್ದರೂ ಅವರು ತರದೇ ಇರುತ್ತಿರಲಿಲ್ಲ.

····ಮಹಂತ ಸೇವಾದಾಸರ ಜೊತೆ ಲಕ್ಷ್ಮಿ ಎಲ್ಲಾ ತೀರ್ಥ ಕ್ಷೇತ್ರಗಳನ್ನೂ ಸುತ್ತಿ ಬಂದಿದ್ದಳು. ಅದೆಲ್ಲಾ ಈ ನರಕಶಿಕ್ಷೆಯನ್ನು ಅನುಭವಿಸುವುದಕ್ಕೇನು? ಅವಳ ಅದೃಷ್ಟವೇ ಸರಿಯಿಲ್ಲ. ಇನ್ನು ಮಠದಲ್ಲಿರುವುದು ನರಕದಲ್ಲಿದ್ದಂತೆಯೇ ಸರಿ! ಛೀ ಛೀ, ಹತ್ತು ದಿನಗಳಾದುವು. ಪ್ರಸಾದ ಕೂಡಾ ಇಷ್ಟವಾಗುತ್ತಿಲ್ಲ. ನೀರಿನಲ್ಲಿ ಮೀನಿನ ವಾಸನೆ ಮೊದಲ ದಿನದಿಂದಲೇ ಆರಂಭವಾಯಿತು. ಈಗಂತೂ ನೀರನ್ನು ಕುಡಿದರೇ ವಾಕರಿಕೆ ಬರುತ್ತದೆ····ಮಠಕ್ಕೆ ಬರುವುದಕ್ಕೆ ಮುಂಚೆ ರಾಮುಪಿಯರಿಯಾ ತಾಯಿ ಬಲವಂತ ಮಾಡಿ ಮೀನು ತಿನ್ನಿಸಿದ್ದಳು. ಸದ್ಗುರು····ಏನಾದರೂ ಮಾಡು, ಪಥಭ್ರಷ್ಟಳನ್ನಾಗಿ ಮಾತ್ರ ಮಾಡಬೇಡ····ಅವಳು ನಾಳೆಯೇ ಮಠದಿಂದ ದೂರವಾಗುತ್ತಾಳೆ. ಮಹಂತರು ಅವಳ ಹೆಸರಿಗೆ ಮೂವತ್ತು ಬೀಘಾ ಜಮೀನು ಮತ್ತು ಕಲಮೀ ಮಾವಿನ ಹಣ್ಣಿನ ಒಂದು ತೋಟ ಬರೆದಿದ್ದಾರೆ. ಅದರ ಮೇಲೆ ಮಠಕ್ಕೆ ಯಾವ ಅಧಿಕಾರವೂ ಇಲ್ಲ····ಇನ್ನೆಲ್ಲಾ ಒಂದು ವಾರದ ಮಾತು. ಸದ್ಗುರುವಿನ ಕೃಪೆಯಿಂದ ಅನಂತರ ಎಲ್ಲಾ ಸರಿಹೋಗುತ್ತದೆ.

ಲಕ್ಷ್ಮಿಯ ಕಣ್ಣುಮುಂದೆ ಒಂದು ಸ್ವಪ್ನ ಪ್ರಪಂಚದ ಬಾಗಿಲೇ ತೆರೆದುಕೊಂಡಿತು....ಕಲಮೀ ಮಾವಿನ ಹಣ್ಣಿನ ತೋಟದಲ್ಲಿ, ಬೊಂಬಯಿ ಮಾವಿನ

ಮರದ ಹತ್ತಿರ ಎರಡು ಸುಂದರವಾದ ಗುಡಿಸಲುಗಳು····ಅವಳು ಚರಖಾ ತಿರುಗಿಸುತ್ತಿದ್ದಾಳೆ, ಬಾಲದೇವ ಬೀಜಕ ಓದುತ್ತಿದ್ದಾನೆ····

"ಬಾಲದೇವ ಇನ್ನು ಆಸನ ಬಿಟ್ಟು ಮೇಲೇಳಿ" ಬಾಲದೇವ ಲಕ್ಷ್ಮಿಯ ಮುಖವನ್ನೇ ಶೂನ್ಯ ದೃಷ್ಟಿಯಿಂದ ನೋಡಿದ. ಲಕ್ಷ್ಮಿಯ ಕಣ್ಣುಗಳೊಂದಿಗೆ ದೃಷ್ಟಿ ಬೆರೆತಾಗಲೆಲ್ಲಾ ಅವನ ಮುಖ ಇದೇ ರೀತಿ ಭಾವಶೂನ್ಯವಾಗುತ್ತದೆ.... "ಆಸನ ಬಿಡಬೇಕೇ?"

"ಹೌದು, ಆಸನ ಬಿಡಬೇಕು. ಇಲ್ಲಿ ಧರ್ಮ ಉಳಿಯುವುದಿಲ್ಲ." ಲಕ್ಷ್ಮಿಯ ಕಣ್ಣುಗಳಲ್ಲಿ ನೀರು ತುಂಬಿತು.

ಅ ರೇ ಜೋಗಿಯಾ ಕೆ ನಗ್ರ ಬಸೆ ಮತ ಕೋಯೀ
ಅಹೋ ಸಂತೋ—ಜೋರೇ ಬಸೆ ಸೋ····
ಜೋಗಿಯಾ ಹೋಯೀ
····ಡಿಮ್ ಡಿ ಮಿಕ್ ಡಿಮಿಕ್,
ಡಿಮ್ ಡಿಮಿಕ್ ಡಿಮಿಕ್:

(ನಾಸಾಗ್ರದಲ್ಲಿ ಬುದ್ಧಿಯನ್ನು ನೆಲೆಗೊಳಿಸಿದವನೇ ಯೋಗಿಯಾಗುತ್ತಾನೆ.)

## 7

ಕಮಲಾ ದಿನ ದಿನಕ್ಕೆ ಸುಂದರವಾಗಿ ಕಾಣುತ್ತಿದ್ದಳು.

ಗಂಟಲಿನ ಎರಡು ನರಗಳು ಮೇಲೆದ್ದು ಅವಳ ಮುಖವನ್ನು ಮತ್ತಷ್ಟು ಆಕರ್ಷಕವಾಗಿ ಮಾಡಿದ್ದವು ಕಣ್ಣುಗಳಲ್ಲಿ ಚಂಚಲತೆಯಿಲ್ಲ. ಒಂದು ರೀತಿಯ ಮದ ತುಂಬಿದೆ....ಒಮ್ಮೆಲೇ ನೋಡಿದರೆ ತಕ್ಷಣ ಅನ್ನಿಸುತ್ತದೆ, ಕಣ್ಣಿಗೆ ಕಾಡಿಗೆ ಬಿದ್ದಿದೆ ಎಂದು.

"ಅಮ್ಮಾ, ಈಗ ನಿನ್ನ ಡಾಕ್ಟರು ತಾವೇ ಜ್ಞಾನ ತಪ್ಪಿಬಿಡ್ತಾರೆ. ನೋಡಲ್ಲಿ, ಅರ್ಧ ಗಂಟೆಯಿಂದ ಒಂದೇ ಸಮನೆ ಗೋಡೇನೇ ನೋಡುತ್ತಿದ್ದಾರೆ."

ಕಮಲಾ ತನ್ನ ಕೊಠಡಿಯಲ್ಲಿ ಕೂದಲು ಬಾಚಿಕೊಳ್ಳುತ್ತಿದ್ದಳು. ತಾಯಿ ಗದರಿಸಿದಳು: "ಕಮಲಾ, ಡಾಕ್ಟರ್ ರೂಮಿನಲ್ಲೇ ಕುಳಿತಿದಾರೆ."

"ಕುಳಿತಿದ್ರೆ, ಏನೀಗ?" ಡಾಕ್ಟರನ್ನು ಇಷ್ಟು ಹಚ್ಚಿಕೊಳ್ಳುವುದು ಒಳ್ಳೆಯದಲ್ಲ ಎಂದು ಕಮಲೆಗೆ ಹೇಳಬೇಕೆಂದು ತಾಯಿ ಅನೇಕ ದಿನಗಳಿಂದ ಅಂದುಕೊಳ್ಳುತ್ತಿದ್ದಾಳೆ. ಆದರೆ, ಅವಳ ಮುಖ ನೋಡಿದ ಕೂಡಲೇ, ಆ ಮುಖದಲ್ಲಿ ಏನು ಕಂಡಿತೋ, ಅವಳು ಮೇಣದಂತೆ ಕರಗಿಹೋದಳು,....ಹಾಲಿನ ಕೆನೆಯಂತಹ ಮೈಬಣ್ಣ, ತುಂಬಿಕೊಂಡ ಬಾಹುಗಳು, ನೀಳವಾದ ಕೂದಲು, ಸುದೃಢವಾದ ಮಾಂಸಖಂಡಗಳು ಇನ್ನು ಆ ಕಣ್ಣುಗಳು?...ಆ ಕಣ್ಣುಗಳ ಕಾಂತಿ ಅದೇನು?....ತಾಯಿ ಕಂಪಿಸಿದಳು. ಅಯ್ಯೋ ಅಭಾಗಿನೀ, ಈ ಕಣ್ಣುಗಳಲ್ಲಿ ಇಷ್ಟೊಂದು ಹೊಳಪು ಯಾಕೇ? ಹತಭಾಗ್ಯಳೇ, ಸೆರಗನ್ನು ಮಲಿನಗೊಳಿಸಿಕೊಳ್ಳಬೇಡ ಮಗಳೇ, ನನ್ನಾಣೆ ಇಲ್ಲ, ಇಲ್ಲ...ಹಾಗಾಗುವುದು ಸಾಧ್ಯವೇ ಇಲ್ಲ. ತಾಯಿ ಕಮಲಾ ನಡಿ....ಅವಳು ಬೇಕಾದ್ದು ಮಾಡಿಕೊಳ್ಳಲಿ.... ತಾಯಿಯ ತುಟಿಗಳ ಮೇಲೆ ಸಹಜ ಮಂದಹಾಸ ಮರಳಿ ಬಂದಿತು. ಅವಳೆಂದಳು: "ಹೂಂ: ನಿನ್ನ ರೋಗ ಇಳಿಸಿ ಡಾಕ್ಟರ್ ತಮ್ಮ ಮೇಲೆ ಅದನ್ನು ತೆಗೆದುಕೊಂಡಿದಾರೆ ಅನ್ನಿಸುತ್ತಿದೆ."

ಡಾಕ್ಟರಿಗೆ ನಗು ತಡೆಯಲಾಗಲಿಲ್ಲ. ಗಟ್ಟಿಯಾಗಿ ನಕ್ಕರು, ಕಮಲಾ ಪರದೆಯಿಂದ ಇಣುಕಿ ನೋಡಿ ಸಂಜ್ಞೆಯ ಮೂಲಕ ತಿಳಿಸಿದಳು. "ಸುಮ್ಮನಿರಿ, ನಿಮಗೆ ಕಾಯಿಲೆಯಾಗಿದೆ, ಗೊತ್ತೇನು?"

ತಹಸೀಲ್ದಾರ ಸಾಹೇಬರ ಚಪ್ಪಲಿ ಚರ ಚರ ಶಬ್ದ ಮಾಡಿತು. ನಗುವನ್ನು ಕೇಳಿಯೂ ಅವರು ತಮ್ಮ ಕೆಲಸ ಮುಂದುವರಿಸುವುದು ಸಾಧ್ಯವೇನು?

ಡಾಕ್ಟರಿಗೆ ತಹಸೀಲ್ದಾರರ ಎರಡೂ ಸ್ವರೂಪಗಳ ದರ್ಶನವಾಗಿದೆ. ಅವರು ಮನೆ ವ್ಯವಹಾರ ಮೊಕದ್ದಮೆ, ಲೇವಾದೇವಿ, ಲಾಭ-ನಷ್ಟಗಳ ಮಾತನಾಡುವಾಗಲೇ ಅವರದೊಂದು ರೂಪ ಮನೆಯಲ್ಲಿ ಆರಾಮವಾಗಿ ಕುಳಿತು ಪ್ರಪಂಚದ ವಿಚಾರವನ್ನೆಲ್ಲಾ ಮಾತನಾಡುವಾಗ ಅಥವಾ ರಾಮಾಯಣ-ಮಹಾಭಾರತ, ದೇಶ-ವಿದೇಶಗಳ ಸಮಾಚಾರದಿಂದ ಹಿಡಿದು ಮನೆಯವರೆಗಿನ ಮಾತನ್ನು ಆಡುವಾಗ ಕಾಣುವುದು ಬೇರೆ. ತಹಸೀಲ್ದಾರರ ರೂಪ...ಹಾಸ್ಯಪ್ರಿಯ, ರಸಿಕ ಮತ್ತು ಕುಶಲ ಗೃಹಸ್ಥ, ಸಹೃದಯ ಮನುಷ್ಯ!

ಡಾಕ್ಟರಿಗೆ ಅವರ ಪ್ರಥಮ ರೂಪವನ್ನು ಕಂಡರೆ ತುಂಬಾ ತಿರಸ್ಕಾರ, ಆದರೆ ಎರಡನೆಯ ರೂಪದ ಮಾಯೆಯಲ್ಲಿ ಅವರು ಸಿಕ್ಕಿಕೊಂಡುಬಿಡುತ್ತಾರೆ.

ನಗುವಿನ ಸ್ವಾದವನ್ನೇ ಸವಿಯುತ್ತಾ ತಹಸೀಲ್ದಾರರು ಕೇಳಿದರು. "ಏನು ಸಮಾಚಾರ? ಕಮಲೆಯ ತಾಯಿ, ಏನು ಏನು ನಡೆಯಿತು? ಇವರಿಬ್ಬರೂ ಹೇಳುತ್ತಾ ಇಲ್ಲ."

"ಇನ್ನೇನು ಹೇಳಿ. ನಿಮ್ಮ ಹುಚ್ಚು ಮಗಳು ಬಾಯಿಗೆ ಬಂದಿದ್ದೇ ಆಡಿಬಿಡುತ್ತಾಳೆ. ನಿಮ್ಮ ಮಗಳು ಈಗತಾನೇ ಹೇಳಿದಳು ಡಾಕ್ಟರ್ ತಾವೇ ಜ್ಞಾನ ತಪ್ಪಿಬಿಡ್ತಾರೇ, ಅಂತ."

"ಸರಿ....ಆಮೇಲೆ?" ತಹಸೀಲ್ದಾರರು ನಗುವನ್ನು ತಡೆದು ಗಂಭೀರ ಮುಖ ಮಾಡಿಕೊಂಡು ಪ್ರಶ್ನಿಸಿದರು. "ಆಮೇಲೆ?"

ತಾಯಿ ನಗುವನ್ನು ತಡೆದುಕೊಂಡು ಹೇಳಿದಳು. "ನಿನ್ನ ರೋಗ ಇಳಿಸಿ, ಡಾಕ್ಟರು ತಮ್ಮ ಮೇಲೆ ತೆಗೆದುಕೊಂಡರೂ, ಅಂತ. ಡಾಕ್ಟರೂ ಕೇಳುತ್ತಿದ್ದರು. ..."

ತಹಸೀಲ್ದಾರರು ನಕ್ಕರು. ಅವರು ಹೀಗೆ ನಕ್ಕಾಗ ಕಮಲಾ 'ಅಪರೂಪದ ನಗು' ಎನ್ನುತ್ತಾಳೆ.

ತಹಸೀಲ್ದಾರರು ಗಮನಿಸಿದ್ದಾರೆ. ಕಮಲೆಯ ಸ್ವಭಾವದಲ್ಲಿ ತುಂಬಾ ಪರಿವರ್ತನೆ ಆಗಿದೆ. ಇಂತಹ ಮಗಳನ್ನಿಟ್ಟುಕೊಂಡು ತಂದೆ ಸುಮ್ಮನೆ ಕುಳಿತಿರಬೇಕಾಗಿದೆ. ಅಸಹಾಯಕತೆ. "ಭಗವಂತ ಶಂಕರ, ಕಮಲೆಯ ಮೇಲೆ ಕೃಪಾದೃಷ್ಟಿ ಬೀರು."

ಡಾಕ್ಟರು, ತಹಸೀಲ್ದಾರರ ನಗು ಮಂಕಾಗುತ್ತಿರುವುದನ್ನು ಗಮನವಿಟ್ಟು ನೋಡಿದರು. ಬಹುಶಃ ಇದು ಅವರ ಮೂರನೆಯ ರೂಪ! ಅದನ್ನು ನೋಡಿದರೆ ಕಲ್ಲೂ ಕರಗಿಬಿಡಬೇಕು, ಎಷ್ಟು ಕರುಣಾಜನಕ ಮುಖ!

"ಡಾಕ್ಟರ್" ತಾಯಿ ಎರಡು ತಟ್ಟೆಗಳಲ್ಲಿ ತಿಂಡಿ ತಂದುಕೊಡುತ್ತಾ ಹೇಳಿದಳು: "ಕಮಲಾ ರೇಡಿಯೋ ಅಕ್ಕನಿಂದ, ಬಟಾಣಿ ಪಲಾವ್ ಮಾಡೋದನ್ನು ಕಲಿತಿದಾಳೆ."

"ಅಂದರೆ ಆಲ್ ಇಂಡಿಯಾ ರೇಡಿಯೋದ ವಿಚಾರ ಅನ್ನು. ಪ್ರಾರಂಭ ಮಾಡಿ ಡಾಕ್ಟರ್, ನೋಡೋಣ, ಕಮಲ ಬಟಾಣಿಯಿಂದ ಎಷ್ಟು ಚೆನ್ನಾಗಿ ಬಟಾಣಿ ಪಲಾವ್ ಮಾಡಿದಾಳೋ."

"ಏನಾದರಾಗಲೀ ಕಲ್ಪನೆಯ ಪಲಾವ್‌ಗಿಂತ ವಾಸಿ." ಡಾಕ್ಟರ್ ನಗುತ್ತಾ ಕಮಲೆಯ ಕಡೆ ನೋಡಿದರು.

ನಗು–ವಿನೋದಗಳ ಮಾಯಾಜಾಲದಲ್ಲಿ ಸಿಕ್ಕಿಕೊಂಡು ಡಾಕ್ಟರ್, ತಮ್ಮ ಕರ್ತವ್ಯವನ್ನು ಉದಾಸೀನ ಮಾಡುವಂತಿಲ್ಲ. ಒಂದೊಂದು ಸಲ ಅವರು ಯೋಚಿಸುತ್ತಾರೆ....ತಾವು ಮಾಡುತ್ತಿರುವುದರ ವಿರುದ್ಧ, ಹೃದಯದ ಯಾವುದೋ ಮೂಲೆಯಲ್ಲಿ ಅಪಸ್ವರವೊಂದು ಕೇಳಿಬರುತ್ತಿದೆಯಲ್ಲವೇ?....ಇಲ್ಲ, ತಾವು ಮಾಡುತ್ತಿರುವುದು—ಅದು ಸರಿಯೋ ತಪ್ಪೋ,—ಅದವರಿಗೆ ಹಿತವಾಗಿ ತೋರುತ್ತಿದೆ.

ಪ್ಯಾರು ಅನೇಕ ಸಲ ಹೇಳಿದ್ದಾನೆ. ಅಂಗಳದ ಕಡೆ ಇರುವ ಕಿಟಕಿಗೂ ಪರದೆ ಹಾಕಬೇಕೂ ಎಂದು...ನಗ್ನವಾಗಿ ಕಾಣುತ್ತದೆ ಆ ಕಿಟಕಿ...ಅದಕ್ಕೇ ಪ್ಯಾರುವನ್ನು ಕಂಡರೆ ಡಾಕ್ಟರಿಗೆ ತುಂಬಾ ಪ್ರೀತಿ...ಈಗ ಕಮಲಾ ಪ್ರತಿದಿನ ಡಾಕ್ಟರಲ್ಲಿಗೆ ಬರುತ್ತಾಳೆ.

"ಚಿಕ್ಕಮ್ಮ ಹೇಳಿದಳು.....'ನೀನು ತಪ್ಪು ಮಾಡ್ತಿದೀ, ನೀವಿಬ್ಬರೂ ತಪ್ಪು ಮಾಡ್ತಿದೀರೀ' ಅಂತ....ಮುಂದೆ ಏನಾಗುತ್ತೆ ಅಂತ ನೀವೇನಾದರೂ ಯೋಚಿಸಿದೀರಾ?" ಅಂತ ಅವಳು ಕೇಳಿದಳು. "ಮುಂದೆ ಏನು ಆಗುತ್ತೆ ಡಾಕ್ಟರ್? ಹೇಳಿ ಡಾಕ್ಟರ್."

ಮಾವಿನ ತಿರುಳಿನಂತಿರುವ ಕಣ್ಣುಗಳಿಂದ ಮಧು ಸುರಿಸುತ್ತಾ ಕಮಲ ಕೇಳಿದಳು: "ಹೇಳಿ ಡಾಕ್ಟರ್, ಏನಾಗುತ್ತೆ?"

"ಏನಾಗುತ್ತೆ? ಏನೇ ಆದರೂ ಕೆಟ್ಟದೇನೂ ಆಗೋಲ್ಲ."

"ನೀವು ಸದಾ ನನ್ನ ಹತ್ತಿರ ಇರೋದಕ್ಕೆ ಆಗೋದಿಲ್ವಾ?"

"ಅದೇ, ಮತ್ತೆ ಹುಚ್ಚುತನ."

"ಡಾಕ್ಟರ್, ನೀವು 'ಜಿನ' ಅಲ್ಲಾ ತಾನೇ?"

"ಜಿನ? ಜಿನ ಅಂದರೆ?"

"ಜಿನ ಅಂದರೆ ಒಬ್ಬ ಮಹಾತ್ಮ. ಅವನು ಒಂದೊಂದು ಸಲ ಮನ ಮೋಹಿಸುವ ರೂಪ ಧರಿಸಿ ಕನ್ಯೆಯರನ್ನು ಮತ್ತು ವಿಧವೆಯರನ್ನು ಮರುಳು ಮಾಡುತ್ತಾನಂತೆ. ಅತಿ ಬಡವರನ್ನು ಶ್ರೀಮಂತರನ್ನಾಗಿ ಮಾಡುವುದು, ಅವನಿಗೆ

ಚಿಟಕೆ ಹೊಡೆದಷ್ಟು ಸುಲಭ. ಯಾರ ಮೇಲಾದರೂ ಸಿಟ್ಟುಬಂದರೆ, ನಾಶಮಾಡಿಬಿಡುತ್ತಾನೆ. ಯಾರ ಮೇಲಾದರೂ ದೃಷ್ಟಿ ಬಿದ್ದರೆ ನುಂಗಿಹಾಕಿಬಿಡ್ತಾನೆ.''

ಕಮಲೆಯ ಕೊರಳಿನ ನರಗಳೆರಡೂ ಬೇಗ ಬೇಗ ಮೇಲೆ ಕೆಳಗೆ ಚಲಿಸುತ್ತಿವೆ ....ಅವಳು ಹೆದರಿಲ್ಲ ತಾನೇ?....ಅವಳು ಡಾಕ್ಟರನ್ನು ಅಪ್ಪಿಕೊಳ್ಳುತ್ತಾಳೆ.

"ಯಾಕೆ ಸುಮ್ಮ ಸುಮ್ಮನೆ ಹೆದರ್‍ತೀ? ಕೆಲಸಕ್ಕೆ ಬಾರದ ವಿಚಾರಗಳನ್ನೆಲ್ಲಾ ತಲೆಯಲ್ಲಿ ತುಂಬಿಸಿಕೊಂಡಿದೀ.'' "ಇಲ್ಲ, ನನಗೇನೂ ಭಯವಿಲ್ಲ. ನೀವು ಜಿನನೇ ಆಗಿದ್ರೂ, ನಾನು ನಿಮ್ಮನ್ನು ಜಯಿಸಿದೀನಿ.''

"ಹೂಂ, ಅಷ್ಟೊಂದು ನಂಬಿಕೆಯೇನು?'' ಡಾಕ್ಟರ್ ಕಮಲೆಯ ಕಣ್ಣುಗಳಲ್ಲಿ ತುಂಬಿರುವ ನಂಬಿಕೆಯನ್ನು ಸ್ಪಷ್ಟವಾಗಿ ಕಂಡರು....ಕಮಲಾ ನಿರೋಗಿಯಾಗಿದ್ದಾಳೆ; ಸ್ವಸ್ಥವಾಗಿದ್ದಾಳೆ.''

"ಅವತ್ತು ತೋಳಿಗೆ ನೀನು ತೊಟ್ಟುಕೊಂಡು ಬಂದಿದ್ದೆಯಲ್ಲಾ ಆ ಆಭರಣ ಯಾವುದು? ದಿನಾಗಲೂ ಯಾಕೆ ಹಾಕಿಕೊಳ್ಳೋದಿಲ್ಲ.''

"ತೋಳು ಬಂದಿ....ಯಾಕೆ ಗೊಲ್ಲರೋಳ ಹಾಗೆ ಕಾಣಿಸುತ್ತಿದ್ದೆನಾ? ಗೋಕುಲದ ಗೊಲ್ಲತಿ!'' ಕಮಲಾ ಕಿಲಕಿಲನೆ ನಕ್ಕಳು.

ಇದನ್ನೇ ರಾಸಲೀಲೆ ಅನ್ನುವುದು!..ನೋಡಿದಿರೇನು? ಮಧ್ಯ ರಾತ್ರಿಯ ಹೊತ್ತಿಗೆ ಡಾಕ್ಟರ ನೌಕರ ಲೈಟನ್ನು ಭುಕ್ ಭುಕ್ ಅಂತ ಉರಿಸುತ್ತಾ ತಹಸೀಲ್ದಾರರ ಮಗಳನ್ನು ಮನೆಗೆ ಬಿಟ್ಟು ಬರುತ್ತಾನೆ....ಮದುವೆಯನ್ನಾದರೂ ಮಾಡಿಬಿಡಬಾರದೇ? ಒಳ್ಳೇ ಸಾಹೇಬ್—ಮೇಮ್ ಡಾಕ್ಟರ್‌ರಾದರೂ ಎಂಥ ಮನುಷ್ಯರು!

"ಡಾಕ್ಟರ್ ಎಂಥ ಮನುಷ್ಯರು?'' ಕಟಿಹಾರ ಪೋಲೀಸ್ ಸ್ಟೇಷನ್ನಿನ ಹೊಸ ಇನ್ಸ್‌ಪೆಕ್ಟರ್ ಆಗಮೂ ಚೌಕೀದಾರನನ್ನು ಪ್ರಶ್ನಿಸಿದ.

"ಹುಜೂರ್, ಒಳ್ಳೇ ಮನುಷ್ಯರು, ಆದರೆ....'' "ಆದರೆ ಏನು? ಯಾವಾಗಲೂ ಅರ್ಧ ಮಾತಿಗೆ ನಿಲ್ಲಿಸಿಬಿಡುತ್ತಾನೆ....ಅರ್ಧ ಮಾತು ಹೊಟ್ಟೇಲಿ ಉಳಿದುಬಿಡುತ್ತೆ. ಮೂರ್ಖ, ನನ್ನ ಸರಿಯಾಗಿ ಅರ್ಥಮಾಡಿಕೋ. ನಾನು ಬೇರೆ ಜಿಲ್ಲೆಯವನಲ್ಲ. ನನ್ನ ಮನೆ ಇರೋದು ಇದೇ ಜಿಲ್ಲೆಯಲ್ಲಿ ಗೊತ್ತು ತಾನೇ? ನನ್ನ ಹತ್ತಿರ ಯಾವ ಮಾತೂ ಮುಚ್ಚಿಡೋದಕ್ಕೆ ಪ್ರಯತ್ನಿಸಬೇಡ. ಆದರೆ.... ಏನು?''

ಹೊಸ ಇನ್ಸ್‌ಪೆಕ್ಟರ್ ಉರಿಕಾರುತ್ತಲೇ ಇರುತ್ತಾರೆ, ಗಾಳಿಯನ್ನೂ ನಿಂದಿಸುತ್ತಾರೆ.

"ಸುಡುಗಾಡು ಗಾಳಿ ರಾತ್ರಿಯೆಲ್ಲಾ ಬೀಸುತ್ತಾನೇ ಇತ್ತು. ನಿದ್ದೆಯೇ ಬರಲಿಲ್ಲ. ಸುಡುಗಾಡು ದಿನಕ್ಕೊಂದು ಪಾರ್ಟಿ ಹುಟ್ಟಿಕೊಳ್ಳುತ್ತಾ ಇರುತ್ತೆ.... ನಮ್ಮ ಪ್ರಾಣ ತಿನ್ನೋದಕ್ಕೆ."

ಇನ್ಸ್‌ಪೆಕ್ಟರ್ ಚಿಕ್ಕ ವಯಸ್ಸಿನವರು. ಈ ಜಿಲ್ಲೆಯ ಮೊದಲ ದರ್ಜೆಯ ಐದು ಇನ್ಸ್‌ಪೆಕ್ಟರುಗಳಲ್ಲಿ ತಾವೂ ಒಬ್ಬರೆಂದು ಹೇಳಿಕೊಳ್ಳುತ್ತಾರೆ. ಮಾತನಾಡುವಾಗಲೆಲ್ಲಾ ಒಂದು ವಿಚಾರ ಹೇಳುವುದನ್ನು ಖಂಡಿತ ಮರೆಯುವುದಿಲ್ಲ. "ನಾನು ಹೊರಗಡೆಯ ಮನುಷ್ಯನೇನೂ ಅಲ್ಲ. ಇದೇ ಜಿಲ್ಲೆಯವನು." ಒಳ್ಳೇ ಸಮಯದಲ್ಲಿ ಈ ಮಾತನ್ನು ಚೆನ್ನಾಗಿ ಉಪಯೋಗವನ್ನು ಮಾಡಿಕೊಳ್ಳುತ್ತಾರೆ ...."ನಾನು ಒಂದು ಕಾಸು ತಿಂದರೂ ಇದೇ ಜಿಲ್ಲೆಯಲ್ಲಿ ಇರುತ್ತೇನೆ." ಇನ್ಸ್‌ಪೆಕ್ಟರಿಗೆ ದೊಡ್ಡ ತಪ್ಪು ಅಭಿಪ್ರಾಯವೊಂದಿದೆ. ಹೊರಗಿನ ಮನುಷ್ಯರೆಲ್ಲಾ ಇಲ್ಲಿಗೆ ಬಂದು ಅವರ ಭಾಗದ ಸುಖ--ಭೋಗವನ್ನೆಲ್ಲಾ ಲೂಟ ಮಾಡುತ್ತಿದ್ದಾರೆ ಎಂದು....ಫಾರಬಿಸ್ ಗಂಜಾದ ಹೊಸ ಮುಖಂಡ ಛೋಟೆಬಾಬು ಜಿಲ್ಲಾ ಕಾಂಗ್ರೆಸ್ಸಿನ ಸೆಕ್ರೆಟರಿಯಾಗಿದ್ದಾನೆ....ಅವನು ಬರೆದಿದಾನೆ: "ಈ ಡಾಕ್ಟರ್ ಕಮ್ಯೂನಿಸ್ಟ್."

ಇನ್ಸ್‌ಪೆಕ್ಟರ್, ಆಸ್ಪತ್ರೆಯ ಸುತ್ತಲೂ ಹನ್ನೆರಡು ಜನ ಪೋಲಿಸಿನವರನ್ನು ನಿಲ್ಲಿಸಿದ್ದಾರೆ.

"ನಿಮ್ಮ ಮನೆ....ಎಲ್ಲಿದೆ?" ಇನ್ಸ್‌ಪೆಕ್ಟರ್ ಆಶ್ಚರ್ಯದಿಂದ ಕೇಳಿದರು.

"ವಿರಾಟ ನಗರ."

"ವಿರಾಟ ನಗರ ಇರೋದು ನೇಪಾಳದಲ್ಲಿ. ನೀವು ನೇಪಾಳಿಯರೇನು?"

"ಅಲ್ಲ."

"ಹಾಗಾದರೆ?"

"ಇದರಲ್ಲಿ ಅಂಥ ಆಶ್ಚರ್ಯ ಏನಿದೆ ಇನ್ಸ್‌ಪೆಕ್ಟರೇ? ನಾನು ಹೇಳಿದಷ್ಟನ್ನು ನೀವು ಬರೆದುಕೊಳ್ತಾ ಹೋಗಿ."

"ಹೇಳಿದ್ದನ್ನು ಬರೆದುಕೊಳ್ಳಬೇಕಂತೆ. ಭಲೆ, ಏನು ಬರೆದುಕೊಳ್ಳಲಿ?"

"ನಾನು ಕೊಡುವ ಉತ್ತರ ಬರೆದುಕೊಳ್ಳಿ."

ತಹಸೀಲ್ದಾರರ ಶರೀರವೆಲ್ಲಾ ಬೆವರಿನಿಂದ ತೋಯ್ದುಹೋಗಿತ್ತು. ಪ್ಯಾರು ವಿನ ಮುಖ ಒಣಗಿಹೋಗಿತ್ತು. ಏನು ಸಮಾಚಾರ ಏನು ಕಥೆ, ಒಂದೂ ಅರ್ಥ ವಾಗ್ತಿಲ್ಲ.....ಚಿಕ್ಕಮ್ಮನ ಎದೆ ಬಡಿದುಕೊಳ್ಳುತ್ತಿತ್ತು....ಆದರೆ ಆಶ್ಚರ್ಯ! ಕಮಲೆಯ ಮೇಲೆ ಇದ್ಯಾವುದರ ಪ್ರತಿಕ್ರಿಯೆಯೂ ಆಗಲೇ ಇಲ್ಲ. ಡಾಕ್ಟರಿಗೆ ಏನೂ ಆಗುವುದಿಲ್ಲ. ಯಾವ ವಿಶೇಷವೂ ಇಲ್ಲ. ಅವಳಿಗಾದರೋ ದೃಢವಾದ ವಿಶ್ವಾಸ.

ಇನ್ಸ್‌ಪೆಕ್ಟರ್ ಎರಡೇ ಮಾತುಗಳಲ್ಲಿ ಡಾಕ್ಟರನ್ನು ಅರ್ಥ ಮಾಡಿಕೊಂಡರು. 'ಈ ಡಾಕ್ಟರ್ ತುಂಬಾ ವಿಚಿತ್ರ ಸ್ವಭಾವದ ಮನುಷ್ಯ."

ಸುಮರಿತದಾಸನನ್ನು ಇಂದು ಹಳ್ಳಿಯ ಒಬ್ಬೊಬ್ಬ ಮನುಷ್ಯನೂ ಪ್ರಶ್ನಿಸ ಲಾರಂಭಿಸಿದ್ದ: "ಸುಮರಿತದಾಸ, ಇನ್ಸ್‌ಪೆಕ್ಟರ್, ಡಾಕ್ಟರನ್ನ ಹಿಡಿದುಕೊಂಡು ಹೋಗೋದಕ್ಕೆ ಯಾಕೆ ಬಂದಿದಾರೆ? ಡಾಕ್ಟರ್ ಏನು ಮಾಡಿದಾರೆ?....ಲಂಚ ತೆಗೆದುಕೊಂಡ್ರು ಅಂತ ಯಾರಾದರೂ ದೂರು ಕೊಟ್ಟಿದ್ದರೇನು?"

"ನೋಡಣ್ಣಾ, ಈ ಪ್ರಪಂಚ ತುಂಬಾ ಕೆಟ್ಟದು. ಯಾರನ್ನೂ ನಂಬೋ ಹಾಗಿಲ್ಲ.....'ರಮೈನ್'ನಲ್ಲಿ ಹೇಳಿಲ್ಲವೇ?....'ಬಿಸ್ ರಸ ಭರೆ ಕನಕ ಘಟ್ ಜೈಸೆ' (ವಿಷ ತುಂಬಿದ ಚಿನ್ನದ ಗಡಿಗೆಯಂತೆ) ಈ ಡಾಕ್ಟರ್ ಜರ್ಮನರ ಕಡೆ ಮನುಷ್ಯನಂತೆ....ಇಲ್ಲಿನ ಜನರಿಗೆಲ್ಲಾ ಸೂಜಿ ಚುಚ್ಚಿ ಅವರನ್ನು ದುರ್ಬಲರನ್ನಾಗಿ ಮಾಡೋದೇ ಇವರ ಕೆಲಸ. ಬಾವಿಲೆಲ್ಲಾ ಔಷಧಿ ಹಾಕಿ ಕಾಲರಾ ಹಬ್ಬಿಸಿದಾರೆ. ಜರ್ಮನರ ಕಡೆಯ ಒಂದು ಪಾರ್ಟಿ ಇಲ್ಲಿದೆ, ಕಮ್ಯುನಿಸ್ಟ್....ಕಮ್ಯುನಿಸ್ಟ್ ಅಂತ ಕೇಳಿದೀರೇನು? ಡಾಕ್ಟರ್ ಆ ಪಾರ್ಟಿಯ ಮನುಷ್ಯರು."

ಈ ಇನ್ಸ್‌ಪೆಕ್ಟರ್ ವಿಚಾರಣೆಯನ್ನು ನೋಡಿ ಡಾಕ್ಟರಿಗೆ ವಿಚಿತ್ರವೆನಿಸಿತು. ಮಾತು ಮಾತಿಗೆ 'ನಾನು ಇದೇ ಜಿಲ್ಲೆಯವನು' ಎನ್ನುವ ಪಲ್ಲವಿ ಬೇರೆ. ಮೂರ್ಖರ ಹಾಗೆ ಪ್ರಶ್ನೆಗಳನ್ನು ಕೇಳೋದು ಬೇರೆ. "ನಿಮಗೆ....ತುಂಬಾ ಜನ ಹುಡುಗೀರ ಜೊತೆ ಸಂಬಂಧ ಇದೆಯೇನು?"

"ಇದೆ. ಕಡಿಮೆಯೆಂದರೆ ಮುನ್ನೂರು ನಾನೂರು ಜನ ಹುಡುಗಿಯರ ಜೊತೆ ನನಗೆ ಸಂಬಂಧ ಇತ್ತು."

ಡಾಕ್ಟರ್ ನಕ್ಕರು.

"ನಾನೂರು ಜನ!" ಇನ್ಸ್‌ಪೆಕ್ಟರಿಗೆ ಆಶ್ಚರ್ಯವಾದರೆ, ಅವರ ಕಣ್ಣು ಗಳು ಗೂಬೆಯ ಕಣ್ಣುಗಳಂತೆ ಗುಂಡಗೆ ಕಾಣುತ್ತಿದ್ದವು. "ನಾಲ್ಕು.... ನಾಲ್ಕು ನೂರು ಜನ? ಅಬ್ಬಾ!.....

"ಇಷ್ಟೊಂದು ಜನ ಹುಡುಗೀರು ನಿಮಗೆ ಎಲ್ಲಿ ಸಿಕ್ಕಿದರು?" "ಮೆಡಿಕಲ್ ಕಾಲೇಜಿನ ಆಸ್ಪತ್ರೆಯಲ್ಲಿ." "ಓ····ನಾನು ಕೇಳಿದ್ದು ಅದನ್ನಲ್ಲ. ಒಳ್ಳೆಯ ಮನೆತನದ ಹುಡುಗಿಯರು····"

"ಯಾಕೆ? ಮೆಡಿಕಲ್ ಕಾಲೇಜಿನ ಆಸ್ಪತ್ರೆಯಲ್ಲಿ ಒಳ್ಳೇ ಮನೆತನದ ಹುಡುಗೀರು ಇರುವುದಿಲ್ಲವೆ?" "ಅಂದರೆ····ಅಂದರೆ, ನನ್ನ ಮಾತಿನ ಅರ್ಥ ····ಹೂಂ..··ಹೋಗಲಿ ಬಿಡಿ. ಕಮ್ಯುನಿಸ್ಟ ಪಾರ್ಟಿಯವರ ಜೊತೆ ನಿಮ್ಮ ಸಂಬಂಧ ಹೇಗಿದೆ?"

"ನನ್ನ ಸ್ನೇಹಿತರು ಬಹಳ ಜನ ಕಮ್ಯುನಿಸ್ಟರು."

"ನೀವು ಸಂಥಾಲರನ್ನು ಎತ್ತಿಕಟ್ಟಿದಿರಂತೆ····ಭೂಮಿಯ ಮೇಲೆ ಆಕ್ರಮಣ ಮಾಡೀ ಅಂತ ಹೇಳಿಕೊಟ್ಟರಂತೆ. ನಿಜವೇ? ಸಂಥಾಲರು ಹಾಗೇ ಹೇಳಿಕೆ ಕೊಟ್ಟಿದಾರೆ."

"ಸಂಥಾಲರು ಆಗಾಗ ನನ್ನ ಹತ್ತಿರ ಕಾಗದ ಪತ್ರಗಳನ್ನು ಓದಿಸೋದಕ್ಕೆ ತರುತ್ತಿದ್ದರು....ಜಡ್ಜಮೆಂಟ್ ಇತ್ಯಾದಿ····"

"ನಿಮ್ಮ ಹತ್ತಿರವಿರುವ ಪುಸ್ತಕಗಳನ್ನು ತೋರಿಸ್ತೀರೇನು?" ಇನ್ಸ್‌ಪೆಕ್ಟರ್ ಮೇಲೆದ್ದು ಪುಸ್ತಕಗಳ ಬೀರುವಿನ ಹತ್ತಿರ ಬಂದರು.

····ಸುಡುಗಾಡು, ಎಲ್ಲಾ ಡಾಕ್ಟರೀ ಪುಸ್ತಕಗಳೇ····ಚಿಲ್ಡ್ರನ್ ಆಫ್ ಯೂ.ಎಸ್.ಎಸ್.ಆರ್.—ಕೆಂಪು ರಷ್ಯ, ಲೇಖಕ: ಬೇನೀಪುರಿ.... 'ಕೆಂಪು ಚೀಣ' ಲೇಖಕ: ಬೇನೀಪುರಿ.

"ಇವೆಲ್ಲಾ ರಷ್ಯಾದ ಪುಸ್ತಕಗಳು."

ರಷ್ಯಾದ ಪುಸ್ತಕಗಳಲ್ಲ, ರಷ್ಯಾದ ಬಗ್ಗೆ ಬರೆದ ಪುಸ್ತಕಗಳು."

"ಎರಡೂ ಒಂದೇ." ಇನ್ಸ್‌ಪೆಕ್ಟರ್ ಪುಸ್ತಕಗಳನ್ನು ತೆರೆದು ತಿರುಗಿಸಿದರು —ಪುಸ್ತಕಗಳ ಪುಟಗಳಲ್ಲೇ ಬಾಂಬ್ ಬಚ್ಚಿಟ್ಟಿದ್ದಾರೇನೋ ಎನ್ನುವಂತೆ ಎಚ್ಚರಿಕೆ ಯಿಂದ ಪರೀಕ್ಷಿಸಿದರು....ಡಾಕ್ಟರ್ ಸಾಹೇಬರನ್ನು ಸೆರೆಹಿಡಿದರು.... ಒರಟಾದ ಮಾತು. ಸಂಥಾಲರನ್ನು ಜಗಳ ಮಾಡುವಂತೆ ಪ್ರೇರೇಪಿಸಿದವರೂ

ಡಾಕ್ಟರೇ. ಹಳ್ಳಿಯಲ್ಲಿ ಕಾಲರಾ ಹಬ್ಬಿಸಿದವರೂ ಅವರೇ····ಹಳ್ಳಿಯ ಜನರನ್ನು ದುರ್ಬಲರನ್ನಾಗಿ ಮಾಡಿದರು····ಹೂಂ, ಕಾಲರಾದ ಇಂಜಕ್ಷನ್ ತೆಗೆದುಕೊಂಡ ಮೇಲೆ····ಈಗಲೂ ಕೆಲಸ ಮಾಡುವಾಗ ಕಣ್ಣುಗಳಿಗೆ ಕತ್ತಲೆ ಕಟ್ಟುತ್ತೆ!····ನೋಡುವುದಕ್ಕೆ ಏನೂ ತಿಳಿಯದವರ ಹಾಗೆ ಎಷ್ಟು ಮುಗ್ಧರ ಹಾಗೆ ಕಾಣುತ್ತಾರೆ! ದೇವತೆ ಅನ್ನುವ ಹಾಗೆ ಕಾಣುತ್ತಿದ್ದರು! ಒಳಗೊಳಗೇ ಇಷ್ಟು ನೀಚತನ ಮಾಡುತ್ತಾರೆಂದು ಯಾರಿಗೆ ತಿಳಿದಿತ್ತು? ಜೋಯಿಸ ಚಿಕ್ಕಪ್ಪ ಹೇಳುತ್ತಿದ್ದುದು ನಿಜವೇ.

····ಗೌನೌರಿಯ ಮನೆಗೆ ಫಾರ್‌ಬಿಸ್‌ಗಂಜಿನಿಂದ ಒಬ್ಬ ಅತಿಥಿ ಬಂದಿದ್ದಾನೆ····ಅವನು ಹೇಳುತ್ತಿದ್ದ····ಅವನ ಹಳ್ಳಿಯ ಹತ್ತಿರವಿರುವ 'ಸಿಝುವಾ—ಗರ್ರೈಯಾದಲ್ಲಿ' ಒಬ್ಬ ಡಾಕ್ಟರ್, ದರೋಡೆ ಮಾಡಿಸುತ್ತಾನಂತೆ. ಡಾಕ್ಟರಾದ್ದರಿಂದ ಮನೆ ಮನೆಗೆ ಹೋಗುತ್ತಾನೆ. ಅಂಗಳ, ಹಿತ್ತಲು ಎಲ್ಲಾ ಜಾಗ ನೋಡಿಕೊಳ್ಳುತ್ತಾನೆ ರೂಪಾಯಿಯ ಪೆಟ್ಟಿಗೆಯನ್ನು ನೋಡಿಕೊಳ್ಳುತ್ತಾನೆ....ಸರಿ ತನ್ನ ಗುಂಪಿನವರಿಗೆ ಪೂರಾ ನಕ್ಷೆ ತಿಳಿಸಿಬಿಡುತ್ತಾನೆ. ಮನೆಯವರಿಗೆ ನಿದ್ರೆ ಬರುವ ಔಷಧಿ ಕುಡಿಸಿ, ಕಳ್ಳತನ ದರೋಡೆ ಮಾಡಿಸುತ್ತಾನೆ. ಹಳ್ಳಿಯ ಸುತ್ತಮುತ್ತಲ ಜನಕ್ಕೆಲ್ಲಾ ಸೂಜಿ ಚುಚ್ಚಿ ಹೇಡಿಗಳನ್ನಾಗಿ ಮಾಡಿಬಿಟ್ಟಿದ್ದಾನೆ····ಅವನ ಮಾತನ್ನು ಕೇಳದಿದ್ದವರ ಎತ್ತುಗಳನ್ನು, ಹಸುಗಳನ್ನು ಕೊಲ್ಲಿಸಿಬಿಡ್ತಾನೆ····ಎಮ್ಮೆಗಳ ಕಳ್ಳತನ ಮಾಡಿಸುತ್ತಾನೆ ಅಥವಾ ಮನೆಗೇ ಬೆಂಕಿ ಇಡಿಸಿಬಿಡುತ್ತಾನೆ····ಅನೇಕ ಸಲ, ಅನೇಕ ಜನ ಅವನ ಮೇಲೆ ಮೊಕದ್ದಮೆ ಹೂಡಿದಾರೆ....ಆದರೆ ದುಡ್ಡು ಕೊಟ್ಟು ಮೊಕದ್ದಮೆ ಗೆದ್ದುಬಿಡುತ್ತಾನೆ. ಹೆಸರೂ ತುಂಬಾ ವಿಚಿತ್ರವಾಗಿಯೇ ಇದೆ. —ಡಾಕ್ಟರ್ ನಟಖಟ್ ಪ್ರಸಾದ್ (ನಟಖಟ್ ಅಂದರೆ ತುಂಟ.)

"ಸರಿಯಪ್ಪ, ಅಂತೂ ಯಾರನ್ನೂ ನಂಬೋ ಹಾಗಿಲ್ಲ."

"ನಿನ್ನೆ ಸೋಮಾಜಟ್ ತಾಮಗಂಜಿನ ಜಾತ್ರೆಯಲ್ಲಿ ಸೆರೆ ಸಿಕ್ಕಿದನಂತೆ." ಸೋಮನ ಮೋಚೀ ಹೇಳಿದ···· "ಜಾತ್ರೆಯಿಂದ ಬಂದ ಜನ ಹೇಳಿದ್ರು. ····ಇನ್ನು ನಾವು ಅಖಾಡಾದಲ್ಲಿ ಡೋಲು ಬಾರಿಸೋ ಹಾಗಿಲ್ಲ."

8

ಜೋಯಿಸ ಚಿಕ್ಕಪ್ಪ ಈಗೀಗ ತುಂಬಾ ಸಂತೋಷವಾಗಿದ್ದರು.

ಹಳ್ಳಿಯ ಜನ ಈಗ ಅವರಿಗೆ ದಿನಕ್ಕೆ ಐದು ಬಾರಿ ಪ್ರಣಾಮ ಮಾಡುತ್ತಾರೆ ....ನಿಜವಾಗಲೂ ಜೋಯಿಸರು ಬ್ರಹ್ಮಜ್ಞಾನಿಗಳು. ಕಲಿಯುಗದಲ್ಲೂ ಸ್ವಲ್ಪ ವಾದರೂ ಸತ್ಯ ಉಳಿದಿದ್ದರೆ ಅದು ಬ್ರಾಹ್ಮಣರಿಂದಲೇ.....ಜೋತಿಷ್ಯ ವಿದ್ಯೆ ಯೆಂದರೆ ಹುಡುಗಾಟವಲ್ಲ:....ಬ್ರಹ್ಮ ತೇಜಸ್ಸು ಈಗಲೂ ಉಳಿದಿದೆ. ಚಿನ್ನ, ಕೊಚ್ಚೆಯಲ್ಲಿದ ರೂ ಅದಕ್ಕೆ ತುಕ್ಕು ಹಿಡಿಯುವುದಿಲ್ಲ....''ನಮಸ್ಕಾರ ಜೋಯಿಸ ಚಿಕ್ಕಪ್ಪ.''

''ಆಯುಷ್ಮಂತನಾಗು. ಕೂತ್ಕೋ. ಏನ್ಸಮಾಚಾರ?''

''ಜೋಯಿಸ ಚಿಕ್ಕಪ್ಪ, ಸರ್ವನಾಶವಾಯಿತು! ನನ್ನ ಗಿಣಿ ನಿನ್ನೆ ಹಾರಿ ಹೋಯಿತು. ನಗುನಗುತ್ತಾ ಹೊರಟುಹೋಯಿತು, ಚಿಕ್ಕಪ್ಪಾ.'' ಪೋಲಿಯಾ ಪಂಗಡದ ಹೀರೂ ಜೋಯಿಸರ ಕಾಲುಗಳ ಮೇಲೆ ಬಿದ್ದು ಅಳುವುದಕ್ಕಾರಂಭಿಸಿದ.

''ಏ ಹೀರೂ ಏನಾಯಿತು?''—ಜೋಯಿಸರು ಕೇಳಿದರು.

''ನನ್ನ ಮಗ....ನನ್ನ ಮಗ ಜೀಬಾನನ್, ನಿನ್ನೆ....ಒಂದೇ ಒಂದಿನ ಜ್ವರ....ಎದೆ ಒಡೆದು ಹೋಗಿಬಿಟ್ಟ. ಓದಿ—ಬರೆದು ಮಾಡ್ತಿದ್ದ ನನ್ನ ಗಿಣಿ ಹಾರಿಹೋಯಿತು, ಚಿಕ್ಕಪ್ಪಾ'' ತಲೆಯ ಮೇಲೆ ಕೈ ಹೊತ್ತು ಕುಳಿತು ಹೀರೂ ಅಳುತ್ತಿದ್ದ.

''ಇಷ್ಟು ಬೇಗ? ನಿನ್ನೆ ಯಾವ ವಾರ ಹೇಳು?····ಸೋಮವಾರ ಹೂಂ, ಸೋಮವಾರ ಸತ್ತ ಅಲ್ವಾ?''

''ಹೌದು, ಸರಿಯಾಗಿ ಸೂರ್ಯಮುಳುಗೋ ಹೊತ್ತಿಗೆ.''

ಕುಟಿಲತೆ! ಇದೆಲ್ಲಾ ಡಾಕಿಣಿಯ ಕುಟಿಲತೆ! ಅರ್ಥವಾಯ್ತು ಹೀರೂ? ಶುಕ್ರವಾರ ಅಮಾವಾಸ್ಯೆ. ನಿನಗೆ ಯಾರ ಮೇಲೆ ಸಂಶಯ ಇದೆಯೋ ಅವರ ಮನೆ ಹಿತ್ತಲ ಕಡೆ ಕೂತ್ಕೊಂಡಿರು. ಸರಿಯಾಗಿ ಮಧ್ಯ ರಾತ್ರಿಯಲ್ಲಿ ಅವಳು ಮನೆ ಯಿಂದ ಹೊರಡುತ್ತಾಳೆ. ಅವಳನ್ನು ಹಿಂಬಾಲಿಸು. ಅವಳು ನಿನ್ನ ಮಗುವನ್ನು ಬದುಕಿಸಿ, ಎಣ್ಣೆ ಸುಗಂಧ ಲೇಪಿಸಿ, ಮಡಿಲಲ್ಲಿ ಎತ್ತಿಕೊಂಡು ಕುಣಿಯೋದಕ್ಕೆ

ಆರಂಭಿಸಿದಾಗ....ಆ ಮಗುವನ್ನು ಅವಳ ಕೈಯಿಂದ ಕಿತ್ತುಕೊಂಡರೆ, ಆ ಮಗುವನ್ನು ಮುಂದೆ ಯಾರೂ ಸಾಯಿಸಲಾರರು....ಇಂದ್ರನ ವಜ್ರಾಯುಧ ತಗಲಿದರೂ, ಅದಕ್ಕೆ ಹೂವು ತಗುಲಿದ ಹಾಗಾಗುತ್ತೆ."

"ಅದರಲ್ಲಿ ಸಂಶಯವೇನು ಚಿಕ್ಕಪ್ಪಾ....ಕನ್ನಡಿಯಲ್ಲಿ ಕಂಡಹಾಗೆ ಎಲ್ಲಾ ಸ್ಪಷ್ಟವಾಗಿ ಕಾಣ್ತಿದೆಯಲ್ಲಾ....ಐದು ತಿಂಗಳ ಹಿಂದೆ, ನಲವತ್ತನೇ ಸೆಕ್ಷನ್ ಕಾನೂನು ಜಾರಿಗೆ ಬಂದಾಗ ಎಲ್ಲರೂ ಹಸ್ತಾಕ್ಷರ ಹಾಕೋದಕ್ಕೆ ಹೋಗಿದ್ದಾಗ ನಾನೂ ಹೋಗಿದ್ದೆ. ನನ್ನ ಮೈದುನ ಕೋರ್ಟಿನಲ್ಲಿ ಕೆಲಸದಲ್ಲಿದಾನೆ. ಅವನ ಸಾಕ್ಷಿಯಿಂದ ಜಮೀನು ನನ್ನ ಸ್ವಂತದ್ದಾಯಿತು. ಮಿಕ್ಕವರ ಅರ್ಜಿಯೆಲ್ಲಾ ರದ್ದಾಯಿತು. ಒಂದು ದಿನ ಪಾರ್ವತಿಯ ತಾಯಿ ಗೋಧಿಯ ಭಾಗ ಕೇಳೋದಕ್ಕೆ ಬಂದಾಗ, 'ಇನ್ಮೇಲೆ ಭಾಗ ಕೊಡೋದಿಲ್ಲ' ಅಂತ ನಾನು ಹೇಳಿದೆ. ನಲವತ್ತನೇ ಸೆಕ್ಷನ್ ಪ್ರಕಾರ ಭೂಮಿ ನಮ್ಮದಾಗಿತ್ತು. ತಕ್ಷಣ ಶಾಪ ಹಾಕೋದಕ್ಕೆ ಆರಂಭಿಸಿದಳು. ಅವಳ ಹತ್ತು ಬೀಘಾ ಜಮೀನನ್ನು ನಾನು ಉಳ್ತಿದ್ದೆ. ಸರಿ ಅದೇ ದ್ವೇಷ ಮನಸ್ಸಿನಲ್ಲಿ ಇಟ್ಟುಕೊಂಡಿದ್ದಳು. ನಿನ್ನೆ ರಾಕ್ಷಸಿ ನಮ್ಮ ಸರ್ವನಾಶ ಮಾಡಿಬಿಟ್ಟಳು."

"ಏ ಹೀರೂ ಅಳಬೇಡ, ಗಲಾಟೆ ಮಾಡಬೇಡ, ಸುಮ್ಮನಿರು. ಅಮಾವಾಸ್ಯೆ ರಾತ್ರಿ, ಮಧ್ಯ ರಾತ್ರಿ....ಜ್ಞಾಪಕ ಇರಲಿ...."

ಅಮಾವಾಸ್ಯೆಯ ರಾತ್ರಿ!

ಪಾರ್ವತಿಯ ತಾಯಿಯ ಮನೆಯ ಹಿತ್ತಲಿನಲ್ಲಿ ಭಂಗೀ ಸೊಪ್ಪಿನ ಪೊದೆಗಳಿದ್ದವು. ಹೀರೂ ಅದೇ ಪೊದೆಯ ಮರೆಯಲ್ಲಿ ಕೂತು ಎಲೆಗಳನ್ನು ಆರಿಸಿ ಆರಿಸಿ ತಿನ್ನುತ್ತಿದ್ದ....ಮೋರಂಗಿಯಾ ಭಂಗಿಯ ಅಮಲು ತುಂಬಾ ತೀಕ್ಷ್ಣವಾಗಿರುತ್ತದೆ. ಕಾರ್ತಿಕ ಮಾಸದಲ್ಲಿ ರಾತ್ರಿಯಿಂದಲೇ ಹಿಮ ಬೀಳಲಾರಂಭವಾಗಿರುತ್ತದೆ. ಹೀರೂವಿನ ಶರೀರ ತಣ್ಣಗಾಗಿತ್ತು....ಭಂಗೀ ತಿಂದೂ ತಿಂದೂ ದೇಹದ ಶಾಖವನ್ನು ಏರಿಸಿಕೊಳ್ಳುತ್ತಿದ್ದ....

"ಸುಡುಗಾಡೋಳು, ಮನೆ ಒಳಗೇ ಕೂತು ಪಿಸ ಪಿಸ ಮಾತಾಡ್ತಿದಾಳೆ. ಹೊರಗಡೆಯೇ ಬರ್ತಿಲ್ಲ. ಬರಲಿ ಈವತ್ತು ಹೊರಗಡೆ....ಅಕಸ್ಮಾತ್ ಮನೆ ಒಳಗೇ ಕುಣಿಯೋದಕ್ಕೆ ಆರಂಭಿಸಿದರೆ? ಹೊರಗಡೆ ಬರದೇನೇ ಇದ್ದರೆ? ಜೋಯಿಸ ಚಿಕ್ಕಪ್ಪನೂ ಹೇಳಲೇ ಇಲ್ಲವಲ್ಲ...."

ಚಿಕ್ಕಮ್ಮನನ್ನು ಸಂಜೆಯಿಂದಲೂ ಗಣೇಶ ಕಾಡಿಸುತ್ತಿದ್ದ. ಅವಳ ಕಣ್ಣುಗಳಿಂದ ನಿದ್ದೆಯೂ ಹಾರಿಹೋಗಿತ್ತು. ಅವನು ಪದೇ ಪದೇ ಕೇಳುತ್ತಿದ್ದ ಪ್ರಶ್ನೆಗಳಿಗೆ ಚಿಕ್ಕಮ್ಮನೂ ಯೋಚಿಸಿ ಯೋಚಿಸಿ ಉತ್ತರ ಹೇಳಬೇಕಾಗಿತ್ತು.

"ಮಾವನಿಗೆ ಜೈಲಿನಲ್ಲಿ ಹೊಡಿತಾರಾ ಅಜ್ಜಿ?"

"ಇಲ್ಲ ಕಣೋ ನಿನ್ನ ಮಾವ ಏನು ಕಳ್ಳನೇ ಹೊಡೆಯೋದಕ್ಕೆ?"

"ಹಾಗಾದರೆ ಅವನನ್ನು ಯಾಕೆ ಹಿಡಿದುಕೊಂಡರು?"

"ಏನೋ ಸರಕಾರದ ಇಷ್ಟ."

"ಸರಕಾರದ ಇಷ್ಟ ಅಂದರೆ? ಆ ಸರ್ಕಾರಾನ ನೀನು ಯಾಕೆ ಕೇಳೋದಿಲ್ಲ."

"ಇನ್ನು ನೀನು ಮಲಕ್ಕೋ ಮಗು."

"ಅಜ್ಜೀ"

"ಏನು ಮರಿ?"

"ನನ್ನ ಹೊರಗಡೆ ಕರೆದುಕೊಂಡು ಹೋಗು....ಒಂದಕ್ಕೆ ಹೋಗಬೇಕು."

"ನಡಿ."

....ಚಿಕ್ಕಮ್ಮ ಬಾಗಿಲು ತೆಗೆದಳು. ಹಿತ್ತಲಲ್ಲಿದ್ದ ಭಂಗಿಯ ಪೊದೆ ಅಲುಗಾಡಿತು. ಹೀರೂ ಬಾಟಲಿನಲ್ಲಿ ಮದ್ಯ ತಂದಿದ್ದ. ಬೇಗ ಬೇಗ ಬಾಟಲಿನೆತ್ತಿ ಕುಡಿದ....ಹೂಂ, ರಾಕ್ಷಸಿ ಮನೆಯಿಂದ ಹೊರಟಳು. ಸರಿಯಾಗಿ ಮಧ್ಯರಾತ್ರಿ. ನಕ್ಷತ್ರಗಳೆಲ್ಲಾ ಸರಿಯಾಗಿ ತಲೇ ಮೇಲೆ ಬಂದಿವೆ....ನರಿಗಳು ಕೂಗ್ತಿವೆ.... ಸರಿಯಾಗಿ ಮಧ್ಯ ರಾತ್ರಿ....ಬಟ್ಟೆ ಸರಿಪಡಿಸಿಕೊಳ್ಳುತ್ತಿದ್ದಾಳಲ್ಲಾ, ಯಾಕೆ? ....ನಗ್ನಳಾಗುತ್ತಾಳೇನು?

....ಖಟಕ್....

"ಓ....ಮಗೂ ಗಣೇಶ...."

"ಅ....ಜ್ಜೀ...."

....ಖಟಾಕ್ : ಖಟಾಕ್ :

"ಗ....ಗ.....ಗ...."

"ಅಜ್ಜೀ....ಕಮಲಕ್ಕ....ಅಜ್ಜೀ"

ಎಲ್ಲಾ ಶಾಂತವಾಯಿತು. ಆದರೆ ಜೀವಾನಂದ ಎಲ್ಲಿ?····ಹೀರುವಿನ ಅಮಲೆಲ್ಲಾ ತಟಕ್ಕನೇ ಇಳಿದುಹೋಯಿತು. ಹರಿಯುತ್ತಿದ್ದ ರಕ್ತದ ಪ್ರವಾಹ ವನ್ನು ನೋಡಿ ಅವನು ಥರ್ ಥರ್ ನಡುಗಲಾರಂಭಿಸಿದ. ದೊಣ್ಣೆ ಅವನ ಕೈಯ್ಯಿಂದ ಜಾರಿ ಬಿತ್ತು. ರಕ್ತ?····

ಪೋಲೀಸ್ ಇನ್ಸ್‌ಪೆಕ್ಟರ್····ಜೈಲು····ಗಲ್ಲು ಹೀರೂ ಓಡಿದ.

ಎಲ್ಲರಿಗಿಂತ ಮೊದಲು ತಹಸೀಲ್ದಾರರು ಗಲಾಟೆ ಮಾಡುತ್ತಾ ಬಂದೂಕಿನಿಂದ ಹುಸಿಗುಂಡು ಹಾರಿಸುತ್ತಾ ಬಂದರು.

ಇಡೀ ಹಳ್ಳಿ ಎಚ್ಚರಗೊಂಡಿತು. ನಾಯಿಯ ಬಗುಳುವ ಶಬ್ದದಲ್ಲಿ ಗಲಾಟೆ ಎಲ್ಲಿ ನಡೀತು, ಯಾಕೆ ನಡೀತು, ಏನಾಯಿತು? ಒಂದೂ ತಿಳಿಯುತ್ತಿಲ್ಲ···· ಎಲ್ಲರೂ ತಮ್ಮ ತಮ್ಮ ಮನೆಯ ಅಂಗಳದಲ್ಲೇ ನಿಂತು ಕೂಗಿಕೊಳ್ಳುತ್ತಿದ್ದರು·· ರಾಮದಯಾಲ್ ಏನಾಯಿತು? ನಾಗೇಶ್ವರ ಅದೇನು ಗಲಾಟೆ?···· ಗೊತ್ತಾಗ್ಲಿಲ್ಲ.

ತಹಸೀಲ್ದಾರರು ಕೂಗಿಕೊಂಡರು:

"ಏ ಕಾಳೀಚರಣ, ಪಾರ್ವತಿಯ ತಾಯಿಯ ಧ್ವನಿಯ ಹಾಗೆ ಕೇಳಿಸಿತು. ನೀವೆಲ್ಲಾ ಮನೆಯಿಂದ ಆಚೆಗೆ ಬರದೆ ಏನು ಮಾಡ್ತಿದೀರಿ?.... ಇಡೀ ಹಳ್ಳಿಯ ಜನ ಹೆಣವಾಗಿಬಿಟ್ಟರೇನು?"

ಪಾರ್ವತಿಯ ತಾಯಿ...."ಅಬ್ಬಬ್ಬಾ! ರಕ್ತದಲ್ಲಿ ಮುಳುಗಿಬಿಟ್ಟಿದಾಳೆ. ಉಸಿರು ನೋಡು, ಸತ್ತಿದಾಳೋ ಅಥವಾ····ನರಳುತ್ತಿದ್ದಾಳೇನು? ಹಾಗಾದರೆ ಇನ್ನೂ ಪ್ರಾಣ ಇದೆ. ಇವನು ಗಣೇಶ ತಾನೇ··ಹಲ್ಲು ಕಚ್ಚಿಬಿಟ್ಟಿದಾನೆ. ನೀರು ತೊಗೊಂಡು ಬಾ.... ಇದು ಯಾರ ಕೆಲಸ ಇರಬಹುದು? ಅಯ್ಯೋ ದೇವರೆ.... ದೊಣ್ಣೆ ಬಿದ್ದಿದೆಯೇ? ದೊಣ್ಣೆಯನ್ನು ತಹಸೀಲ್ದಾರರಿಗೆ ಒಪ್ಪಿಸು: ಅದರಿಂದಾನೇ ಪತ್ತೆಯಾಗುತ್ತದೆ."

"ಅಗಮೂ" ತಹಸೀಲ್ದಾರರು ಹೇಳಿದರು, "ನೀನು ತಕ್ಷಣ ಓಡಿ ಹೋಗಿ ಪೋಲೀಸಿನವರನ್ನು ಕರೆದುಕೊಂಡು ಬಾ····ನಾಳೆ ಸರಿಯಾದ ಹೊತ್ತಿಗೆ ಪೂರ್ಣಿಯಾ ಆಸ್ಪತ್ರೆಗೆ ಹೋಗುವುದು ಸಾಧ್ಯವಾದರೆ····"

"ಅಜ್ಜಿ....ಅಜ್ಜಿ, ಮಾವ, ಡಾಕ್ಟರ್ ಮಾವ....ಅಕ್ಕ, ಅಕ್ಕ. ಗಣೇಶ ಅಳುತ್ತಲೇ ಇದ್ದ. ಕಮಲಾ ಕಣ್ಣೊರೆಸಿಕೊಳುತ್ತಾ ಗಣೇಶನನ್ನು ತಮ್ಮ

ಮನೆಗೆ ಕರೆದುಕೊಂಡು ಹೋದಳು. ಗಣೇಶನಿಗೆ ಸ್ವಲ್ಪ ಬುದ್ಧಿ ಕಡಮೆಯಿದ್ದಿದ್ದರೆ ವಾಸಿಯಾಗಿತ್ತೇನೋ!....ಕಮಲೆಯ ಜೊತೆ ಅವನು ಬಂದ....ಮಾತನ್ನು ಆಡಿದ....ಕಮಲೀ ಹೇಳಿದಳು: "ದೇವರು ನಮ್ಮೆಲ್ಲರಿಗಿಂತ ದೊಡ್ಡವನು. ಅವನು ಅಜ್ಜಿಯನ್ನು ತನ್ನ ಹತ್ತಿರ ಕರೆದುಕೊಂಡು ಹೋದ."

"ಹೂಂ....ಹೂಂ...." ಬಿಕ್ಕಳಿಕೆ ತಡೆದುಕೊಳ್ಳುವುದು ಗಣೇಶನಿಂದ ಸಾಧ್ಯವಾಗುತ್ತಿಲ್ಲ...."ಅಜ್ಜೀ....ಕಮಲಕ್ಕ....ಅಜ್ಜೀ...."

"....ಅಯ್ಯೋ ಹತಭಾಗ್ಯ, ನಿನ್ನ ಕಮಲಕ್ಕ ಇನ್ನು ಯಾರ ಹತ್ತಿರ ತನ್ನ ಗೋಳು ಹೇಳಿಕೊಳ್ಳಲು ಹೋಗುತ್ತಾಳೆ? "ಗಣೇಶ ಮರೀ, ನಿನ್ನ ಮಾವ ಬಂದುಬಿಡುತ್ತಾರೆ. ಅಳಬೇಡ ಮರಿ."

ಹೀರೂ ಸಿಕ್ಕಿಬಿದ್ದ....ಸಿಕ್ಕದೆ ಏನು ಹೇಳಿ?....ಹಳ್ಳಿಯಲ್ಲಿ ಯಾರ ದೊಣ್ಣೆಯನ್ನು ಯಾರು ಗುರುತಿಸುವುದಿಲ್ಲ. ಹೀರುವಿನ ದೊಣ್ಣೆಯಂತೂ ಪ್ರಸಿದ್ಧ ವಾಗಿದೆ—ರಾತ್ರಿಯಲ್ಲೇ ಜನ ಆ ದೊಣ್ಣೆಯನ್ನು ಗುರುತಿಸಿದರು. ಆದರೆ, ಹೆದರಿಕೆ ಯಿಂದ ಯಾರೂ ಬಾಯಿಬಿಡಲಿಲ್ಲ....ಇಷ್ಟು ಸಾಲದೆನ್ನುವಂತೆ ಅವನ ಕಾಲು ಗಳೆರಡೂ ರಕ್ತದಿಂದ ತೋಯ್ದಿದ್ದವು. ತೊಳೆದುಕೊಂಡೂ ಇರಲಿಲ್ಲ. ಹೊಡೆದ ಮೇಲೆ ಹೀರೂ ಪಾರ್ವತಿಯ ತಾಯಿಯನ್ನು ಸ್ವಲ್ಪ ದೂರ ಎಳೆಯುವ ಪ್ರಯತ್ನ ವನ್ನೂ ಮಾಡಿದ್ದನೆಂದು ತೋರುತ್ತದೆ. ಬೆಳಗ್ಗಿನ ಹೊತ್ತಿಗೆ ಪೂರಾ ಹುಚ್ಚನಂತಾ ಗಿದ್ದ. ಅವನನ್ನು ನೋಡಿದರೇ ಭಯವಾಗುತ್ತಿತ್ತು....

ಅವನು ಇನ್ನೂ ಅನೇಕ ಕೊಲೆಗಳನ್ನು ಮಾಡಬಲ್ಲ, ಎಂದು ಸಾರುವಂತಿದ್ದವು ಅವನ ಕಣ್ಣುಗಳು!....ಬಾಯಿಂದ ನೊರೆ ಬೇರೆ ಸುರಿಯುತ್ತಿತ್ತು.... ಇನ್ಸ್‌ಪೆಕ್ಟರ್ ಅವನನ್ನು ಸೆರೆಹಿಡಿದ. ದಾರೋಗ ಎರಡು ಸಲ ಒದ್ದ.... ಹವಾಲ್ದಾರ ಹಂಟರನ್ನು ಬಿಗಿದ....ಪೋಲೀಸ್ ಪ್ಯಾದೆಗಳೂ ನಾಲ್ಕಾರು ಪೆಟ್ಟು ಕೊಟ್ಟರು. ಬಾಯೇ ಬಿಡೋದಿಲ್ವಲ್ಲಾ, ಮಿಕಮಿಕ ಮುಖ ನೋಡುತ್ತಾನೆ. ನಿನ್ನ ಜೊತೇಲಿ ಯಾರಿದ್ದರು ಬೊಗಳು ಕೊಲೆಗಾರ?....ನಿನ್ನಂತಹವರಿಗೆ ನರಕ ದಲ್ಲೂ ಜಾಗ ಸಿಗೋದಿಲ್ಲ" ಕೊನೆಗೆ ಅವನು ಹೇಳಿದ: "ನಾನೊಬ್ಬನೇ ಕೊಂದೆ."

"ಏ ಮೂರ್ಖ, ನೀಲಹಸುವಿನ ಹಾಗಿದ್ದ ಆ ಹೆಂಗಸನ್ನು ನೀನೊಬ್ಬನೇ ಕೊಂದೆಯಾ?"

"ಕಾನ್ಸಟೇಬಲ್ ಬಿಟ್ಟುಬಿಡಯ್ಯಾ" ಚಿಕ್ಕ ಇನ್ಸ್‌ಪೆಕ್ಟರ್ ತುಂಬಾ ಒಳ್ಳೇ ಮನುಷ್ಯ. ಅವನೆಂದ, "ಏ ಗಲ್ಲಿನ ಶಿಕ್ಷೆ ತಪ್ಪಿಸಿಕೊಳ್ಳೋದಕ್ಕೆ ಹುಚ್ಚನ ಹಾಗೆ ಆಡುತ್ತಿದ್ದರೆ ಎರಡೇ ದಿನ ಏಟು ಕೊಡೋದ್ರಲ್ಲಿ ಸತ್ತುಹೋಗ್ತಿಯಾ."

ಹೆಣವನ್ನು ಪೂರ್ತಿ ಮುಚ್ಚಿ ಪಲ್ಲಕ್ಕಿಯಲ್ಲಿ ತೆಗೆದುಕೊಂಡು ಹೋಗುವ ವ್ಯವಸ್ಥೆ ಮಾಡಿದರು. ಇನ್ಸ್‌ಪೆಕ್ಟರ್ ಒಂದು ಬೆರಳೂ ಕಾಣದ ಹಾಗೆ ಮುಚ್ಚಿದರು. ....ಅತ್ತರ್, ಗುಲಾಬಿಗಳನ್ನೂ ಹೆಣದ ಮೇಲೆ ಚಿಮುಕಿಸಿದರು....ಹೆಣದ ಜೊತೆ ಗಣೇಶನೂ ಹೋಗುತ್ತಾನೇನು? ಜೊತೆಗೆ ಪ್ಯಾರುವೂ ಹೋಗುತ್ತಿದ್ದಾನೆ. ....ಪೂರ್ಣಿಯಾದ ಧರ್ಮಶಾಲೆಯ ಹತ್ತಿರವೇ ಗಣೇಶನ ಒಬ್ಬ ಚಿಕ್ಕಮ್ಮ ಇದ್ದಾಳಂತೆ....ಈಗವಳು ಅಲ್ಲಿ ಇಲ್ಲದಿದ್ದರೆ ಅನಾಥಾಲಯದಲ್ಲಿ....

ಚಿಕ್ಕಮ್ಮ ಹೊರಟುಹೋದಳು. ಮತ್ತೆ ಬಾರದಂತೆ ಹೊರಟುಹೋದಳು.

ಕಮಲಾ ಬಿಕ್ಕಿ ಬಿಕ್ಕಿ ಅತ್ತಳು.

ಜೋಯಿಸರಿಗೆ ಲಕ್ವಾ ಹೊಡೆಯಿತು—ಅರ್ಧಾಂಗ ವಾಯುವಿನಿಂದ ಮುಖ ವೆಲ್ಲಾ ಸೊಟ್ಟಗಾಗಿತ್ತು. ಮಲಮೂತ್ರ ವಿಸರ್ಜನೆಯಲ್ಲಾ ಹಾಸಿಗೆಯಲ್ಲೇ. ರಾಮನಾರಾಯಣನಿಗೆ ಅವರ ಹತ್ತಿರ ಒಬ್ಬನೇ ಕುಳಿತುಕೊಳ್ಳುವುದಕ್ಕೂ ಭಯ ವಾಗುತ್ತಿತ್ತು. ಎಲ್ಲಾ ವಿಚಾರಗಳೂ ರಾಮನಾರಾಯಣನಿಗೆ ಗೊತ್ತು.... ಪಾರ್ವತಿಯ ತಾಯಿಯ ಕೊಲೆಯಾದ ರಾತ್ರಿಯೇ ಅವರ ಸ್ಥಿತಿ ಹದಗೆಟ್ಟಿತ್ತು. ಒಂದೇ ಸಮನೆ ಭೇದಿ ಆರಂಭವಾಯಿತು. ಮಲದಲ್ಲಿ ರಕ್ತ ಬೇರೆ....ಹಳ್ಳಿಯಿಂದ ಹೆಣ ಹೊರಗಡೆ ಹೋಗುವ ಹೊತ್ತಿಗೆ, ಲಕ್ವ ಹೊಡೆಯಿತು. ದೇವರ ಈ ನ್ಯಾಯ ಪ್ರಿಯತೆಯನ್ನು ಕಂಡು ರಾಮನಾರಾಯಣನಿಗೆ ಭಯವಾಗಿತ್ತು. ಇಷ್ಟು ಬೇಗ ಪಾಪದ ಫಲ ಸಿಕ್ಕುವುದು ಅಪರೂಪ!....ಮಲವಿಸರ್ಜನೆ ಮಾಡಿದರೆ ನಾಲ್ಕು ಬೀಘಾ ಸುತ್ತಮುತ್ತ ದುರ್ಗಂಧ ಹರಡುತ್ತಿತ್ತು! ಇದಕ್ಕಿಂತ ಬೇರೆ ನರಕ ಯಾವುದಿದೆ?

....ಆದರೆ, ಜೋಯಿಸರು ಹೇಳಿದ್ದೇನೋ ಸರಿಯೇ....ಪಾರ್ವತಿಯ ತಾಯಿ ಸತ್ತ ದಿನ ಇನ್ಸ್‌ಪೆಕ್ಟರ್ ಬಂದಾಗ ಅವರು ಹೇಳಿದ್ದರಂತೆ "ಈಗ ಏನು ಮಹಾ ಆಗಿದೆ?....ಇನ್ನೂ ಬಾಕೀ ಇದೆ."

"ಇನ್ನು ಏನೇನು ಆಗುತ್ತೋ ದೇವರಿಗೇ ಗೊತ್ತು, ಜೈ ಬಾಬಾ, ಜೈ ಮಹಾತ್ಮಾ, ಹಳ್ಳಿಯನ್ನು ರಕ್ಷಿಸು ಪ್ರಭೂ."

# 9

ಕೊಠಾರಿನ್ ಲಕ್ಷ್ಮಿದಾಸಿ ಬಾಲದೇವನೊಂದಿಗೆ ಮಠದಿಂದ ದೂರವಾಗಿದ್ದಳು.

ಕಲಮೀ ಮಾವಿನ ತೋಪಿನಲ್ಲಿ ಬೊಂಬು ಹುಲ್ಲಿನ ಮೂರು ಸುಂದರ ಮನೆಗಳು ಸಿದ್ಧವಾದವು. ಈ ಜಿಲ್ಲೆಯಲ್ಲಿ ಇದೊಂದು ವಿಶೇಷತೆ...ಬೊಂಬು ಹುಲ್ಲಿನಲ್ಲೇ ಚಚ್ಚೌಕವಾದ ಮನೆ ಕಟ್ಟಿಬಿಡುತ್ತಾರೆ. ಒಂದೇ ಭಯ, ಬೆಂಕಿಯದು! ಆದರೆ ನೋಡುವುದಕ್ಕೆ ಅಚ್ಚುಕಟ್ಟಾಗಿರುತ್ತದೆ. ವೇದಿಕೆಯನ್ನು ಮಾಡಿ ಅದನ್ನು ಸಾರಣೆ–ಕಾರಣೆಯಿಂದ ಅಲಂಕರಿಸಲಾಗಿದೆ. ಹೂವಿನ ಗಿಡಗಳನ್ನಂತೂ ಮೊದಲೇ ಹಾಕಿದ್ದಾಗಿದೆ. ತೋಟದ ಸೌಂದರ್ಯ ಹದಿನೆಂಟು ಪಟ್ಟು ಹೆಚ್ಚಾಗಿದೆ. ಭೇಷ್, ಕೊಠಾರಿನ್ ನಾನೂರು ರೂಪಾಯಿಗಳಲ್ಲಿ ಒಂದು ಜೋಡಿ ಎತ್ತಿನ ಕರುಗಳನ್ನು, ಮೋತೀಚೂರು ಸಂತೆಯಲ್ಲಿ ಕೊಂಡು ತಂದಿದ್ದಾಳೆ. ತುಂಬಾ ಚುರುಕಾಗಿವೆ. ಸಣ್ಣದೊಂದು ಎತ್ತಿನ ಗಾಡಿ ಮಾಡಿದಾಳೆ. ಬೊಂಬಿನ ಗಣಿಕೆಗಳನ್ನೆಲ್ಲಾ ಕಿತ್ತು ಅದಕ್ಕೆ ವಿಧವಿಧವಾದ ಬಣ್ಣಗಳನ್ನು ಹಾಕಿದ್ದಾಳೆ. ಎತ್ತುಗಳ ಕೊಂಬಿಗೆ ಹಿತ್ತಾಳೆಯ ಕವಚ, ಕೊರಳಿನಲ್ಲಿ ಕವಡೆ ಮತ್ತು ಸಣ್ಣ ಸಣ್ಣ ಗಂಟೆಗಳ ಮಾಲೆಗಳು...ಬಾಲದೇವ ಈಗೀಗ ಎಷ್ಟು ಚೊಕ್ಕಟವಾಗಿ ಇರುತ್ತಾನೆ! ಹಂಸದ ರೆಕ್ಕೆಯಂತೆ ಬೆಳ್ಳಗಿರುವ ಖಾದಿಯ ಲುಂಗಿ, ಮೇಲಂಗಿ. ದೇಹವೆಲ್ಲಾ ಮೊದಲಿಗಿಂತ ಹೆಚ್ಚು ಶುಭ್ರವಾಗಿದೆ. ಲಕ್ಷ್ಮಿ ತನ್ನ ಕೈಯ್ಯಾರ ಅವನ ಸೇವೆ ಮಾಡುತ್ತಾಳೆ.

ಮಠದಲ್ಲಿ ಈಗ ಕಾಗೆ–ಮೈನಾ ಹಕ್ಕಿಗಳು ಮಾಡುತ್ತಿದ್ದ ಕೊಳಕಿನ ಜೊತೆ, ಮನುಷ್ಯರ ಮಕ್ಕಳು ಮಾಡುವ ಕೊಳಕೂ ಹರಡಿರುತ್ತದೆ. ರಾಮುಪಿಯರಿಯ ತಾಯಿ, ದಿನವೆಲ್ಲಾ ಮಠಗೇ ಇರುತ್ತಾಳೆ. ಜೊತೆಯಲ್ಲಿ ಮೂರು ನಾಲ್ಕು ಚಿಕ್ಕ ಚಿಕ್ಕ ಮಕ್ಕಳುಗಳು ಬೇರೆ. ಭಂಡಾರಿ ಆ ದಿನ ಬಂದು ಗೋಳಾಡುತ್ತಿದ್ದ, "ಕೊಠಾರಿನ್, ಪ್ರಸಾದ ತಿನ್ನುವುದಂತೂ ಸಾಧ್ಯವೇ ಇಲ್ಲ. ಪ್ರತಿದಿನ ಕನಸಿನಲ್ಲಿ, ಕುಡಿಯುವ ನೀರಿನಲ್ಲಿ ಮೀನುಗಳಿರುವಂತೆ ಕಾಣಿಸುತ್ತದೆ, ಸದ್ಗುರು."

ಒಂದು ತಿಂಗಳಲ್ಲಿ ರಾಮುಪಿಯರಿಯ, ತನ್ನ ಮಾಯಾ ಜಾಲದಲ್ಲಿ, ಮಹಂತ ರಾಮುದಾಸನ ಅಂಗ ಅಂಗಗಳನ್ನೂ ಸಿಕ್ಕಿಸಿಕೊಂಡುಬಿಟ್ಟಿದ್ದಳು.

ಮಹಂತ ಈ ಜಾಲದಿಂದ ಬಿಡಿಸಿಕೊಳ್ಳಲು ಚಡಪಡಿಸುತ್ತಿದ್ದ. ಆದರೆ ಜಾಲದ ಗಂಟು ಮೊದಲಿಗಿಂತ ಹೆಚ್ಚು ಸಿಕ್ಕಾಗುತ್ತಿತ್ತು...ಹಿಂದಿನ ದಿನ, ಬೈಗಳವ ಜೊತೆಗೆ ಹೊಡೆದಾಟ—ಬಡಿದಾಟಗಳೂ ನಡೆದುಹೋದವು. ಮಹಂತ, ರೌತಹಟ್ ಸಂತೆಯಿಂದ ಬೆಳಗ್ಗೆ ಒಂದು ರೂಪಾಯಿನ ತೂಕದಷ್ಟು ಗಾಂಜಾ ತರಿಸಿದ್ದ. ರಾತ್ರಿ ಮಲಗುವಾಗ ರಾಮಪಿಯಾರಿಯ ಹೇಳಿದಳು, "ಮಹಂತರೇ ಗಾಂಜಾ ಮುಗಿದುಹೋಯಿತು..." ಅದನ್ನು ಕೇಳಿದ ಕೂಡಲೇ ಮಹಂತನಿಗೆ ರೇಗಿತು. "ಬೆಳಗ್ಗೆ ತಾನೇ ಅಷ್ಟೊಂದು ಗಾಂಜಾ ತಂದುಕೊಟ್ಟ ಭಂಡಾರೀ."

ರಾಮಪಿಯಾರಿಯಗೆ ಮಹಂತನ ಗಂಡಸುತನ ಎಷ್ಟೆಂಬುದು ಚೆನ್ನಾಗಿಯೂ ಗೊತ್ತು. ಅವಳು ಯಾಕೆ ಸುಮ್ಮನಿರುತ್ತಾಳೆ? ದಮ್ಮು ಎಳೆಯುವಾಗ ಮೈಮೇಲೆ ಜ್ಞಾನ ಇರೋದಿಲ್ಲವೇನೋ... "ದಿನವೆಲ್ಲಾ ಕುದುರೆಯ ಬಾಲದ ಹಾಗೆ ಭಂಗಿಯ ನಳಿಗೆಯನ್ನು ಬಾಯಲ್ಲೇ ಇಟ್ಟುಕೊಂಡಿರುತ್ತೀರಿ....."

"ಬಾಯ್ಮುಚ್ಚು, ಚಮ್ಮಾರಳೇ ಮಠವನ್ನೆಲ್ಲಾ ಭ್ರಷ್ಟವನ್ನಾಗಿ ಮಾಡಿದೆ. ಸದ್ಗುರು....ಲಕ್ಷ್ಮಿ ಹೇಳುತ್ತಿದ್ದದ್ದು ಸರಿಯಾಗಿಯೇ ಇತ್ತು....."

ಇಷ್ಟು ನಡೆದ ನಂತರ ರಾಮಪಿಯಾರಿಯ ತಾಯಿ ಮತ್ತು ಮಕ್ಕಳು ಸೇರಿ ದೊಡ್ಡ ಗಲಾಟೆಯನ್ನೇ ಎಬ್ಬಿಸಿದರು. ಆ ಗಲಾಟೆಯಲ್ಲಿ ಒಬ್ಬರ ಮಾತು ಒಬ್ಬರಿಗೆ ಕೇಳಿಸದಂತಾಯಿತು. —ಮಹಂತ ರಾಮದಾಸ ಅರಚಿಕೊಳ್ಳುತ್ತಿದ್ದ. ನಳಿಗೆಯನ್ನು ಕುಟ್ಟುತ್ತಿದ್ದ.... ರಾಮಪಿಯಾರಿಯು ಹಾಡಿ ಹಾಡಿಕೊಂಡು ಗೋಳಾಡುತ್ತಿದ್ದಳು.

"ನಿನ್ನ ಕೈ ಕುಷ್ಠರೋಗ ತಗುಲಿ ಬಿದ್ದುಹೋಗಲಿ,....ನೀನು ಆ ಲಕ್ಷ್ಮಿಗೋಸ್ಕರ...."

"—ಸದ್ಗುರು ಸದ್ಗುರು, ನಿಲ್ಲಿಸೇ ನಿಲ್ಲಿಸು."

ಬಾಲದೇವನಿಗೆ ಪಾರ್ವತಿಯ ತಾಯಿಯ ಕೊಲೆಯಾದ ದಿನದಿಂದ ರಾತ್ರಿಯಾಯಿತೆಂದರೆ ತುಂಬಾ ಭಯವಾಗುತ್ತದೆ...ರಾತ್ರಿಯೆಲ್ಲಾ ಎದೆ ಬಡಿದುಕೊಳ್ಳುತ್ತಲೇ ಇರುತ್ತದೆ. ಸ್ವಲ್ಪ ಶಬ್ದವಾದರೂ ಹಾಸಿಗೆಯ ಮೇಲೆ ಎದ್ದು ಕುಳಿತುಕೊಳ್ಳುತ್ತಾನೆ. ಲಕ್ಷ್ಮಿ ಅನ್ನುತ್ತಾಳೆ—'ನಿರ್ಮಲ ಚಿತ್ತದ ಮೇಲೆ ಕೆಟ್ಟ ಪ್ರಭಾವ ಬಿದ್ದರೆ ಹೀಗೆ ಆಗುತ್ತದೆ.'....ಬಾಲದೇವನ ಕಣ್ಣುಗಳೇ ಅದನ್ನು ಹೇಳುತ್ತಿವೆ.

ಡಿಮ್ ಡಿಮಿಕ್ ಡಿಮಿಕ್, ಝುನ್ ಝುನಕ್ ಝುನಕ್; ಇಂದು ಲಕ್ಷ್ಮಿ ತಾನೇ ಕಂಜರ ನುಡಿಸುತ್ತಿದ್ದಾಳೆ. ಬಾಲದೇವ ಆಸನದಲ್ಲಿ ಕುಳಿತಿದ್ದ. ಕಿಟಕಿಯ ಮೂಲಕ ಕೊಠಡಿಯೊಳಗೆ ಬೆಳದಿಂಗಳು ಇಣಕಿ ನೋಡುತ್ತಿತ್ತು. ಗೋಡೆಗೆ ತಗುಲಿ ಹಾಕಿದ್ದ ದೀಪದ ಬೆಳಕಿನಲ್ಲಿ ಲಕ್ಷ್ಮಿಯ ಕಣ್ಣುಗಳು ಸ್ಪಷ್ಟವಾಗಿ ಕಾಣುತ್ತಿರಲಿಲ್ಲ.....

ಜ್ವಾಲಾ ವಿರಹ ವಿಯೋಗ ಕೀ, ರಹೀ ಕಲೇಜಾ ಛಾಯೆ,
ಪ್ರೇಮೀಮನ ಮಾನ್ಯೆ ನಹೀಂ, ದರಸನ್ ಸೆ ಅಕುಲಾಯೆಃ

(ವಿರಹದ ಜ್ವಾಲೆ ಎದೆಯನ್ನೂ ಆವರಿಸಿದೆ. ಪ್ರೇಮಿ ಮನಸ್ಸು ಸುಮ್ಮನಿರಲಾರದೆ, ದರ್ಶನಕ್ಕಾಗಿ ಹಾರೈಸುತ್ತಿದೆ.)

ಬಾಲದೇವ ರೆಪ್ಪೆ ಹೊಡೆಯದೆ ಲಕ್ಷ್ಮಿಯ ಕಡೆಯೇ ನೋಡುತ್ತಿದ್ದ. ಖಂಜರ ನುಡಿಸುತ್ತಾ ಹಾಡುತ್ತಿದ್ದರೆ ಲಕ್ಷ್ಮಿಯ ಅಂಗ ಅಂಗವೂ ಕುಣಿಯುತ್ತಿರುವಂತೆ ತೋರುತ್ತಿತ್ತು. ಅವಳು ಮಂಡಿಯೂರಿ ಕುಳಿತಿದ್ದಳು....'ಇಂದ್ರ ಸಭಾ' ನಾಟಕದಲ್ಲಿ 'ಹೂರ್ ಪರೀ, ಮಸಹೂರ್ ಪರೀ, ಸಬುಜ ಪರೀ' (ಅಪ್ಸರೆ) ಗೆಜ್ಜೆಯ ಶಬ್ದ ಮಾಡುತ್ತಾ ಹಾಡುವಂತೆಯೇ ಲಕ್ಷ್ಮಿಯೂ ಕಾಣುತ್ತಾಳೆ... ಮಧ್ಯೆ ಮಧ್ಯೆ ಪಾರ್ವತಿಯ ತಾಯಿಯ, ರಕ್ತದಿಂದ ತೋಯ್ದ ಶವ ನೆನಪಿಗೆ ಬರುತ್ತದೆ....ಒಂದು ಕ್ಷಣ, ಬಾಲದೇವ ಕಣ್ಣು ಮುಚ್ಚಿಕೊಂಡ...ಲಕ್ಷ್ಮಿಯ ದೇಹದಿಂದ ಹೊರಬರುವ ಸುಗಂಧ, ಇಂದು ಎಂದಿಗಿಂತ ತೀಕ್ಷ್ಣವಾಗಿದೆ. ಲಕ್ಷ್ಮಿಯ ಧ್ವನಿ ಕಂಪಿಸುತ್ತಿದೆ. ಅವಳು ಅಳುತ್ತಿದ್ದಾಳೇನು?...ಕೆನ್ನೆಯ ಮೇಲೆ ಅಶ್ರು ಉರುಳುತ್ತಿದೆ....ಲಕ್ಷ್ಮಿ.....

"ಲಕ್ಷ್ಮಿ, ಲಕ್ಷ್ಮಿ, ಅಳಬೇಡ ಲಕ್ಷ್ಮಿ" ಬಾಲದೇವನ ಬಾಹುಗಳಲ್ಲೂ ಇಷ್ಟು ಬಲವಿದೆಯೇನು?... ಲಕ್ಷ್ಮಿಯನ್ನು ಬಾಹುಗಳಿಂದ ತಬ್ಬಿಹಿಡಿದಿದ್ದಾನೆ. ಲಕ್ಷ್ಮಿ ಹಾಡುತ್ತಲೇ ಇದ್ದಾಳೆ.

ಗೃಹ ಅಂಗನ್ ಬನ ಗಯೆ ಪರಾಯೆ
ಕಿ ಆಹೋ ಸಂತೋ ಹೋ
ತುಮಬಿನ ಕಾಂತ್ ಬಹುತ ದುಖ ಪಾಯೆ....

(ಮನೆ ಮಠ ಎಲ್ಲ ಪರಕೀಯವಾಗಿ ಕಾಣುತ್ತಿದೆ. ಹೇ, ಕಾಂತ, ನೀನಿಲ್ಲದೆ ತುಂಬಾ ನೋವನ್ನು ಅನುಭವಿಸುತ್ತಿದ್ದೇನೆ.)

ಡಿಮಿಕ್ ಡಿಮಿಕ್ ಡಿಮಿಕ್
ಝುನ ಝುನುಕ್ ಝುನಕ್
ಏಕ ಗೃಹ ಏಕ ಸಂಗಮ,
ಹಾಂ ಬಿರಹಿಣಿ ಸಂಗಕಂತ.
ಕಬ ಪ್ರೀತಿಮ ಹಂಸಿ ಬೋಲಿಹ್ಯೆಂ ರಹೀ ಮ್ಯೆ ಪಂಥ್‌ಃ

(ಒಂದೇ ಕಡೆ ಇದ್ದರೂ ವಿರಹಿಣಿಯಾಗಿದ್ದೇನೆ ಎಂದು ಪ್ರೀತಿಯ ಮಾತನಾಡುತ್ತೀ ಎಂದು ನಾನು ದಾರಿ ಕಾಯುತ್ತಿದ್ದೇನೆ.)

"ಝುಣ್" ಎಂದು ಶಬ್ದ ಮಾಡುತ್ತಾ ಖಂಜರ ಕೆಳಗೆ ಬಿತ್ತು. ಬಾಲದೇವನ ತುಟಿಗಳ ಮೇಲೆ ಮೊದಲ ಬಾರಿಗೆ ಮುಗುಳುನಗೆಯನ್ನು ಕಂಡಳು ಲಕ್ಷ್ಮಿ. ಗೋಧಿ ಬಣ್ಣದ ಮುಖ, ಚಿಕ್ಕ ಚಿಕ್ಕ ಗಡ್ಡ—ಮೀಸೆ. . . .

ಬಾಲದೇವನ ಕಾಲಿನ ಹೆಬ್ಬೆರಳಿನ ಕಡೆ ಕಣ್ಣನ್ನು ನೆಟ್ಟು ಲಕ್ಷ್ಮಿ ಹೇಳಿದಳು

"ಸಾಹೇಬ್ ಬಂದಗೀ."

(ಸಾಹೇಬರಿಗೆ ವಂದನೆ!)

## 10

ಕಾಮ್ರೇಡ್ ವಾಸುದೇವ ಮತ್ತು ಸುಂದರಲಾಲರೂ ಸೆರೆಸಿಕ್ಕಿದರು. . . . ಸೆರೆಸಿಕ್ಕಿದರೆ ಏನಣ್ಣ? ಒಂದು ವರ್ಷದ ಹಿಂದಿನವರೆಗೂ ಸುಂದರ ಗಂಜಿ ಹಾಕಿದ ಬಟ್ಟೆ ಹಾಕಿಕೊಂಡಿದ್ದನ್ನು ಯಾರೂ ನೋಡಿರಲಿಲ್ಲ. ಈಗ ನೋಡಿದರೆ ಬೇಸಿಗೆಯಲ್ಲೂ ಕೋಟು, ಪ್ಯಾಂಟು, ಚಪ್ಪಲಿ, ಕನ್ನಡಕ ಹಾಕಿಕೊಂಡು ಕಟಿಹಾರ ಜಂಕ್ಷನ್ನಿನ ಮುಸಾಫಿರ ಖಾನೆಯಲ್ಲಿ ಕುಳಿತರೆ, ಜನಕ್ಕೆ ಸಂದೇಹ ಬರುವುದಿಲ್ಲವೆ? ಒಂದು ಡಬ್ಬಿ ಸಿಗರೇಟು ಕೊಂಡು ಸದಾ ಹೊಗೆ ಬಿಡುತ್ತಾ ಓಡಾಡುತ್ತಿದ್ದರು. ಈ ಜನ, ಅರ್ಧ ಗಂಟೇಲಿ ಸುಮಾರು ಎಲ್ಲಾ ವ್ಯಾಪಾರಗಾರರ ಹತ್ತಿರಾನೂ ವ್ಯಾಪಾರ ಮಾಡಿದರಂತೆ! "ಏ ಚಹಾದವನೇ, ಕೇಳೋದಿಲ್ವೇನು? ಹಳ್ಳಿಯವರು

ಅಂದುಕೊಂಡುಬಿಟ್ಯೇನು?··ಚಹಾ ತೊಗೊಂಡು ಬಾ. ಬಿಸ್ಕತ್ ತಿನ್ನುತ್ತೀಯಾ ಸುಂದರ್? ಅಯ್ಯೋ, ಆ ಮೂರನೇ ದರ್ಜೆ ಬಿಸ್ಕತ್ ಯಾಕೆ ತಿನ್ನುತ್ತೀಯಪ್ಪಾ? ಕಟಿಹಾರದ ಮಾರಾಟಗಾರರು ಮಹಾ ಚಲಾಕಿನವರು ಅನ್ನೋದು ಎಲ್ಲರಿಗೂ ಗೊತ್ತಿರುವ ವಿಷಯ ತಾನೇ! ಆ ಜನ ಎಷ್ಟೋ ದೊಡ್ಡ ದೊಡ್ಡ ಮನುಷ್ಯರನ್ನು ನೋಡಿದ್ದಾರೆ. ಆದರೆ ಇಂತಹವರನ್ನು ಎಂದೂ ಕಂಡಿರಲಿಲ್ಲ. ಭಿಕ್ಷುಕರಿಗೂ ನಾಲ್ಕು ನಾಲ್ಕಾಣೆ "ಹೋಗು ತಿಂಡಿ ತಿನ್ನು" ಅಂದರು····ಯುದ್ಧದ ಸಮಯ ದಲ್ಲಿ ಅಮೇರಿಕಾದ ಸಾಹೇಬ ಜನ ಹೀಗೇ ಸಿಗರೇಟು, ಬಿಸ್ಕತ್ತು ಖರ್ಚು ಮಾಡುತ್ತಿದ್ದರಂತೆ! ಸಿ.ಐ.ಡಿ. ಗಳು ಎಲ್ಲಿ ಇರೋದಿಲ್ಲ? ತಕ್ಷಣ ಇಬ್ಬರನ್ನೂ ಸೆರೆ ಹಿಡಿದರು.

ಜೋಯಿಸರು ಹೇಳಿದ್ದು ಸರಿಯೇ:

"ಈಗಲೇ ಏನಾಯಿತು? ಇನ್ನೂ ಬಾಕಿ ಇದೆ!"

"ವಾಸುದೇವ—ಕಾಳೀಚರಣನ ಹೆಸರನ್ನು ಹೇಳಿದನಂತೆ."

"ಓ····ಕಾಳೀಚರಣ ಎಲ್ಲಿ?"

"ಮಂಗಳಾದೇವಿಯನ್ನು ಕಟಿಹಾರಿಗೆ ಬಿಡೋದಕ್ಕೆ ಹೋಗಿದಾನೆ."

ಮಂಗಳಾದೇವಿ ಕಟಿಹಾರಿಗೆ ಹೊರಟುಹೋದಳು. ಹಳ್ಳಿಯ ಚರಖಾ ಕೇಂದ್ರ ಮುಚ್ಚಿತು····ಕಟಿಹಾರದಲ್ಲಿ ಮಂಗಳೆಯ ದೂರ ಸಂಬಂಧದ ಭಾವ ನೊಬ್ಬ ಇದ್ದಾನೆ. ಅಲ್ಲಿಗೇ ಅವಳನ್ನು ಕಳುಹಿಸಲು ಕಾಳೀಚರಣ ಹೋಗಿದ್ದಾನೆ. ಪಾರ್ಟಿ ಆಫೀಸಿನಲ್ಲಿ ಸುಮೇರನಜೀ ಹೇಳಿದರು:

"ನಿನ್ನ ಮೇಲೂ ವಾರೆಂಟ್ ಇದೆಯಂತೆ."

"ವಾರೆಂಟ್?"

"ಹೌದು, ವಾಸುದೇವ, ಸುಂದರ ನಿನ್ನ ಹೆಸರೂ ಹೇಳಿದರಂತೆ, ಸ್ವಲ್ಪ ಹುಶಾರಾಗಿ ಮನೆಗೆ ಹೋಗು."

"ವಾಸುದೇವ ಸುಂದರ····ಸುಳ್ಳರು, ವಿಶ್ವಾಸದ್ರೋಹಿಗಳು."

ಕಾಳೀಚರಣ ಕತ್ತಲೆಯಲ್ಲಿ ಕೋಳಿಯ ತೋಟದಲ್ಲಿ ಅವಿತಿಟ್ಟುಕೊಂಡಿದ್ದ. ಸ್ವಲ್ಪ ಕತ್ತಲಾದ ಮೇಲೆ ಮನೆಗೆ ಹೋದರಾಯಿತು. ವಾಸುದೇವ, ಸುಂದರರನ್ನು ಇಷ್ಟು ಹೆಚ್ಚಿಸಿದ್ದು ಸೋಮಾಜಟ್! ಅವನಿಗೆ ಆಶ್ಚರ್ಯವಾಯಿತು. ದರೋಡೆ ಯಾದ ಮೂರು ದಿನಗಳಲ್ಲೇ ಅವನಿಗೆ ಎಲ್ಲಾ ಅರ್ಥವಾಗಿತ್ತು. ಸೆಕ್ರೆಟರಿ

ಯವರಲ್ಲಿ ತಿಳಿಸೋಣವೆಂದು ಅವನು ಪೂರ್ಣಿಯಾಗೆ ಹೋದ, ಆದರೆ ಸೆಕ್ರೆಟರಿ ಪಾಟ್ನಾಗೆ ಹೊರಟುಹೋಗಿದ್ದರು. ಸೆಕ್ರೆಟರಿಯವರ ಹತ್ತಿರ ಎಲ್ಲಾ ಸಮಾಚಾರವನ್ನು ಹೇಳಿಬಿಡಬೇಕು. ಚಲಿತ್ತರ ಕರ್ಮಕಾರನೊಡನೆ ಸ್ನೇಹ ಬೆಳೆಸಿದ್ದರ ಫಲ ಇದು. ನನ್ನ ಮೇಲೇ ಅವರಿಗೆ ನಂಬಿಕೆ ಇಲ್ಲ····ಚಲಿತ್ತರನನ್ನು ಭೇಟಿಯಾಗುತ್ತಿರು ಎಂದು ವಾಸುದೇವನನ್ನು ಒಪ್ಪಿಸಿದರು····ಬಂದೂಕು, ಪಿಸ್ತೂಲು ಎಲ್ಲ ಕೊಡುವವನೂ ಚಲಿತ್ತರನೇ. ಕಾಳೀಚರಣನಿಗೆ ಜೈಲಿನ ಭಯವೇನೂ ಇಲ್ಲ. ಆದರೆ ಪಾರ್ಟಿಗೆ ಎಷ್ಟು ಕೆಟ್ಟ ಹೆಸರು ಬಂತು····ಅಬ್ಬಾ ಮುಂದೆ ಪಾಟ್ನಾನ ದೊಡ್ಡ ಲೀಡರಿಗೆ ಅವನು ಮುಖ ತೋರಿಸುವುದು ಹೇಗೆ? ಎಲ್ಲಾ ನಾಶ ಮಾಡಿಬಿಟ್ಟರು····ಓ····ಯಾರೋ ಬರುತ್ತಿರುವ ಹಾಗಿದೆ!

ಕೋಠಿಯ ತೋಟದಲ್ಲೇ ಕತ್ತಲೆಯಲ್ಲಿ ಚೇಥರೂನ ಭೇಟಿಯಾಯಿತು. ಬೇರು ಕಿತ್ತುಕೊಂಡು ಹೋಗಲು ಬಂದಿದ್ದ. ಹಳ್ಳಿಗೆ ಪೋಲೀಸ್ ಇನ್ಸ್‌ಪೆಕ್ಟರ್ ಬಂದು ಕಾದಿದ್ದಾರೆಂದು ಅವನು ಹೇಳಿದ. ಕಾಳೀಚರಣ ಚೇಥರೂನ ಕೈಗೆ ಎರಡು ರೂಪಾಯಿಗಳನ್ನು ಕೊಟ್ಟ: "ಅಮ್ಮನಿಗೆ ಕೊಟ್ಟುಬಿಡು····ಈ ಒಂದು ರೂಪಾಯಿ ನೀನು ತೊಗೋ."

ಬೇರು ಕಿತ್ತುಕೊಳ್ಳುವುದಕ್ಕೆ ಬದಲು ಚೇಥರೂ ಹಳ್ಳಿಯ ಕಡೆ ಓಡಿದ.... ಪರಾರಿಯಾಗಿರುವ ಕ್ರಾಂತಿಕಾರನನ್ನು ಹಿಡಿದುಕೊಟ್ಟರೆ ತುಂಬಾ ಹಣ ಇನಾಮು ಸಿಗುತ್ತೆ. ತಕ್ಷಣ ಅವನು ನೇರವಾಗಿ ಇನ್ಸ್‌ಪೆಕ್ಟರ್ ಹತ್ತಿರ ಬಂದು ಸುದ್ದಿ ಮುಟ್ಟಿಸಿದ. "ನಾನು ಕಾಳೀಚರಣನನ್ನು ಈಗತಾನೇ ಕೋಠಿಯ ತೋಟದಲ್ಲಿ ನೋಡಿದೆ.... ಇನ್ಸ್‌ಪೆಕ್ಟರ್ ತನ್ನ ಸಿಪಾಯಿಗಳನ್ನು ಕರೆದುಕೊಂಡು ತೋಟಕ್ಕೆ ಬರುವ ಹೊತ್ತಿಗೆ ಕಾಳೀಚರಣ ಮಾಯವಾಗಿದ್ದ."

ಚೇಥರೂ ತೊದಲಿದ. "ಈ ಕಡೆ—ಪಶ್ಚಿಮದ ಕಡೆ ಒಳ್ಳೇ ಕುದುರೆ ಹಾಗೆ ಓಡಿ ಹೋಗುತ್ತಿದ್ದ."

.... ಖೇಲಾವನ ಸಿಂಹನ ಅದೃಷ್ಟ ಕೆಡುತ್ತಿರುವಂತೆ ತೋರುತ್ತದೆ.... ಅದೃಷ್ಟ ಏರಿಕೆಯಲ್ಲಿದ್ದಾಗ ಮಣ್ಣನ್ನು ಮುಟ್ಟಿದರೂ ಚಿನ್ನವಾಗುತ್ತದೆ. ಅದೃಷ್ಟ ಕೆಟ್ಟರೆ ಪ್ರತಿಯೊಂದೂ ಕೆಟ್ಟ ಸಮಾಚಾರಗಳೇ ಕಿವಿಯ ಮೇಲೆ ಬೀಳುತ್ತವೆ. ತಹಸೀಲ್ದಾರರಿಗೆ ಒಂದೂವರೆ ಸಾವಿರ ರೂಪಾಯಿ ಸಾಲ ಕೊಡಬೇಕು.... ಇದಲ್ಲದೆ ಕಮಲಾ ನದಿಯ ದಡದಲ್ಲಿದ್ದ ಜಮೀನಿನಲ್ಲಿ ಹತ್ತು ಬೀಘಾ ಜಮೀನು ಅಡವಿಟ್ಟು, ಇನ್ನೊಂದು ಸಾವಿರ ತಹಸೀಲ್ದಾರರ ಹತ್ತಿರ ಸಾಲ ತೆಗೆದುಕೊಂಡ.

ನಿನ್ನೆ ಬೈರಗಾಛಿಯಿಂದ ಸುದ್ದಿ ಬಂದಿದೆ—ಸಕಲದೀಪ, ಅಜ್ಜಿಯ ಹತ್ತಿರವಿದ್ದ ಹತ್ತು ತೊಲದಷ್ಟು ಚಿನ್ನ ಕದ್ದುಕೊಂಡು ಎಲ್ಲಿಗೋ ಓಡಿಹೋಗಿದ್ದಾನಂತೆ.... ಮದನಪುರ ಜಾತ್ರೆಗೆ ಕಲಕತ್ತೆಯಿಂದ ಒಂದು ನಾಟಕ ಕಂಪನಿ ಬಂದಿತ್ತು. ಅದರಲ್ಲಿ ಒಬ್ಬ ನಟಿಯಿದ್ದಳು. ಸಕಲದೀಪ ಅವಳ ಬಲೆಯಲ್ಲಿ ಸಿಕ್ಕಿಹಾಕಿಕೊಂಡಿದ್ದಾನೆ ಎಂದು ವರ್ತಮಾನ. ಯುವತಿ ಸೊಸೆ ಮನೆಯಲ್ಲಿ ಬಿದ್ದುಕೊಂಡಿದ್ದಾಳೆ. ಸಕಲ ದೀಪನ ಮಾವ ದೊಡ್ಡ ಮನುಷ್ಯರು, ಎಲ್ಲಿದ್ದರೂ ಹುಡುಕಿಸುತ್ತಾರೆ.... ಶೀಲಾವನ್ನನ ಹೆಂಡತಿ ಅವನನ್ನೇ ಆಕ್ಷೇಪಿಸಿದಳು: "ಪೀರ್ ಬಾಬಾನ ಗೋರಿ ಇರುವ ಜಾಗದಲ್ಲಿ ಒಂದು ಝೋಂಪಡಿ ಕಟ್ಟಿಸಿಕೊಡೀ ಅಂತ ಮೂರು ವರ್ಷಗಳಿಂದ ಹೇಳುತ್ತಿದೀನಿ, ನೀವು ಕಟ್ಟಿಸಿಕೊಡಲಿಲ್ಲ. ಕಾಳೀಚರಣನ ಮಾತಿಗೆ ಮರುಳಾಗಿ ಪಾರ್ಟಿ ಮನೆ ಕಟ್ಟಿಸಿಬಿಟ್ರಿ.... ಬಾಬಾ ಪೀರನ ಶಾಪದಿಂದ ನನ್ನ ಮಗ ಹೊರಟುಹೋದ. ಬಾಬಾ ತಪ್ಪು ಕ್ಷಮಿಸಿಬಿಡು. ನನ್ನ ಮಗನ ಬುದ್ಧಿ ಸರಿ ಮಾಡು.... ಹರಕೆ ತೀರಿಸುತ್ತೀನಿ.... ಒಂದು ರೂಪಾಯಿ ಭಂಗಿ ಅರ್ಪಿಸುತ್ತೀನಿ...."

ಮಹಂಗೂದಾಸನ ಮನೆಗೆ ಕಲಾಸಿ ಬಂದಿದ್ದಾನೆ.... ಫುಲಿಯಾಳ ಶರೀರದಲ್ಲೆಲ್ಲಾ ಗಾಯವಾಗಿದೆ. ರೈಲ್ವೆ ಪೈಟ್‌ಮಾನನಿಗೆ ಫುಲಿಯಾ ಅನೇಕ ಬಾರಿ ಹೇಳಿಕಳುಹಿಸಿದಳು. ವೃದ್ಧ ಏತಭಾರಿಯನ್ನು ಕಳುಹಿಸಿದಾಗ ತಿಳಿಯಿತು: ರೈಲ್ವೆ ಪೈಟ್‌ಮಾನೆಗೆ ನೇಪಾಳದ ಹತ್ತಿರದ ಹಳ್ಳಿ ಭಥನಾ ಹಾಗೆ ವರ್ಗವಾಗಿದೆ ಯಂತೆ. ಅವನು ಮಂಚ ಕುರ್ಚಿ ಎಲ್ಲಾ ಮಾರಿಬಿಟ್ಟನಂತೆ. ಸರ್ಕಾರಿ ನೌಕರರಿಗೆ ವರ್ಗವಾದರೆ ತಮ್ಮ ಹತ್ತಿರವಿರುವ ಸಾಮಾನುಗಳನ್ನೆಲ್ಲಾ ಮಾರಿಬಿಡುತ್ತಾರೆ. ಹೊಸ ಜಾಗದಲ್ಲಿ ಹೊಸ ಹೊಸ ಸಾಮಾನುಗಳನ್ನು ಕೊಂಡುಕೊಳ್ಳುವುದು.... ಆದರೆ, ಅದಕ್ಕೆ ಕಟ್ಟಿಕೊಂಡವಳನ್ನು ಬಿಟ್ಟು ಹೊರಟು ಹೋಗುವುದೇನು? ಸಮಾಚಾರ ತಿಳಿದ ಕೂಡಲೇ ಕಲಾಸಿ ಓಡಿ ಬಂದ.... ಯಾರು ಏನೇ ಹೇಳಲಿ ಕಲಾಸಿಯದು ದೋಷವಿಲ್ಲ. ತಪ್ಪೆಲ್ಲಾ ಫುಲಿಯಾದೇ.... ಬಡಪಾಯಿ ಇಷ್ಟು ಖರ್ಚು ಮಾಡಿ ಕೂಡಿಕೆ ಮಾಡಿಕೊಂಡಿದಾನೆ, ಅವನು ಸದಾ ಮನೆಯಲ್ಲೇ ಕಾಯುತ್ತಾ ಕುಳಿತಿದ್ದರೆ ಒಲೆ ಹತ್ತೋದು ಹೇಗೆ? ಬಡಪಾಯಿ ಕಲಾಸಿ, ದಿನವೆಲ್ಲಾ ರೈಲ್ವೇ ಲೈನಿನಲ್ಲಿ ಕೆಲಸ ಮಾಡುತ್ತಿರುತ್ತಿದ್ದ. ಈ ಕಡೆ ಪೈಟ್‌ಮಾನ್ ಲೈನ್ ಕ್ಲಿಯರ್ ಕೊಟ್ಟು, ರೈಲು ಹೊರಟುಹೋದ ಕೂಡಲೇ ಫುಲಿಯಾ ಮುಂದೆ ಬಂದು ಕುಳಿತಿರುತ್ತಿದ್ದ. ಕೊನೆಗೆ ಒಂದು ದಿನ ಹೊಡೆದಾಟ—ಬಡಿದಾಟ ಆಗಿ ಫುಲಿಯಾ ಅವನ ಮನೆಯಿಂದ ಓಡಿಹೋದಳು. ಇದರಲ್ಲಿ ಕಲಾಸಿಯದೇನು ತಪ್ಪು?

ಪಾಪವನ್ನು ಎಷ್ಟೂಂತ ಮುಚ್ಚಿಡುವುದಕ್ಕೆ ಸಾಧ್ಯ? .... ಇಡೀ ಶರೀರಾನೇ ಕೊಳೆತುಹೋಗಿದೆ, ಇನ್ನೂ ಫುಲಿಯಾಗೆ ಬುದ್ಧಿ ಬಂದಿಲ್ಲ. ರಾಮಪಿಯರಿಯಾ ಪ್ರತಿದಿನ ಅವಳ ಹತ್ತಿರ ಬರುತ್ತಾಳೆ. ಫುಲಿಯಾ ಪಿಸು ಮಾತಿನಲ್ಲಿ ಆವಳಿಗೆ ಹೇಳಿಕೊಡುತ್ತಾಳೆ, ಮಹಂತನ ಹತ್ತಿರ ಯಾವುದಾದರೂ ಸಾಮಾನನ್ನು ತೆಗೆಸಿ ಕೊಳ್ಳಬೇಕಾದರೆ ಏನು ಮಾಡಬೇಕು, ಯಾವ ಸಮಯ ಒಳ್ಳೆಯದು, ಇತ್ಯಾದಿ....

ಕಲಾಸಿ ಹೇಳಿಕೊಂಡ: "ಬೇರೆಯವರಿಗೆ ಬಂದ ರೋಗವನ್ನೆಲ್ಲಾ ನಾನು ವಾಸಿಮಾಡುತ್ತೇನೆ. ನನ್ನ ಹೆಂಡತಿಯೇ ಈ ರೋಗವನ್ನು ಅನುಭವಿಸಬೇಕೇ? ....ಮೂರು ಗುಳಿಗೆ ಕೊಟ್ಟರೆ ಆರೋಗ್ಯವಾಗುತ್ತಾಳೆ, ಆದರೆ ಒಂದು ಮಾತು, ಆರೋಗ್ಯ ಸರಿಹೋಗಬೇಕಾದರೆ ಯಾವುದಾದರೂ ಒಂದು ಅಂಗವನ್ನು ಕಳೆದು ಕೊಳ್ಳಬೇಕು....ಕಣ್ಣು, ಮೂಗು, ಹಲ್ಲು, ಬೆರಳು ಇದರಲ್ಲಿ ಯಾವುದಾದ ರೊಂದು ನಿಷ್ಪ್ರಯೋಜಕವಾಗುತ್ತೆ."

ಹಳ್ಳಿಯ ಬಗ್ಗೆ ಕಲಾಸಿ ಅನ್ನುತ್ತಾನೆ: "ಹಳ್ಳಿಯನ್ನು ವಾನರ ಭೂತ ಹಿಡಿದಿದೆ. ಅದರಿಂದ ಹಳ್ಳಿಗೆ ಹಳ್ಳಿಯೇ ನಾಶವಾಗಿ ಹೋಗುತ್ತೆ. ಹಿಂದೆ ಯಾವು ದಾದರೂ ವಾನರ ಈ ಊರಿನಲ್ಲಿ ಸತ್ತಿತ್ತೇನು?"

"ನಿಜವಾದ ವಿಚಾರ, ಪೂರ್ತಿ ನಿಜ! ಡಾಕ್ಟರು ಮೂರು ಕೋತಿಗಳನ್ನು ಸಾಕುತ್ತಿದ್ದರು. ಅವಕ್ಕೆ ಯಾವ ಸೂಜಿ ಚುಚ್ಚಿದ್ದರೋ ಏನು ಕಥೆಯೋ, ಎರಡು ಕೋತಿಗಳೂ ಕೆಮ್ಮುತ್ತಾ ಕೆಮ್ಮುತ್ತಾ ಸತ್ತು ಹೋದುವು....ರಾತ್ರಿ ಯೆಲ್ಲಾ ನರಳಾಡುತ್ತಿದ್ದವು. ಜ್ಞಾಪಕ ಇಲ್ಲವೇನು?"

"ಹೌದು, ಹೌದು. ಈ ಡಾಕ್ಟರ್ ಎಂಥ ಕೆಟ್ಟ ಮನುಷ್ಯ ಇಡೀ ಹಳ್ಳಿಯನ್ನೇ ಹಾಳುಮಾಡಿಬಿಟ್ಟ."

"ಆದರೂ ಪರವಾಗಿಲ್ಲ!"

ಕಲಾಸಿ ಹೇಳಿದ "ನಾನು ರಾತ್ರಿ ಚಕ್ರದ ಪೂಜೆ ಮಾಡಿ, ಯಾವುದಾದರೂ ಒಂದು ಮೊಹಲ್ಲಾದಲ್ಲಿ ಕಟ್ಟುತ್ತೇನೆ. ಆಗ ಎಲ್ಲಾ ಸರಿಹೋಗುತ್ತೆ."

ರಮಜೂದಾಸನ ಮನೆಯಲ್ಲಿ ಕಲಾಸಿ ಚಕ್ರವನ್ನು ಪೂಜಿಸಿದ....ಅಕ್ಕಿ, ಹಾಲು ಮತ್ತು ದಾಸವಾಳದ ಹೂವುಗಳಿಂದ ಚಕ್ರ ಮಾಡಿದ್ದಾನೆ. ಮಧ್ಯದಲ್ಲಿ ಮಣ್ಣಿನ ಒಂದು ದೊಡ್ಡ ಹಣತೆ....ಅದರಲ್ಲಿ ದೊಡ್ಡ ಬತ್ತಿ ಉರಿಯುತ್ತಿದೆ.

ಒಂದು ಶೀಷೆ ಮದ್ಯ ಕುಡಿದು ಕಲಾಸಿ ಕುಳಿತ. ಮಧ್ಯೆ ಮಧ್ಯೆ ಉರಿಯುತ್ತಿರುವ ಬತ್ತಿಯನ್ನು ಬಾಯಿಯಲ್ಲಿ ಇಟ್ಟುಕೊಳ್ಳುತ್ತಾನೆ····ಅಬ್ಬಬ್ಬಾ ಕಲಾಸೀ ದೊಡ್ಡ ಮಂತ್ರವಾದೀ! ಅಯ್ಯೋ····ನಾಲಿಗೇಗೆ ಸೂಜಿ ಚುಚ್ಚಿಕೊಂಡುಬಿಟ್ಟ···· ಈ ಕಡೆಯಿಂದ ಆ ಕಡೆಗೇ ಎಳೆದೇ ಬಿಟ್ಟ!

ಅರೆ ಅಜುಕೆ ರೈನಿಗೆ ಮೈಯಾ
ಬಡಾ ಅನಕಾಲ ಲಾಗೆ
ದಾಹಿನೆ ಡಾಕಿನ್, ಬಾಮೆ ಪಿಚಾಸ್ ಬೋಲೆ.
ದೋಹಾಯ್ ಗೌರಾ ಪಾರಬತೀ ಇಥರ ಮಹದೇವ್
ನೈನಾ ಜೋಗಿನ್, ಜೋ ಸತ ಸ ಬೇಸತ್ ಜಾಯ್
····ಅಂಗ ಅಂಗ ಫೂಟ್ ಬಹರಾಮ್

(ಇಂದಿನ ರಾತ್ರಿ ತುಂಬಾ ದುಷ್ಕಾಲವಾಗಿದೆ. ಬಲಗಡೆ ಡಾಕಿಣಿ, ಎಡಗಡೆ ಪಿಶಾಚಿ, ಗೌರೀ ಪಾರ್ವತಿ, ಮಹಾದೇವ ನೀವೇ ಆಶ್ರಯ. ಕಣ್ಣಿನಿಂದ ಅಸತ್ಯ ಹೊರಟುಹೋಗಲಿ.)

"ಈಗ ನೀವೆಲ್ಲಾ ಸೇರಿ 'ಗೋಚರ್' (ಭಜನೆ) ಹಾಡಿ ಹಳ್ಳಿಯ ಭಜನೆ ಹಾಡುವವರೆಲ್ಲಾ····ಮೃದಂಗ ನುಡಿಸುತ್ತಾ ದೇವಿಯ ಭಜನೆ ಆರಂಭಿಸಿದರು.

ಧಿ ಧಿನಕ್ ತಿಧಿನಕ್
"ಕಹವಾಂ ಕೆ ಜೆ ಅಗೆ ಭೈಯ್ಯಾ ಅ ಅ"

(ಎಲ್ಲಿಂದ ಬಂದೆ ಅಣ್ಣಾ, ಬಾ····)

ಕಲಾಸೀ ದೀಪದ ಬತ್ತಿಯನ್ನು ಕುಣಿಸುತ್ತಿದ್ದಾನೆ, ಬಾಯಿಯಲ್ಲಿ ಇಟ್ಟು ಕೊಂಡು ಬತ್ತಿಯನ್ನು ಆರಿಸುತ್ತಾನೆ, 'ಉಫ್' ಎಂದು ಊದಿ ಮತ್ತೆ ದೀಪ ಹತ್ತಿಸುತ್ತಾನೆ. ····ಪಾರಿವಾಳವನ್ನು ಹಸಿಯಾಗಿಯೇ ಕಚ್ಚಿಕೊಂಡು ತಿಂದು ಬಿಟ್ಟ····ನಿಜವಾದ ಮಂತ್ರವಾದೀ ಕಲಾಸೀ!

# 11

"ಇಲ್ಲಿ ಕೇಳ್ರೀ ...."

ನಿದ್ದೆ ಮಾಡುವಾಗ ತಹಸೀಲ್ದಾರರ ಮೂಗು ತುಂಬಾ ಶಬ್ದ ಮಾಡುತ್ತದೆ! ....ಗೊರಕೆ!!....ಕಮಲೆಯ ತಾಯಿ ಮಂಚದ ಹತ್ತಿರ ನಿಂತಿದ್ದಳು. ಅವಳ ಮುಖದ ಮೇಲೆ ಭಯದ ಕಪ್ಪು ಛಾಯೆ ಅಚ್ಚೊತ್ತಿದಂತಿತ್ತು...."ಇಲ್ಲಿ ಕೇಳ್ರಿ...."

"ಊಂ....ಆಂ?....ಏನು?"

ತಾಯಿ ನಿಧಾನವಾಗಿ ಮಂಚದ ಮೇಲೆ ಕುಳಿತಳು,....ತಹಸೀಲ್ದಾರರು ಕಕ್ಕಾಬಿಕ್ಕಿಯಾಗಿ ಕೇಳಿದರು: "ಏನು?"

"ಏನೂ ಇಲ್ಲ." ತಾಯಿ ಪಿಸುದನಿಯಲ್ಲಿ ಹೇಳಿದಳು....."ಕಮಲಾ ....ಕಮಲಾ ತನ್ನ ಸೆರಗನ್ನು ಮಸಿ ಮಾಡಿಕೊಂಡುಬಿಟ್ಟಳು...."

"ಆಂ?....ಸೆರಗು?" ಕಮಲೆಯ ಬಟ್ಟೆಗೆ ಬೆಂಕಿ ಹತ್ತಿದೆಯೆಂದು ತಹಸೀಲ್ದಾರರಿಗೆ ಅನ್ನಿಸಿತು. ಕಮಲೆಗೇ ಬೆಂಕಿ ಹತ್ತಿಕೊಂಡಿದೆ!

"ಹೌದು, ನಾಲ್ಕು ತಿಂಗಳು...." ತಹಸೀಲ್ದಾರರು, ಕಮಲೆಯ ತಾಯಿ ಇಬ್ಬರೂ ಒಟ್ಟಿಗೆ ನಿಡಿದಾಗಿ ಉಸಿರು ಬಿಟ್ಟರು.

"ಅಯ್ಯೋ ದೇವರೆ!"

"ಅರ್ಥವಾಯ್ತು?"

"ನಿನಗೆ ಹೇಗೆ ಗೊತ್ತಾಯ್ತು?"

"ನನಗೆ ಕಳೆದ ತಿಂಗಳೇ ಸ್ವಲ್ಪ ಸಂಶಯ ಬಂದಿತ್ತು; ಈವತ್ತು ಕೇಳಿದಾಗ ಮಿಕ ಮಿಕ ಮುಖ ನೋಡುವುದಕ್ಕೆ ಆರಂಭಿಸಿದಳು....ಡಾಕ್ಟರ್, ಒಳ್ಳೇ ಚೆನ್ನಾಗಿ ಚಿಕಿತ್ಸೆ ಮಾಡಿದರು....ಈಗ ಮುಖಕ್ಕೆ ಮಸಿ ಬಳಿದಿದೆಯಲ್ಲಾ. ಇದನ್ನು ಅಳಿಸುವವರ್ಯಾರು?"

ತಹಸೀಲ್ದಾರರ ಮುಖ ಒಣಗಿ ಹೋಯಿತು. ಕಣ್ಣು ಮುಂದೆ ಭಯಂಕರ ದೃಶ್ಯಗಳು ಒಂದಾದರಮೇಲೊಂದರಂತೆ ಕುಣಿಯತೊಡಗಿದವು....ಅವರ

ಮುಖದ ಮೇಲೆ ಕಳಂಕ ಅಚ್ಚೊತ್ತಿದಂತೆ ಕಾಣುತ್ತಿದೆ, ಜನವೆಲ್ಲಾ ಅದನ್ನು ನೋಡಿ ಚಪ್ಪಾಳೆ ತಟ್ಟಿಕೊಂಡು ನಗುತ್ತಿದ್ದಾರೆ. ಅವರೆಲ್ಲಾ ಓಡಿ ಬರುತ್ತಿದ್ದಾರೆ.

"ನಾನು ಮೊದಲಿನಿಂದಲೂ ಹೇಳುತ್ತಲೇ ಇದ್ದೆ.—ಇಷ್ಟು ಹಚ್ಚಿಕೊಳ್ಳುವುದು ಒಳ್ಳೆಯದಲ್ಲ ಅಂತ. ಹುಲ್ಲು, ಬೆಂಕಿ ಎಷ್ಟು ದಿನ ದೂರ ದೂರ ಇರಬಲ್ಲವು? ನಿಮ್ಮ ಮುದ್ದು ಮಗಳ ಮೇಲಂತೂ ಮಾಟವನ್ನೇ ಮಾಡಿಬಿಟ್ಟ ಆ ಡಾಕ್ಟರ್. ಈಗಲೂ ಹೇಳುತ್ತಿದ್ದಳು, ಡಾಕ್ಟರ್ ಹೇಳಿದರಂತೆ····"

"ಡಾಕ್ಟರ್ ಏನು ಹೇಳಿದನಂತೆ?" ತಹಸೀಲ್ದಾರರು ಹುಲ್ಲು ಕಡ್ಡಿಯನ್ನೇ ಆಧಾರವಾಗಿ ಹಿಡಿದುಕೊಳ್ಳಲೆತ್ನಿಸುತ್ತಾ ಕೇಳಿದರು.

"ಸ್ಪಷ್ಟವಾಗಿ ಎಲ್ಲಿ ಹೇಳುತ್ತಾಳೆ? ಏನಾದರೂ, ಎಲ್ಲಾ ಮಂಗಳವೇ ಆಗುತ್ತೆ, ಅಂದರಂತೆ ಡಾಕ್ಟರ್."

"ಮಂಗಳ! ಹೂಂ ಮಂಗಳವಾಗುತ್ತೆ....ಕೃತಘ್ನ, ನಾಯಿ! ಇನ್ನು ಕೊರಳಿಗೆ ಹಗ್ಗ ಬಿಗಿದುಕೊಂಡು ನೀರಿನಲ್ಲಿ ಮುಳುಗುವುದು ಒಂದೇ ಮಾರ್ಗ ಉಳಿದಿರೋದು."

"ಆದರೆ ನಾನು ಆಣೆ ಇಟ್ಟು ಹೇಳುತ್ತೇನೆ. ಇದರಲ್ಲಿ ನನ್ನ ಮಗಳ ತಪ್ಪು ಸ್ವಲ್ಪಾನೂ ಇಲ್ಲ." ತಾಯಿ ಅತ್ತಳು: "ಕಮಲೆಯದು ಏನೂ ತಪ್ಪಿಲ್ಲ. ಡಾಕ್ಟರೇ ಅವಳನ್ನು ಪುಸಲಾಯಿಸಿ ಹಾಳುಮಾಡಿಬಿಟ್ಟ."

ಕಮಲೆಯೂ ತನ್ನ ಹಾಸಿಗೆಯ ಮೇಲೆ ಎಚ್ಚರವಾಗಿ ಕುಳಿತಿದ್ದಳು. ಇಂದು ಅವಳಿಗೆ ಮತ್ತೆ ಮತ್ತೆ ಡಾಕ್ಟರ್ ನೆನಪು ಬರುತ್ತಿತ್ತು. ಅವರ ನಗು, ಮಾತು, ಸಿಟ್ಟು, ಜಗಳ, ಮಧುರವಾದ ಮಾತುಗಳು.... ಬಾಹುಗಳಲ್ಲಿ ತಬ್ಬಿಕೊಂಡು.... ಅವಳ ಕಣ್ಣುಗಳಲ್ಲಿ ನೀರು ತುಂಬಿ ಬಂತು. ಆದರೆ ಡಾಕ್ಟರ್ ಹೇಳಿ ಹೋಗಿದ್ದಾರೆ, 'ಏನೇ ಆದರೂ ಮಂಗಳವೇ ಆಗುತ್ತದೆ' ಎಂದು ....ಒಂದು ವೇಳೆ ಡಾಕ್ಟರಿಗೆ ಏನಾದರೂ ಕಾಯಿಲೆ ಆಗಿಬಿಟ್ಟರೆ. ಆಗ?.... ತಾಯಿ ಯಾಕೆ ಅಳುತ್ತಿದ್ದಾಳೆ? ಮಹಾಭಾರತದಲ್ಲಿ ಕುಂತಿ, ದೇವಯಾನಿ, ಅಹಲ್ಯೆ, ದ್ರೌಪದಿ ಕಥೇನೂ ಹೀಗೇ.... ಹೀಗೇ.... ಡಾಕ್ಟರ್ ಹೇಳಿದಾರೆ, ನಮ್ಮಿಬ್ಬರನ್ನೂ ಯಾರೂ ಬೇರೆ ಮಾಡಲಾರರು.

"ಡಾಕ್ಟರ್ ಏನು ಅಂದನಂತೆ?" ಬೆಳಗ್ಗೆ ಚಹ ಕುಡಿಯುತ್ತಿದ್ದಾಗ ತಹಸೀಲ್ದಾರರು ಕೇಳಿದರು. "ಕಮಲಾನ ಕೇಳು, ಡಾಕ್ಟರ್ ಏನು ಹೇಳಿದರೋ ಸ್ಪಷ್ಟವಾಗಿ ಹೇಳು ಅನ್ನು."

ತಾಯಿ ಸುತ್ತಮುತ್ತ ನೋಡುತ್ತಾ ಮೆಲ್ಲನೆ ಹೇಳಿದಳು: "ನಮ್ಮಿಬ್ಬರನ್ನು ಯಾರೂ ದೂರ ಮಾಡಲಾರರು ಅಂದರು ಡಾಕ್ಟರೂ ಅಂತ ಕಮಲೆ ಹೇಳುತ್ತಾಳೆ."

"ಸರಿ ಅರ್ಥವಾಯ್ತು. ತಹಸೀಲ್ದಾರರ ಮುಖ ಮತ್ತೂ ಒಣಗಿಹೋಯಿತು. ಆದರೆ ಒಂದು ಸಮಸ್ಯೆ. ಅವನು ಜೈಲಿನಲ್ಲಿ ಕೂತಿದಾನೆ. ಯಾವ ಶಿಕ್ಷೆ ಆಗುತ್ತೋ ದೇವರಿಗೇ ಗೊತ್ತು.....ಆದೂ ಅಲ್ಲದೆ ಗಂಡಸಿನ ಮನಸ್ಸಿನದು ಏನು ನೆಚ್ಚಿಕೆ? ....ಕಮಲೆಯ ಹತ್ತಿರ ಅವನು ಬರೆದ ಕಾಗದಪತ್ರ ಏನಾದರೂ ಇದೆಯಂತೇನು?"

ತಹಸೀಲ್ದಾರರು ಕಾನೂನು ಬಲ್ಲ ಮನುಷ್ಯರು. ಕಾಗದದ ಮೇಲೆ ಕೇವಲ 'ಕ' ಎಂದು ಒಂದು ಅಕ್ಷರ ಬರೆದಿದ್ದರೆ ಸಾಕು, ಅದರ ಆಧಾರದ ಮೇಲೆ ಇಡೀ ಕರಾರು ಪತ್ರವನ್ನೆಲ್ಲ ಸಿದ್ಧಪಡಿಸಿಬಿಡುತ್ತಾರೆ! ಪಾಟ್ನಾದ ತಜ್ಞರೂ ಅದು ನಿಜವಾದದ್ದೋ, ನಕಲಿಯದೋ ಎಂದು ಗುರುತಿಸುವುದು ಸಹ ಸಾಧ್ಯವಿಲ್ಲ!

"ಕಾಗದಪತ್ರ ಇದ್ದರೂ ಅವಳು ಕೊಡೋದಿಲ್ಲ. ನನ್ನ ನೆಲಮಾಳಿಗೆಯಲ್ಲಿ ಬಚ್ಚಿಟ್ಟುಬಿಡಿ, ಕಮಲೆಗೆ ಕಾಯಿಲೆ ಅಂತ ಹೇಗಿದ್ದರೂ ಜನಕ್ಕೆ ಗೊತ್ತಿದೆ ಅಂತ ಅವಳು ಹೇಳುತ್ತಾಳೆ. ಅಷ್ಟರಲ್ಲಿ ಡಾಕ್ಟರ್ ಬರುತ್ತಾರೆ.....ಹುಡುಗಿಯ ಮಾತು ಕೇಳಿದರೆ ಮನಸ್ಸಿಗೆ ಧೈರ್ಯ ಬರುತ್ತಿಲ್ಲ.....ಅವಳಂತಾಳೆ, ಅಪರಾಧಕ್ಕೆ ಶಿಕ್ಷೆ ಆಗಲೇಬೇಕು. ನನಗೆ ಮನೆಯಲ್ಲೇ ಜೈಲಿನ ಶಿಕ್ಷೆ ಕೊಡೂ ಅಂತ....."

"ಹುಶ್" ತಹಸೀಲ್ದಾರರ ಹೃದಯದಲ್ಲಿ ನೋವಿನ ಅಲೆ ಎದ್ದಿತು. "ನನ್ನ ಮಗಳು ನನ್ನ ಮುಂದೆ ಬರೋದೇ ಇಲ್ಲವೇನು? ಯಾಕೇ?...ಒಂದು ಸಲ ಅವಳ ಹತ್ತಿರ ನಾನು ಮಾತಾಡಬೇಕು. ಏನಂತೀ?"

ಓಹ್! ದಿನದಿನಕ್ಕೆ ಕಮಲೆಯ ಮುಖದ ಕಾಂತಿ ಹೆಚ್ಚುತ್ತಿದೆ. ಮುಖ ಮಂಡಲ ಹೊಳೆಯುತ್ತಿದೆ. ಆದರೆ ಇಂದು ಅವಳ ದೃಷ್ಟಿ ಭೂಮಿಯಲ್ಲಿ ನೆಟ್ಟಿದೆ. ನೀರವವಾಗಿ ಅವಳು ಪರದೆಯ ಹಿಂದೆ ಬಂದು ನಿಂತಳು.

"ಅಕ್ಕಾ."

"...."

"ಈ ಕಡೆ ಬಾ ಅಕ್ಕಾ. ನಿನ್ನದೇನೂ ತಪ್ಪಿಲ್ಲ ಮಗೂ....."

"ಅಪ್ಪಾ, ನನ್ನ ಮುಖ ನೋಡಬೇಡಿ....ನನ್ನ ನೆಲಮಾಳಿಗೇಲಿ ಕೂಡಿ ಹಾಕಿಬಿಡಿ."

ಕಮಲೆ ಬಿಕ್ಕಿ ಬಿಕ್ಕಿ ಅತ್ತಳು.

ಬೇರೆ ಉಪಾಯ ತಾನೇ ಏನಿದೆ?

ಕಮಲೆ ಹೇಳಿದಳು: "ನನಗನ್ನಿಸುತ್ತೆ, ಅವರು ಡಾಕ್ಟರಲ್ಲ, ಜಿನ..... ಒಂದು ಸಲ ಗೌರೀ ಚಿಕ್ಕಮ್ಮ ಜಿನವೀರನ ಕಥೆ ಹೇಳಿದ್ದಳು."

"ಹೆದರಿಕೆ ಆಗುತ್ತಿಲ್ಲವೇನು?"

"ಇಲ್ಲ ಅಮ್ಮಾ. ಈಗ ಡಾಕ್ಟರ್ ನನ್ನ ಹತ್ತಿರಾನೇ ಇದಾರೆ. ನನಗೆ ಹೆದರಿಕೆ—ಭಯ ಏನೂ ಆಗುತ್ತಿಲ್ಲ. ಆದ್ದರಿಂದಾನೇ ನಾನು ಏಕಾಂತದಲ್ಲಿ, ಕತ್ತಲೆಯಲ್ಲಿ ಇರಬೇಕೂ ಅಂತ ಇಷ್ಟಪಡುತ್ತಿದ್ದೇನೆ, ಅಮ್ಮಾ. ಡಾಕ್ಟರದು ಏನೂ ತಪ್ಪಿಲ್ಲ. ಅವರು ನಿಜವಾಗಲೂ ಜಿನರು."

ಜಿನ ಯಾರ ಮೇಲಾದರೂ ಪ್ರಸನ್ನವಾದರೆ ತಕ್ಷಣ ಅವರನ್ನು ಏನಾದರೂ ಮಾಡಿಬಿಡುತ್ತಾನಂತೆ. ರೂಪಾಯಿ—ಕಾಸು, ಭೂಮಿ—ಕಾಣಿ, ಸಂಪತ್ತುಗಳ ರಾಶಿಯೇ ಹಾಕಿಬಿಡುತ್ತಾನೆ! ಜಿನ ಯಾರ ಮೇಲಾದರೂ ಅಪ್ರಸನ್ನವಾದರೆ ಫಲಿಸಿದ ಭತ್ತದ ಗದ್ದೆಗೇ ಇಲಿಗಳು ಮುತ್ತುತ್ತವೆ....ತಂಬಾಕಿನ ಮೇಲೆ ಕಲ್ಲುಗಳು ಬೀಳುತ್ತವೆ....ಮನುಷ್ಯ ಯಾವುದಾದರೂ ದೊಡ್ಡ ಸೆಷನ್ ಕೇಸಿನಲ್ಲಿ ಸಿಕ್ಕಿಹಾಕಿಕೊಳ್ಳುತ್ತಾನೆ! ತಹಸೀಲ್ದಾರರು ಯೋಚಿಸಿ ನೋಡಿದರು. ಡಾಕ್ಟರ್ ಅವರ ಮನೆಯೊಳಗೆ ಕಾಲಿಟ್ಟ ದಿನದಿಂದ ಪ್ರತಿ ದಿನ ಏನಾದರೊಂದು ಸಂಪಾದನೆ ಇದ್ದೇ ಇದೆ.....ಇಡೀ ಹಳ್ಳಿಗೆ ನಷ್ಟವಾದ ಪ್ರಸಂಗದಲ್ಲೂ ತಹಸೀಲ್ದಾರರಿಗೆ ಅದರಿಂದ ಲಾಭವೇ ಆಗಿದೆ....ಮೊಕದ್ದಮೆಯಲ್ಲಿ ಇಡೀ ಹಳ್ಳಿ ಸಿಕ್ಕಿಹಾಕಿಕೊಂಡಿತ್ತು. ಆದರೆ ಅಷ್ಟು ದೊಡ್ಡ ಸೆಷನ್ ಕೇಸ್ ಬೇರೆಯವರ ತಲೆಗೇ ಅಂಟಿಕೊಂಡಿತು.....ತಮ್ಮ ಮನೆಯಿಂದ ಒಂದು ಕಾಸೂ ಹೊರಗಡೆ ಹೋಗಲಿಲ್ಲ, ಬದಲಿಗೆ ಸುಮಾರು ಐದು ಸಾವಿರ ರೂಪಾಯಿಗಳಷ್ಟು ಲಾಭವೇ ಆಯಿತು. ಶೇಲಾವನ, ರಾಮಕೃಪಾಲ ಸಿಂಗರ ಜಮೀನು ಪುಕ್ಕಟೆಯಾಗಿ ಸಿಕ್ಕವು. ಕಮಲೆ ಹೇಳುವುದು ಸರಿ—ಡಾಕ್ಟರ್ ಜಿನ!

ಕಮಲೆ ಒಂದು ಸಪ್ತಾಹವನ್ನು ಸಂತೋಷವಾಗಿ ಕಳೆದಳು. ಕೆಲವು ಪುಸ್ತಕಗಳು ಬೇಕೆಂದು ಕೇಳಿದಳು—"ವಿಷವೃಕ್ಷ, ಇಂದಿರಾ, ರಾಜಸಿಂಹ,

ಆನಂದ ಮಠ, ದೇವದಾಸ, ಶ್ರೀಕಾಂತ, ರಂಗಭೂಮಿ, ಗೋದಾನ ಮತ್ತು . . . .ಹರಿಮೋಹನ ಬಾಬುವಿನ ಕನ್ಯಾದಾನ. ಈಗ ಸಧ್ಯಕ್ಕೆ ಇಷ್ಟು ಪುಸ್ತಕಗಳು ಸಾಕು. ಡಾಕ್ಟರ್ ಅಲ್ಮಾರದಲ್ಲಿ ಪುಸ್ತಕಗಳಿವೆ. . . .ಹೌದು, ತೆಗೆಸಿ. . . . ಪ್ಯಾರುವಿಗೆ ಹೇಳಿ. . . . ."

ನೆಲಮಾಳಿಗೆಯ ಮೇಲಿನ ಕಿಟಕಿಯಿಂದ ಚಂದ್ರ ಇಣುಕಿ ನೋಡುತ್ತಾನೆ. . . . .ಶರತ್ಕಾಲದ ಚಂದ್ರ. ಚಂದ್ರ ಮೋಡಗಳ ಹಿಂದೆ ಅವಿತುಕೊಳ್ಳುತ್ತಾನೆ. . . . .ದೇವಿ ದುರ್ಗಿ ಒಮ್ಮೆ ಸೂಚನೆ ಕೊಟ್ಟಿದ್ದಾಳೆ,. . . .ಈ ಬಾರಿ ದೇವಿ ಯಾವ ವಸ್ತುವಿನ ಮೇಲೇರಿ ಬರುತ್ತಾಳೋ? ಕಾಗದ ಬರೆದು ತಂದೆಯಿಂದ ತಿಳಿದುಕೊಳ್ಳಬೇಕು. ಖಂಡಿತ ಆನೆಯ ಮೇಲೆ ಬರಬಹುದು . . . . ದೇವಿ ಆನೆಯನ್ನೇರಿ ಬಂದಾಗ. . . . .

## 12

ಜೈ ದುರ್ಗಾ ಮಾತೆಗೆ ಜಯವಾಗಲಿ,

ಚಂಪಾಪುರದ ಕುಮಾರ ಸಾಹೇಬ ಈ ಬಾರಿ ಮತ್ತೆ ದೊಡ್ಡ ದೊಡ್ಡ ಜಟ್ಟಿ ಕರೆಸಿದ್ದಾನೆ. ಕುಸ್ತಿ, ಶಿಕಾರಿ, ಸಂಗೀತ ಮತ್ತು ಸಾಹಿತ್ಯ ಎಲ್ಲದರ ಸಮ್ಮಿಳಿತ ಪೀಠ ಎನ್ನಿಸಿಕೊಂಡಿದೆ ಚಂಪಾಪುರದ ಕುಮಾರ ಸಾಹೇಬನ ಮನೆಯ ವೇದಿಕೆ.

ವೃದ್ಧರಾಜನ ಕಾಲದಲ್ಲಂತೂ ಬಿಡಿ, ಈಗಲೂ ಏನೂ ಕಡಮೆಯಾಗಿಲ್ಲ . . . .ವಿಶ್ವಕವಿ ರವೀಂದ್ರನಾಥ ಠಾಕೂರರು ಇದೇ ವೇದಿಕೆಯ ಮೇಲೆ ನಡೆದ ಸಾಹಿತ್ಯಗೋಷ್ಠಿಯಲ್ಲಿ ತಮ್ಮ ಪ್ರಸಿದ್ಧ ರಚನೆ 'ರಾಜ–ರಾಣಿ' ಯನ್ನು ಓದಿದ್ದರು! ಅಲ್ಲಿ ನಡೆದ ಸಂಗೀತ ಮಂಡಲಿಯಲ್ಲಿ ಒಂದು ಇಡೀ ಸಪ್ತಾಹ, ಫೈಯಾಜ್ ಖಾನರ ಅಮರ ಸ್ವರ ಪ್ರತಿಧ್ವನಿಸಿತ್ತು! ವೃದ್ಧರಾಜ ಶಿಕಾರಿಯ ಬಗ್ಗೆ ಅನೇಕ ಪುಸ್ತಕ ಗಳನ್ನು ಬರೆದಿದ್ದ . . . .

ಈ ಬಾರಿ ಪಂಜಾಬಿ ಜಟ್ಟಿ ಮುಷ್ತಾಕನ ಶಿಷ್ಯ 'ಚಾಂದ್' ಬಂದಿದ್ದಾನೆ. ....ಚೆನ್ನಾಗಿರುತ್ತದೆ. ಕಾಳೀಚರಣ ಬಸಮಂಖಿಯ ಹತ್ತಿರ ಒಂದು ಹಳ್ಳಿಯಲ್ಲಿದ್ದ....ಅವನ ದೂರದ ಬಂಧುಗಳು ತುಂಬಾ ಬುದ್ಧಿವಂತರು. ಅವನ ಹೆಸರನ್ನು ರುಸ್ತುಮಖಾನ್ ಎಂದು ಬದಲಾಯಿಸಿಬಿಟ್ಟಿದ್ದರು. ರುಸ್ತುಮಖಾನ್ ಪೂರ್ವದೇಶವನ್ನು ತಂಬಾಕಿನ ದಳ್ಳಾಳಿ ಎಂದು ಜನರೊಡನೆ ಹೇಳುತ್ತಾರೆ. ಹಿಂದಿನ ದಿನ ಚಾಂದ್ ಕಾಚಾ ಕಟ್ಟಿಕೊಂಡು ಅಖಾಡಕ್ಕೆ ಇಳಿದಿದ್ದನಂತೆ. ಆದರೆ ಕುಸ್ತಿ ಮಾಡಲು ಯಾರೂ ಜೊತೆಗೇ ಸಿಗಲಿಲ್ಲವಂತೆ, ಇದು ಕಾಳೀಚರಣನ ಅಭಿಮಾನಕ್ಕೆ ಬರೆ ಕೊಟ್ಟಂತಾಗಿದೆ. ಇಂದು ಅವನು ಖಂಡಿತ ಹೋಗುತ್ತಾನೆ.

....ಚಂಪಾಪುರದ ಜಾತ್ರೆಯಲ್ಲಿ ನಡೆಯುತ್ತಿರುವ ಕುಸ್ತಿಯಪ್ಪಾ.... ಒಮ್ಮೊಮ್ಮೆಯಂತೂ ನೋಡುತ್ತಿರುವವರಿಗೇ ಆವೇಶ ಬಂದಂತಾಗುತ್ತದೆ. ಅಕ್ಕ ಪಕ್ಕ ನಿಂತಿದ್ದವರಲ್ಲೇ ಧಕ್ಕಾಮುಕ್ಕಿ ಆರಂಭವಾಗಿಬಿಡುತ್ತದೆ. ಮಧ್ಯೆ ಮಧ್ಯೆ ಪೋಲೀಸಿನವರು ಛಡೀ ತೋರಿಸಿದ್ದಾರೆ. ವರ್ಷದಲ್ಲಿ ಒಂದೆರಡು ಸಾವಾದರೂ ಖಂಡಿತ ಆಗುತ್ತಿತ್ತು.....

ಇಂದೂ ಚಾಂದ್ ಕಾಚಾ ಕಟ್ಟಿ ತಿರುಗಾಡುತ್ತಿದ್ದ. ಕಾಳೀಚರಣ ಗುಂಪಿನ ಮಧ್ಯೆ ನಿಂತುಕೊಂಡೇ ನೋಡಿದ. "ಭಲೇ ಗೆಳೆಯಾ, ಶರೀರ ಚೆನ್ನಾಗಿ ಇಟ್ಟುಕೊಂಡಿರುವೆ....ನಿನಗೊಂದು ನಮಸ್ಕಾರ.."

....ಓ....ಈವತ್ತೂ ಚಾಂದ್‌ಗೆ ಜೊತೆ ಸಿಗಲಿಲ್ಲವೇನು ? .... ಜೈ ಜೈ ದುರ್ಗಾಮಾತೆಗೆ ಜಯವಾಗಲಿ, ಜೊತೆ ಸಿಗಲಿಲ್ಲವೆ? ಜೈ....

"ಆ....ಜ್ಞಾ.... ಅಲೀ" ಹಾಕಿಕೊಂಡಿದ್ದ ಚಡ್ಡಿ, ಪೈಜಾಮುಗಳನ್ನು ತೆಗೆದುಹಾಕಿ ಕಾಳೀಚರಣ ಮೈದಾನದಲ್ಲಿ ಬಂದು ನಿಂತ.

"ಏ ಯಾರೋ ಹುಚ್ಚನಿರಬೇಕು. ಹೊಡೆಯಿರಿ."

"ಇಲ್ಲ. ಇಲ್ಲ. ಕಾಚಾ ಕಟ್ಟಿಕೊಂಡಿದಾನೆ."

"....ನಿಜ ಇದು ನೋಡು, ನಿಜವಾದ ಜೋಡಿ! .... ಯಾರಿವನು? ಅಖಾಡಾ ಪ್ರವೇಶಿಸುವ ರೀತಿಯೇ ಆಕರ್ಷಕವಾಗಿದೆ. ಅವನನ್ನು ನೋಡಿ ಎಲ್ಲರ ಕಣ್ಣುಗಳಲ್ಲೂ ಬೆಳಕು ಮಿಂಚುತ್ತಿದೆ. ಎಲ್ಲರೂ ಒಬ್ಬರನ್ನೊಬ್ಬರು ನೋಡುತ್ತಾರೆ. "ಹೌದು.... 'ಚಾಂದ್'ಗೆ ಸರಿಯಾದ ಜೋಡಿ."

ಮುಖ್ಯಸ್ಥ ಹೆಸರು ಕೇಳಿ, ತಕ್ಷಣ. ಕುಸ್ತಿಮಾಡಲು ಅಪ್ಪಣೆ ಕೊಡುತ್ತಾನೆ.

ವಾದ್ಯಗಳೆಲ್ಲಾ ಥಬ್ಬನೇ ನಿಂತವು.... ಯಾಕೆ ಏನಾಯಿತು? ಕುಸ್ತಿ ನಡೆಯುತ್ತದೋ ಇಲ್ಲವೋ? ಪಹಿಲ್ವಾನ್ ಮುಸ್ತಾಕ ಅಲೀ ಕೈ ಜೋಡಿಸಿಕೊಂಡು ಕುಮಾರ ಸಾಹೇಬರೊಂದಿಗೆ ಹೇಳುತ್ತಿದ್ದಾನೆ. "ಏನು ಹೆಸರಂತೆ.... ಕುಸ್ತಿ ಅಲೀ? ಜೋಗಬನದವನು? ಮೋರಂಗಿಯ ಜಾತಿಯವನೇನು?.... ಅಲ್ಲ, ಅಲ್ಲ ದೇಸಿಯವನು.... ಭಲೇ, ಒಳ್ಳೇ ಜೋಡಿ!"

ಚಟಾಕ್ ಚಟಫಾ ಚಟಫಾ ಗಿಡಥಾ

"ಓಹೋ ಹೋ.... ಭೇಷ್ ಉಸ್ತಾದ್.... ಅಲ್ಲಿ ನೋಡು ತಪ್ಪಿಸಿ ಕೊಂಡುಬಿಟ್ಟ.... ಇವನು ಒಳ್ಳೇ ಮಿಂಚು.... ಮಿಂಚು.... ಚಾಂದ್ ಕುಣಿಯುತ್ತಿದ್ದಾನೆ. ಇದು ಪಂಜಾಬೀ ಪಟ್ಟು. ರುಸ್ತುಮ್ ಸುಮ್ಮನೇ ನಗುತ್ತಿದ್ದಾನೆ...." ಮಂಗಳಾ.... ಉಸ್ತಾದ್, ಈವತ್ತೇನಾದರೂ ನಾನು ಸೋತರೆ ಮುಂದೆ ಮಂಗಳೆಯನ್ನು ಮುಟ್ಟುವುದು ಪಾಪ ಎಂದುಕೊಳ್ಳುತ್ತೇನೆ.... ಒಂದು ವೇಳೆ ಗೆದ್ದರೆ? .... ಇದು ನನ್ನ ಪರೀಕ್ಷೆ.... ಚಾಂದ್‌ಗೆ, ಅವನ ಗುರು ಇದೇನು ಕಲಿಸಿದ್ದಾನೆ? ಹುಚ್ಚನ ಹಾಗೆ ಹೀಗೆ ಮೇಲೆ ಬೀಳುತ್ತಾನಲ್ಲಾ! ಕಾಳೀ.... ಅಲ್ಲ ರುಸ್ತುಂ ನಸುನಗುತ್ತಾ ಒಂದು ಸಣ್ಣ ಪಲ್ಟಿ ಹೊಡೆದ.... ಚಾಂದ್ ಮತ್ತೆ ಒಮ್ಮೆಲೇ ಅವನ ಮೇಲೆ ಆಕ್ರಮಣ ಮಾಡಿದ.

"ಅ....ಚಾ....ಚಾ...."

ಈ ರುಸ್ತುಂ ಖಾನನೂ ತುಂಬಾ ಅದ್ಭುತ ಮನುಷ್ಯ ಕಣಯ್ಯಾ. ಇವನಿಗೆ ಯಾವುದಾದರೂ ಮಂತ್ರ ಗೊತ್ತೇನು? ಹೂಂ.... ಚಾಂದ್‌ಗೂ ಅವನ ಶಕ್ತಿ ಅರ್ಥವಾಗಿರಬೇಕು....

"ಇಲ್ಲಣ್ಣ, ಎಷ್ಟಾದರೂ ನಮ್ಮ ಭಾಷೆ ನಮ್ಮ ಭಾಷೇನೇ! ದೇಸಿ ದೇಸಿಯೇ!"

.... ಇನ್ಸ್‌ಪೆಕ್ಟರೇನೂ ನೋಡುತ್ತಿಲ್ಲ ತಾನೇ? .... ಯಾಂಗೆ ಗೊತ್ತು ಇದು ಆಟ ಆಡುವ ಸಮಯವಲ್ಲ. ಬೇಗ ಮುಗಿಸಿಬಿಡಬೇಕು....

"ಅರೆ....ಅ....ಚ್ಯಾ....ಚ್ಯಾ...."

ಹಿಂದುಗಡೆ ನಿಂತಿದ್ದ ಜನ ಕಷ್ಟಪಟ್ಟು ಬಗ್ಗಿ ಬಗ್ಗಿ ನೋಡುತ್ತಿದ್ದರು. ಹತ್ತಿರವಿದ್ದ ಒಂದು ಮರದ ಕೊಂಬೆ ಮುರಿದುಹೋಯಿತು ಏನಾಯಿತು?.... ಎಲ್ಲಾ ಮುಗಿದು ಹೋಯಿತೆ?.... ಯಾರು? ಒಂದೂವರೆ ಗಜದಷ್ಟು

ಸಣ್ಣ ದೂರದಲ್ಲಿ ರುಸ್ತುಂ 'ಒಂದು ಸುತ್ತು ಸುತ್ತಿದ. ಚಾಂದ್‌ಗೆ ಆಕಾಶ ತೋರಿಸಿಬಿಟ್ಟ.

"ಎಲ್ಲಿಗೆ ಹೋದ ರುಸ್ತುಂ ಎಲ್ಲಿಗೆ ಹೋದ?" ಕುಮಾರ್ ಸಾಹೇಬರು ವಿಹ್ವಲರಾಗಿ ಕೂಗುತ್ತಿದ್ದಾರೆ. ದೇವಿಯ ಪೂಜಾರಿ ಹುಡುಕುತ್ತಿದ್ದಾನೆ: "ರುಸ್ತುಂ ಗುಂಪೆಲ್ಲಾ ದಾರಿಬಿಡಿ. ರುಸ್ತುಂ ಎಲ್ಲಿ ಹೋದ?"

.... ಬೆಲೆಬಾಳುವ ಕಲ್ಲು ಅಕ್ಕಸಾಲೆಯ ಕೈಗೆ ಸಿಕ್ಕಿದಂತೆ ತೋರಿತು, ಇಲ್ಲ, ಇಲ್ಲ, ಕೈಗೆ ಸಿಕ್ಕದ ಹಾಗಾಗಿ ಕಳೆದುಹೋಯಿತು. ಎಲ್ಲಿ ಹೋಯಿತು?

ರುಸ್ತುಂ ಪತ್ತೆಯೇ ಇಲ್ಲ.

ಅನೇಕ ಜನ ಹೇಳಿದರು: ಚಲಿತ್ತರ ಕರ್ಮಕಾರನೇ ವೇಷ ಬದಲಾಯಿಸಿ ಕೊಂಡು ಬಂದು ಅಖಾಡಾದಲ್ಲಿ ಇಳಿದಿದ್ದ ಎಂದು. ಚಲಿತ್ತರನಿಗೆ ಕೆಂಪು ಧ್ವಜ. ಆಂಜನೇಯನ ಮುದ್ರೆಯ ಸಹಾಯವಿದೆ. ಆದ್ದರಿಂದಲೇ ಅವನೆಂದೂ ಸೋಲಲಾರ.

ಜಾತ್ರೆಯಲ್ಲಿ ಕೆಂಪು ಚೀಟಿ ಹಂಚಲಾಯಿತು. ಅದರಲ್ಲಿ ಬರೆದಿತ್ತು— "ಕಮ್ಯೂನಿಸ್ಟ್ ಪಾರ್ಟಿಯ ಕೆಂಪು ಧ್ವಜವನ್ನು ಅಭಿಮಾನದಿಂದ ಎತ್ತಿ ಹಿಡಿಯುವ ಚಲಿತ್ತರ ಕರ್ಮಕಾರನ ಮೇಲಿರುವ ವಾರಂಟನ್ನು ಹಿಂತೆಗೆದು ಕೊಳ್ಳಿ."

ಕಾಳೀಚರಣ ಜನಮುಂಖಿಯ ಸಂಬಂಧಿಕರ ಮನೆಯನ್ನು ಬಿಟ್ಟು ಫಾರಬಿಸ್ ಗಂಜಿನ ಕಡೆ ಹೊರಟುಹೋದ. ಸೆಕ್ರೆಟರಿ ಅವನನ್ನು ಭೇಟಿಯಾಗಲು ಇಷ್ಟ ಪಡುತ್ತಿಲ್ಲ. ಆದರೆ ಅವನು, ಅವರನ್ನು ಭೇಟಿಯಾಗೇ ಆಗುತ್ತಾನೆ. ಕಾಳೀಚರಣ ಕಮಿಟಿಯ ಎರಡಾಣೆಯ ಮೆಂಬರಲ್ಲ, ಸದಸ್ಯ ಮಾತ್ರ ಎಂದು ಸೆಕ್ರೆಟರಿ ಹೇಳಿದ ನಂತೆ. ಇದಿರಿಗೇ ಹೋಗಿ ಅವರಿಗೆ ನಿಜವಿಚಾರ ತಿಳಿಸಬೇಕು. ಆ ರಾತ್ರಿ ಅವನು ಪಾರ್ಟಿಯ ಆಫೀಸಿನಲ್ಲೇ ಇದ್ದ.... ಧರ್ಮಪುರಿಯವರೂ ಸಿಗಲಿಲ್ಲ. ಅವರು ಬೊಂಬಾಯಿಗೆ ಹೋಗಿದ್ದರು. ಕಾಳೀಚರಣ ತನ್ನ ಮೇಲೆ ಆಪಾದನೆಯನ್ನು ದೂರಮಾಡಿಯೇ ಅಲ್ಲಿಂದ ಹೊರಡುವುದು!

"ಓ ನೀವಾ:—ಕಾಳೀಚರಣ" ಮಂಗಳ ಹೆದರಿ ಮರುಕ್ಷಣ ಸುಧಾರಿಸಿ ಕೊಂಡಳು: "ಒಳ್ಳೇ ಮುಸಲ್ಮಾನರ ತರಹ ವೇಷ ಮಾಡಿಕೊಂಡಿದೀರಿ. ಒಳಗೆ ಬನ್ನಿ. ಭಯವೇನೂ ಇಲ್ಲ. ನಾನೊಬ್ಬಳೇ ಇರೋದು."

ಕಾಳೀಚರಣ ಇದ್ದಕ್ಕಿದ್ದಂತೆಯೇ ಮಂಗಳೆಯನ್ನು ಭೇಟಿಯಾಗಲು ಬಂದಿದ್ದ.

ಕಾಳೀಚರಣನನ್ನು ಒಂದು ಹಳೆಯ ರೈಲ್ವೇ ಕ್ವಾರ್ಟರಿನಲ್ಲಿ, ಒಳ ಕೊಠಡಿಯಲ್ಲಿ ಕೂರಿಸಿ, ಮಂಗಳ ಬಿಂದಿಗೆ ತೆಗೆದುಕೊಂಡು ನೀರು ತರಲು ನಲ್ಲಿಯ ಹತ್ತಿರ ನಡೆದಳು. ಕಾಳೀಚರಣ ಸುತ್ತಲೂ ನೋಡಿದ. ಚರಖಾ ತಕಲೀ····ಮಂಚದ ಮೇಲೆ ಕಂಬಳಿಯ ಮೇಲೆ ಬಿಳಿಯ ಖದ್ದರಿನ ಹೊದ್ದಿಕೆ ಇದೆ····ಅವನ ಕಣ್ಣು ಭಾರವಾಗಿತ್ತು. ರೈಲಿನಲ್ಲಿ ರಾತ್ರಿಯೆಲ್ಲಾ ಎಚ್ಚರವಾಗಿಯೇ ಇದ್ದ···· ರೈಲಿನಲ್ಲೂ ಮೇಲಿನ ಹಲಗೆಯ ಮೇಲೆ ಮಲಗಿಕೊಂಡೇ ಪ್ರಯಾಣ ಮಾಡಿದ್ದ····ಕೊಡ, ಲೋಟಗಳ ಸದ್ದಾಯಿತು····ತಣ್ಣನೆಯ ನೀರು— ನಿಂಬೆ ಹಣ್ಣಿನ ಪಾನಕ.

ಮಂಗಳ ಲೋಟವನ್ನು ಅವನ ಕೈಗೆ ಕೊಡುತ್ತಾ ನಕ್ಕಳು: "ನಾನಂತೂ ನಿಮ್ಮನ್ನು 'ಮಿಯಾ' ಅಂತಾನೇ ಕೂಗುತ್ತೇನೆ. ರುಸ್ತುಂ ಅಲೀ, ಜೋಗಬನೀ ಮಿಲ್ಲಿನ ಮುದುಕ ಸರದಾರ."

ಕಾಳೀಚರಣ ಕೈಗೆ ಲೋಟ ತೆಗೆದುಕೊಂಡು ಮಂಗಳೆಯನ್ನೇ ದಿಟ್ಟಿಸಿ ನೋಡಿದ. ಅವಳು ಎಷ್ಟು ಬಡವಾಗಿದ್ದಾಳೆ! ಬಣ್ಣ ಕೂಡಾ ಸ್ವಲ್ಪ ಬಿಳುಚಿಕೊಂಡಿದೆ!

"ಹುಷಾರ್ ಹ್ಯಾಂಡ್ಸ್ ಅಪ್."

····ಇನ್ಸ್‌ಪೆಕ್ಟರ್ ಪಿಸ್ತೂಲು ಹಿಡಿದು ಮುಂದೆ ನಿಂತಿದ್ದ. ಎಂಟು ಹತ್ತು ಜನ ಪೋಲೀಸಿನವರು ಗುಂಡು ಹಾರಿಸುವುದಕ್ಕೆ ಸಿದ್ಧರಾಗಿರುವವರಂತೆ ಬಂದೂಕು ಹಿಡಿದು ನಿಂತಿದ್ದರು.

"ಇನ್ಸ್‌ಪೆಕ್ಟರೇ ಸ್ವಲ್ಪ ಸುಮ್ಮನಿರಿ. ನೀರಾದರೂ ಕುಡೀಲಿ." ಮಂಗಳೆಗೆ ಪೋಲೀಸಿನವರದೇನು ಭಯ?

"ನೀವು····ನೀನು····ಇವನಿಗೆ ಏನಾಗಬೇಕು? ನೀನು ಏನು ಮಾಡ್ತೀ? ನಿನ್ನನ್ನೂ ಸೆರೆ ಹಿಡಿತೀನಿ."

"ಇನ್ಸ್‌ಪೆಕ್ಟರೇ, ಮೊದಲು ಇವರು ನೀರು ಕುಡೀಲಿ, ಸುಮ್ಮನಿರಿ." ಮಂಗಳಾ ತನ್ನ ಸರ್ಟಿಫಿಕೇಟನ್ನು ಇನ್ಸ್‌ಪೆಕ್ಟರನ ಕೈಗೆ ಕೊಟ್ಟಳು.

"ಓ....ನೀವು ಚರಖಾ ಕೇಂದ್ರದವರೋ?" ಅವನು ಮಂಗಳೆಯ ಸರ್ಟಿಫಿಕೇಟ್ ನೋಡಿ ವಾಪಸ್ಸು ಕೊಟ್ಟ.

"ಹೌದು, ಮೇರಿಗಂಜಿನಲ್ಲಿ ಕೆಲಸ ಮಾಡುತ್ತಿದ್ದೆ. ಅಲ್ಲೇ ಇವರ ಪರಿಚಯವಾಯಿತು. ಒಟ್ಟಿಗೆ ಕೆಲಸಾನೂ ಮಾಡಿದೀನಿ. ಆದ್ದರಿಂದ...."

"ಈ ಬದ್ಮಾಷನ ಗಡ್ಡ ಕಿತ್ತೆಸಿ."

ಮಂಗಳಾ ಬಾಗಿಲನ್ನು ಮುಚ್ಚಿಕೊಂಡಳು.

ಕಾಳೀಚರಣನ ಭುಜದ ಮೇಲೆ ಪೋಲೀಸಿನವರ ಬಂದೂಕುಗಳ ಭಾರವಿತ್ತು. ಪಾನಕ ಮಾಡಿದ್ದರಿಂದ ಅವನು ತೇಗುತ್ತಾ ಪೋಲೀಸ್ ಲಾರಿಯಲ್ಲಿ ಹೋಗಿ ಕುಳಿತ. ಕಾರ್ತಿಕ ಮಾಸದ ನಿಂಬೆಹಣ್ಣಿನಲ್ಲಿ ಎಷ್ಟು ಸುವಾಸನೆ ಇರುತ್ತದೆ.... ಅವನ ತಲೆಯಿಂದ ರಕ್ತ ಸುರಿಯುತ್ತಿತ್ತು. ಆದರೆ ಅವನ ಮನಸ್ಸು ಸಂತುಷ್ಟವಾಗಿತ್ತು!

ಇನ್ಸ್‌ಪೆಕ್ಟರ್ ಅವನ ಮುಖಕ್ಕೆ ಹಂಟರ್‌ನಿಂದ ಹೊಡೆದು ಹೇಳಿದ: "ಮೂರ್ಖರು ಬೇಕಾದರೆ ಸಾಯುತ್ತಾರೆ. ಮಾಡಿದ ತಪ್ಪನ್ನು ಒಪ್ಪಿಕೊಳ್ಳೋದಿಲ್ಲ. ಆ ಸೋಮಾಜಟನೂ ಹೀಗೇ. ಚಲಿತ್ತರ ಕರ್ಮಕಾರ ನಿಮ್ಮ ತಾಯಿಯ ಮಿಂಡ, ಹೌದು ತಾನೇ?"

ಕಾಳೀಚರಣನ ಕೈಯ ಬೇಡಿ ಒಮ್ಮೆ ಝುಣಗುಟ್ಟಿತು. ಗಾಯಗೊಂಡಿದ್ದ ಬೆನ್ನಿನ ನೋವು ಮರುಕಳಿಸಿತು. ಕಣ್ಣುಗಳಲ್ಲಿ ರಕ್ತ ತುಂಬಿತು....ಆದರೆ ಇಲ್ಲ, ಅವನ ಪಾರ್ಟಿಗೆ ಕೆಟ್ಟ ಹೆಸರು ಬರುತ್ತದೆ, ಅವನು ಎಲ್ಲವನ್ನೂ ಸಹಿಸಲೇ ಬೇಕು.

"ವಾಪಸ್ಸು ಕಳುಹಿಸು ಅಯೋಗ್ಯನನ್ನು. ವಾಸುದೇವ, ಸುಂದರರು ಎರಡೇಟು ಬಿದ್ದ ಕೂಡಲೇ ಬಡ ಬಡ ಅಂತ ಎಲ್ಲಾ ಹೇಳಿಕೊಂಡರು. ಅವರಿಗೆ ನಷ್ಟವಾಗಿದ್ದೇನು? ಸರ್ಕಾರೀ ಸಾಕ್ಷಿಗಳಾದರು! ಇಬ್ಬರೂ ಬಿಡುಗಡೆಯಾಗ್ತಾರೆ....ಸಾಯೋದು ಇವರಿಬ್ಬರೇ....ದರೋಡೆ ಜೊತೆಗೆ ಕೊಲೆ."

ನಿಂಬೆ ಹಣ್ಣಿನ ಪಾನಕ! ಕಾಳೀಚರಣನಿಗೆ ಈಗಲೂ ತೇಗು ಬರುತ್ತಿದೆ.... ಮಂಗಳಾ, ನನ್ನನ್ನು ಕ್ಷಮಿಸು.

# 13

ಬಾಲದೇವ ಅನೇಕ ದಿನಗಳ ನಂತರ ರಾಮಕೃಪಾಲಾಶ್ರಮಕ್ಕೆ ಬಂದಿದ್ದ. . . . ಆಶ್ರಮ ತುಂಬಾ ಬದಲಾಗಿಬಿಟ್ಟದೆ. ಜನರೂ ಬದಲಾಯಿಸಿದ್ದಾರೆ. ಆಶ್ರಮದ ರೀತಿ ನೀತಿಯೂ ಕೆಟ್ಟುಹೋಗಿದೆ. ಈಗ ಜನ ಮೀನು, ಮೊಟ್ಟೆಗಳನ್ನೂ ವೇದಿಕೆಯ ಮೇಲೆ ಕುಳಿತುಕೊಂಡೇ ತಿನ್ನುತ್ತಾರೆ. ಅಮೀನ್ ಬಾಬು ಸೆಕ್ರೆಟರಿಯಾಗಿದ್ದಾರೆ. ಅವರನ್ನುತ್ತಾರೆ, "ಮೀನು ಮಾಂಸವನ್ನು ಆಶ್ರಮದಲ್ಲಿ ತರುವುದೂ ಇಲ್ಲ, ಬೇಯಿಸುವುದೂ ಇಲ್ಲ. ಜನ ಪಟ್ಟಣದಿಂದ ತಂದು ತಿಂದರೆ, ಅದಕ್ಕೆ ನಾವು ಯಾಕೆ ಅಡ್ಡಿಮಾಡಬೇಕು."

"ಅಡ್ಡಿಯೇನಿಲ್ಲ. . . ." ಬಾಲದೇವ ಕಕ್ಕಾಬಿಕ್ಕಿಯಾಗಿ ಅಮೀನ ಬಾಬುವಿನ ಮುಖ ನೋಡಿದ. "ಆದರೆ ಹಿಂದೆಲ್ಲಾ ಮಾಂಸವನ್ನು ಆಶ್ರಮದ ಆವರಣದಲ್ಲೇ ತರುತ್ತಿರಲಿಲ್ಲ."

"ಈಗ ಹೊಸದಾಗಿ ಅಡಿಗೆಮನೆ ಕಟ್ಟಿಸಿದೀವಲ್ಲ ಅದು ಆಶ್ರಮಕ್ಕೆ ಸೇರಿಲ್ಲ. ಕುನರ ಸಾಹೇಬನ ಜಮೀನಿನಲ್ಲಿದೆ. ಈಗ ನೀವು ಭೂಮಿ ಕಾಣಿ ಇರುವ ಮನುಷ್ಯರು. ಲೆಕ್ಕಪತ್ರ, ನಕ್ಷೆ—ಅಂದಾಜು ಎಲ್ಲಾ ನೋಡುವುದನ್ನು ಕಲಿತಿರಬಹುದು. ನಕ್ಷೆ ನೋಡೋದಾದ್ರೆ ನೋಡಿ. . . . ಆಫೀಸಿನಲ್ಲಿ ನಕ್ಷೆ ಹಾಕಿಸಿ ನೋಡಿ."

ಫಾರಬಿಸ್ ಗಂಜಿನ ಹೊಸ ಮುಖಂಡ ಛೋಟನ ಬಾಬು ಹೇಳಿದ.

ಬಾಲದೇವ ಪೆಚ್ಚು ಪೆಚ್ಚಾಗಿ ಅವನ ಮುಖವನ್ನೇ ನೋಡುತ್ತಾ ನಿಂತಿದ್ದ. ಛೋಟನ್, ಫಾರಬಿಸ್‌ಗಂಜಿನ ಕೆಳದರ್ಜೆಯ ತರುಣ ಮಾತು ಮಾತಿಗೂ ತಲೆ ಹಾಕುತ್ತಾನೆ. . . . ಅಮೀನ್ ಬಾಬುವಿನ ಜೊತೆ ಹಗಲೂ—ರಾತ್ರಿ ಇರುತ್ತಾನೆ, ಆದ್ದರಿಂದ ಬಾಯಿ ತುಂಬಾ ಜೋರಾಗಿದೆ. ಮೊದಲು ದರ್ಜೆಯ ಸುಳ್ಳುಗಾರ, ಫಾರಬಿಸ್‌ಗಂಜಿನ ಹೆಸರನ್ನು 'ಫರೇಬಗಂಜ್' (ಫರೇಜ್=ಮೋಸ) ಎಂದೇ ಬದಲಾಯಿಸಿಬಿಡುತ್ತಾನೆ ಇವನು.

"ಛೋಟನ್ ಬಾಬು. ಲೆಕ್ಕ—ನಕ್ಷೆಯೆಲ್ಲಾ ನೋಡಿ ನಾನೇನು ಮಾಡಲಿ? ರಾಮಕೃಷ್ಣ ಬಾಬುಗಳ ಕಾಲದಲ್ಲಿ. . . ."

"ರಾಮಕೃಷ್ಣಬಾಬುಗಳ ಕಾಲ ರಾಮಕೃಷ್ಣಬಾಬುಗಳ ಜೊತೆಗೇ ಹೋಯಿತು."

ಥೋಟನ್ ಬಾಬುವೇನು, ಆವನ ನೌಕರ ಮಟರನೂ ಮಾತನಾಡುತ್ತಾನೆ. "ಇದು ಕಾಂಗ್ರೆಸ್ ಆಫೀಸು. ಸನ್ಯಾಸಿಗಳ ಮಠವಲ್ಲ."

ಬಾಲದೇವನಿಗೆ ಬುದ್ಧಿಗೇ ಮಂಕು ಕವಿದಂತಾಯಿತು. ಎಲಡಿಕೆ ಅಗಿದೂ ಅಗಿದೂ ಕೆಂಪು ಕಟ್ಟಿದ್ದ ಹಲ್ಲುಗಳನ್ನು ತೆರೆದು ಮಟರಾ ನಕ್ಕ. ಮತ್ತೆ ಚುಟಕೀ ಹಾರಿಸಿ ಹೇಳಿದ: ಕಬೀರ ಹೇಳಿದ ಪ್ರಕಾರವೇನೋ "ಸಬಧನ್ ಸಾಹೇಬ ಕಾ" ಎಲ್ಲಾ ಸಂಪತ್ತೂ ದೇವರದ್ದೇ." ....ಅಂದಹಾಗೆ ಕಂಜರಿ ನುಡಿಸೋದನ್ನು ಕಲಿತಿದೀರಿ ತಾನೇ?"

ಎಲ್ಲರೂ ಗಹಗಹಿಸಿ ನಕ್ಕರು. ಚನ್ನಪಟ್ಟಿಯ ಗುದರು ಹೇಳಿದ: "ಬಾಲದೇವ, ನೀವು ಈಗ ನಿಮ್ಮ ಊರಿಗೆ ಬಂದರೆ, ಜಾತಿಯವರ ಊಟದಲ್ಲಿ ನಿಮಗೆ ಪಾಲು ಸಿಗೋದಿಲ್ಲ."

"ಬಾಲದೇವ ಮೇರೀಗಂಜಿನ ಏಕಾಂತದ ಆನಂದನನ್ನು ಬಿಟ್ಟು ತನ್ನ ಹಳ್ಳೀಗೆ ಯಾಕೆ ಬರ್‍ತಾನಪ್ಪಾ?....ಕುರುಡರಲ್ಲಿ ಒಕ್ಕಣ್ಣನೇ ವಾಸಿ ಅನ್ನೋ ಹಾಗೆ ಆನಂದವಾಗಿ ಮಜಾ ಮಾಡ್ತಿದಾನೆ."

ಬಾಲದೇವನ ಕಣ್ಣುಗಳಲ್ಲಿ ನೀರು ತುಂಬಿತು. ಅಷ್ಟರಲ್ಲಿ ದೋರಿಕ ಸರಮಾ ಬರದಿದ್ದರೆ ಆವನು ಅತ್ತೇಬಿಡುತ್ತಿದ್ದನೇನೋ. ಸರಮಾ ಬಂದ ಕೂಡಲೇ ಕೇಳಿದ, "ಏನು? ಏನ್ಸಮಾಚಾರ? ಬಾಲದೇವನನ್ನು ಯಾಕೆ ರೇಗಿಸುವಿರಿ?"

"ರೇಗಿಸುತ್ತಿಲ್ಲ. ನಾವೆಲ್ಲಾ 'ಸತ್ಸಂಗ' ಮಾಡುತ್ತಿದ್ದೇವೆ." ಥೋಟನ್ ಬಾಬು ನಗುತ್ತಾ ಉತ್ತರ ಕೊಟ್ಟ."

ಸರಮಾ ಹತ್ತಿರವಿದ್ದ ಕುರ್ಚಿಯ ಮೇಲೆ ಬಾಲದೇವನನ್ನು ಕೂರಿಸುತ್ತಾ ಹೇಳಿದ, "ಬಾಲದೇವ ನೀವು ಇಲ್ಲಿ ಕುಳಿತುಕೊಳ್ಳಿ. ನಾನು ಇವರಿಗೆ ಉತ್ತರ ಹೇಳುತ್ತೇನೆ....ಸತ್ಸಂಗ ಅಂದರಲ್ಲಾ ಥೋಟನ್ ಬಾಬು. ನಿಜ ಈ ಬಾಲದೇವ, ದೋರಿಕ್ ಶರ್ಮ, ನೇವಾಲಾಲ್, ಫಗುವಾ, ಸಹದೇವ, ಬಾವನದಾಸ, ಉಜಾಡೂ, ಚುನ್ನಿದಾಸ್, ಪ್ರೀತಿ, ಜಗರನಥಿಯಾ, ಥೇಥಿ, ಗಂಗಾರಾಮ್ ಮುಂತಾದವರ ಸತ್ಸಂಗದ ಫಲವಾಗಿಯೇ ನಿಮ್ಮಂತಹ ಮಕ್ಕಳು

ಹುಟ್ಟೋದು! ....ಈಗ ತಾನೇ ಚವರ್‌ಲೆಟ್ ಕಾರಿನಲ್ಲಿ ಕೂತು ನಾಯಕತ್ವ ಕಲೀತೀದೀರಿ ನೀವು! ದಿನಗಟ್ಟಲೆ ಬರೀ ಹುರಿಗಾಳು ತಿಂದುಕೊಂಡು, ನೂರು ನೂರು ಮೈಲಿ ಕಾಲ್ನಡಿಗೆಯಲ್ಲಿ ಓಡಾಡಿಕೊಂಡು ಕಾಂಗ್ರೆಸ್ ಬಾವುಟ ಹಾರಿಸುವಾಗ ಎಷ್ಟು ಕಷ್ಟವಾಯಿತು ಅನ್ನೋದು ನಿಮಗೇನು ಗೊತ್ತು? ಚಳುವಳಿಯ ಸಮಯದಲ್ಲಿ ನೀವೆಲ್ಲಾ ಸ್ಕೂಲಿನಲ್ಲಿದ್ದಿರಿ, ಪಂಚಮ ಜಾರ್ಜನ ಫೋಟೋ ಒಡೆದು ಹಾಕಿದಿರಿ. ಹೆಡ್‌ಮಾಸ್ಟರನ್ನು ಸ್ಕೂಲಿನ ಒಳಗೆ ಕೂಡಿ ಬಾಗಿಲಿಗೆ ಬೀಗ ಹಾಕಿಬಿಟ್ಟಿರಿ. ಸರಿ, ಈವತ್ತು ಲೀಡರ್ ಆಗಿಬಿಟ್ಟಿದೀರಿ. ನಮಗೂ ಈ ರಹಸ್ಯ ಗೊತ್ತಿದ್ದಿದ್ರೆ ನಾವು ಬರೀ ಫೋಟೋ ಒಡೆದುಹಾಕಿ ಸುಮ್ಮನೆ ಕೂತಿರುತ್ತಿದ್ದೆವು. ....ಹಳ್ಳಿಯ ಜಮೀನ್ದಾರರಿಂದ ಹಿಡಿದು ಪೋಲಿಸ್ ಸ್ಟೇಷನ್ನಿನ ಚೌಕೀದಾರ, ಇನ್ಸ್‌ಪೆಕ್ಟರ್‌ವರೆಗೆ ದ್ವೇಷವನ್ನು ಕಟ್ಟಿಕೊಳ್ಳಬೇಕಾಗಿರಲಿಲ್ಲ. ಹಳ್ಳಿಯವರೆಲ್ಲಾ ಗುಂಪು ಮಾಡಿಕೊಂಡು ನಮ್ಮನ್ನು ಪೋಲೀಸರಿಗೆ ಹಿಡಿದುಕೊಡುವ ಪ್ರಯತ್ನ ಮಾಡುತ್ತಿದ್ದರು. ತಲೆಯಿಲ್ಲದ ಭೂತವನ್ನು ಮೊರ, ಪೊರಕೆಯಿಂದ ಬಡಿದು ಓಡಿಸುವಂತೆ ನಮ್ಮನ್ನು ಹಳ್ಳಿಯಿಂದ ಓಡಿಸುತ್ತಿದ್ದರು....ನಿಮಗೆ ಅದೆಲ್ಲಾ ಅರ್ಥವಾಗುವುದಿಲ್ಲ ಘೋಟನ್ ಬಾಬು. ಆಗ ನೀವಿನ್ನೂ ಹುಟ್ಟಿಯೇ ಇರಲಿಲ್ಲ. ನಿಮ್ಮ ತಂದೆ ಹೆಂಡದ ಅಂಗಡಿಯ ಕಾಂಟ್ರಾಕ್ಟ್ ತೆಗೆದುಕೊಂಡಿದ್ದರು. .... ಅದರಿಂದ ನಾವು ಬೇಕಾದಷ್ಟು ಬೈಗಳ ತಿಂದಿದೀವಿ. ....ಬಾಲದೇವ ಜ್ಞಾಪಕ ಇದೆಯೇನು?....ಅದೇ ಹೆಂಡದ ಅಂಗಡಿಯ ಮುಂದೆ ಪಿಕೆಟಿಂಗ್ ಮಾಡಿದ ವಿಚಾರ?''

ಗುದರ್ ಒಂದು ಕ್ಷಣದಲ್ಲಿ ಮಾತು ಬದಲಾಯಿಸುವುದನ್ನು ಬಲ್ಲ.... ಅವನೂ ಉಪ್ಪಿನ ಸತ್ಯಾಗ್ರಹ ಸಮಯದಲ್ಲಿ ಹೆಗಲಿಗೆ ಚೀಲಹಾಕಿ ಹೊರಟಿದ್ದನಲ್ಲಾ.... ''ಸರೂಜೀ ಅದೇ, ಗಿಘೂಸ ಜಾತ್ರೆಯಲ್ಲಿ ಅಲ್ವಾ?....''

''ಬಾಯ್ಮುಚ್ಚು, ಸಣ್ಣ ಬುದ್ಧಿಯವನೇ'' ಶರ್ಮ ಗದರಿಸಿದರು. ''ಗೆದ್ದ ಎತ್ತಿನ ಬಾಲ ಹಿಡಿಯೋದರಲ್ಲಿ ನಿನ್ನ ಬಿಟ್ಟರಿಲ್ಲ....'' ಎಲ್ಲರೂ ಸೇರಿಕೊಂಡು ಬಾಲದೇವನನ್ನು ರೇಗಿಸುತ್ತಿದ್ದಿರಿ ಅಲ್ಲಾ?....ಯಾಕೇ?....ಈಗ ಬಾಲದೇವ ಸ್ವಲ್ಪ ಚೆನ್ನಾದ ಬಟ್ಟೆ ಹಾಕಿಕೊಳ್ಳುವುದಕ್ಕೆ ಪ್ರಾರಂಭ ಮಾಡಿದಾನೆ, ಮುಖ ಸ್ವಲ್ಪ ಗೆಲುವಾಗಿದೆ, ಹತ್ತಿರ ನಾಲ್ಕು ಕಾಸಿದೆ. ಅದಕ್ಕೇ ನಿಮ್ಮ ಹೊಟ್ಟೆ ಉರೀತಿದೆ ಅಲ್ಲಾ?....ನಡೀರಿ ಬಾಲದೇವ, ಗಂಗೂಲಿಯವರನ್ನು ನೋಡಿ ನಾನೂ ತುಂಬಾ ದಿವಸವಾಯಿತು. ಹೋಗೋಣ.''

"ಈಗ ಮೀಟಿಂಗ್ ಇದೆಯಲ್ಲಾ" ಬಾಲದೇವ ಹೇಳಿದ.

"ಒಳ್ಳೇ ಮನುಷ್ಯರು ನೀವು. ಎಲ್ಲಾ ದಿನಗಳನ್ನೂ ಒಂದೇ ಸಮ ಅಂತ ತಿಳಿದುಕೊಳ್ಳುತ್ತೀರಲ್ಲಾ? ....ಮೀಟಿಂಗ್‌ನಲ್ಲಿ ಇದ್ದು ಏನು ಮಾಡುತ್ತೀರಿ? ಫಾರಬಿಗಂಜಿನ ರಾಜೀನ್ಯಾಯ ನಡೆಯುತ್ತೆ, ಅಷ್ಟೆ. ಖುಶಯ ಬಾಬು ಒಂದು ಕುದುರೆ ಗಾಡಿ ತುಂಬಾ ಕಾಗದ–ಪತ್ರ, ಫೈಲ್–ರಿಜಿಸ್ಟರ್ ತುಂಬಿಕೊಂಡು ಡೂಪ್ಲಿಕೇಟ್‌ಗಳನ್ನು, ಮೊಕದ್ದಮೆಯ ಕಾಗದಗಳನ್ನು ತಂದಿದಾನೆ. ಆ ಕಡೆ ಫಗಾನೀಸಿಂಹನೂ ಒಂದು ನೂರು ಜನರನ್ನು ಪುಸಲಾಯಿಸಿ ಕರೆದುಕೊಂಡು ಬಂದಿದಾನೆ. ರಾತ್ರಿಯೆಲ್ಲಾ ಬಿಸಿ ಬಿಸಿ ಚರ್ಚೆ ನಡೆಯುತ್ತದೆ. ನಡೀರಿ, ಈ ಪಂಚಾಯಿತಿಗಳೆಲ್ಲಾ ನಿಮಗ್ಯಾಕೆ?"

ಬಾಲದೇವ ದೋರಿಕ ಶರ್ಮನೊಡನೆ ಹೊರಟುಹೋದ ಕೂಡಲೇ ಗೂದರ್ ಕಣ್ಣು ಮಿಟುಕಿಸಿ ಪಿಸುಗುಟ್ಟಿದ್ದ.... 'ಸರಿ, ಇವರು ಈ ಗಂಗೂಲಿ ಹತ್ತಿರ ಹೋಗೋದು ಅಷ್ಟರಲ್ಲೇ ಇದೆ. ತಿಂಡಿ ತಿನ್ನೋದಕ್ಕೆ ಹೋಗುತ್ತಿರೋದು. ಬಾಲದೇವನನ್ನು ಚೆನ್ನಾಗಿ ಉಬ್ಬಿಸಿದಾನೆ, ರಸಗುಲ್ಲಾ ವಸೂಲು ಮಾಡುತ್ತಾನೆ.'

ಥೋಟನ್ ಬಾಬು ಹೇಳಿದ: "ಅಮೀನ್ ಬಾಬುವಿಗೆ ಹೇಳಿಬಿಡಬೇಕು. ಮೇರೀಗಂಜಿನಲ್ಲಿ ಇನ್ನು ಬಾಲದೇವನಿಂದ ಕೆಲಸ ನಡೆಯೋದಿಲ್ಲ. ಚರಖಾ ಕೇಂದ್ರ ಹಾಳುಮಾಡಿಬಿಟ್ಟ. ಮನೆಮನೆಯಲ್ಲೂ ಸೋಷಲಿಸ್ಟ್ ಪಕ್ಷದ ಪ್ರಭಾವ ಜಾಸ್ತಿಯಾಗಿದೆ. ಈಗಂತೂ ಎಲ್ಲರೂ ದರೋಡೆ ಕೇಸಿನಲ್ಲಿ ಸಿಕ್ಕಿಹಾಕಿ ಕೊಂಡಿದಾರೆ. ಆ ಊರಿನ ಕಮ್ಯುನಿಸ್ಟ್ ಡಾಕ್ಟರೂ ಅರೆಸ್ಟ್ ಆದ....ಅವನನ್ನಂತೂ ನಾನೇ ಅರೆಸ್ಟ್ ಮಾಡಿಸಿದೆ. ಕಟಿಹಾರಿನ ಇನ್ಸ್‌ಪೆಕ್ಟರ್ ನನ್ನ ಕ್ಲಾಸ್‌ಮೇಟ್!"

ಇಲ್ಲಿ ನೋಡಿ, ಒಬ್ಬ ಬ್ರಹ್ಮಜ್ಞಾನಿ ಹೋದ ಅಂದರೆ ಇನ್ನೊಬ್ಬ ಹಠಯೋಗಿ ಬರುತ್ತಿದ್ದಾನೆ.....ಇವನಂತೂ ಈಗೀಗ ಇನ್ನಷ್ಟು ಅಯೋಗ್ಯನಾಗಿಬಿಟ್ಟಿದಾನೆ.

ಬಾವನದಾಸ ಬರುತ್ತಿದ್ದ.... ಆಶ್ರಮದ ವೃದ್ಧನಾಯಿ 'ಬ್ಲಾಕ್‌ಪ್ರಿನ್ಸ್' ಆವನನ್ನು ದೂರದಿಂದಲೇ ಗುರುತಿಸಿತ್ತು. ಅಶೋಕ ವೃಕ್ಷದ ಕೆಳಗೆ ಅದು ಸುಮ್ಮನೇ ಬಿದ್ದುಕೊಂಡಿರುತ್ತಿತ್ತು. ಬಂದು ಹೋಗುವವರನ್ನು ಗಮನಿಸುತ್ತಿತ್ತು. ಬಾವನದಾಸನನ್ನು ಕಂಡ ಕೂಡಲೇ ಕಿವಿ ನಿಮಿರಿಸಿ ಕತ್ತೆತ್ತಿ ನಿಂತುಕೊಂಡಿತು. ಬಾಲವನ್ನೂ ಅಲ್ಲಾಡಿಸಿತು....ಶಶಾಂಕಜೀ ಈ ನಾಯಿಗೆ 'ಬ್ಲಾಕ್‌ಪ್ರಿನ್ಸ್' ಎಂದು ಹೆಸರಿಟ್ಟಿದ್ದ. ಸೋಷಲಿಸ್ಟ್ ಪಾರ್ಟಿಯ ಚಿನಗಾರಿ, ಲಾಲಪತಾಕಾ ಪತ್ರಿಕೆಯಲ್ಲಿ ಒಂದು ಸಲ ಒಬ್ಬ ಮಾರವಾಡಿಯನ್ನು 'ಬ್ಲಾಕ್‌ಪ್ರಿನ್ಸ್' ಎಂದರೆ

ಬ್ಲಾಕ್ ಮಾಡುವುದರಲ್ಲಿ ಪ್ರಸಿದ್ಧಿ ಪಡೆದವನು ಎನ್ನುವ ಅರ್ಥದಲ್ಲಿ ಬರೆದಿದ್ದರು. ಮಾರವಾಡಿ ಚಿಕ್ಕವಯಸ್ಸಿನವನಾಗಿದ್ದರಿಂದ ಪ್ರಿನ್ಸ್ ಎಂದು ಜೋಡಿಸಿದ್ದರು. ಅದಕ್ಕೆ ಮಾರವಾಡಿ ಲಾಲಪತಾಕ್ ಪತ್ರಿಕೆಯ ಸಂಪಾದಕರ ಮೇಲೆ ಮೊಕದ್ದಮೆ ಹೂಡಿದ್ದ. ಕಾರಣ ತನ್ನನ್ನು ನಾಯಿ ಎಂದು ಕರೆದಿದ್ದಾರೆ ಎಂದು . . . . ಈಗ ಬ್ಲಾಕ್‌ಪ್ರಿನ್ಸ್ ಬಾವನದಾಸನನ್ನು ಚೆನ್ನಾಗಿ ಗುರುತಿಸಿತ್ತು. ಬಾವನದಾಸನೂ ಬ್ಲಾಕ್‌ಪ್ರಿನ್ಸ್‌ನ ಹತ್ತಿರ ಮರದ ಕೆಳಗೆ ಕೂತುಕೊಂಡ. ಓಹ್ ಪ್ರೀತಿಗಾಗಿ ಕಾತರಪಡುವ ಬ್ಲಾಕ್‌ಪ್ರಿನ್ಸ್ ಆನಂದದಿಂದ ಹಾರಿ, ನೆಗೆದು ಬಾವನದಾಸನ ಚೀಲವನ್ನು ಹಿಡಿದೆಳೆದು ದೊಣ್ಣೆಯನ್ನು ಕಚ್ಚಿ ತನ್ನ ಸಂತೋಷವನ್ನು ವ್ಯಕ್ತ ಪಡಿಸಿತು.

"ಏ: ಬ್ಲಾಕ್ ಪ್ರಿನ್ಸ್ . . . . ಕೂದಲೆಲ್ಲಾ ಉದುರುತ್ತಿದೆ . . . . ಮೊದಲೆಲ್ಲಾ ನೀನು ಭಾನುವಾರ ನಿರ್ಜಲ ಉಪವಾಸ ಮಾಡುತ್ತಿದ್ದೆ. ಹಾಲು ಹಲ್ವಾದ ವಾಸನೆ ಕೂಡ ನೋಡುತ್ತಿರಲಿಲ್ಲ. ಈಗ ಕೋಳಿಯ ಮೂಳೆಗಳನ್ನು ಚಪ್ಪರಿಸುತ್ತೀಯಂತೆ . . . . ಇದರಲ್ಲಿ ನಿನ್ನದೇನು ತಪ್ಪೂ ಅನ್ನು . . . . ಗಾಯ ಬೇರೆ ಆಗಿದೆ . . . ."

"ಏ . . . . ತುಂಟತನ ಮಾಡಬೇಡ . . . . ಚೀಲದಲ್ಲಿ ನಿನಗೆ ಕೊಡು ವಂತಹದು ಏನೂ ಇಲ್ಲ . . . . ಹೋಗು."

ಬ್ಲಾಕ್‌ಪ್ರಿನ್ಸ್ ಭೂಮಿಯ ಮೇಲೆ ಮಲಗಿ ಬೌ ಬೌ ಎನ್ನುತ್ತಾ ಬಾವನ ದಾಸನ ಚೀಲವನ್ನು ಕಚ್ಚಿ ಎಳೆಯುತ್ತಿತ್ತು.

ಬಾವನದಾಸ ನಿಧಾನವಾಗಿ ಒಂದು ಕಾಗದದ ಪೊಟ್ಟಣವನ್ನು ತೆಗೆದ. ಬ್ಲಾಕ್‌ಪ್ರಿನ್ಸ್ ಮತ್ತಷ್ಟು ಗಟ್ಟಿಯಾಗಿ ಬೊಗುಳಲಾರಂಭಿಸಿತು. ಅದು ಅದರ ಅಭ್ಯಾಸ. ಬಾವನದಾಸ ಬಂದಾಗಲೆಲ್ಲಾ ಅದಕ್ಕೆ ಒಂದಾಣೆಯ ರೊಟ್ಟಿ ತರುತ್ತಿದ್ದ. ಹತ್ತು ವರ್ಷದಿಂದ ರೊಟ್ಟಿ ತಿನ್ನುತ್ತಿದೆ ಬ್ಲಾಕ್‌ಪ್ರಿನ್ಸ್. ಈಗ ತುಂಬಾ ಮುದಿ ಯಾಗಿದೆ. ಬಾವನದಾಸ ಒಂದು ಬಾರಿ ರೊಟ್ಟಿ ಅದಕ್ಕೆ ಕೊಟ್ಟ. ಬ್ಲಾಕ್‌ಪ್ರಿನ್ಸ್ ತಟಕ್ಕನೇ ಅದನ್ನು ನುಂಗಿ ಮತ್ತೆ ಬಾವನದಾಸನ ಮುಖ ನೋಡಿತು. ಅವನು ಕೇಳಿದ: "ಇನ್ನೇನು ಬೇಕು? ಮೊಟ್ಟೇನಾ?"

# 14

ತಹಸೀಲ್ದಾರರು ತಮ್ಮ ಮನೆಯ ಮಹಡಿಯ ಮೇಲೆ ಕುಳಿತು ನೋಡುತ್ತಿದ್ದರು. ಗದ್ದೆಗಳಲ್ಲಿ ಭತ್ತಕ್ಕೆ ಒಳ್ಳೆಯ ಬಣ್ಣ ಬಂದಿತ್ತು. ತೆನೆಗಳು ಬಾಗಿದ್ದವು. ಕಾರ್ತೀಕ ಮಾಸದಲ್ಲೂ ಹದಿನೈದು ದಿನಗಳು ಕಳೆದುಹೋಗಿವೆ. ಇನ್ನು ಭತ್ತದ ಕಟಾವು ಶುರುವಾಗಬೇಕು ··· ಸುತ್ತಲೂ ತಹಸೀಲ್ದಾರರದೇ ಜಮೀನು. ಪೂರ್ವದಲ್ಲಿ ತಾಳೆಮರ ಕಾಣಿಸುತ್ತಿದೆ. ಕಮಲಾನದಿಯ ಆ ಕಡೆ···· ಉತ್ತರಕ್ಕೆ ಹಳೆಯ ಆಲದಮರ, ದಕ್ಷಿಣದಲ್ಲಿ ಸಂಥಾಲರು ಬೇಸಾಯ ಮಾಡುತ್ತಿದ್ದ ಪಿಪರಾ ಹಳ್ಳಿಯ ವರೆಗಿನ ಭೂಮಿಯೆಲ್ಲಾ, ತಹಸೀಲ್ದಾರರಿಗೇ ಸೇರಿತ್ತು. ಮನೆಯ ಪಶ್ಚಿಮದಲ್ಲಿ ತತವಮಾ ಪಂಗಡದವರಿಗೆ ಸೇರಿದ ಭೂಮಿ ಐವತ್ತು ಎಕರೆಯಷ್ಟಿದೆ. ಅದಕ್ಕೆ ಖರ್ಚಾಗುವುದು ಹತ್ತು ರೂಪಾಯಿ ಮಾತ್ರ. ತಹಸೀಲ್ದಾರರ ತಂದೆಯವರು ಈ ಜಮೀನನ್ನು ತಮ್ಮದನ್ನಾಗಿ ಮಾಡಿಕೊಳ್ಳಲು ತುಂಬಾ ಪ್ರಯತ್ನಪಟ್ಟಿದ್ದರು. ಆದರೆ ಪ್ರಯತ್ನ ಫಲಕಾರಿಯಾಗಿರಲಿಲ್ಲ. ತಹಸೀಲ್ದಾರರೂ, ತಾವು ತಹಸೀಲ್ದಾರಿ ಮಾಡುತ್ತಿದ್ದಾಗಲೇ ಬಹಳ ಉಪಾಯ ಮಾಡಿದ್ದರು. ಆದರೆ ನೀವು ಕಾಯಸ್ಥರಾದರೆ ನಾವು ರೈತರು ಎನ್ನುವ ಹಠದಂತೆ ಅದು ಅವರಿಗೆ ಸೇರಲಿಲ್ಲ. ಆ ಭೂಮಿ ಧರ್ಮಪುರದ ಭೈರೋಬಾಬುವಿಗೆ ಸೇರಿದೆ. ಆ ಜಮೀನು ಸದಾ ತಹಸೀಲ್ದಾರರ ಕಣ್ಣಿಗೆ ಬರುತ್ತಿರುತ್ತದೆ. ಈ ಮಹಡಿಯ ಮೇಲೆ ಕುಳಿತಿದ್ದಾಗಲಂತೂ ಭೂಮಿಯ ದಾಹ ತೀವ್ರವಾಗುತ್ತದೆ. ಅದನ್ನು ತಮ್ಮದಾಗಿ ಮಾಡಿಕೊಳ್ಳಲು ವಿಧ ವಿಧವಾದ ಉಪಾಯಗಳನ್ನು ಆಲೋಚಿಸುತ್ತಿದ್ದರು ತಹಸೀಲ್ದಾರರು···· ಕೆಳಗೆ ಇಳಿದ ಕೊಡಲೇ ಅವರ ಮುಖಭಾವ ಬದಲಾಯಿಸಿತು. ಸ್ನಾನ ಮಾಡುವಾಗಿನಿಂದ ಹಿಡಿದು ಊಟಕ್ಕೆ ಕೂರುವವರೆಗೂ ಅವರು ಯಾವಯಾವುದೋ ಮಂತ್ರಗಳನ್ನು ಗುಣ ಗುಣಿಸುತ್ತಿದ್ದರು····

ಪ್ರತಿದಿನ ಊಟ ಮಾಡುವಾಗ ತಹಸೀಲ್ದಾರರು ಮೆಲ್ಲನೆ ಕೇಳುತ್ತಿದ್ದರು. "ಅಕ್ಕಾ ಹೇಗಿದ್ದಾಳೆ?"

"ಈವತ್ತು ನಿಮ್ಮ ಮಗಳು ತುಂಬಾ ಆನಂದವಾಗಿದಾಳೆ!"

"ನಿಜವಾಗಲೂ, ನನಗೆ ರಾತ್ರಿಯೆಲ್ಲಾ ನಿದ್ದೇನೇ ಬರಲಿಲ್ಲ." ಊಟ ಮಾಡುವಾಗ ಮನಸ್ಸು ಪ್ರಸನ್ನವಾಗಿದ್ದರೆ, ತಹಸೀಲ್ದಾರರು ಹಸೀದು, ಬೇಯಿಸಿದ್ದು, ಸಿಹಿ. ಖಾರ ಎಲ್ಲಾ ತಿಂದುಬಿಡುತ್ತಾರೆ.

"ಇಂದಿರಾಗೆ ಅವಳ ಸ್ವಾಮಿ ಸಿಕ್ಕಿಬಿಟ್ಟ, ಎನ್ನುತ್ತಿದ್ದಳು. ಅದಕ್ಕೆ ತುಂಬಾ ಸಂತೋಷವಾಗಿದ್ದಾಳೆ."

"ಹುಚ್ಚೀ" ತಹಸೀಲ್ದಾರರು ನಕ್ಕರು. ಹಿಂದಿನ ರಾತ್ರಿ ಇದಕ್ಕಿದ್ದಂತೆ ಕಮಲೆಯ ಕೊಠಡಿಯಿಂದ ಅಳುವ ಶಬ್ದ ಕೇಳಿಸಿತು····ಕಮಲಾ ಬಿಕ್ಕಳಿಸಿ ಬಿಕ್ಕಳಿಸಿ ಅಳುತ್ತಿದ್ದಳು····ಕಮಲೆಯ ತಾಯಿಗೆ ಮಲೇರಿಯಾ ಜ್ವರ ಬಂದವರ ಹಾಗೆ ದೇಹವೆಲ್ಲಾ ನಡುಗಿತು. ತಹಸೀಲ್ದಾರರ ಕಣ್ಣುಗಳಿಂದ ನೀರಿನ ಪ್ರವಾಹವೇ ಹರಿಯಿತು. ತಾಯಿ ತನ್ನನ್ನು ತಾನು ಸಮಾಧಾನಪಡಿಸಿಕೊಂಡು ಕೇಳಿದಳು: "ಏನಾಯಿತು ಮಗು, ಏನಾಯಿತು? ಕಮಲಾ, ಕಮಲಾ, ಮಾತಾಡೇ···· ಮಗಳೇ, ಮಾತಾಡೇ."

"ಅಮ್ಮಾ, ನಾನು ನನಗೋಸ್ಕರ ಅಳುತ್ತಿಲ್ಲ····ಇದು ಇಲ್ಲಿ ನೋಡು. ಇಂದಿರಾಗೋಸ್ಕರ····" ಕಮಲಾ ಮಾತನಾಡುತ್ತಾ ಆಡುತ್ತಾ ಮತ್ತೆ ಬಿಕ್ಕಳಿಸಿದಳು.

"ಯಾವ ಇಂದಿರಾ?—ಯಾರವಳು?"

"ಯಾವ ಇಂದಿರಾ?—ಅಂದಹಾಗೆ ನಿನಗೇನು ಗೊತ್ತು ಅಮ್ಮ, ಈ ಪುಸ್ತಕದ ಇಂದಿರಾಗೋಸ್ಕರ ಅಳುತ್ತಿದ್ದೀನಿ····ಬಡಪಾಯಿ ಮೊದಲನೇ ಸಲ ಡೋಲಿಯಲ್ಲಿ ಅತ್ತೇ ಮನೆಗೆ ಹೋಗುತ್ತಿದ್ದಳು. ಮನಸ್ಸಿನಲ್ಲಿ ಯಾವಯಾವುದೋ ಆಸೆಗಳನ್ನು ಕಟ್ಟಿಕೊಂಡಿದ್ದಳು. ಒಂದು ಹಳೆಯ ಸರೋವರದ ಹತ್ತಿರ ಡೋಲಿ ನಿಂತಿತು. ಸರೋವರ, ಒಂದು ಕಾಡಿನ ಹತ್ತಿರ ಇತ್ತು. ಬಹಳ ಅಪಾಯದ ಜಾಗ. ಆದ್ದರಿಂದಾನೇ ಜೊತೆಯಲ್ಲಿ ಸೈನಿಕರು ಬಂದಿದ್ದರು. ಆದರೆ ಇಂದಿರೆ ಯನ್ನು ಡಕಾಯಿತರು ಡೋಲಿಯ ಸಮೇತ ಎತ್ತಿಕೊಂಡು ಹೊರಟುಹೋದರು. ಹಾಡುಹಗಲಿನಲ್ಲೇ ದರೋಡೆ ನಡೆದುಹೋಯಿತು. ಆದರೆ ಅಮ್ಮಾ ಅವಳ ಹತ್ತಿರ ಎಲ್ಲದಕ್ಕಿಂತ ದೊಡ್ಡ ಐಶ್ವರ್ಯ ಉಳಿದಿತ್ತು, ಮರ್ಯಾದೆ! ಈಗಲೂ ಅವಳು ಅದೇ ಘೋರ ಅರಣ್ಯದಲ್ಲಿ ಇದ್ದಾಳೆ, ಅಮ್ಮಾ. ಬಡಪಾಯಿ ಇಂದಿರಾ!" ಕಮಲಾ ಬಂಕಿಮಚಂದ್ರರ ಕಾದಂಬರಿ 'ಇಂದಿರಾ' ಓದಿ ಅಳುತ್ತಿದ್ದಳು. ····ಈ ದಿನ ಅವಳು ಸಂತೋಷವಾಗಿದ್ದಳು. ಇಂದಿರಾಗೆ ಅವಳ ಸ್ವಾಮಿ ಸಿಕ್ಕಿಬಿಟ್ಟಿದ್ದ.

ತಹಸೀಲ್ದಾರರು, ಹೇಳಿದ್ದರು: "ಇದು ಹುಚ್ಚಲ್ಲ ಕಣೆ. ನನ್ನ ಮಗಳು ತುಂಬಾ ತಿಳುವಳಿಕೆಯುಳ್ಳವಳು. ಮೇಣದ ಹಾಗೆ ಮೃದು ಮನಸ್ಸಿನವಳು. ದೇವರೇ ವಿಶ್ವನಾಥ, ಒಳ್ಳೇದು ಮಾಡಪ್ಪಾ."

"ನಿನ್ನೆ ಡಾಕ್ಟರನ್ನು ಭೇಟಿಯಾಗಿದ್ದಿರೇನು?"—ತಾಯಿ ಕೇಳಿದಳು.

"ಅಂದಹಾಗೆ ರಾತ್ರಿ ನಿನಗೆ ಹೇಳೋದಕ್ಕೆ ಆಗಲಿಲ್ಲ. ತುಂಬಾ ತಾಪತ್ರಯದ ಕೆಲಸ. ಅರ್ಜಿ ಕೊಟ್ಟೆ. ನಿಮಗೆ ಡಾಕ್ಟರ್ ಏನಾಗಬೇಕೂ ಅಂತ ಕೇಳಿದರು. ನಾನು ಏನು ಉತ್ತರ ಹೇಳಲಿ? ಏನೂ ಆಗಬೇಕಾಗಿಲ್ಲ ಅಂದೆ. ಸರಿ, ಒಪ್ಪಿಗೇನೇ ಕೊಡಲಿಲ್ಲ, ಅಲ್ಲಿದ್ದ ಚಟ್ಟಿಗಾರ (ಆಂಗ್ಲೋ ಇಂಡಿಯನ್) ತುಂಬಾ ಒಳ್ಳೆಯವನು. ಅವನು ಹೇಳಿದ. 'ಡಾಕ್ಟರ್ ಸಾಹೇಬರು ಈಗ ರಾಜಕೀಯ ಅಪರಾಧಿ ಎನ್ನಿಸಿಕೊಂಡಿದ್ದಾರೆ. ಆದ್ದರಿಂದ ಅವರನ್ನು ಅವರ ತಾಯಿ ತಂದೆ, ಹೆಂಡತಿ ಮತ್ತು ಸೋದರಿ ಮಾತ್ರ ನೋಡಬಹುದು. ಅವರು ಮಾತ್ರ ಕಾಗದ ಪತ್ರ ಬರೆಯಬಹುದು' ....ಎಂಥ ಕಾನೂನು ನೋಡಿದ್ಯಾ? ತಂಗಿಗೆ ಕಾಗದ ಬರೆಯಬಹುದು. ಭಾವನಿಗೆ ಬರೆಯುವಹಾಗಿಲ್ಲ. ಹೆಂಡತಿಯನ್ನು ಮಾತನಾಡಿಸಬಹುದು, ಆ ಹೆಂಡತಿಯ ಜೊತೆ ಅವಳ ತಂದೆಯೂ ಇದ್ದಾರೆ, ಅವನು ಅವಳ ಮುಖವನ್ನೂ ನೋಡುವಹಾಗಿಲ್ಲ."

ತಹಸೀಲ್ದಾರರು ಬಾಯಿ ತೊಳೆದುಕೊಂಡು, ಪಕ್ಕದ ಕೊಠಡಿಗೆ ಹೋಗುತ್ತಾ ಹೇಳಿದರು.

"ಪ್ಯಾರು ಪೂರ್ಣಿಯಾದಲ್ಲೇ ಇದ್ದಾನೆ. ಒಂದು ಹೋಟೆಲಿನಲ್ಲಿ ಊಟ ಮಾಡಿಕೊಂಡಿದಾನೆ. ಜೈಲಿನ ಒಳಗಡೆ ಇದ್ದುಕೊಂಡೇ ಡಾಕ್ಟರ್, ಗಣೇಶನಿಗೆ ಬ್ರಹ್ಮಸಮಾಜದಲ್ಲಿ ಇರಲು ವ್ಯವಸ್ಥೆ ಮಾಡಿದ್ದಾರೆ. ಪ್ರತಿ ತಿಂಗಳು ಸಹಿ ಮಾಡಿ ಚೆಕ್ ಕಳುಹಿಸಿಬಿಡುತ್ತಾರಂತೆ. ಗಣೇಶನಿಗೆ, ಮತ್ತು ಪ್ಯಾರುವಿಗೆ ಬೇರೆ ಬೇರೆಯಾಗಿ ಚೆಕ್ ಕಳುಹಿಸುತ್ತಾರಂತೆ. ಏನೇ ಆದರೂ ಡಾಕ್ಟರ್ ತುಂಬಾ ಒಳ್ಳೆ ಮನುಷ್ಯರು. ಪ್ಯಾರು ಒಂದು ದಿನ ಹಾಲಿನವನ ಜೊತೆ ಒಳಗಡೆ ಹೋಗಿದ್ದನಂತೆ. ಒಳಗಡೆ ಹೋದಾಗ, ಬಾಗಿಲಿನ ಹತ್ತಿರವೇ ಡಾಕ್ಟರರ ಭೇಟಿಯಾಯಿತಂತೆ. ಪ್ಯಾರುವನ್ನು ನೋಡಿ ಡಾಕ್ಟರು ಕಕ್ಕಾಬಿಕ್ಕಿಯಾದರಂತೆ. ಆಮೇಲೆ ಯಾಕೆ ಬಂದೆ? ಅಂತ ಕೇಳಿದರಂತೆ. ಪ್ಯಾರು ಏನೂ ಹೇಳದೆ ಸುಮ್ಮನಿದ್ದಾಗ, 'ಮೇರೀಗಂಜಿನಿಂದ ಯಾವಾಗ ಬಂದೆ? ಕಮಲಾ ಹೇಗಿದಾಳೆ?' ಅಂತ ಕೇಳಿದರಂತೆ."

"ಆಂ? ಕೇಳಿದರಂತಾ? ಡಾಕ್ಟರ್ ಕಮಲನನ್ನು ವಿಚಾರಿಸಿದರಂತಾ? ಪ್ಯಾರು ಏನು ಉತ್ತರಕೊಟ್ಟನಂತೆ?" ಕಮಲೆಯ ತಾಯಿ ಒಂದೇ ಉಸಿರಿನಲ್ಲಿ ಕುತೂಹಲದಿಂದ ಪ್ರಶ್ನಿಸಿದಳು. "ಅವನು ಏನು ಉತ್ತರ ಕೊಟ್ಟನೋ ಏನೋ."

"ಪ್ಯಾರುವೇನೂ ಮೂರ್ಖನಲ್ಲ, ಚೆನ್ನಾಗಿದಾಳೆ, ಡಾಕ್ಟರ್ ಫೋಟೋ ತೊಗೊಂಡು ಹೋಗಿದಾಳೆ, ಪ್ರತಿದಿನ ಎದ್ದ ಕೂಡಲೇ ಅದನ್ನು ನೋಡುತ್ತಾಳೆ" ಅಂತ ಉತ್ತರ ಕೊಟ್ಟನಂತೆ.

"ಓ.....ಹಾಗೆ ಹೇಳಿದನಂತೇನು? ಎಷ್ಟು ಬುದ್ಧಿವಂತ ಪ್ಯಾರು!.... ಹೂಂ....ದೇವರದೊಂದು ವಿಚಿತ್ರ, ಪಾಪ, ಆ ಬಡಪಾಯಿಗೆ ನೀನೇ ಅನ್ನೋರು ಗತಿಯಿಲ್ಲ....ಆಗ ಡಾಕ್ಟರ್ ಏನಂದರಂತೆ?"

"ನಗುತ್ತಾ—ನಗುತ್ತಾ ಹೊರಟುಹೋದರಂತೆ." ತಹಸೀಲ್ದಾರರು ಬಾಯಿಗೆ ಎಲೆಡಿಕೆ ಹಾಕಿಕೊಂಡರು....ಇನ್ನು ಮಾತು ನಿಂತ ಹಾಗೆಯೇ.

ಸಂತೋಷದಿಂದ ಕಮಲೆಯ ತಾಯಿಗೆ ಹೊಟ್ಟೆ ತುಂಬಾ ಊಟ ಮಾಡುವುದಕ್ಕೂ ಆಗಲಿಲ್ಲ. ತಾಯಿ ಮಗಳು ಪ್ರತಿದಿನ ಒಟ್ಟಿಗೆ ಊಟ ಮಾಡುತ್ತಾರೆ. ಇಂದು ಕಮಲಾ ಪದೇ ಪದೇ ತಾಯಿಯನ್ನು ಎಚ್ಚರಿಸಿದಳು.

"ಅಮ್ಮ ನೀನಿನ್ನು ಊಟ ಮಾಡು. ಪೂರ್ಣಿಯಾದ ಕಥೆ ಆಮೇಲೆ ಹೇಳುವಿಯಂತೆ."

ಇಂದಿನಿಂದ ತಾಯಿ ಕಾದಂಬರಿ ಕೇಳಬೇಕೆಂದುಕೊಂಡಿದ್ದಾಳೆ. ಕಮಲಾ ಮತ್ತೆ ಮೊದಲಿನಿಂದ 'ಇಂದಿರಾ' ಓದುವುದಕ್ಕೆ ಆರಂಭಿಸಿದಳು. ಕಮಲಾ ಹೇಳಿದಳು: "ಅಮ್ಮಾ, ಶಕುಂತಳಾ, ಸಾವಿತ್ರಿ ಮುಂತಾದವರ ಕಥೆ ಓದುವಾಗಲೂ ಮನಸ್ಸಿಗೆ ಇಷ್ಟವಾಗುತ್ತೆ. ಆದರೆ ಈ ಕಾದಂಬರಿಗಳನ್ನು ಓದುವಾಗ, ಇದು ದೇವ-ದೇವತೆಗಳ, ಋಷಿ-ಮುನಿಗಳ ಕಥೆಯಲ್ಲ, ನಮ್ಮ ಹಾಗೇ ಹಳ್ಳಿಯಲ್ಲಿ ಹುಟ್ಟಿ ಬೆಳೆದವರ ಕಥೆ ಅನ್ನಿಸುತ್ತೆ."

ಈಗೆರಡು ದಿನಗಳಿಂದ ಊಟ ತಿಂಡಿ ಮುಗಿಸಿದ ಮೇಲೆ ಕಮಲೆಯ ಗರ್ಭದಲ್ಲಿ ಬೆಳೆಯುತ್ತಿರುವ ಶಿಶು, ಕೈಕಾಲು ಬಡಿಯುತ್ತದೆ. ಲಜ್ಜೆಯಿಂದ ಅವಳು ತಾಯಿಯ ಹತ್ತಿರವೂ ಏನೂ ಹೇಳಿಕೊಳ್ಳುವುದಿಲ್ಲ. ಆದರೆ ಮುಂದೆ ಬರುವವರ ಹೆಜ್ಜೆಯ ಸಪ್ಪಳದ ಸುಳಿವು ಸಿಕ್ಕಿದಾಗಲೆಲ್ಲಾ ಅವಳ ಮನಸ್ಸು ಯಾವುದೋ ದೂರ ದೇಶದಲ್ಲಿ ಕಳೆದು ಹೋಗುತ್ತದೆ. ಒಟ್ಟಿಗೆ ಅನೇಕ ಜನ ಮಕ್ಕಳು ಅವಳ ಕಣ್ಣುಮುಂದೆ ಕಿಲಕಿಲನೆ ನಗುತ್ತಾ ನಿಂತಂತೆ ಕಾಣುತ್ತದೆ. ಮಕ್ಕಳು ಅವಳೊಂದಿಗೆ ಕಣ್ಣುಮುಚ್ಚಾಲೆಯಾಟ ಆಡುತ್ತಿವೆಯೇನೋ! ಯಾರದು? ಎಲ್ಲವೂ ಮುದ್ದಾಗಿವೆ. ಆಗತಾನೇ ಅರಳಿದ ಕಮಲದಂತೆ ಹೊಚ್ಚ ಹೊಸದಾಗಿವೆ.

ಅವಳು ಯಾರ ಕೈಯನ್ನು ಹಿಡಿದುಕೊಳ್ಳಬೇಕು? ಅವಳು ಒಬ್ಬ ಚಂಚಲ ಬಾಲಕ ನನ್ನ ತೊಡೆಯ ಮೇಲೆತ್ತಿಕೊಳ್ಳುತ್ತಾಳೆ. ಆ ಮಗುವಿನ ಕೈ, ಕಾಲು ಎಷ್ಟು ಕೋಮಲವಾಗಿವೆ. ಅವುಗಳ ನಗು ಎಷ್ಟು ಮಧುರವಾಗಿವೆ. ಎಷ್ಟು ಚಂಚಲ... ನನ್ನ....ಮುದ್ದು ರಾಜ:....ಕಮಲೆಯ ಎದೆಯಿಂದ ಹಾಲು ಉಕ್ಕುತ್ತದೆ.

"ಲೇ...." ತಹಸೀಲ್ದಾರರು ಮಹಡಿಯ ಕೊಠಡಿಯಿಂದ ಕೂಗಿದರು. "ಸ್ವಲ್ಪ ಈ ಕಡೆ ಬಾ."

ಮಹಡಿಯ ಮೇಲೆ ಕಾಲಿಟ್ಟ ಕೂಡಲೇ ತಹಸೀಲ್ದಾರರ ಬುದ್ಧಿ ವಿಚಾರ ಮಾತು-ಕಥೆ ಎಲ್ಲಾ ಬದಲಾಗುತ್ತದೆ. ಏನನ್ನೋ ತಿನ್ನುತ್ತಿರುವಂತೆ ದವಡೆಗಳು ಕಟಕಟನೆ ಕಡಿಯುತ್ತವೆ.

"ಇಲ್ಲಿ ಕೇಳು. ನಾನು ನೇಣು ಹಾಕಿಕೊಂಡು ಸತ್ತುಹೋಗುತ್ತೇನೆ. ನನಗೆ ನಿದ್ದೆ ಬರೋದಿಲ್ಲ, ಮುಂದೆ ಏನಾಗುತ್ತೆ? ಏನಾದರೂ ಯೋಚನೆ ಮಾಡಿದೀಯೇನು?....ಏನಾದರೂ ಉಪಾಯ? ಶತ್ರುಗಳಿಗೂ ಇಂಥ ಕಷ್ಟ ಬರೋದು ಬೇಡ. ನೀನಂತೂ ದಿನವೆಲ್ಲಾ ಮಗಳ ಹತ್ತಿರ ಬಿದ್ದುಕೊಂಡಿರುತ್ತೀಯೆ. ಒಂಟಿಯಾಗಿ ಕುಳಿತು ಜೀವ ಗಾಬರಿಯಾಗುತ್ತಿದೆ. ನಿನ್ನ ಸರ್ಪದಂತಹ ಮಗಳು ನನ್ನ ಹೇಗೆ ಕಚ್ಚಿದಾಳೇ ಅಂದರೆ...." ತಹಸೀಲ್ದಾರರು ಆವೇಶದಿಂದ ಕೂಗಾಡಲಾರಂಭಿಸಿದರು.

"ಛೇ ಏನು ಮಾತಾಡುತ್ತಿದೀರಿ ನೀವು?"

"ಸುಮ್ಮನಾಗು. ನೀವಿಬ್ಬರೂ ನನಗೆ....ದೂರ ಹಾಳಾಗಿ ಹೋಗು."

"ನೀವು ಕುಳಿತುಕೊಳ್ಳಿ....ಕೂಗಬೇಡಿ. ಹುಡುಗೀಗೆ ಕೇಳಿಸುತ್ತೆ."

"ಕೇಳಿಸಲಿ. ದೊಡ್ಡ ಸಾಹೇಬರ ಮಗಳು ಬಂದಿದಾಳೆ ನೋಡು."

"ಸುಮ್ಮನಿರಿ."

"ನೀನು ಬಾಯ್ಮುಚ್ಚು."

ಮುದುಕಿ ಕೆಲಸದವಳು ಬಂದು ಹೇಳಿದಳು.

"ಚಹ ಮಾಡಿದ್ದಾಗಿದೆ. ಕುಡಿಯಬೇಕಂತೆ."

"ನಡೆ."

ಈಗಲೂ ಎರಡು ಹೊತ್ತೂ ಕಮಲ ತಾನೇ ಚಹ ಮಾಡಿ ತಂದೆಗೆ ಕಳುಹಿಸುತ್ತಾಳೆ. ಕಮಲಾ ಹೇಳುತ್ತಾಳೆ. "ನೂರು ಬಟ್ಟಲುಗಳಲ್ಲಿ ಚಹಾ ಇದ್ದರೂ, ಬಣ್ಣವನ್ನು ನೋಡಿ ಅಪ್ಪಾ, ಇದು ಕಮಲ ಮಾಡಿದ ಚಹಾನೇ ಅಂತ ಗುರುತಿಸಿಬಿಡುತ್ತಾರೆ."

ಕೆಳಗಿನ ಕೊಠಡಿಯಲ್ಲಿ ಕುಳಿತು ಚಹಾವನ್ನು ಕುಡಿಯುವುದಕ್ಕಾರಂಭಿಸಿದ ಮೇಲೆ ತಹಸೀಲ್ದಾರರ ಗಂಟುಕಟ್ಟಿದ್ದ ಹುಬ್ಬು ಸಡಿಲವಾಗುತ್ತದೆ. ಮುಖದಲ್ಲಿ ಎಂದಿನಂತೆ ಸಹಜಭಾವ ಮೂಡುತ್ತದೆ.

"ಸೆವಿಯಾಗೆ ಈ ಸಲ ಒಂದು ರಜಾಯಿ ಹೊಲಿಸಿಕೊಡು. ಇಲ್ಲದಿದ್ದರೆ ಈ ಚಳೀಲಿ ಅವಳ ಕೈ ಕಾಲುಗಳು ಸೆಟೆದುಕೊಂಡುಬಿಡುತ್ತವೆ"—ತಹಸೀಲ್ದಾರರು ಹೇಳಿದರು.

"ನಿಮ್ಮ ಮಗಳು ನಿಮಗೋಸ್ಕರ ಉಲ್ಲನ್ನಿನಲ್ಲಿ ಅಂಗಿ ಹೆಣೆಯುತ್ತಿದ್ದಾಳೆ....ಪುಸ್ತಕ ತೆಗೆದು ಮುಂದಿಟ್ಟುಕೊಂಡು ಅದನ್ನು ನೋಡುತ್ತಾ ಕಮಲ ಅಂಗಿ ಹೆಣೆಯುತ್ತಿದ್ದರೆ, ಕೈ ಬೆರಳುಗಳು ಮಿಷನ್ನಿನ ಹಾಗೆ ಕಾಣುತ್ತವೆ."

"ನಿಜವಾಗಲೂ ಪಾಪ ಬಡಪಾಯಿ ನನ್ನಂತಹ ದುರದೃಷ್ಟಶಾಲಿಯ ಮನೆಯಲ್ಲಿ ಹುಟ್ಟಿ ಬಾಲ್ಯದಿಂದ ಅನುಭವಿಸುತ್ತಿರುವುದು ದುಃಖವನ್ನೇ. ನನ್ನ ಮುಂದಿನ ಅಕ್ಕ, ನಿನಗೆ ಜ್ಞಾಪಕ ಇದೆಯೇನು? ಅವಳು ಒಂದು ವರ್ಷದ ಮಗುವಾಗಿದ್ದಾಗಲೇ ಈ ಮಗು ನಮಗೆ ತುಂಬಾ ಸಂತೋಷ ಕೊಡುತ್ತೇ ಅಂತ ನಾನು ಹೇಳಿರಲಿಲ್ಲಾ?"

ಸೇವಿಯಾ ನಗುತ್ತಾ ಅರ್ಧ ಹೆಣೆದಿದ್ದ ಸ್ವೆಟರನ್ನು ತಂದು ತೋರಿಸಿದಳು."

"ಇಲ್ಲಿ ನೋಡಿ."

ತಾಯಿ ಸ್ವೆಟರ್ ಕೈಯ್ಯಲ್ಲಿ ಹಿಡಿದು ಹೇಳಿದಳು.

"ನಿಮ್ಮ ಮಗಳ ಜಾಣತನವನ್ನು ನೋಡಿ."

ತಹಸೀಲ್ದಾರರು ನಗುತ್ತಾ ನೋಡಿದರು. ಆಮೇಲೆ ಸೇವಿಯಾ ಕಡೆ ತಿರುಗಿ ಹೇಳಿದರು: "ಇದು ನನಗೆ ತುಂಬಾ ಚಿಕ್ಕದು....ಒಂದು ಸಣ್ಣ ಮಗುವಿನ ಅಳತೆಯದು ಬೇಕು....ಇಷ್ಟು ಚಿಕ್ಕದು."

"ತಪ್ಪು ತಿಳಿದುಕೊಳ್ಳದಿದ್ದರೆ ಒಂದು ಮಾತು ಹೇಳಲೇನು?.... ಹರಗೌರಿ ಬಾಬುವಿನ ತಾಯಿ ಅಳ್ತಿದಾಳೆ. ಬೇರೆ ಜಾತಿಯವರ ಹೆಂಗಸರೂ ಅಳ್ತಿದಾರೆ. ನೀವಿಲ್ಲಿ ಕೀರ್ತನೆ ಮಾಡ್ತಿದೀರಿ. ಇದು ಸರಿಯಾಗಿ ಕಾಣಿಸ್ತಿಲ್ಲ. ನನಗಂತೂ ಅನ್ನಿಸ್ತಿದೆ, ಈ ದಿನದ ಕೀರ್ತನೆಯಿಂದ ನಿಮ್ಮ ದೇವರಿಗೂ ಸಂತೋಷ ವಾಗುವುದಿಲ್ಲ."

"ನಾವು ದೇವರನ್ನು ನಂಬೋದಿಲ್ಲ." —ಕಾಮ್ರೇಡ್ ವಾಸುದೇವ ಮಧ್ಯದಲ್ಲೇ ಮಾತನಾಡಿದ.

"ನೀನು ಸುಮ್ಮನಿರು." ಕಾಳೀಚರಣ ಅವನನ್ನು ತಡೆದ. "ಎಲ್ಲಾ ವಿಚಾರದಲ್ಲೂ ಬಾಯಿ ಹಾಕಬೇಡ."

ಎಲ್ಲ ಸುಮ್ಮನಿದ್ದರು. ಹರಗೌರಿಯ ತಾಯಿ ಅಳುತ್ತಿದ್ದಳು: ನನ್ನ ದೊರೆ ಮಗನೇ ....ಗೌರೀ"

ಕಾಳೀಚರಣನ ಕಣ್ಣುಗಳಲ್ಲೂ ನೀರು ತುಂಬಿತು. ಬಾಲ್ಯದಿಂದಲೂ ಅವನು ಹರಗೌರಿಯ ಜೊತೆಯಲ್ಲೇ ಆಡಿ ಬೆಳೆದವನು. ಪೂಂಜೀವಾದಿಯೋ, ಬೂರ್ಜ್ವಾನೋ, ಏನಾದರೂ ಅವನು ಬಾಲ್ಯದ ಗೆಳೆಯ ಎನ್ನುವುದಂತೂ ಸುಳ್ಳಲ್ಲ. ಅವನ ತಾಯಿ ಅಳುತ್ತಿದ್ದಾಳೆ. ಅಳುತ್ತಿರುವುದು ಹರಗೌರಿಯ ತಾಯಿ ಅಲ್ಲ. ಕೇವಲ 'ತಾಯಿ'

"ವಾಸುದೇವ."

"....."

"ಕೀರ್ತನೆ ನಿಲ್ಲಿಸುವಂತೆ ಹೋಗಿ ಹೇಳಿಬಿಡು. ....ಕೋಠಿಯ ತೋಟ ದಲ್ಲಿ ನಾಳೆ ಶೋಕ ಸಭೆ ನಡೆಯುತ್ತದೆ. ಅದನ್ನು ಸಭೆಗೆ ತಿಳಿಸಿಬಿಡು. ಅರ್ಥ ವಾಯ್ತೇನು?"

ವಾಸುದೇವ ಯೋಚಿಸಿದ. ಮಿಕ್ಕ ವಿಚಾರಗಳೇನೋ ಅರ್ಥವಾಯಿತು, ಆದರೆ ಶೋಕ ಸಭೆ ಅಂದರೆ ಏನರ್ಥ? ಅಲ್ಲಿ ಗೀತೆಗಳನ್ನು ಹಾಡುವ ಹಾಗಿಲ್ಲ. ಭಾಷಣ ನಡೆಯೋದಿಲ್ಲ....ಸುಮ್ಮನೆ ಐದು ನಿಮಿಷ ಮೌನವಾಗಿ ನಿಂತಿರೋದು ....ಒಳ್ಳೇ ಸಭೆ!

# 15

ಬಾಲದೇವ ಕುದುರೆ ಗಾಡಿಯವನಿಗೆ ಹೇಳಿದ: "ನೋಡಯ್ಯ, ಈವತ್ತು ರೈಲು ಹೊರಡುವ ಹೊತ್ತಿಗೆ ನನ್ನನ್ನು ರೈಲ್ವೇ ಸ್ಟೇಷನ್ನಿಗೆ ತಲುಪಿಸಿದರೆ ಎಂಟಾಣೆ ಹೆಚ್ಚಿಗೆ ಕೊಡುತ್ತೇನೆ."

"ನೋಡೋಣ ಸ್ವಾಮಿ, ಹೋಗೋದಕ್ಕೆ ನಾನಂತೂ ಪ್ರಯತ್ನಪಡುತ್ತೇನೆ ....ನಡಿ ಬೇಟಾ.... ಬೇಗ ಬೇಗ ಓಡು.... ಗಾಡಿಯವನು ಚಾವಟಿಯಿಂದ ಕುದುರೆಗೆ ಹೊಡೆಯುತ್ತಾ ಹಾಡಲಾರಂಭಿದ."

"ಇಡೀ ಹಿಂದೂಸ್ತಾನದಲ್ಲಿ ಹಿಂದೂ. ಮುಸಲ್ಮಾನರಲ್ಲಿ ಜಗಳ ಆರಂಭ ವಾಗಿದೆ. ಅಲ್ವೇ ಸ್ವಾಮಿ?"

ಬಾಲದೇವನಿಗೆ ಈಗ ಹೊಳೆಯಿತು! ಅದಕ್ಕೇ ಮಹಾತ್ಮಾ ಗಾಂಧಿ ಎರಡು ತಿಂಗಳುಗಳು ಒಂದೇ ಸಮನೆ ಪಾಟ್ನಾದಲ್ಲೇ ಇದ್ದರು. ಪ್ರತಿದಿನ ಪ್ರಾರ್ಥನಾ ಸಭೆಯಲ್ಲಿ ಭಾಷಣ ಮಾಡುತ್ತಿದ್ದರು.... ಈಗ ದೆಹಲಿಯಲ್ಲಿದ್ದಾರೆ.

"ಏ ಯಾವುದೋ ರೈಲು ಕೂಗುತ್ತಲ್ಲಯ್ಯ?"

"ಇನ್ನೂ ಒಂದು ಸಲ ತಾನೇ ಕೂಗಿದೆ. ಇನ್ನೂ ಟೈಮಿದೆ ಸ್ವಾಮಿ."

"ಸಮಯ ಇದೆಯೇ? ನೀನೂ ಪರವಾಗಿಲ್ಲಪ್ಪ" ರೈಲ್ವೇ ಸ್ಟೇಷನ್ನಿನಲ್ಲಿ ಬಾಲದೇವ ಬಾಡಿಗೆಯ ಜೊತೆಗೆ ಎಂಟಾಣೆ ಹೆಚ್ಚಿಗೆ 'ಭಕ್ಷೀಸು' ಕೊಟ್ಟಾಗ ಗಾಡಿಯವನು ಶಿಸ್ತಿನಿಂದ ಕೈ ತಿರುಗಿಸಿ ಸಲಾಮು ಮಾಡಿದ: "ಸಲಾಂ ಹುಜೂರ್."

ಚಿಕ್ಕ ವಯಸ್ಸಿನ ಯಾವ ಹೆಂಗಸನ್ನು ನೋಡಿದರೂ ಬಾಲದೇವನಿಗೆ ತಕ್ಷಣ ಲಕ್ಷ್ಮಿಯ ನೆನಪಾಗುತ್ತದೆ.

ಅವನು ಮನಸ್ಸಿನಲ್ಲೇ ಯೋಚಿಸಿಕೊಂಡ: "ಗಂಗೂಲಿಯವರ ಮನೆಯಲ್ಲಿ ಇನ್ನು ಸ್ವಲ್ಪ ಹೊತ್ತಿದ್ದಿದ್ದರೂ ರೈಲು ಸಿಗುತ್ತಲೇ ಇರಲಿಲ್ಲ. ಹೋಗುವುದಕ್ಕೆ ಮುಂಚೆ ಶರ್ಮಾಜಿ ಹಾಸ್ಯಮಾಡದೆ ಬಿಡಲಿಲ್ಲ: "ಒಳ್ಳೇದು ಬಾಲದೇವ ಹೊರಡು, ನಿನ್ನನ್ನು, ಇಲ್ಲೇ ತಡೆಯೋದಕ್ಕೆ ನಾನೇನೂ ಮೂರ್ಖನಲ್ಲ. ನಾನು ಇಲ್ಲಿ ನಿನ್ನ

ತಡೆಯೋದು, ಅಲ್ಲಿ ನಿನ್ನ ಕೊಠಾರಿನ್ ಬೇರೆಯವರ ಜೊತೆ 'ಸತ್ಸಂಗ' ಆರಂಭಿಸಿದರೆ.... ಆ ಹಾ ಹಾ! ಕ್ಷಮಿಸು ಬಾಲದೇವ, ಜೈಹಿಂದ್."

"ಜೈಹಿಂದ್ ಬಾಲದೇವ."

"ಯಾರು ಕಲಾಸೀ! ಹೇಗಿದೀರಾ?"

"ನಾನು ಈಗತಾನೇ ಮೇರೀಗಂಜಿನಿಂದ ಬರುತ್ತಿದ್ದೇನೆ.... ಹೋಗಿ. ರೌತಹಟ್ ಸ್ಟೇಷನ್ನಿನಲ್ಲೇ ನಿಮಗಾಗಿ ಎತ್ತಿನ ಗಾಡಿ ಕಾದಿದೆ. ಕೊನೆಯ ನಮಸ್ಕಾರ ಹೇಳಿ ಬರೋಣ ಅಂತ ಹೋಗಿದ್ದೆ. ಹತ್ತು ದಿನಗಳ ಮೇಲೆ ವಾಪಸ್ಸು ಬರುತ್ತಿದ್ದೇನೆ. ನನ್ನ ಹೆಂಡತಿಗೆ 'ಬಿಸಿ ಗಾಳಿ' ಹಿಡಿದಿತ್ತು. ಹೊಡೆದು–ಬಡಿದೂ ಮಂತ್ರ ಹಾಕಿ ಅದನ್ನು ಓಡಿಸಿ, ಅವಳನ್ನೂ ಜೊತೆಗೆ ಕರೆದುಕೊಂಡು ಬಂದಿದೀನಿ.... ಈವತ್ತು ಬೆಳಗ್ಗೆ ಹತ್ತು ಗಂಟೆಗೆ ನಾನು ನಿಮ್ಮ ಆಶ್ರಮದ ಕಡೆ ಹೋಗಿದ್ದೆ. ಆಶ್ರಮ ನೋಡಿದರೆ ಅಲ್ಲೇ ಇದ್ದುಬಿಡೋಣ ಅನ್ನಿಸುತ್ತಪ್ಪ! ನೀವಂತೂ ಇರಲಿಲ್ಲ, ಕೊಠಾರಿನ್ ಇದ್ದಳು. 'ಸಾಹೇಬ್ ಬಂದಗೀ' ಮಾಡಿದೆ, ಅಡಿಕೆ ಚೂರು ಬಾಯಿಗೆ ಹಾಕಿಕೊಂಡೆ. ಒಬ್ಬ ಚಿಕ್ಕ ವಯಸ್ಸಿನ ಯುವಕ ತುಂಬಾ ಚೆನ್ನಾಗಿ ಹಾಡಿಕೊಂಡು ಬೀಜಕ ಪಠಿಸುತ್ತಿದ್ದ. ಅದನ್ನೇ ಕೇಳುತ್ತಾ ಅಲ್ಲೇ ಕೂತಿರೋಣ ಅನ್ನಿಸುತ್ತಿತ್ತು. ಒಳ್ಳೇದು, ಜೈಹಿಂದ್."

ಚಿಕ್ಕ ವಯಸ್ಸಿನ ಸಾಧುವೇ.... ಕಾಶಿಯ ವಿದ್ಯಾರ್ಥಿ ಇರಬೇಕು. ಮಹಂತ ಸೇವಾದಾಸನ ಕಾಲದಿಂದ ವರ್ಷಕ್ಕೆ, ಎರಡು ವರ್ಷಕ್ಕೆ ಒಂದು ಸಲ ಮಠಕ್ಕೆ ಬರುತ್ತಿದ್ದ. ಹೋಗುವಾಗ ಮಹಂತರು ಅವನಿಗೆ ಪಂಚೆ, ಹೊದ್ದಿಕೆ, ಪುಸ್ತಕದ ಖರ್ಚು, ರಸ್ತೆಯ ಖರ್ಚು ಎಲ್ಲಾ ಕೊಡುತ್ತಿದ್ದರು.... ಮುತ್ತಿನ ಹಾಗೆ ಅಕ್ಷರ ಬರೀತಾನೆ.... ಲಕ್ಷ್ಮಿ, ಬಾಲದೇವನಿಗೆ ಕೊಟ್ಟ 'ಬೀಜಕ'ವನ್ನು ಬರೆದವನೂ ವಿದ್ಯಾರ್ಥಿಯೇ. ಈಗ ಬಂದಾಗ ಮಠದಲ್ಲಿ ಇರುವುದಕ್ಕೆ ಮನಸ್ಸೇ ಬರುತ್ತಿಲ್ಲ ಅಂದ. ಆದರೆ ಲಕ್ಷ್ಮಿ ಈಗ ಮಠದ ಕೊಠಾರಿನ್ ಅಲ್ಲವಲ್ಲ. ಅವಳೀಗ ಒಬ್ಬ ಸಭ್ಯ ಗೃಹಸ್ಥನ ಹೆಂಡತಿ.... ನಾನು ಮನೆಯಲ್ಲಿ ಇಲ್ಲದಿದ್ದಾಗ ಅವನ್ಯಾಕೆ ಬರಬೇಕು? ಜನವಾದರೂ ಏನು ತಿಳಿದುಕೊಳ್ಳುತ್ತಾರೆ? ಇಲ್ಲ, ಇಲ್ಲ, ಇದು ಸರಿಯಲ್ಲ. ಲಕ್ಷ್ಮಿಗೆ ಹೇಳಿಬಿಡಬೇಕು.

ಬಾಲದೇವನ ಚಿಕ್ಕಮ್ಮ ಪ್ರತಿದಿನ ಅವನ ಆಶ್ರಮದ ಮುಂದೆ ಬಂದು ಕೂತು ಬಿಡುತ್ತಿದ್ದಳು. ಎಣಿಸಿ ಎಣಿಸಿ ಅವನನ್ನು ಬಯ್ಯುವುದಕ್ಕೆ ಪ್ರಾರಂಭಿಸುತ್ತಿದ್ದಳು.

"ಬಕಪಕ್ಷಿ.... ಇದಕ್ಕೋಸ್ಕರಾನೇ ಏನು ನಿನ್ನ ಸಾಕಿ ಸಲಹಿ ಇಷ್ಟು ದೊಡ್ಡವನನ್ನಾಗಿ ಮಾಡಿದ್ದು? ನಾಚಿಕೆ ಇಲ್ಲದವನೇ.... ಲಕ್ಷ್ಮಿ ನಿನಗೆ ವಶೀಕರಣದ ಮಾತ್ರೆ ನುಂಗಿಸಿ ತನ್ನ ವಶ ಮಾಡಿಕೊಂಡುಬಿಟ್ಟಿದ್ದಾಳೆ. ಕುರಿ ಹಾಗೆ ಮಾಡಿಬಿಟ್ಟಿದ್ದಾಳೆ, ಲಜ್ಜೆಗೆಟ್ಟವನೇ, ಹೊರಗಡೆ ಬಾರೋ."

ಲಕ್ಷ್ಮಿ ಸೇರಿನಷ್ಟು ಅಕ್ಕಿ, ಪಾವು ಬೇಳೆ, ಅಥವಾ ಗೋಧಿ, ಆಲೂಗೆಡ್ಡೆ ಮುಂತಾದುವನ್ನು ಕೊಟ್ಟು ಅವಳನ್ನು ಕಳುಹಿಸುತ್ತಿದ್ದಳು.

ಸಂಜೆಯಾಗುತ್ತಿದೆ. ಹಿಮ ಸಾಕಷ್ಟು ಬೀಳುತ್ತಿದೆ. ಬಾಲದೇವ ಚದ್ದರಿನಿಂದ ಕಿವಿ ಮುಚ್ಚಿಕೊಂಡ. ಆದರೆ ಕಿವಿಯೇನೋ ಬೆಚ್ಚಗಿವೆ.... ವಿದ್ಯಾರ್ಥಿ..

"ಸ್ವಲ್ಪ ನಿಲ್ಲು.... ಒಳ್ಳೇ ಎತ್ತುಗಳು, ಮನುಷ್ಯರನ್ನು ನೋಡಿಯೂ ಹೆದರುತ್ತವೆ." ಗಾಡಿಯವನು ಎತ್ತುಗಳನ್ನು ನಿಲ್ಲಿಸುತ್ತಾ ಕೂಗಿದ. "ಗೋಸಾಯಿಗಳೇ.... ಇನ್ನು ಏಳಿ. ಮನೆ ಬಂತು."

ಬಾಲದೇವನಿಗೆ ಎಚ್ಚರವಾಗಿಯೇ ಇತ್ತು. ಎದ್ದ ಕೂಡಲೇ ದೂರ ಯಾರೋ ಮರದ ಮರೆಯಲ್ಲಿ ಹೋಗುತ್ತಿರುವಂತೆ ಕಂಡಿತು.... ಓ ವಿದ್ಯಾರ್ಥಿ! ಈಗ ಹೋಗುತ್ತಿದ್ದಾನೆ. ಅದಕ್ಕೇ ಎತ್ತುಗಳು ಬೆದರಿದವು.

"ಸಾಹೇಬ ಬಂದಗೀ" ಲಕ್ಷ್ಮಿ ಕಾಲು ಮುಟ್ಟಿ ನಮಸ್ಕಾರ ಮಾಡಿದಳು.

ಬಾಲದೇವ ಅರ್ಥವಾಗದಂತೆ ಏನೋ ಗೊಣಗುಟ್ಟಿ ತನ್ನ ಜಾಗಕ್ಕೆ ಹೊರಟುಹೋದ.

"ನನ್ನ ಕಂಬಳಿಯನ್ನು ಯಾರು ಹೊದ್ದುಕೊಂಡಿದ್ದರು?" ಬಾಲದೇವ ಹಾಸಿಗೆಯ ಮೇಲೆ ಬಿದ್ದಿದ್ದ ಕಂಬಳಿಯನ್ನು, ಮುಖ ಗಂಟಿಕ್ಕಿ ನೋಡುತ್ತಾ ಕೇಳಿದ. ನನ್ನ ಕಂಬಳಿಯನ್ನು ಯಾಕೆ ಹೊದ್ದುಕೊಂಡಿದ್ದ ಅವನು?"

"ಯಾರು?"

"ಇನ್ಯಾರು? ನೀನು ಸ್ವಪ್ನ ಕಾಣ್ತಿದೀ ಅಂತ ಕಾಣುತ್ತೆ." ಬಾಲದೇವನ ತಲೆ ಬಿಸಿಯಾಗಿತ್ತು.

"ರಾಮುಫಲವೇ.... ನೀವಿಬ್ಬರೇ ತಿನ್ನಿ. ನನಗೆ ಹಸಿವಿಲ್ಲ. ನಾನು ತಿನ್ನೋದಿಲ್ಲ."

ಬಾಲದೇವ ಜೋರಾಗಿ ಕಂಬಳಿ ಕೊಡುವುತ್ತಾ ಹೇಳಿದ.

"ಪ್ರಪಂಚದವರೆಲ್ಲಾ ಬಂದು ನನ್ನ ಹಾಸಿಗೆಯ ಮೇಲೆ ಮಲಗಿಕೊಳ್ಳು ತ್ತಾರೆ."

ಬಾಲದೇವ ಮಾತು ಮಾತಿಗೆ ರೇಗುತ್ತಿದ್ದುದನ್ನು ಲಕ್ಷ್ಮಿಯೂ ಅನೇಕ ದಿನ ಗಳಿಂದ ಗಮನಿಸಿದ್ದಳು. ಅವಳು ಬಾಗಿಲಿನ ಹತ್ತಿರ ಬಂದು ನಿಂತು ಹೇಳಿದಳು. "ಹಾಸಿಗೆ ಕೊಡವಿ ಹಾಸಿದೀನಿ. ವಿದ್ಯಾರ್ಥಿ, ಕೈಸಾಲೆಯಲ್ಲಿ ಕೂತುಕೊಂಡಿ ದ್ದರು."

"ಯಾಕೆ? ಕೈಸಾಲೆಯಲ್ಲಿ ಯಾಕೆ?"

ಮನೆ ಒಳಗೆ ಯಾಕೆ ಕೂತಿರಲಿಲ್ಲ? ಖಾಲಿ ಮನೆಯಲ್ಲಿ ಒಳಗಡೆಯೇನು, ಕೈಸಾಲೆಯೇನು? ಎಲ್ಲಾ ಒಂದೇ. ಬಾಲದೇವನ ತುಟಿಗಳು ನಡುಗುತ್ತಿದ್ದವು.

"ವಿದ್ಯಾರ್ಥಿ 'ಸತ್ಸಂಗ'ಕ್ಕಾಗಿ ಬಂದಿದ್ದರು ...."

"ಹೌದು, ಹೌದು. ನನಗೂ ಗೊತ್ತು ಎಂಥ 'ಸತ್ಸಂಗ' ಅಂತ. ಹೂಂ .... ಸತ್ಸಂಗ .... ಬಾಲದೇವ ತಿರಸ್ಕಾರದಿಂದ ಮುಖ ತಿರುವಿದ."

ಅದು ಯಾಕೊ ಇಂದು 'ಸತ್ಸಂಗ' ಎನ್ನುವ ಶಬ್ದ ಕೇಳಿದರೆ ಅವನ ದೇಹದಲ್ಲೇ ಮಿಂಚು ಹೊಡೆದಂತಾಗುತ್ತಿತ್ತು. ಥೋಟನ್ ಬಾಬು ಹಾಸ್ಯ ಮಾಡಿದ್ದ. ಕೊನೆಗೆ ದೋರಿಕಶರ್ಮನೂ ಸಹ ಹಾಸ್ಯ ಮಾಡಿದ್ದ. ಕೊಠಾರಿನ್ ಬೇರೆಯವರೊಂದಿಗೆ 'ಸತ್ಸಂಗ....'

"ಸತ್ಸಂಗ ಮಾಡಬೇಕಾಗಿದ್ದರೆ ಅವನನ್ನು ಇಲ್ಲೇ ಇದ್ದುಬಿಡೂ ಅನ್ನು. ಹಗಲೂ-ರಾತ್ರಿ ಚೆನ್ನಾಗಿ 'ಸತ್ಸಂಗ' ಮಾಡಬಹುದು .... ಬಾಲದೇವ ತುಟಿ ಸೊಟ್ಟಗೆ ಮಾಡಿ ವಿಚಿತ್ರ ಮುದ್ರೆಯನ್ನು ಮಾಡಿಕೊಂಡು ಕೈ ತಿರುಗಿಸಿ ಹೇಳಿದ. "ಸತ್ಸಂಗ!"

"ಗೋಸಾಯಿ ಸಾಹೆಬ್"—ಲಕ್ಷ್ಮಿಯ ಮೂಗಿನ ಹೊಳ್ಳೆಗಳು ಅರಳಿದವು: "ಹೀಗೆಲ್ಲಾ ಯಾಕೆ ಹೇಳುತ್ತಿದ್ದೀರಿ?"

"ಏನು, ನೀನು ನನ್ನ ಮೇಲೆ ದರ್ಬಾರು ನಡೆಸುತ್ತೀಯಾ? ಯೆ?... ನನಗೆಲ್ಲಾ ಅರ್ಥವಾಗುತ್ತೆ ...."

"ನಿಮಗೆ ಏನು ಅರ್ಥವಾಗಿದೆ?"

ತೋಳು ತಿರುಗಿಸುತ್ತಿದ್ದಾಳಲ್ಲ, ಯಾಕೆ? ಹೊಡೆಯುತ್ತಾಳೇನು? ಅವಳು ಕೋಪದಿಂದ ಥರ ಥರ ನಡುಗುತ್ತಿದ್ದಳು.

"ಮಾತಾಡಿ. ಏನು ಅರ್ಥ ಮಾಡಿಕೊಂಡಿದೀರಿ.... ಸೂಳೆ ಅಂದು ಕೊಂಡಿದೀರೇನು? ದೊಡ್ಡವರು ಸರಿಯಾಗೇ ಹೇಳಿದಾರೆ. ಪ್ರಾಣಿಗಳ ತಲೆ ಸವರಿದರೆ ಕತ್ತಿನ ನೇಣನ್ನು ಬಿಡಿಸುತ್ತವೆ, ಆದರೆ ಮನುಷ್ಯನ ತಲೆ...."

"ನಾನು ನೀನು ಸಾಕಿದ ನಾಯಿ ಅಲ್ಲ. ನಾನು ಈ ತಕ್ಷಣ ಚನ್ನಪಟ್ಟಿಗೆ ಹೊರಟುಹೋಗ್ತೀನಿ ಈಗಲೇ." ಬಾಲದೇವ ಎದ್ದು ನಿಂತ.

"ಸಿಟ್ಟುಮಾಡಿಕೊಳ್ಳಬೇಡಿ ಗೋಸಾಯೀ. ಕ್ರೋಧ ಪಾಪಕ್ಕೆ ಮೂಲ. ಹೋಗುತ್ತಾ ಹೋಗುತ್ತಾ ನನ್ನ ಮೇಲೆ ಕಳಂಕ ಹೊರಿಸಿ ಹೋಗಬೇಡಿ."

ಬಾಲದೇವ ಏನನ್ನೋ ಯೋಚಿಸಿಕೊಂಡು ಮತ್ತೆ ಕುಳಿತ.... ಲಕ್ಷ್ಮಿಯ ದೇಹದಿಂದ ಸುಗಂಧ ಹರಡುತ್ತಿತ್ತು. ಅವನು ಸುಮ್ಮನೆ ಅವಳನ್ನೇ ನೋಡುತ್ತಾ ಕೂತ. ಲಕ್ಷ್ಮಿ ನೀರವವಾಗಿ ಬಾಗಿಲಿಗೊರಗಿ ನಿಂತು ಕಣ್ಣೀರೊರೆಸಿಕೊಳ್ಳುತ್ತಾ ಬಿಕ್ಕಳಿಸಿದಳು: "ನನ್ನ ಅದೃಷ್ಟವೇ ಕೆಟ್ಟದು."

ಲಕ್ಷ್ಮಿ ಅಳುತ್ತಿದ್ದಾಳೆ. ಬಾಲದೇವನ ಕೋಪ ನಿಧಾನವಾಗಿ ಇಳಿದು ಹೋಯಿತು. ಅವನು ಎದ್ದು, ಲಕ್ಷ್ಮಿಯ ಹತ್ತಿರ ಬಂದು ಅವಳ ತಲೆ ನೇವರಿಸುತ್ತಾ ಹೇಳಿದ: "ಅಳಬೇಡ ಲಕ್ಷ್ಮಿ. ನಿನ್ನ ಮೇಲೆ ನನಗೆ ಸಂಶಯ ಬರೋದು ಸಾಧ್ಯವೇನು? ಅಳಬೇಡ. ಆದರೆ ನೀನೇ ಅರ್ಥ ಮಾಡಿಕೊಳ್ಳಬೇಕು. ಈಗ ನೀನು ಮಠದ ಕೊಠಾರಿನ್ ಅಲ್ಲ, ನನ್ನ ಹೆಂಡತಿ. ಜನ ಏನನ್ನುತ್ತಾರೆ?...."

ಲಕ್ಷ್ಮಿ ಬಾಲದೇವನ ಕಾಲುಗಳ ಮೇಲೆ ಬಿದ್ದಳು. "ಕ್ಷಮಿಸು ಪ್ರಭೂ. ದಾಸಿಯ ಅಪರಾಧವನ್ನು....."

"ಛೇ ಛೇ ಮೇಲೇಳು ಲಕ್ಷ್ಮಿ.... ನನಗೆ ಹಸಿವೆ ಆಗಿದೆ...."

## 16

ಡಾಕ್ಟರ್, ಪೋಲೀಸಿನವರ ಕಾವಲಿನಲ್ಲಿದ್ದಾರೆ.

ಜೈಲಿನ ಆಸ್ಪತ್ರೆಯ ಒಂದು 'ಸೆಲ್'ನಲ್ಲಿ ಅವರನ್ನಿಟ್ಟಿದ್ದರು. ಪ್ರತಿ ವಾರ ಕ್ಕೊಮ್ಮೆ ಯಾರಾದರೊಬ್ಬ ಅಧಿಕಾರಿ ಬಂದು ಅವರಿಗೆ ಅನೇಕ ಗಂಟೆಗಳವರೆಗೆ ತೊಂದರೆ ಕೊಡುತ್ತಿದ್ದ. ವಿಧ ವಿಧವಾದ ಪ್ರಶ್ನೆಗಳನ್ನು ಕೇಳುತ್ತಿದ್ದ.... ಚಲಿತ್ತರ ಕರ್ಮಕಾರನೊಂದಿಗೆ ಡಾಕ್ಟರಿಗೆ ಸಂಬಂಧವಿದೆ ಎಂದು ಪ್ರಮಾಣಮಾಡಿ ತೋರಿಸಲು ಪೋಲೀಸಿನವರು ಅನೇಕ ರೀತಿಯಲ್ಲಿ ಪ್ರಯತ್ನಿಸುತ್ತಿದ್ದರು.

"ಚಲಿತ್ತರ ಕರ್ಮಕಾರ ಯಾವ ಪಕ್ಷದವನು ನಿಮಗೆ ಗೊತ್ತೇನು?"

"ಇಲ್ಲ; ನಾನು 'ಚಲಿತ್ತರ ಕರ್ಮಕಾರ' ಎನ್ನುವ ಹೆಸರೇ ಕೇಳಿಲ್ಲ."

"ಹೆಸರೇ ಗೊತ್ತಿಲ್ಲ! ಈ ಜಿಲ್ಲೆಯ ಮಕ್ಕಳಿಗೂ ಆ ಹೆಸರು ಗೊತ್ತು."

ಚಲಿತ್ತರ ಯಾರಿಗೆ ಗೊತ್ತಿಲ್ಲ? ಅವನನ್ನು ಹಿಡಿದುಕೊಟ್ಟವರಿಗೆ ಹದಿನೈದು ಸಾವಿರ ರೂಪಾಯಿ ಬಹುಮಾನ ಕೊಡುವುದಾಗಿ ಬಿಹಾರ ಸರ್ಕಾರ ಘೋಷಿಸಿದೆ. ಪ್ರತಿ ರೈಲ್ವೇ ಸ್ಟೇಷನ್ನಿನ ಮುಸಾಫಿರ ಖಾನೆಯಲ್ಲಿ ಅವನ ದೊಡ್ಡ ಫೋಟೋವನ್ನು ಹಾಕಿದ್ದಾರೆ. ಪೋಲೀಸ್ ಸಿ.ಐ.ಡಿ. ಮತ್ತು ಮಿಲಿಟರಿಯ ಒಂದು ವಿಶೇಷ ದಳ ಅವನನ್ನು ಸೆರೆಹಿಡಿಯಲು ಒಂದು ವರ್ಷದಿಂದ ಜಿಲ್ಲೆಯ ಮೂಲೆ ಮೂಲೆಗಳಲ್ಲೂ ಸುತ್ತಾಡುತ್ತಿವೆ. ಹೊಸ ಎಸ್.ಪಿ. ಸಾಹೇಬರಂತೂ, 'ಚಲಿತ್ತರನನ್ನು ಸೆರೆ ಹಿಡಿಯುತ್ತೇನೆ ಅಥವಾ ಕೆಲಸವನ್ನೇ ಬಿಟ್ಟುಬಿಡುತ್ತೇನೆ' ಎಂದು ಪ್ರತಿಜ್ಞೆಯನ್ನೇ ಮಾಡಿದ್ದಾರೆ! ಮನೆ ಮನೆಯಲ್ಲೂ ಚಲಿತ್ತರನ ಕಥೆ ಕೇಳಿಬರುತ್ತಿದೆ.... ನೇತಾಜಿ ಸುಭಾಸ್ ಚಂದ್ರಬೋಸರು ಸಿಂಗಪುರಕ್ಕೆ ಹೋದಾಗ, ಜನ ಹಳ್ಳಿ ಹಳ್ಳಿಯಲ್ಲಿ, ನದಿ ಘಟ್ಟಗಳಲ್ಲಿ ಸಂಗೀತ ನಾಟಕಗಳಲ್ಲಿ ಅವರ ಚರ್ಚೆಯನ್ನೇ ಮಾಡುತ್ತಿದ್ದರಂತೆ! ಈಗ ಯಾರ ಬಾಯಲ್ಲಿ ಕೇಳಿದರೂ ಚಲಿತ್ತರನ ಮಾತೇ.... ಕಟಿಹಾರದ ದೊಡ್ಡ ಇನ್ಸ್‌ಪೆಕ್ಟರರ ಜೊತೆ ಸ್ಟೇಷನ್ನಿನಲ್ಲೇ ಭೇಟಿಯಾಗಿ ಮಾತನಾಡಿ, ಬೀಡಾ ಅಗಿದು, ನಮಸ್ಕಾರ ಮಾಡಿ ಎದ್ದಮೇಲೆ ನಗುತ್ತಾ ಹೇಳಿದ: "ನಾನೇ ಚಲಿತ್ತರ ಕರ್ಮಕಾರ." ಇನ್ಸ್‌ಪೆಕ್ಟರ್ ಹಲ್ಲುಗಳು ಸೆಟೆದುಕೊಂಡವು .... ಕಲೆಕ್ಟರ್, ಡಾರ್ಜಿಲಿಂಗ್ ರಸ್ತೆಯಲ್ಲಿ ಎಲ್ಲಿಗೋ ಹೋಗುತ್ತಿದ್ದರು. ದಂಗರಾಘಟ್ಟದಲ್ಲಿ ದೋಣಿ ತೇಲಿಹೋಗಿತ್ತು. ಕಲೆಕ್ಟರ್ ಸಾಹೇಬ್ ಒಂತಿರುಗಿ

ಬರುತ್ತಿದ್ದಾಗ ಒಬ್ಬ ಮನುಷ್ಯ ಬಂದು ಸಲಾಂ ಮಾಡಿದ. 'ಆ ಕಡೆ ದಾಟಿಸುತ್ತೇನೆ ಬನ್ನಿ' ಎಂದ. ಕಲೆಕ್ಟರ್ ಮೋಟಾರ್ ಬೋಟಿನಲ್ಲಿ ಕುಳಿತುಕೊಂಡ ಕೂಡಲೇ ಆ ಮನುಷ್ಯ ಅವರನ್ನು ದಡ ಮುಟ್ಟಿಸಿದ. ಮೋಟಾರಿನ ಒಂದು ಚಕ್ರವನ್ನು ಮಾತ್ರ ಕೈಯ್ಯಲ್ಲಿ ಹಿಡಿದುಕೊಂಡಿದ್ದ. ದಡ ಸೇರಿದ ಮೇಲೆ ಸಂತೋಷದಿಂದ ಇನಾಮು ಕೊಡಲು ಹೆಸರು ಕೇಳಿದಾಗ ಅವನೆಂದ, 'ನಾನು ಚಲಿತ್ತರ ಕರ್ಮಕಾರ'. ಕಲೆಕ್ಟರ್‌ರ ಕೈಯ್ಯಿಂದ ಲೇಖನಿ ಬಿದ್ದುಹೋಯಿತು.... ಹೀಗೇ ಅಳುವ ಮಕ್ಕಳನ್ನು ರಾತ್ರಿಯ ಹೊತ್ತು ತಾಯಿ ಬೆದರಿಸುತ್ತಾಳೆ. "ಸುಮ್ಮನಿರು, ಚಲಿತ್ತರ ಕುದುರೆಯ ಮೇಲೆ ಬರುತ್ತಿದ್ದಾನೆ."

ಹೀಗಿರುವಾಗ ಚಲಿತ್ತರನ ಹೆಸರೇ ಕೇಳಿಲ್ಲವೆಂದು ಡಾಕ್ಟರ್ ಹೇಳುತ್ತಿದ್ದಾರೆ. ನಂಬುವುದು ಹೇಗೆ?.... ಡಾಕ್ಟರ್ ನೇಪಾಳದ ಪ್ರಜೆ ಅಲ್ಲವೆಂದು ವಿರಾಟ ನಗರದ ದೊಡ್ಡ ಅಧಿಕಾರಿ ಬರೆದು ಕಳುಹಿಸಿದ್ದಾರೆ. ಬಂಗಾಳದಲ್ಲಿ ಅವರ ಸಂಬಂಧಿಕರು ಯಾರೂ ಇಲ್ಲವೆಂದು ಬಂಗಾಳದಿಂದ ಸುದ್ದಿ ಬಂದಿದೆ. ಹಾಗಾದರೆ ಅವರು ಎಲ್ಲಿಯ ಮನುಷ್ಯರು? ಹಳೆಯ ಫೈಲುಗಳನ್ನು ತಿರುವಿಹಾಕಿದಾಗ ವಿಷಯ ಮತ್ತಷ್ಟು ಗಂಟು ಗಂಟಾಯಿತು. ವಿಚಿತ್ರ ಸಂಕಟ, ಆ ಕಡೆ ವಿಧಾನ ಸಭೆಯಲ್ಲಿ ಪ್ರಶ್ನೆಗಳು ಬರುತ್ತಿವೆ: "ಡಾಕ್ಟರನ್ನು ಪಹರೆಯಲ್ಲಿ ಇಟ್ಟಿರುವುದೇಕೆ?" ಒಳ್ಳೇ ಕಷ್ಟ. ಎಸ್.ಪಿ. ಸಾಹೇಬರು ತುಂಬಾ ಕಠಿಣ ಮನುಷ್ಯರು. ಕಟಿಹಾರದ ಇನ್ಸ್‌ಪೆಕ್ಟರಿಗೆ ಚೆನ್ನಾಗಿ ಅಂದು ಬುದ್ಧಿ ಕಲಿಸಿದ್ದಾರೆ.

ಜೈಲಿಗೆ ಬಂದ ಮೇಲೆ ಡಾಕ್ಟರಿಗೆ ಅನ್ನಿಸಿತು: ತಮಗೆ ಅದರ ಅವಶ್ಯಕತೆ ಬಹಳವಾಗಿತ್ತು ಎಂದು. ಜೈಲು ಆಸ್ಪತ್ರೆಯ ಈ ಜೈಲು ಅಧಿಕಾರಿಗಳು ಬರುವುದೂ ಹೋಗುವುದೂ, ಪ್ರಶ್ನೆಗಳನ್ನು ಕೇಳುವುದೂ, ಹದಿನೈದು ದಿನಗಳಲ್ಲಿ ನಿಂತುಹೋಯಿತು.... ಗಾಂಧೀಜಿ ಪಾಟ್ನಾದ ಪ್ರಾರ್ಥನಾ ಸಭೆಯಲ್ಲಿ ಪ್ರತಿ ದಿನ ಭಾಷಣ ಮಾತುತ್ತಿದ್ದರು. ದಿನಪತ್ರಿಕೆಗಳ ಈ ಭಾಗ ಎಂದೂ ಹಳೆಯ ದಾಗುವುದಿಲ್ಲ. ಈ ಭಾಷಣಗಳ ಮೇಲೆ ಚರ್ಚೆ ಮಾಡುವುದು ಸಾಧ್ಯವಿಲ್ಲ, ಆದರೆ ಯಾವುದಾದರೂ ಜೈಲಿನಲ್ಲಿ ಕುಳಿತು ಅವುಗಳ ಅಧ್ಯಯನ ಮಾಡಬಹುದು.... ನಿನ್ನೆ ತಾನೇ ಕೆಲವು ಜನ ಸಂಪ್ರದಾಯವಾದಿಗಳ ದೊಡ್ಡ ಉತ್ಸವವನ್ನು ಉದ್ಘಾಟಿಸಿದ್ದಾರೆ, ಪ್ರಾಂತ್ಯದ ಪ್ರಸಿದ್ಧ ನಾಯಕರೊಬ್ಬರು. ಮೋಸ ಎನ್ನುವುದು ಬಹಳ ದೂರದವರೆಗೆ ಹಬ್ಬಿರುವಂತೆ ತೋರುತ್ತದೆ.... ಮಹಾತ್ಮಾ ಗಾಂಧಿಯವರ ಬಾಯಿಯಿಂದಲೂ, ಕಪ್ಪು ಟೋಪಿಯವರ ಬಗ್ಗೆ ಪ್ರಶಂಸೆಯ ಮಾತುಗಳನ್ನು

ಅಡಿಸುವುದು ಹುಡುಗಾಟದ ಮಾತಲ್ಲ. ಅವರಿಗೆ ಮೋಸವಾಗಿದೆ ಎಂದು ಡಾಕ್ಟರ್ ಮನಸ್ಸಿನಲ್ಲೇ ಅಂದುಕೊಂಡರು. ಮಾರನೆಯ ದಿನವೇ ವಿಷಯ ಸ್ಪಷ್ಟ ವಾಯಿತು. ಗಾಂಧೀಜಿ ಹೇಳಿಕೆಯನ್ನಿತ್ತಿದ್ದರು.

"ಈ ಸಂಸ್ಥೆ ಸಂಚಾಲಕರು ನನ್ನ ಹತ್ತಿರ ತಮ್ಮ ಸಂಸ್ಥೆಯ ಉದ್ದೇಶ ಧೋರಣೆಗಳನ್ನು ಮುಚ್ಚಿಟ್ಟರು. ಇದರ ಅರ್ಥ, ಅವರು ಅಸತ್ಯ ಮಾರ್ಗದಲ್ಲಿ ನಡೆಯುತ್ತಿದ್ದಾರೆಂಬುದನ್ನು ಅವರ ಆತ್ಮವೇ ಸಾರುತ್ತಿದೆ. ಹೀಗಿರುವಲ್ಲಿ ಸರಿಯಾದ ಬುದ್ಧಿ ಇರುವ ಮನುಷ್ಯ, ಅವರು ಸರಿಯಾದ ಮಾರ್ಗದಲ್ಲಿದ್ದಾರೆಂದು ಹೇಗೆತಾನೇ ಹೇಳಬಲ್ಲ?...." ಡಾಕ್ಟರಿಗೆ ಮೇರೀಗಂಜಿನ ನೆನಪಾಗುತ್ತಿದ .... ಕಮಲೆಯ ಬಗ್ಗೆ ತುಂಬಾ ಚಿಂತೆಯಾಗಿತ್ತು. ಆದರೆ ಅವಳು ಸರಿಯಾಗಿದ್ದಾಳೆಂದು ತಿಳಿಯಿತು. ಕಮಲೆಯ ನೆನವು ಬಂದ ಕೂಡಲೇ ಜೈಲಿನ ಕುರೂಪ ವೆಲ್ಲಾ ಒಟ್ಟಾಗಿ ಮುಂದೆ ಬಂದು ನಿಂತಂತಾಗುತ್ತದೆ. ಕಾಳೀಚರಣ, ವಾಸುದೇವ ಮುಂತಾದವರು ದರೋಡೆಯ ಕೇಸಿನಲ್ಲಿ ಸಿಕ್ಕಿಹಾಕಿಕೊಂಡು ಇಲ್ಲಿಗೆ ಬಂದಿದ್ದಾರೆ. ಅವರಿಗೆ ವಾಸುದೇವ, ಸುಂದರ ಸೋಮಾಜಟ್ಟರ ವಿಷಯವೇನೋ ಗೊತ್ತಿಲ್ಲ, ಆದರೆ ಕಾಳೀಚರಣನ ನಂಬಿಕೆ ಬರುವುದಿಲ್ಲ. ಆದರೆ, ಏನೂ ಹೇಳುವಂತೆಯೂ ಇಲ್ಲ.... ತಹಸೀಲ್ದಾರ ವಿಶ್ವನಾಥಪ್ರಸಾದರ ಐದು ಬೆರಳುಗಳೂ ಈಗ ತುಪ್ಪದಲ್ಲಿ ಅದ್ದಿವೆ. ಆದರೆ ಈ ಅನ್ಯಾಯ ಎಷ್ಟು ದಿನಗಳು ನಡೆಯ ಬಲ್ಲದು?—ತಹಸೀಲ್ದಾರ ವಿಶ್ವನಾಥಪ್ರಸಾದರು ಹಿಂದೊಮ್ಮೆ ನಕ್ಕು ಹೇಳಿದ್ದರು: "ಯಾವ ದಿನ ಜನ ಶ್ರೀಮಂತರನ್ನು, ಮಿಲ್ ಮಾಲಿಕರನ್ನು, ಓಡಾಡುತ್ತಿರುವ ಕುಷ್ಠರೋಗಿಗಳು, ಹುಚ್ಚರು ಎಂದು ತಿಳಿಯುತ್ತಾರೋ, ಆ ದಿನ ನಿಜವಾದ ಸ್ವರಾಜ್ಯ ಬರುತ್ತದೆ! ಇಂಥ ಕಾಲ ಬರುತ್ತದೆಂದು ನೀವು ಹೇಳುತ್ತೀರಿ, ಕಾಲ ಬಂದಾಗ ನಮ್ಮ ಸಂಪತ್ತನ್ನು ಕಿತ್ತುಕೊಳ್ಳುತ್ತಾರೆ.... ಆದ್ದರಿಂದ ಈಗ ಸಂಪತ್ತನ್ನು ಕೂಡಿಸುವುದರಲ್ಲಿ ಪ್ರತಿಬಂಧವೇನೂ ಇಲ್ಲವಲ್ಲ. ಈಗೇಕೆ ಸುಮ್ಮನೆ ಕೂತಿರಬೇಕು?"

ತಹಸೀಲ್ದಾರರೂ ವಿಚಿತ್ರ ಮನುಷ್ಯರು. ಆದರೆ ಡಾಕ್ಟರ್, ಜೈಲಿನಿಂದ ಬಿಡುಗಡೆ ಆದಕೂಡಲೇ ಮೇರೀಗಂಜಿಗೇ ಹೋಗುವುದು. ಅವರು ಇನ್ನೆಲ್ಲಿಗೆ ಹೋಗಬಲ್ಲರು? ನೇಪಾಳ?.... ನೇಪಾಳದ ಜನ "ನೇಪಾಳ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪಿಸಿದ್ದಾರೆ.... ಇಲ್ಲ ರಾಜಕೀಯದಲ್ಲಿ ಅವರು ಪ್ರವೇಶಿಸುವುದಿಲ್ಲ, ಅದಕ್ಕೆ ಅವರು ಯೋಗ್ಯರೂ ಅಲ್ಲ.... ಒಮ್ಮೆ ಮಮತೆಯೊಂದಿಗೆ

ಮಾತಾನಾಡುತ್ತಾ ಅವರು ರಾಜನೀತಿಯನ್ನು ಡಾಕಿಣಿಗೆ ಹೋಲಿಸಿದ್ದರು!....
ಡಾಕಿಣಿ.... ಚಿಕ್ಕಮ್ಮನನ್ನು ಜನ ಕೊನೆಗೂ ಕೊಲೆ ಮಾಡಿಯೇಬಿಟ್ಟರು.

ಚಿಕ್ಕಮ್ಮ.... ಗಣೇಶ, ಕಮಲಾ,.... ಸಾವಿರ ಪ್ರಯತ್ನಪಟ್ಟರೂ ಅವರ ಮುಖಗಳು ಕಣ್ಣಿನಿಂದ ಮರೆಯಾಗವುದಿಲ್ಲ.

"ಡಾಕ್ಟರ್" ಅಸಿಸ್ಟೆಂಟ್ ಜೈಲರ್ ಬಂದು ಹೇಳಿದ:

"ಬ್ರಹ್ಮ ಸಮಾಜದಿಂದ ಕಾರ್ಯದರ್ಶಿ ಬಂದಿದ್ದಾರೆ. ನಿಮ್ಮ ಅಕ್ಕನ ಮಗನಿಗೆ ಕಾಯಿಲೆ ಆಗಿದೆಯಂತೆ. ಅವನ ಚಿಕಿತ್ಸೆಯ ಬಗ್ಗೆ ನಿಮ್ಮ ಹತ್ತಿರ ಮಾತನಾಡುವುದಕ್ಕೆ ಬಂದಿದ್ದಾರೆ. ಜೈಲರ್ ನಿಮ್ಮನ್ನು ಕರೆಯುತ್ತಿದ್ದಾರೆ.

"ಸರಿ ನಡೀರಿ."

## 17

ಒಂದೂವರೆ ತಿಂಗಳಿಂದ ಕಾಳೀಚರಣ ಜೈಲಿನಲ್ಲಿದ್ದ. ವಾಸುದೇವ, ಸುಂದರ, ಜಗದೇವ, ಸೋಮಾ ಮತ್ತು ಸೋನಮಾ ಎಲ್ಲರೂ ಮೊಕದ್ದಮೆಯಲ್ಲಿ ಸಿಕ್ಕಿಹಾಕಿಕೊಂಡಿದ್ದರು ಈ ಮಧ್ಯೆ ಒಂದು ದಿನ ಮ್ಯಾಜಿಸ್ಟ್ರೇಟ್ ಕೋರ್ಟಿನಲ್ಲಿ ಹಾಜರಿ ಹಾಕಿ ಬಂದದ್ದೂ ಆಯಿತು. ಒಂದು ಮಿಲಿಟರಿ ಲಾರಿ ಬಂದಿದೆ, ಇನ್ನೊಂದು ಅದರ ಹಿಂದೆ. ಎಲ್ಲರ ಕೈತೋಳುಗಳಿಗೂ ಬೇಡಿಯನ್ನು ಹಾಕಿ, ಕೋರ್ಟಿಗೆ ಕರೆದುಕೊಂಡು ಹೋಗಿದ್ದರು. ಆ ದಿನ ಕಾಳೀಚರಣ ಒಂದೇ ಸಮನೆ ಗೋಡೆಯ ಮೇಲೇ ಇದ್ದ....ಕೋರ್ಟಿನ ಆವರಣದಲ್ಲಿ ಮೂತ್ರದ ದುರ್ಗಂಧ ತೀಕ್ಷ್ಣವಾಗಿ ಹರಡಿತ್ತು. ಕಾಳೀಚರಣನ ದೃಷ್ಟಿ ಸೆಕ್ರೆಟರಿಯ ಮೇಲೆ ಬಿದ್ದಿತು. ಅವರೂ ಅವನನ್ನು ನೋಡಿದರು. ಕಾಳೀಚರಣನ ಮುಖ ಅರಳಿತು. ಮೂರು ತಿಂಗಳಿಂದ ಯಾರನ್ನು ಒಂದೇ ಸಮನೆ ಜ್ಞಾಪಿಸಿಕೊಳ್ಳುತ್ತಿದ್ದನೋ ಅವರೇ ಎದುರಿಗೆ ಸಿಕ್ಕಿದ್ದರು. ಕಾಳೀಚರಣ ಕೂಗಿಕೊಂಡ. "ಸೆಕ್ರೆಟರಿ ಸಾಹೇಬ್,.... ಕೃಷ್ಣಕಾಂತ ಮಿಶ್ರರೇ.... ಜೈಹಿಂದ್ ಕಾಮ್ರೇಡ್" ಕಿವಿಯನ್ನು ಜೇನು ನೊಣ ಕಚ್ಚಿತೇನೋ ಎನ್ನುವಂತೆ ಕೊಡವಿಕೊಂಡು ಸೆಕ್ರೆಟರಿ ತಕ್ಷಣ ಮುಖ

ಬೇರೆ ಕಡೆ ತಿರುಗಿಸಿಕೊಂಡು ಹೊರಟುಹೋದರು. ಕಾಳೀಚರಣನನ್ನು ಪೋಲೀಸಿನವರು ಗದರಿಸಿದರು. "ಯಾಕಯ್ಯಾ ದೊಡ್ಡ ಮನುಷ್ಯ, ಹಂಟರ್‌ನಿಂದ ತಿವಿಸಿಕೊಳ್ಳದೆ ಮುಂದೆ ಹೋಗೋದಕ್ಕೆ ಆಗೋದಿಲ್ವೇನು?" ಆ ಕಡೆ ಸೆಕ್ರೆಟರಿ ಮುಳ್ಳಿನ ಜೈಲಿಗೆ ತಗುಲಿಸಿಕೊಳ್ಳುವುದನ್ನು ತಪ್ಪಿಸಿಕೊಂಡು ಮುಂದೆ ನಡೆದರು. ಅಕ್ಕಪಕ್ಕ ತಿರುಗಿ ನೋಡದೆ ಒಂದೇ ಕಡೆ ಮುಖ ಮಾಡಿಕೊಂಡು ಹೋದರೆ ಮುಳ್ಳು ಚುಚ್ಚದೆ ಏನಾಗುತ್ತದೆ? . . . . ಸುಂದರ ಕಿಲಕಿಲನೆ ನಕ್ಕ . . . . ಕಾಳೀಚರಣ ಯೋಚಿಸಿದ. ಇದರಲ್ಲಿ ಸೆಕ್ರೆಟರಿಯವರದೇನು ತಪ್ಪು? . . . . ಕಳ್ಳರು ದರೋಡೆಕಾರರು ಅಂದರೆ ಸಭ್ಯರು ದೂರ ಇರುವುದೇ ಒಳ್ಳೆಯದು. ವಾಸುದೇವ, ಸುಂದರ, ಸೋಮು, ಸನಿಚ್ಚರ ಮುಂತಾದವರೆಲ್ಲಾ ದರೋಡೆಕಾರರೇ. ಸೆಕ್ರೆಟರಿ ಅವನನ್ನು ಅದೇ ಗುಂಪಿಗೆ ಸೇರಿಸಿದ್ದಾರೆ. ಅನ್ಯ ಮಾರ್ಗವಿಲ್ಲ.

. . . . ಏನೂ ಉಪಾಯವಿಲ್ಲ . . . . ಇಂದು ಮಾಂಸ ಕೊಡುವ ದಿನ. ಚಳಿಗಾಲದಲ್ಲಿ ವಾರಕ್ಕೊಂದು ದಿನ ಕೈದಿಗಳಿಗೆ ಮಾಂಸ ಕೊಡುತ್ತಾರೆ. ಮಾಂಸ ಹಂಚಿ ಮುಗಿಸುವ ಹೊತ್ತಿಗೆ ಸಂಜೆ ಸಾಕಷ್ಟು ಕತ್ತಲಾಗುತ್ತದೆ. ಆಸ್ಪತ್ರೆಯ ಹಿಂದುಗಡೆ ವಾರ್ಡರ್ ಮಾಂಸದ ವ್ಯವಸ್ಥೆ ಮಾಡಲು ಹೊರಟುಹೋಗುತ್ತಾರೆ . . . . ಈವತ್ತೇ ಪ್ರಯತ್ನಪಡಬೇಕು . . . .

ಕಾಳೀಚರಣ ನಿಶ್ಚಯ ಮಾಡಿದ. ಸಮಯ ಸಿಕ್ಕರೆ ಅವನು ಖಂಡಿತ ಪ್ರಯತ್ನಪಡುತ್ತಾನೆ. ಹೌದು . . . . ಅವನು ಓಡಿಹೋಗುತ್ತಾನೆ . . . . ಬೇರೆ ಯಾವ ಉಪಾಯವೂ ಇಲ್ಲ. ಅವನಿಗೆ ಎಲ್ಲಾ ಪತ್ತೆಯಾಗಿದೆ . . . . ಜೈಲಿನಿಂದ ಓಡಿಹೋದರೆ ಕೇವಲ ಆರು ತಿಂಗಳು ಶಿಕ್ಷೆಯಾಗುತ್ತದೆ. ಬೇಡಿ ಮತ್ತು ಕೆಂಪು ಟೋಪಿ ಹಾಕಿಕೊಳ್ಳಬೇಕಾಗುತ್ತದೆ. ಜನ ಕೆಂಪು ಟೋಪಿಯವನು ಅನ್ನುತ್ತಾರೆ. ಅಷ್ಟೆ ತಾನೆ? ಕೆಂಪು ಬಣ್ಣವೇನೂ ಕೆಟ್ಟದ್ದಲ್ಲ . . . . ಸೆಕ್ರೆಟರಿಯವರನ್ನು ಮತ್ತು ಧರ್ಮಪುರಿಯವರನ್ನು ಭೇಟಿಯಾಗಿ ಅವರೊಡನೆ ಮಾತನಾಡಬೇಕು. ಅನಂತರ ಅವನಿಗೆ ಗಲ್ಲಿನ ಶಿಕ್ಷೆಯಾದರೂ ಚಿಂತೆಯಿಲ್ಲ. ಸಂತೋಷದಿಂದ ಅನುಭವಿಸಲು ಸಿದ್ಧ . . . . ಪಾರ್ಟಿಗೆ ಇಷ್ಟು ಕೆಟ್ಟ ಹೆಸರು ಬರುವ ಹಾಗೆ ಮಾಡಿ ಬದುಕಿದ್ದು ತಾನೇ ಏನು ಪ್ರಯೋಜನ?

. . . . ವಾಸುದೇವ, ಸುಂದರ ಮತ್ತು ಸನಿಚ್ಚರರಂತೂ ಕಳ್ಳರು—ದರೋಡೆಕಾರರ ಜೊತೆ ಚೆನ್ನಾಗಿ ಹೊಂದಿಕೊಂಡುಬಿಟ್ಟಿದ್ದಾರೆ. ಅವರನ್ನು ನೋಡಿದರೆ ಕಾಳೀಚರಣನಿಗೆ ನಾಚಿಕೆಯಾಗುತ್ತದೆ. ವಾಸುದೇವನಂತೂ ಡಾಕ್ಟರ್

ನಟಖಟ್ ಪ್ರಸಾದರ ಜೊತೆ ಸ್ನೇಹ ಬೆಳೆಸಿದ್ದಾರೆ. ಡಾಕ್ಟರ್ ನಟಖಟ್.... ಪೂರಾ ಗಾಂಪರೊಡೆಯ. ಅವನು ಫಾರಬಿಸಗಂಜಿದವನು ಸಿಕ್ಕಿಕೊಂಡು ಜೈಲಿಗೆ ಬಂದಿದ್ದಾನೆ. ಆಶ್ಚರ್ಯ ಆ ಡಾಕ್ಟರನ್ನು ನೋಡಿದರೆ, ಅವನು ಜನರನ್ನು ಕೊಲ್ಲುವುದನ್ನು ಬಿಟ್ಟು ಬದುಕಿಸಲೂ ಬಲ್ಲ ಎಂದು ಯಾರೂ ನಂಬಲಾರರು, ಮುಖವಂತೂ ಕಟುಕನಂತೆಯೇ ಇದೆ. ವಾಸುದೇವನಿಗೂ ಅವನಿಗೂ ತುಂಬಾ ಸ್ನೇಹ.... ರಾತ್ರಿ ಹೊತ್ತು ಜೂಜಾಡುತ್ತಾರೆ. ವಾಸುದೇವ ಈಗ ಕಾಳೀಚರಣನ ಜೊತೆ ಮಾತನಾಡುವುದಿಲ್ಲ. ಅವನಿರುವುದೂ ಬೇರೆ ಕೋಣೆಯಲ್ಲಿ. ಒಂದು ದಿನ ಕಮಾನಿನ ಹತ್ತಿರ ಸ್ವಲ್ಪ ಹೊತ್ತು ಮಾತ್ರ ಸಿಕ್ಕಿದ್ದ. ಕಾಳೀಚರಣ ಅವನನ್ನು ಒಂದೇ ಒಂದು ಪ್ರಶ್ನೆ ಕೇಳಿದ: "ವಾಸುದೇವ, ನೀನು ಹೀಗೆ ಮಾಡಿದ್ದು ಸರಿಯೇನು?"....ವಾಸುದೇವನ ಜೊತೆ ಕಲ್ಕತ್ತಾದ ಒಬ್ಬ ಪಾಕೆಟ್ ಕಳ್ಳನೂ ಇದ್ದ. ಕಾಳೀಚರಣನ ಮಾತನ್ನು ಕೇಳಿ ಇಬ್ಬರೂ ಗಟ್ಟಿಯಾಗಿ ನಕ್ಕಿದ್ದರು. ಹೋಗುವುದಕ್ಕೆ ಇಬ್ಬರೂ ಗಟ್ಟಿಯಾಗಿ ನಕ್ಕಿದ್ದರು. ಮುಂಚೆ ವಾಸುದೇವ ಹೇಳಿದ: "ಆ ದಿನ ಏಳು ನೂರು ರೂಪಾಯಿಗಳನ್ನು ಕಟ್ಟಿಕೊಂಡು ಸೆಕ್ರೆಟರಿಯವರಿಗೆ ಕೊಡಲು ಹೋಗಿದ್ದೆಯಲ್ಲಾ. ನಾಲ್ಕು ದಿನಗಳಲ್ಲಿ ಇಷ್ಟು ಹಣ ಹೇಗೆ ವಸೂಲಾಯಿತೆಂದು ಆ ದಿನವೇ ಯಾಕೆ ಕೇಳಲಿಲ್ಲ?" ಅದೇ ದಿನ ಸಂಜೆ ಡಾಕ್ಟರ್ ನಟಖಟ್ ಕಾಳೀಚರಣನನ್ನು ತಡೆದು ಹೇಳಿದ್ದ: "ಕಾಳೀಚರಣ, ಬೇರೆ ಯಾವ ಮಾರ್ಗವೂ ಇಲ್ಲ. ನೀನು ಮನಸ್ಸು ಮಾಡಿದರೆ ನಿಮಗೆಲ್ಲಾ ಜಾಮೀನು ನಿಲ್ಲಬಹುದು. ಮೊಕದ್ದಮೆಯಿಂದ ಯಾವ ಕಳಂಕವೂ ಇಲ್ಲದೆ ತಪ್ಪಿಸಿಕೊಳ್ಳಲೂ ಬಹುದು. ಯೋಚನೆ ಮಾಡು. ಯೋಚನೆ ಮಾಡಿ ನೋಡು. ಪಾರ್ಟಿ–ಗೀರ್ಟಿ ಯಾರೂ ಸಹಾಯಕ್ಕೆ ಬರೋದಿಲ್ಲ."

....ಥೂ, ಥೂ, ಜೈಲಿಗೆ ಬಂದಮೇಲೆ ಕಾಳೀಚರಣನಿಗೆ ಹೊಗೆಸೊಪ್ಪಿನ ಚಟ ಗಂಟುಬಿದ್ದಿದೆ. ....ಡಾಕ್ಟರ್....ತನ್ನ ಹಳ್ಳಿಯ ಡಾಕ್ಟರ್ ಜಮೀನ್ದಾರರೊಂದಿಗೆ ಜೈಲಿನ ಗೇಟಿನ ಹತ್ತಿರ ನಗುತ್ತಾ ಹೇಳಿದ್ದರು: "ಸಿಪಾಯಿ, ಕಾಳೀಚರಣನನ್ನು ಸ್ವಲ್ಪ ಚೆನ್ನಾಗಿ ನೋಡಿಕೊಳ್ಳಿ."

....ಡಾಕ್ಟರ್ ದೇವತಾ ಮನುಷ್ಯರು. ಖಂಡಿತ ದೇವತೆಯೇ.... ಬರೀ ಹೊಗೆಸೊಪ್ಪನ್ನು ಮಾತ್ರವಲ್ಲದೆ ಆಗಾಗ ಬೀಡಿಯನ್ನೂ ಕೊಡುತ್ತಿರುತ್ತಾನೆ. ಜಮೀನ್ದಾರ....ಥೂ ಥೂ. ಇಂಥವರ ಹೆಣದ ಮೇಲೆ ಉಗುಳಬೇಕು.... ಇಲ್ಲ, ಡಾಕ್ಟರ್ ನಟ್‌ಖಟ್ ಪ್ರಸಾದನ ಮಾತನ್ನು ಅವನು ಒಪ್ಪುವುದಿಲ್ಲ.

ಸೋಮನೂ ಒಂದು ಬಾರಿ ಮೆಲ್ಲನೆ ಹೇಳಲು ಪ್ರಯತ್ನಪಟ್ಟಿದ್ದ: "ಉಸ್ತಾದ್...."

"ಬಾಯ್ಮುಚ್ಚು ಉಸ್ತಾದನ ಮಗನೇ" ಕಾಳೀಚರಣ ಗದರಿಸಿದ್ದ. ಉಸ್ತಾದ್, ಜೈಲಿನ ಹೊರಗಡೆ ಪರಾರಿಯಾಗಿದ್ದ ಸ್ಥಿತಿಯಲ್ಲಿ, ಕಾಳೀಚರಣನಿಗೆ ಚಲಿತ್ತರ ಕರ್ಮಕಾರನ ಭೇಟಿಯಾಗಿತ್ತು....ಕುಸಿಯಾರಂಗ ಸ್ಟೇಷನ್ನಿನ ಹತ್ತಿರ ಎರಡು ಮರಗಳ ನೆರಳಿನಲ್ಲಿ ಭೇಟಿಯಾಗಿತ್ತು. ಕಾಳೀಚರಣನನ್ನು ನೋಡಿದ ಕೂಡಲೇ ಅವನು ತನ್ನ ಜೊತೆಯವರೊಂದಿಗೆ ಕತ್ತಿ ತೋರಿಸುತ್ತಾ ಎದ್ದು ನಿಂತಿದ್ದ....'ಹ್ಯಾಂಡ್ಸ್ ಅಪ್' ಪೋಲೀಸ್ ಇನ್ಸ್‌ಪೆಕ್ಟರಿನಂತೆಯೇ ಅವನೂ ಕೂಗಿಕೊಂಡಿದ್ದ....ಕಾಳೀಚರಣನಿಗೆ ನಗು ಬಂದಿತ್ತು. ತನಗೆ ಅರಿವಿಲ್ಲದಂತೆ ಅವನ ಬಾಯಿಮಾತು ಹೊರಟಿತ್ತು: "ನಾನು ಕಣಯ್ಯಾ ಉಸ್ತಾದ್, 'ಬರಿ-ಕೈಯ್' ಪಾರ್ಟಿಯ ಕಾಳೀಚರಣ" ಚಲಿತ್ತರ ಹೇಳಿದ್ದ, "ಈ ಬರಿ-ಕೈಯ ಪಾರ್ಟಿಯಲ್ಲಿದ್ದುಕೊಂಡು ನೀನು ಸದಾ ಬರಿ ಕೈಯ್ಯಲ್ಲೇ ಇರಬೇಕಾಗುತ್ತದೆ." ಅನಂತರ ಬೇಕಾದಷ್ಟು ಚರ್ಚೆ ನಡೆಯಿತು. ಕೊನೆಗೆ ಚಲಿತ್ತರ ಹೇಳಿದ್ದ, "ನೀನು ನನ್ನ ಉಸ್ತಾದ್ ಅಂತ ಕರೆದಿದೀಯ. ತುಂಬಾ ಕಷ್ಟ ಸಮಯದಲ್ಲಿ ಆವಶ್ಯಕತೆ ಬಿದ್ದರೆ ನನ್ನನ್ನು ಜ್ಞಾಪಿಸಿಕೋ." ಕಾಳೀಚರಣ ಹೇಳಿದ. "ಅದರ ಆವಶ್ಯಕತೆ ಬರೋದಿಲ್ಲ...." ಮತ್ತೊಮ್ಮೆ ಉಸ್ತಾದ್ ಎನ್ನಬೇಕೆಂದಿದ್ದವನು ತಡೆದಿದ್ದ.... ಇಂದೂ ಚಲಿತ್ತರನ ಆ ಮಾತು ಕಿವಿಯಲ್ಲಿ ಧ್ವನಿಸುತ್ತಿದೆ. "ನೋಡೋಣ ನಿನ್ನ ಉಸ್ತಾದಗಿರಿ."

....ಆದರೆ, ಇಂದು ವಾಸುದೇವ ಮತ್ತು ಸೋಮರಿಂದ ಸಹಾಯ ಪಡೆದುಕೊಳ್ಳಲೇಬೇಕು. ಒಂದು ಬಾರಿ ಸಿಕ್ಕಿಬಿಟ್ಟರೆ ಸಾಕು ಅವರಿಗೆ ತಿಳಿಸ ಬಹುದು.

ಗೋಷ್ಠಿ ಸೇರಿತು····ಸೋಮಾ ಮತ್ತು ವಾಸುದೇವರಿಗೆ ಆಸ್ಪತ್ರೆಯ ಹಿಂದುಗಡೆ ಬರುವಂತೆ ಕಾಳೀಚರಣ ತಿಳಿಸಿದ್ದ····ಎಲ್ಲಾ ಸರಿಹೋಯಿತು. ಧಡ್, ಕಾಳೀಚರಣ ಬಿದ್ದುಬಿಟ್ಟ. ಆಗ ವಾಸುದೇವ ಮತ್ತು ಸೋಮಾ, ಭುಜಕ್ಕೆ ಭುಜ ತಗುಲಿಸಿ ನಿಂತರು····ಸರಿಯಾಗಿದೆ. ಸ್ವಲ್ಪ, ಇನ್ನೊಂದು ಸ್ವಲ್ಪ ಸಾಕು. ನಾಲ್ಕು ಅಂಗುಲ ಅಷ್ಟೆ····ವಾಸುದೇವ ಮತ್ತು ಸೋಮರ ಭುಜಗಳ ಮೇಲೆ ಕಾಳೀಚರಣ ಸ್ವಲ್ಪ ಒದ್ದಾಡಿದ, ಇಬ್ಬರ ಭುಜಗಳ ಮೇಲಿನ ಭಾರ ಸ್ವಲ್ಪ ಹಗುರವಾಯಿತು····"ಹೂಂ ಸರಿಯಾಯಿತು...."

"ಓಡು...."

"ಓಡಿದ, ಓಡಿದ."

....ಜೈಲು ಆಸ್ಪತ್ರೆಯ ಹಿಂದುಗಡೆಯಿದ್ದ ಪೋಲೀಸಿನವರು ಸೀಟಿ ಊದಿದರು. ಅನೇಕ ಸೀಟಿಗಳ ಸಮ್ಮಿಳಿತ ಸ್ವರ ಕೇಳಿಬಂತು.

ಥನ್ ಥನ್, ಥನಾಂಗ್ ಥನಾಂಗ್....ಜೈಲಿನ ಹೆಬ್ಬಾಗಿಲಿನ ದೊಡ್ಡ ಗಂಟೆ ಥಣಗುಟ್ಟಿತು.

ಕಾಳೀಚರಣ ಐದು ನಿಮಿಷಗಳವರೆಗೆ ಜೈಲಿನ ಹೊರಗಡೆ, ಗೋಡೆಯ ಹತ್ತಿರ ನೆಲದ ಮೇಲೆ ಜ್ಞಾನ ತಪ್ಪಿ ಬಿದ್ದಿದ್ದ. ....ಸೀಟಿ ಮತ್ತು ಗಂಟೆಯ ಶಬ್ದ ಅವನನ್ನು ಎಚ್ಚರಿಸಿತು....ಇಲ್ಲ ಹೆಚ್ಚು ಪೆಟ್ಟೇನೂ ತಗುಲಿಲ್ಲ. .... ಸೊಂಟ ಸ್ವಲ್ಪ ತರಚಿದೆ, ಅಷ್ಟೆ....ಥನಾಂಗ್, ಥನಾಂಗ್....ಜೈಲಿನ ಗಂಟೆ ಥಣಗುಟ್ಟಿತು.

ಒಂದೇ ಬಾರಿಗೆ ಅನೇಕ ಬಂದೂಕಗಳು ಗರ್ಜಿಸಿದವು.

....ಕತ್ತಲೆಯಲ್ಲಿ ಏನೂ ಕಾಣುತ್ತಿಲ್ಲ. ಸುಮಾರು ಒಂದು ಗಂಟೆಯ ಸಮಯ ಇರಬಹುದು. ಹಿಮದಿಂದ ನೆಲವೆಲ್ಲಾ ಒದ್ದೆಯಾಗಿದೆ. ಕಾಲು ಜಾರುತ್ತಿದೆ....

ಎದುರಿಗೆ ಡಾರ್ಜಲಿಂಗ್ ರಸ್ತೆಯಲ್ಲಿ ಐದಾರು ಮಿಲಿಟರಿ ಲಾರಿಗಳು ಭರ್ರೆಂದು ಬರುತ್ತಿದ್ದವು.

ಕಾಳೀಚರಣ, ಪಾಂಚೂ ಬಾಬುವಿನ ವಕೀಲನ ಮನೆಯ ಹಿಂದುಗಡೆ ಒಂದು ಪೊದೆಯಲ್ಲಿ ಕೂತು ಏದುಬ್ಬಸ ಪಡುತ್ತಿದ್ದ....ರಸ್ತೆಯನ್ನು ದಾಟುವುದು ಹೇಗೆ?....ಯಾವ ಕಡೆ ಹೋದರೆ ಒಳ್ಳೆಯದು....ಬಲಗಡೆಯೂ ಜನ ಗಲಾಟೆ ಮಾಡುತ್ತಿದ್ದಾರೆ....ಹತ್ತಿರದ ಗಲ್ಲಿಯಲ್ಲೇ ಕುದುರೇ ಸವಾರರು ಹೋಗುತ್ತಿದ್ದಾರೆ....

ಕಾಳೀಚರಣ ನಿಶ್ಚಯಿಸಿದ. ಎದುರಿನ ಬಾಂಸವಾಡಿಯನ್ನು ದಾಟಿ ಮೋರಬಲೀ ಸಾಹೇಬರ ಮಳಿಗೆಯ ಪಕ್ಕಕ್ಕೆ ಹೋಗುವುದೇ ಒಳ್ಳೆಯದು.... ಇನ್ನು ತಡಮಾಡಬಾರದು....ಮೋರಬಲೀ ಸಾಹೇಬರ ಮಳಿಗೆಯ ಪಕ್ಕದಲ್ಲಿ ಹೋಗುತ್ತಿರುವಾಗ ಹಿಂದಿನಿಂದ ಯಾರೋ ಟಾರ್ಚ್ ಬಿಡುತ್ತಿದ್ದಾರೆಂದು ಕಾಳೀಚರಣನಿಗೆ ಅನ್ನಿಸಿತು....ಹೌದು. ಅದು ಟಾರ್ಚಿನ ಬೆಳಕೇ....ಅವನು

ಕಾಡಿನೊಳಗೆ ನುಗ್ಗಿದ····ಸ್ವಲ್ಪ ಹೊತ್ತು ಅಲ್ಲಿ ಸುಧಾರಿಸಿಕೊಂಡು ಟಾರ್ಚಿನವನ ಕಡೆ ನೋಡಿ ಮತ್ತೆ ಓಡಿದ. ಸ್ವಲ್ಪ ಹೊಗೆಸೊಪ್ಪನ್ನು ಬಟ್ಟೆಯಲ್ಲಿ ಕಟ್ಟಿಕೊಂಡು ಬಂದಿದ್ದ. ಬಹಳ ಹೊತ್ತಿನ ಮೇಲೆ ಈಗ ಅದರ ಕಡೆ ಕೈ ಹೋಯಿತು. ಹೊಗೆಸೊಪ್ಪು ತಿಂದು ಪೊದೆಯಿಂದ ಹೊರಗಡೆ ಬಂದು ಮೈದಾನದಲ್ಲಿ ಓಡಿದ. ಟಾರ್ಚ್ ಎಲ್ಲಿ ಹೋಯಿತು? ತುಂಬಾ ಹತ್ತಿರದಿಂದಲೇ ಬೆಳಕು ಬರುತ್ತಿದೆ···· ಕಾಳೀಚರಣ ಓಡಿದ. ಟಾರ್ಚಿನ ತೀಕ್ಷ್ಣ ಬೆಳಕು ಅವನನ್ನು ಹಿಂಬಾಲಿಸುತ್ತಿತ್ತು. ಅನಂತರ ರಾತ್ರಿಯ ನೀರವತೆಯನ್ನು ಭಂಗಮಾಡಿ ರೈಫಲ್ಲಿನ ಶಬ್ದ ಪ್ರತಿಧ್ವನಿಸಿತು····

ಕಾಡು–ಪೊದೆ, ಮುಳ್ಳು–ಹುಲ್ಲು, ಏರು–ತಗ್ಗುಗಳನ್ನು ಹಾರುತ್ತಾ ಕಾಳೀಚರಣ ಓಡುತ್ತಲೇ ಇದ್ದ. ಕಾಡಿನ ಬೇರುಗಳು ಕಾಲಿಗೆ ತೊಡರಿಕೊಳ್ಳುತ್ತಿದ್ದವು. ಅದನ್ನು ಕೊಡವಿಕೊಳ್ಳುತ್ತಾ ಅವನು ಓಡುತ್ತಲೇ ಇದ್ದ····ತೊಡೆಗೆ ಮುಳ್ಳು ಚುಚ್ಚಿರುವಂತಿದೆ.

····ಪಾರ್ಟಿ ಆಫೀಸಿನ ಹಿಂದುಗಡೆ ಬಂದು ತಲುಪಿದಾಗ ತಾನು ನಿರಪಾಯಕರ ಸ್ಥಾನದಲ್ಲಿದ್ದೇನೆ ಎಂದು ಅವನಿಗನ್ನಿಸಿತು····ಅರೆ ಇದು [illegible] ಅಬ್ಬ, ಇಷ್ಟೊಂದು ರಕ್ತ! ಅರ್ಧ ಗೇಣಿನಷ್ಟು ಮಾಂಸ ಕಿತ್ತು ಹೋಗಿತ್ತು. ಚರ್ಮ ಸುಲಿದುಹೋಗಿತ್ತು. ಓ····ಬಹುಶಃ ಗುಂಡು ತಗುಲಿದೆ····ರಕ್ತ ನಿಲ್ಲುತ್ತಲೇ ಇಲ್ಲ.

"ಯಾರು?····ಕಾಳೀಚರಣ" ಆಫೀಸಿನ ಕಾರ್ಯದರ್ಶಿ ರಾಜಬಲ್ಲಿ ಚಿಲಕ ತೆಗೆದು ನೋಡಿದಾಗ, ನಿಜವಾಗಲೂ ದಿಗ್ಭ್ರಾಂತನಾದ. ನಾಲಿಗೆಯಿಂದ ಮಾತು ಹೊರಡುವುದೂ ಕಷ್ಟವಾಯಿತು.

"ಏ, ಯಾರು? ಕಾಳೀಚರಣನೇನು?" ಸೆಕ್ರೆಟರಿ ರೇಗುತ್ತಾ ಕೊಠಡಿಯಿಂದ ಆಚೆಗೆ ಬಂದ. "ಓ ಕಾಳೀಚರಣ ನೀನೇ ಏನು? ಅದಕ್ಕೇ ಊರಿನಲ್ಲಿ ಇನ್ನೂ ಗಲಾಟೆ ಆಗುತ್ತಿದೆ?····ಜೈಲಿನಿಂದ ಓಡಿ ಬಂದಿದೀಯ?"

"ಹೌದು, ತೊಡೆಗೆ ಗುಂಡು ತಗುಲಿರುವ ಹಾಗಿದೆ...."

"ನಿನಗೆ ಎದೆಗೆ ಗುಂಡು ತಗುಲಬೇಕಾಗಿತ್ತು. ದರೋಡೆಕಾರ. ಮೂರ್ಖ."

"ಸೆಕ್ರೆಟರಿಯವರೇ, ಅದಕ್ಕೇ ನಾನು ಬಂದಿರೋದು....ಅದಕ್ಕೇ.... ದಯವಿಟ್ಟು ಕೇಳಿ....ತಾಯಿಯ ಮೇಲಾಣೆ, ಗುರುವಿನ ಮೇಲಾಣೆ, ದೇವರ

ಮೇಲಾಣೆ.... ಯಾವ ರಾತ್ರಿ?.... ಆ ದಿನ ರಾತ್ರಿ ನಾನು.... ಇಲ್ಲೇ ಜಿಲ್ಲಾ ಪಾರ್ಟಿಯ ಆಫೀಸಿನಲ್ಲಿದ್ದೆ.''

''ರಾಜಬಲ್ಲೀಜೀ, ನಿಮಗೇನು ಗುಂಡು ತಗುಲಿದೆಯೇನು? ಬಾಗಿಲು ಹಾಕಿ ಚಿಲಕ ಹಾಕಿಕೊಳ್ಳಿ. ಇವನನ್ನು ದೂರ ಕಳುಹಿಸಿ, ಕಾಳೀಚರಣ, ನಮ್ಮ ಮೇಲೆ ಕೃಪೆ ಇಟ್ಟು ಇಲ್ಲಿಂದ ಹೊರಟುಹೋಗು, ಇಲ್ಲದಿದ್ದರೆ....''

''ಗಲಾಟೆ ಯಾಕೆ ಮಾಡುತ್ತೀರಿ. ಒಳಗಡೆ ಬನ್ನಿ.'' ರಾಜಬಲ್ಲಿ ಮಾತನ್ನು ಮುರಿಯುತ್ತಾ ಹೇಳಿದ.

ಕಾಳೀಚರಣ ಅಲ್ಲಿನ ಪ್ರತಿಮೆಯಂತೆ ನಿಂತಿದ್ದ

ಮೋರಬಲೀ ಸಾಹೇಬರ ಮಾಳಿಗೆಯ ಹತ್ತಿರ ಒಂದೇ ಸಮನೆ ಗುಂಡಿನ ದಾಳಿ ಆಗುತ್ತಿತ್ತು.

''ಕಾಮ್ರೇಡ್ ರಾಜಬಲ್ಲಿ.... ಸೆಕ್ರೆಟರಿ ಸಾಹೇಬ್.... ಸೆಕ್ರೆಟರಿ ಯವರಿಗೆ ಹೇಳಿ ನನ್ನನ್ನು.... ನನ್ನದು ಏನೂ ತಪ್ಪಿಲ್ಲ....''

ಕಾಳೀಚರಣ ಅಲ್ಲಾಡಿದ ಸ್ವಲ್ಪ ಹೊತ್ತು ನಿಂತಿದ್ದ ನಂತರ ಈಗ ನಡೆಯುವುದಕ್ಕೂ ಆಗುತ್ತಿಲ್ಲ. ಅವನು ಎರಡು ಕಾಲುಗಳನ್ನೂ ಒದರಿದ. ಮುಂದುಗಡೆ ಕೆಸವಿನ ಗಿಡದ ಎಲೆಗಳ ಮೇಲೆ ಏನೋ ಸದ್ದಾದಂತಾಯಿತು.

....ಅವನು ನಿಧಾನವಾಗಿ ಮತ್ತೆ ಪಕ್ಕದ ಕಾಡಿನ ಕಡೆ ಹೊರಟ.... ಮುಂದೆ?....ತಾನು ಉಟ್ಟಿದ್ದ ಹಳೆಯ ಪಂಚೆಯ ಒಂದು ಭಾಗವನ್ನು ಹರಿದು ಗಾಯಕ್ಕೆ ಕಟ್ಟುತ್ತಾ ಅವನು ಯೋಚಿಸಿದ: ಮುಂದೆ?

....ಚಲಿತ್ತರ ಕರ್ಮಕಾರ ಹೇಳಿದ್ದ: ''ವಿಪತ್ತಿನ ಸಮಯದಲ್ಲಿ ಸಮಾಚಾರ ತಿಳಿಸು, ನನ್ನನ್ನು ಜ್ಞಾಪಿಸಿಕೋ.''

ಚಲಿತ್ತರ ಕರ್ಮಕಾರ!

# 18

"ಓಡು, ಓಡು. ಮಿಲಿಟರಿ ಮಿಲಿಟರಿ...."

ಅಬ್ಬಾ! ಕೆಂಪು ಪಗಡಿಯ ಪೋಲೀಸಿನವನಲ್ಲ. ಗೂರ್ಖಾ ಮಿಲಿಟರಿಯವರು. ಗೂರ್ಖಾ ಮಿಲಟರಿಯವರು ಬಿಳಿಯರಿಗಿಂತ ಕ್ರೂರಿಗಳಂತೆ! ಹೊಡೆಯುವುದಕ್ಕೆ ಆರಂಭಿಸಿದರೆ ಹೊಡೆದೂ ಹೊಡೆದೂ ಪ್ರಾಣವನ್ನೇ ತೆಗೆದುಬಿಡುತ್ತಾರೆ ....ಹಸಲಗಂಜ ಸಂತೆಯಲ್ಲಿ ಕಟಿಹಾರದ ಬಾಬು ಸಾಹೇಬರ ಆಫೀಸಿನ ಮುಂದೆ ಬೆಳಗ್ಗಿನಿಂದಲೇ ಎರಡು ಸುಂದರವಾದ ಮೋಟಾರ್ ಗಾಡಿಗಳು ಬಂದು ನಿಂತಿದ್ದವು. ಡ್ರೈವರ್ ಹೇಳಿದ್ದ, "ಹಳ್ಳಿಯನ್ನು ರೌಂಡ್ ಮಾಡೋದಕ್ಕೆ ಬಂದಿವೆ." ರಾತ್ರಿ. ಯಾರು ರೌಂಡ್ ಹೊಡೀತಾರೆ?....ಗೂರ್ಖಾ ಮಿಲಿಟರಿಯವರಾ?

"ಏನು ಸಮಾಚಾರ? ಸುಳ್ಳು ಸುದ್ದಿ ತಂದಿರೋರು ಯಾರು?"

"ಸುಳ್ಳಲ್ಲ, ತತಮಾ ಪಂಗಡದ ಬಾಬು ಅನ ಏದುತ್ತಾ ಓಡುತ್ತಾ ಬಂದಿದ್ದಾನೆ. ಅವನನ್ನೇ ಕೇಳಿ ಬೇಕಾದರೆ."

"ಮೋಟಾರಿನ ಶಬ್ದ ಕೇಳಿಸುತ್ತಿದೆ."

"ಹೌದು, ಹೌದು. ಪಛಿಯಾ ಪಂಗಡದ ಮನೆಗಳ ಹತ್ತಿರ ಮೋಟಾರ್ ಬರುತ್ತಿದೆ."

"ಓಡಿ, ಓಡಿ....ಕೆಂಪು ಬಣ್ಣದ ಮೋಟಾರ್ ಬರುತ್ತಿದೆ."

"ಓಡಿ, ಓಡಿ, ಮೋಟಾರ್ ಗಾಡಿ ಬಂದುಬಿಟ್ಟಿತು."

"ಯಾವ ಕಡೆ ಓಡೋದು?"

ಮಿಲಿಟರಿ ಗಾಡಿ ರಸ್ತೆ ಬಿಟ್ಟು ಹಳ್ಳ, ದಿಣ್ಣೆ ಎಲ್ಲಾ ಹಾರುತ್ತಾ ತಹಸೀಲ್ದಾರರ ಮನೆಯ ಕಡೆ ಹೊರಟಿತು.

"ಯಾರು? ಸುಮರಿತದಾಸ?"

"ಹುಶ್ ಸುಮ್ಮನಿರಿ" ಸುಮರಿತದಾಸ ಪಿಸುಗುಟ್ಟಿದ. "ಕಾಳೀಚರಣ ಜೈಲಿನಿಂದ ಓಡಿಬಂದಿದಾನಂತೆ. ಅದಕ್ಕೇ ಮಿಲಿಟರಿಯವರು ಬಂದಿರೋದು ....ಹುಶಾರ್ ಸೋಷಲಿಸ್ಟ್ ಪಾರ್ಟಿಯ ಹೆಸರೂ ಎತ್ತಬೇಡಿ....ಕೇಳಿದರೆ ನಾವು ಕಾಂಗ್ರೆಸ್ಸಿನವರು ಅಂತ ಹೇಳಿಬಿಡಿ. ಕಾಳೀಚರಣನ ಹತ್ತಿರ ಯಾವ

ಸಂಬಂಧವನ್ನೂ ಹೇಳಿಕೊಳ್ಳಬೇಡಿ. ತಿಳೀತೇನು? ಕೆಂಪು ಬಾವುಟ ಯಾರ ಮನೇಲಾದರೂ ಇದ್ದರೆ ಅವರು ಸೆರೆ ಸಿಕ್ಕುತ್ತಾರೆ."

ವೈರ್‌ಲೆಸ್ ಸುಮರಿತದಾಸನ ದೇಹದಲ್ಲಿ ಈ ವೃದ್ಧಾಪ್ಯದಲ್ಲೂ ಎಷ್ಟೊಂದು ಶಕ್ತಿ ಇದೆ? ಎಷ್ಟಾದರೂ ಹಳೆಯ ನೀರು ಕುಡಿದ ಮನುಷ್ಯ! ಈ ಕಾಳೀಚರಣ ನಂತೂ ತನ್ನ ಜೊತೆಗೆ ತನ್ನ ಮನೆ ಜಾತಿಯವರು, ಅಕ್ಕಪಕ್ಕದವರು, ಹಳ್ಳಿ ಸಮಾಜ ಎಲ್ಲರನ್ನೂ ಮುಳುಗಿಸುವುದಕ್ಕೆ ಪ್ರಯತ್ನಪಡುತ್ತಿದ್ದಾನೆ.... ಏನಂದಿರಿ? ಕೆಂಪು ಬಟ್ಟೆಯನ್ನೇ? ಹುಷಾರ್, ಕೆಂಪು ಬಟ್ಟೆ ಮತ್ತು ಬಾವುಟದಲ್ಲಿ ಏನು ವ್ಯತ್ಯಾಸ? ಫಾರಂ, ಚಿಲಟ ಎಲ್ಲಾನೂ ಸುಟ್ಟುಹಾಕಿಬಿಡಿ....ಇಲ್ಲದಿದ್ದರೆ ಸಿಕ್ಕಿಹಾಕಿಕೊಳ್ಳುತ್ತೀರಿ....

"ಹುಶಾರ್, ಕಲಿಯಾ ಪರಾರಿಯಾಗಿದಾನೆ. ಸೋಷಲಿಸ್ಟ್ ಪಾರ್ಟಿ ಮತ್ತು ಕಾಳೀಚರಣನ ಹೆಸರನ್ನು ಎತ್ತಬೇಡಿ....ಬಹುಶಃ ಇಡೀ ಹಳ್ಳಿಯನ್ನೇ ನುಂಗಿ ನೀರು ಕುಡೀತಾನೆ ಅಂತ ಕಾಣುತ್ತೆ."

"ಯಾರು?...." ಕಾಳೀಚರಣನ ಕುರುಡು ತಾಯಿ ಹುಕ್ಕಾ ಸೇದು ವುದನ್ನು ಬಿಟ್ಟು ಕೇಳಿದಳು. "ಯಾರು ಓಡಿಹೋದರಂತೆ?....ಸರಸ್ವತೀ, ಪರಮೇಶ್ವರೀ,....ತಾರಾಮತಿ....ಯಾರು ಓಡಿಹೋದರಂತೆ ಮಗೂ."

"ಇನ್ಯಾರು?....ನಿನ್ನ ಮಗ ಕಾಳೀಚರಣ.....ಅವನ ಜೊತೆಗೆ ಇಡೀ ಹಳ್ಳೀನೇ ಸಿಕ್ಕಿಹಾಕಿಕೊಳ್ಳುತ್ತಿದೆ."

"ಓಡು....ಓಡು....ಮಿಲಿಟರಿ."

ಗೂರ್ಖಾ ಸಿಪಾಯಿಗಳು ಕಾಳೀಚರಣನ ಮನೆಯನ್ನು ಸುತ್ತುಗಟ್ಟಿದರು. ಎಸ್.ಪಿ. ಸಾಹೇಬರು ಕಾಳೀಚರಣನ ತಾಯಿಯನ್ನು ಕೇಳುತ್ತಿದ್ದರು. "ಹೂಂ ....ಮುದುಕಿ, ಹಾಗೆ ನಟಿಸಬೇಡ. ಏ ಮುದುಕಿ ಕೇಳಿಸ್ತಾ. ನಿನ್ನ ಮಗ ಕಾಳೀಚರಣ ಜೈಲಿನಿಂದ ತಪ್ಪಿಸಿಕೊಂಡಿದಾನೆ. ಈಗ ಅರ್ಥಾಯ್ತು. ಗೋಳಾಡೋದು ನಿಲ್ಲಿಸಿ ನೇರವಾಗಿ ಧೈರ್ಯವಾಗಿ ಉತ್ತರ ಹೇಳು. ಅವನು ಇಲ್ಲಿಗೆ ಬಂದಿದ್ದನೋ ಇಲ್ಲವೋ?"

"ನನ್ನ ಮಗ ..ಅವನು ದರೋಡೆಕಾರ ಅಲ್ಲ ಇನ್ಸ್‌ಪೆಕ್ಟರೇ.... [illegible] ಆಗದವರು ಅವನ ಬೆನ್ನುಹಿಂದೆ ಬಿದ್ದಿದ್ದಾರೆ. ಮೇಲೆ [illegible] [illegible]...."

"ಸರಿಯಾಗಿ ಹೇಳು. ಅವನ ಜೊತೆ ಬೇರೆ ಯಾರು ಇದ್ದಾರೆ?.... ಅಂದರೆ, ಅವನ ಜೊತೆಯವರ ಹೆಸರನ್ನು ಹೇಳು."

"ಹುಜೂರ್.... ನನಗೇನೂ ಗೊತ್ತಿಲ್ಲ."

"ಹೂಂ.... ಹೂಂ.... ಎಲ್ಲಾ ಗೊತ್ತಾಗುತ್ತೆ ಈ ಮುದುಕೀನ ಕರ್ಕೊಂಡು ಹೋಗಿ...."

ಕಾಳೀಚರಣನ ತಾಯಿಗೆ ಭಳೀಜ್ವರ ಬಂದುಬಿಡ್ತು. ನೇಪಾಳೀ ಸಿಪಾಯಿ ಅವಳ ಕೈ ಹಿಡಿದುಕೊಂಡ ಕೂಡಲೇ ಕಬ್ಬಿಣದಿಂದ ಬರೆ ಹಾಕುವಾಗ, ಎತ್ತು ಹಸುಗಳು ನಡುಗುತ್ತಾ ಗುರುಗುಟ್ಟುವಂತೆ ಅವಳು ಗಟ್ಟಿಯಾಗಿ ನರಳಲಾರಂಭಿಸಿದಳು.

ಮಾಘಮಾಸದ ಚಳಿಗಾಲದ ಸಂಜೆ ನಿಧಾನವಾಗಿ ತನ್ನ ಸೆರಗನ್ನು ಹಳ್ಳಿಯ ಮೇಲೆ ಮುಚ್ಚುತ್ತಿದ್ದಳು. ಭಯಗ್ರಸ್ತ ಪ್ರಾಣಿಯ ಕಣ್ಣುಗಳಂತೆ ಮನೆಯ ಗಲ್ಲಿ, ಒಂದೊಂದು ಎಣ್ಣೆಯ ದೀಪದಂತೆ ಭುಕ್-ಭುಕ್ ಎಂದು ಉರಿಯುತ್ತಿತ್ತು. ಮನೆಯ ಮುಂದೆ ಇಂದು ಯಾರು ಕುಳಿತುಕೊಳ್ಳುತ್ತಾರೆ? ಎಲ್ಲರೂ ಮನೆಯ ಒಳಗೆ ಮೂಲೆಯಲ್ಲಿ ಮುದುರಿ ಕುಳಿತಿದ್ದರು.... ನೀರವತೆ.... ಈ ನೀರವತೆಯನ್ನು ಭೇದಿಸಿಕೊಂಡು ಕಾಳೀಚರಣನ ತಾಯಿಯ ಕರುಣಾಜನಕ ಕೂಗು ಹಳ್ಳಿಯ ಮೂಲೆ ಮೂಲೆಯಲ್ಲೂ ಹರಡುತ್ತಿತ್ತು.

"ಅಯ್ಯೋ ರಾಮ; ಮುದುಕಿಗೆ ಛಡಿಯಿಂದ ಹೊಡೆಯುತ್ತಿದ್ದಾರೋ.... ಏನೋ.... ಅಯ್ಯೋ ದೇವರೇ!"

ಕಾಳೀಚರಣನ ತಾಯಿಯ ನೋವಿನ ಕೂಗಿನಲ್ಲಿ ಅದೇನು ಮೋಡಿಯಿತ್ತೋ ಎಸ್.ಪಿ. ಸಾಹೇಬರ ಹೃದಯವೂ ಕರಗಿಹೋಯಿತು. ಅವರು ಹೇಳಿದರು: "ಬಿಡಿ.... ಆ ಮುದುಕಿಯನ್ನು ಬಿಟ್ಟುಬಿಡಿ."

ಮುದುಕಿ ಒಮ್ಮೆಲೆ ಸುಮ್ಮನಾದಳು. ಹಳ್ಳಿಯಲ್ಲೆಲ್ಲಾ, ತೋಟದಲ್ಲಿ, ಮನೆಯ ಹಿತ್ತಲು ಕಡೆಯಲ್ಲಿ ಎಲ್ಲಾ ಕಡೆಯೂ ಅವಿತುಕೊಂಡಿದ್ದ ಜನರೆಲ್ಲಾ ಮುದುಕಿಯ ನಾಲಿಗೆಯನ್ನೇ ಸೆಳೆದುಬಿಟ್ಟರೆಂದೇ ತಿಳಿದುಕೊಂಡರು.

"ಯಾರದ್ದೋ ಮಾತು ಕೇಳಿಸುತ್ತಿದೆ ಮೊದಲು ಯಾರೂ ಅಂತ ಗುರುತಿಸು.... ಗೋಡೆಗೆ ಕಿವಿಯಿಟ್ಟು ಕೇಳು."

"ಆಗಮೂ ಚೌಕೀದಾರ.... ಜೊತೆಗೆ ಸುಮರಿತದಾಸನೂ ಇದ್ದಾನೆ."

"ಜೈ ಭಗವಾನ್ ಜೈ ಭಗವಾನ್."

"ಭಗವಾನ್ ಭಗತ್, ಬಾಗಿಲು ತೆಗಿ····ಬಾಗಿಲು ತೆಗೆಯಯ್ಯ" ಸುಮರಿತದಾಸ ಕೆಮ್ಮುತ್ತಾ ಹೇಳಿದ. "ಭಗವಾನ್ ಭಗತ್····ಹೆದರ ಬೇಕಾದ್ದಿಲ್ಲ····ಸಿಗರೇಟು ಇದೆಯೇನು? ಮಿಲಿಟರಿಯವರು ಹೇಳ್ತಿದಾರೆ ದುಡ್ಡು ಕೊಡ್ತಾರೆ."

ಹಿಂದುಗಡೆಯ ಮನೆಯಲ್ಲಿ ಪೆಟ್ಟಿಗೆಯ ಹಿಂದೆ ಅವಿತು ಕುಳಿತಿದ್ದ ಭಗವಾನ್ ಭಗತ್. ಅವನು ಪಿಸುಗುಟ್ಟಿದ್ದ. "ಯಾಕಣ್ಣಾ? ನನ್ನ ಹೆಸರು ಯಾಕೆ ಕೂಗುತ್ತಿರುವೆ? ನನ್ನ ಹತ್ತಿರ ಬೀಡಿ, ಸಿಗರೇಟ್ ಒಂದೂ ಇಲ್ಲ····"

"ಹೂಂ····ಯಾರು, ಏನಾಗಬೇಕಾಗಿತ್ತು ಸುಮರಿತದಾಸರೇ?"

"ಬಾಗಿಲು ತೆಗಿಯಮ್ಮ....ಭಗತ್‌ಜೀ ಎಲ್ಲಿ?"

ಭಗತನ ಹೆಂಡತಿ ಬಾಗಿಲು ತೆರೆಯುತ್ತಾ ಹೇಳಿದಳು: "ಯಾವ ದೇಶದ ಮನುಷ್ಯರಯ್ಯ ನೀವು····?"

"ದಾಸರೇ, ಒಳಗೆ ಬಂದು ತೊಗೊಂಡು ಹೋಗಿ. ಮುದುಕನಿಗೆ ಜ್ವರ ಬಂದಿದೆ"····ಸುಮರಿತದಾಸ ಬಾಗಿಲನ್ನು ತೆಗೆದುಕೊಂಡು ಒಳಗೆ ಬಂದು ಗದರಿಸಿದ: "ನಿಮಗೆ ಧೈರ್ಯ ಅನ್ನೋದು ಹೆಸರಿಗೂ ಇಲ್ಲಾ ಅಂತ ಕಾಣುತ್ತಪ್ಪಾ····ವ್ಯಾಪಾರಿಗಳೆಲ್ಲಾ ಹೀಗೇನಾ?····ಎಸ್.ಪಿ. ಸಾಹೇಬರು ಎಲ್ಲರನ್ನೂ ತಹಸೀಲ್ದಾರರ ಮನೆಯ ಮುಂದೆ ಕರೆಸುತ್ತಿದ್ದಾರೆ····ಮೀಟಿಂಗ್ ಇದೆ. ಅಲ್ಲಿಗೆ ಹೋಗದಿದ್ದವರನ್ನೆಲ್ಲಾ ಕಾಳೀಚರಣನ ಪಾರ್ಟಿಯ ಜನ ಅಂತ ತಿಳಿದುಕೊಳ್ಳುತ್ತಾರೆ. ಐದು ಪ್ಯಾಕೆಟ್ ಕತ್ತರೀ ಮಾರ್ಕಿನ ಸಿಗರೇಟು, ಬೇಗ ಕೊಡು."

"ಏನಂದೆ? ಸುಮರಿತದಾಸ" ಭಗವಾನ್ ಭಗತ್ ಕೆಮ್ಮುತ್ತಾ ಹೊರಗಡೆ ಬಂದ. "ಈ ಜ್ವರ ನನ್ನ ಪ್ರಾಣ ತೊಗೊಂಡೇ ಹೋಗುತ್ತೇ ಅಂತ ಕಾಣುತ್ತೆ····ಏನು ಸಮಾಚಾರ?"

"ಸಮಾಚಾರ ಏನು ಬಂತು?"—ಸುಮರಿತದಾಸ ಕೈ ತಿರುಗಿಸುತ್ತಾ ಹೇಳಿದ: "ಐದು ಸೇರು ಸಕ್ಕರೆ, ಎಂಟಾಣೆ ಮಸಾಲೆ ಪುಡಿ, ನಾಲ್ಕು ಪ್ಯಾಕೆಟ್ ಸಿಗರೇಟು ತೊಗೊಂಡು ತಕ್ಷಣ ತಹಸೀಲ್ದಾರರ ಮನೆಗೆ ಬಾ. ಎಸ್.ಪಿ. ಸಾಹೇಬರು ಎಲ್ಲರನ್ನೂ ಮೀಟಿಂಗಿಗೆ ಕರೆದಿದಾರೆ....ಈಗ ಸಿಪಾಯಿಗಳಿಗೆ ಐದು ಪ್ಯಾಕೆಟ್ ಕೊಡು, ಆಮೇಲೆ ಅಧಿಕಕ್ಕೂ ದುಡ್ಡು ತೆಗೆದುಕೊಳ್ಳುವೆಯಂತೆ...."

"ನಾನು ಅಪ್ಪಣೆಯನ್ನು ಮೀರಿ ಎಂದು ನಡೆದಿದ್ದೇನೆ:····ಈಗ ಎಲ್ಲಾ ಸಾಮಾನುಗಳನ್ನು ತೆಗೆದುಕೊಂಡು ನಾನೇ ಬರುತ್ತೇನೆ. ನೀನು ನಡಿ."

ಗೂರ್ಖಾ ಸಿಪಾಯಿ ಹೇಳಿದ:

"ನಾವು ಬಿಟ್ಟಿ ತೆಗೆದುಕೊಳ್ಳುವುದಿಲ್ಲ. ಯಾಕೆ ತೆಗೆದುಕೊಳ್ಳಬೇಕು? ನಾವು ಕಾಸು ಕೊಟ್ಟೇ ಪದಾರ್ಥ ತೆಗೆದುಕೊಳ್ಳೋದು····ನಾವೇನೂ ಬೇರೆ ದೇಶದ ಸೈನಿಕರಲ್ಲ. ಇದೇ ದೇಶದವರು. ಬಿಟ್ಟಿ ಯಾಕೆ ತೆಗೆದುಕೊಳ್ಳಬೇಕು?"

ತಹಸೀಲ್ದಾರರ ಮನೆಯ ಮುಂದೆ ಜನ ಸೇರುತ್ತಿದ್ದಾರೆ. ಆಗವೂ ಚೌಕೀದಾರ ಮತ್ತು ಅಬ್ದುಲ್ಲ ಭಕ್ಷಿ ಎಲ್ಲರನ್ನೂ ಗದರಿಸುತ್ತಾ ಕರೆದು ತರುತ್ತಿದ್ದಾರೆ. "ಬೇಗ ಬೇಗ ನಡೀರಿ····ಹಿಂದೆ ಮುಂದೆ ಏನು ನೋಡುತ್ತಿದ್ದೀರಿ. ಭತ್ತ ತುಳಿಸುವಾಗ ಎತ್ತುಗಳ ಬಾಯಿ ಕಟ್ಟಿ ಎಳೆದುಕೊಂಡು ಬರಬೇಕಾಗುತ್ತಲ್ಲ ಹಾಗೆ ಆಗಿದೆ ನಿಮ್ಮನ್ನು ಕರೆದುಕೊಂಡು ಹೋಗೋದು····"

ಸಭೆಯಲ್ಲಿ ಬಾಲದೇವನಿದ್ದ, ರಾಮಕೃಪಾಲಸಿಂಹನೂ ಇದ್ದ. ಈ ಬಹಳ ದಿನಗಳಿಂದ ರಾಮಕೃಪಾಲಸಿಂಹ, ಪಂಚಾಯಿತಿ, ಸಭೆ—ಮೀಟಿಂಗುಗಳಿಗೆ ಹೋಗುತ್ತಿಲ್ಲ.....ಸದಾ ಮನೆಯಲ್ಲೇ ಇರುತ್ತಾರೆ....ಹೆಚ್ಚು ಖರ್ಚಿಲ್ಲದೆ, ಫಲ ಕೊಡುತ್ತಿದ್ದ ಐವತ್ತು ಬೀಘಾ ಜಮೀನು ಮಾರಾಟವಾದರೆ ಅಥವಾ ಮಾರ್ವಾಡಿಯ ಹತ್ತಿರ ಬಡ್ಡಿಗೆ ಗಿರವಿ ಇಡಬೇಕಾದ ಪ್ರಸಂಗ ಬಂದರೆ, ಯಾರ ಮನಸ್ಸು ತಾನೇ ಒಡೆದುಹೋಗುವುದಿಲ್ಲ?....ಶೇಲಾವನಸಿಂಹ ಯಾದವನ ಹೃದಯವು ಬಡಿದು ಕೊಳ್ಳುತ್ತಿದೆ—ಭೂಮಿ, ಕಾಣಿ, ರೂಪಾಯಿ—ಪೈಸೆ ಎಲ್ಲಾ ಕಳೆದು ಮೊಕದ್ದಮೆ ಯಲ್ಲೇ ಸ್ವಾಹಾ ಆಗಿಹೋಯಿತು. ಈಗಿರುವುದು ಒಂದು ಎಮ್ಮೆ. ಅದರ ಮೇಲೂ ತಹಸೀಲ್ದಾರರ ದೃಷ್ಟಿ ಬಿದ್ದಿರುವಹಾಗಿದೆ.

ಎಸ್.ಪಿ. ಸಾಹೇಬರು ಚಹ ಕುಡಿದು ಎದ್ದು ನಿಂತರು. "ದೇವರೇ, ಕಾಳೀಮಾತೇ ನೀನೇ ಕಾಪಾಡಬೇಕು."

"ಪ್ರೀತಿಯ ಸೋದರರೇ, ನಿಮ್ಮಿಂದ ನಾನು ಒಂದು ದೊಡ್ಡ ಕೆಲಸದಲ್ಲಿ ಸಹಾಯ ಬೇಡಲು ಕರೆಸಿದ್ದೇನೆ. ನೀವೇನೂ ಹೆದರಬೇಡಿ. ನಾನು ಕೆಟ್ಟವರಿಗೆ ತುಂಬಾ ಕೆಟ್ಟವನು ಒಳ್ಳೆಯವರಿಗೆ ಸೇವಕ····ಹೌದು, ನಾನು ನಿಮ್ಮ ಸೇವಕನೇ."

"ಜೈ, ಜೈ····ಧನ್ಯರು, ಧನ್ಯರು." ಜನರ ದೇಹದಲ್ಲಿ ಈಗ ಸ್ವಲ್ಪ ಶಾಖ ಬಂದಂತಾಯಿತು.

ಎಸ್.ಪಿ. ಸಾಹೇಬರು ಹೇಳಿದರು: "ಈಗ ಕೆಲವೇ ದಿನಗಳ ಹಿಂದೆ ಈ ಜಿಲ್ಲೆಯಲ್ಲಿ ಒಂದು ದೊಡ್ಡ ದರೋಡೆ ನಡೆಯಿತು. ಆ ದರೋಡೆಕಾರರ ಹೆಸರು ನಿಮಗೆ ಖಂಡಿತ ಗೊತ್ತಿರಬಹುದು····"

"ಇಲ್ಲ ಸ್ವಾಮಿ....ಎಷ್ಟಾದರೂ ನಾವು ಕೂಪಮಂಡೂಕಗಳು."

"ನೋಡಿ, ಸುಳ್ಳು ಹೇಳಬೇಡಿ. ಡಾಕ್ಟರ್ ಮುಂದೆ ಹೊಟ್ಟೆ ಮುಚ್ಚಿಡೋದರಿಂದ ಏನು ಪ್ರಯೋಜನ?····ಚಲಿತ್ತರ ಕರ್ಮಕಾರ ಈ ಹಳ್ಳಿಗೆ ಎಂದೂ ಬಂದೇ ಇಲ್ಲವೇ?"

"ಹೌದು, ಹೌದು. ಚಲಿತ್ತರ."

"ಇಲ್ಲ, ಇಲ್ಲ, ಬಂದಿಲ್ಲ····"

"ನೋಡಿ····ದೀಪ ಇನ್ನೂ ಹತ್ತಿರ ತನ್ನಿ. ಇಲ್ಲಿ ನೋಡಿ ಇದೇ ಅವನ ಫೋಟೋ."

"ಹೌದು, ಹೌದು ಇದೇ ಇದೇ."

"ಮತ್ತೆ ನೀವು ಸುಳ್ಳು ಯಾಕೆ ಹೇಳುತ್ತೀರಿ? ದರೋಡೆಕಾರನಿಗಿಂತ ದರೋಡೆಕಾರನನ್ನು ಮುಚ್ಚಿಡುವವನು ಹೆಚ್ಚು ಕೆಟ್ಟವನು. ನೀವೀಗ ಅದೇ ಕೆಲಸ ಮಾಡಿದ್ದೀರಿ."

"ಇಲ್ಲ ಹುಜೂರ್ ತಾಯಿ–ತಂದೆ. ನಮಗೇನೂ ಗೊತ್ತಿಲ್ಲ."

"····ಸರಿ ಹಾಗಾದರೆ ಕೇಳಿ, ಚಲಿತ್ತರ ಕರ್ಮಕಾರನಿಗೆ ದೇಶ, ಸಮಾಜ, ಹಳ್ಳಿ ಯಾವುದರಲ್ಲೂ ಆಸಕ್ತಿ ಇಲ್ಲ····ಅವನ ಉದ್ಯೋಗವೇ ದರೋಡೆ ಮಾಡುವುದು, ಲೂಟಿ ಮಾಡುವುದು. ಅವನು ಸಮಾಜದ ಶತ್ರು, ದೇಶದ ಶತ್ರು···· ಈಗ ಈ ಕಮ್ಯುನಿಸ್ಟ್ ಪಾರ್ಟಿಯವರು ಒಂದು ಚೀಟಿ ಹಂಚುತ್ತಿದ್ದಾರೆ. ಅದರಲ್ಲಿ ಬರೆದಿದ್ದಾರೆ: "ಕಾಮ್ರೇಡ್ ಚಲಿತ್ತರನ ಮೇಲಿನ ವಾರೆಂಟನ್ನು ಕಿತ್ತುಹಾಕಿ ಚಲಿತ್ತರ ಕರ್ಮಕಾರ ರೈತರ ಮತ್ತು ಕಾರ್ಮಿಕರ ಪ್ರೀತಿಯ ನೌಕರರು ಅಂತ ನೀವೇ ಹೇಳಿ, ಒಬ್ಬ ದರೋಡೆಗಾರ, ಕೊಲೆಗಾರ ಯಾರ ಪ್ರೀತಿಯ ನಾಯಕನಾದರೂ ಆಗುವುದು ಸಾಧ್ಯವೇನು····ನನ್ನ ಹೆಸರು ಬಜರಂಗೀಸಿಂಹ. ನಾನು ಇಂಥ ಅನೇಕ ಜನ ಕೊಲೆಗಾರರಿಗೆ ಬುದ್ಧಿ ಕಲಿಸಿದೀನಿ. ಗಲ್ಲಿನ ಶಿಕ್ಷೆ ಕೊಡಿಸಿದೀನಿ····ಇಂತಹವನು ಯಾರ ಹತ್ಯೆಯನ್ನು ಬೇಕಾದರೂ ಮಾಡಬಹುದು."

"ಅಪ್ಪ....ಗಾಂಧೀಜೀಯನ್ನು ಕೊಂದುಬಿಟ್ಟರು."—ಕಮಲಿ ಮನೆಯೊಳಗಿನಿಂದ ಹುಚ್ಚಿಯಂತೆ ಕೂಗಿಕೊಂಡಳು: "ಗಾಂಧೀಜೀ...."

"ಏನಾಯಿತು?"

"ಏನಾಯಿತು?"

ತಹಸೀಲ್ದಾರರು ಮನೆಯ ಒಳಗಡೆ ಓಡಿದರು. ಸುಮರಿತದಾಸ ಹೇಳಿದ: "ಹುಜೂರ್, ತಹಸೀಲ್ದಾರರ ಮಗಳಿಗೆ ತಲೆ ಸ್ವಲ್ಪ ಸರಿಯಿಲ್ಲ."

"ಅನರ್ಥವಾಯಿತು ಹುಜೂರ್."—ತಹಸೀಲ್ದಾರರು ಓಡುತ್ತಾ ಬಂದರು. "ಗಾಂಧೀಜೀಯ ಕೊಲೆಯಾಗಿದೆ."

"ಆಂ?....ಎಲ್ಲಿ? ಹೇಗಾಯಿತು?"

"ರೇಡಿಯೋದಲ್ಲಿ ಸುದ್ದಿ ಬಂದಿದೆ."

"ರೇಡಿಯೋ ಎಲ್ಲಿದೆ? ಒಳಗಡೆ ಬಂಗಲೆಯಲ್ಲಿದೆಯೇನು?....ದಯವಿಟ್ಟು ಸ್ವಲ್ಪ ಇಲ್ಲಿ ತನ್ನಿ...."

ಎಸ್.ಪಿ. ಕೇಳಿಕೊಂಡರು.

"ಅರೆ. ಬಾಲದೇವನನ್ನು ಹಿಡಿದುಕೊಳ್ಳಿ. ಜ್ಞಾನ ತಪ್ಪಿ ಬಿದ್ದುಬಿಟ್ಟ."

ತಹಸೀಲ್ದಾರರು 'ಪೋರ್ಟಬಲ್ ರೇಡಿಯೋ ಸೆಟ್ಟ'ನ್ನು ತಂದರು: "ಹುಜೂರ್ ಇದರ ತಲೆ-ಬುಡ ನಮಗೆ ಗೊತ್ತಾಗೊಲ್ಲ....ಡಾಕ್ಟರದ್ದು."

"ಈ ಕಡೆ ತನ್ನಿ...."

ಎಸ್.ಪಿ. ಬೇಗ ಬೇಗ ರೇಡಿಯೋದ ಮೀಟರನ್ನು ತಿರುಗಿಸಿದರು.

"ನಮ್ಮೆಲ್ಲರ ತಂದೆ, ರಾಷ್ಟ್ರಪಿತ ಮಹಾತ್ಮಾ ಗಾಂಧೀಯವರ ಕೊಲೆಯಾಗಿದೆ....ಸುತ್ತಲೂ ಅಮಂಗಳಕರವಾದ ಕತ್ತಲೆ ಹರಡಿದೆ....ನಮ್ಮ ಕಣ್ಣು ಮುಂದೆ ಕತ್ತಲು, ಹೃದಯದಲ್ಲಿ ಕತ್ತಲು. ಹೀಗಿರುವಾಗ ನಾವು ನಿಮಗೆ ಯಾವ ಶಬ್ದಗಳಲ್ಲಿ, ಹೇಗೆ... ಧೈರ್ಯ ಹೇಳುವುದು ಸಾಧ್ಯ? ದುಃಖದ ಮೋಡ ಇಡೀ ದೇಶವನ್ನು ಆವರಿಸಿದೆ....ಹುಚ್ಚನೊಬ್ಬ ಬಾಪುವಿನ ಹತ್ಯೆ ಮಾಡಿಬಿಟ್ಟ. ಹುಚ್ಚನಲ್ಲದೆ ಬೇರೆ ಯಾರೂ ಇಂತಹ ಕೆಲಸ ಮಾಡಲಾರರು ಎಂಬುದು ಸ್ವತಃಸಿದ್ಧವಾಗಿದೆ. ಈಗ ನಮ್ಮ ದುಃಖ, ಕೋಪಗಳನ್ನು ಅದುಮಿಟ್ಟು ಯೋಚಿಸಬೇಕಾಗಿದೆ...."

ಬಹುಶಃ ನೆಹರೂ ಮಾತನಾಡುತ್ತಿದ್ದರೇನೋ! ನೆಹರೂ....ಜವಾಹರ ಲಾಲ್ ನೆಹರೂ ಮಾತನಾಡುತ್ತಿದ್ದಾರೆ. ಮಧ್ಯದಲ್ಲಿ ಒಂದು ಕಡೆ ಗಂಟಲು ಕಟ್ಟಿಹೋಯಿತು.... ಶಬ್ದಗಳೇ ಹೊರಬರಲಿಲ್ಲ. ಅಳುತ್ತಿದ್ದಾರೆಂದು ತೋರುತ್ತದೆ.... ಕೇಳಿ ಸರ್ದಾರ್ ಪಟೇಲ್ ಮಾತನಾಡುತ್ತಿದ್ದಾರೆ. ಎಸ್.ಪಿ. ಸಾಹೇಬರ ಮುಖ ಕಪ್ಪಿಟ್ಟುಹೋಗಿತ್ತು.

ವೈರ್‌ಲೆಸ್ ಮಿಷನ್ನಿನಲ್ಲಿ ಏನು ಹೇಳಿದರು? ಗಾಂಧೀಜೀಯನ್ನು ಕೊಲೆ ಮಾಡಿದವನು ಸೆರೆ ಸಿಕ್ಕಿದನಂತೇ? ಸಿಕ್ಕದೇ ಏನಣ್ಣಾ? ಅಯ್ಯೋ ಪಾಪಿ.... ಪಾತಕಿ.... ಖಂಡಿತ ಕಾಡುಮನುಷ್ಯ ಇರಬೇಕು. ಕೊಲೆಗಡುಕ, ಮರಾಠೆಯವನೇನು? ಅದು ಯಾವ ಜಾತಿಯಪ್ಪಾ? ಮರಾಠಾ.... ಬಿಡಯ್ಯ ಬ್ರಾಹ್ಮಣ ಎಂದಿಗೂ ಇಂಥ ಕೆಲಸ ಮಾಡೋದು ಸಾಧ್ಯವೇ ಇಲ್ಲ. ಅವನೆಲ್ಲೋ ಚಂಡಾಲನೆ ಇರಬೇಕು.

ಎಸ್.ಪಿ. ಸಾಹೇಬರು ಕೈ ಜೋಡಿಸಿ ಹೇಳಿದರು: "ಸೋದರರೇ, ಏನಾದರೂ ತಪ್ಪು ಹೇಳಿದ್ರೆ ಕ್ಷಮಿಸಿಬಿಡಿ. ನಿಮಗೆ ಸರಿತೋರಿದ ಹಾಗೆ ಮಾಡಿ.... ಆದರೆ ಈಗ ನೀವೇ ಕೇಳಿದಿರಲ್ಲಾ.... ಒಬ್ಬ ಬಡ ವ್ಯಾಪಾರಿಯನ್ನು ಅವನ ಮಕ್ಕಳು—ಮರಿಗಳ ಸಹಿತ ಕೊಂದ ಕೊಲೆಗಡುಕ, ಗಾಂಧೀ, ಜವಾಹರ್, ಪಟೇಲ್ ಎಲ್ಲರ ಕೊಲೆಯನ್ನೂ ಮಾಡಬಲ್ಲ ಕೊಲೆಗಡುಕರು.... ನಾನೀಗ ಹೋಗ್ತೀನಿ. ನೀವೆಲ್ಲಾ ನಾಳೆ ಸಂಜೆ ನದಿಯ ದಡದಲ್ಲಿ ಸೇರಿ, ಜಲತರ್ಪಣ ನೀಡಿ.... ಮಿಕ್ಕ ವಿಚಾರಗಳೆಲ್ಲಾ ನಿಮಗೆ ರೇಡಿಯೋದಿಂದ ತಿಳಿಯುತ್ತಲೇ ಇರುತ್ತದೆ. ತಹಸೀಲ್ದಾರ ಸಾಹೇಬರಿದ್ದಾರೆ, ಎಲ್ಲರಿಗೂ ಹೇಳುತ್ತಾರೆ. ಸರಿ, ಬರ್‍ತೀನಿ. ಜೈ ಹಿಂದ್."

"ರಘುಪತಿ ರಾಘವ ರಾಜಾರಾಮ, ಪತಿತ ಪಾವನ ಸೀತಾರಾಮ್" ಬಾಲದೇವ ಕಣ್ಣು ಮುಚ್ಚಿಕೊಂಡು ಹಾಡಲು ಪ್ರಾರಂಭ ಮಾಡಿದ.

ಇಂದು ಅವನೊಂದಿಗೆ ಧ್ವನಿ ಕೂಡಿಸಲು ಯಾರೂ ಇಲ್ಲ, ಕಾಳೀಚರಣ, ವಾಸುದೇವ, ಸುಂದರ, ಸನಿಚ್ಚರ ಒಬ್ಬರೂ ಇಲ್ಲ. ಚಳಿಯಿಂದ ಬಾಲದೇವ ನಡುಗುತ್ತಿದ್ದ.... ಇಲ್ಲಿ ಸ್ವಲ್ಪ ಬೆಂಕಿ ಹತ್ತಿಸಿದ್ದಿದ್ದರೆ ವಾಸಿಯಾಗಿತ್ತು.

"ಕೊಠಾರಿನ್, ಲಕ್ಷ್ಮಿದಾಸಿ."

ಲಕ್ಷ್ಮಿ ಬಂದಳು. ಜೊತೆಗೆ ಲಾಟೀನು ಹಿಡಿದುಕೊಂಡು ಒಬ್ಬ ಪಹಿಲ್ವಾನ ಬಂದ. ಬಾಲದೇವ ಕಣ್ಣು ಮುಚ್ಚಿಕೊಂಡು ಹಾಡುತ್ತಿದ್ದ.

"ಈಶ್ವರ ಅಲ್ಲಾ ತೇರಿ ನಾಮ್, ಸಬಕೋ ಸನ್ಮತಿ ದೇ ಭಗವಾನ್ :"

"ಜೈ ರಘುನಂದನ ಜೈ ಘನಶ್ಯಾಮ್, ಜಾನಕಿ ವಲ್ಲಭ ಸೀತಾರಾಮ್."

ಲಕ್ಷ್ಮಿ ದಾಸಿ ಮುಂದಿನ ಚರಣ ಹಾಡಿದಳು. ಈ ಬಾರಿ ಗುಂಪಿನಲ್ಲಿದ್ದ ಅರ್ಧ ಜನ ಅವಳ ಜೊತೆ ದನಿಗೂಡಿಸಿದರು.

"ರಘುಪತಿ ರಾಘವ ರಾಜಾರಾಮ್ . . . ."

ಬಾವನದಾಸ ಹೇಳಿದ್ದು ಸರಿಯಾಯಿತು. ಭಾರತಮಾತೆ ಗಟ್ಟಿಯಾಗಿ ಅಳುತ್ತಿದ್ದಾಳೆ—ಬಾಲದೇವನ ಶರೀರವೆಲ್ಲಾ ಚೇತನಾಶೂನ್ಯವಾಗಿದೆ. ರಸ್ತೆಯಲ್ಲಿ ಕುಣಿಯುತ್ತಾ ಕುಣಿಯುತ್ತಾ ಅವನು ಬಿದ್ದುಬಿಟ್ಟ.

"ಸೀತಾರಾಮ್ . . . . ಸೀತಾರಾಮ್ . . . . ಜೈ ರಘುನಂದನ."

. . . . 31 ಜನವರಿ 1948 ರ ರಾತ್ರಿ. ಕಮಲಾ ಯೋಚಿಸಿದಳು: "ಇಡೀ ಜಗತ್ತೇ ಇಂದು ಒಬ್ಬ ಮಹಾಮಹಿಮನಿಗಾಗಿ ಅಳುತ್ತಿದೆ." ರೇಡಿಯೋದಲ್ಲಿ ಗೀತಾ ಪಠಣ ನಡೆಯುತ್ತಿತ್ತು. ಗೀತೆಯ ಒಂದೊಂದು ಶ್ಲೋಕವೂ ಅವರನ್ನು ಒಂದೊಂದು ಮೆಟ್ಟಲು ಮೇಲೇರಿಸುತ್ತಿದೆ ಅನ್ನಿಸಿತು. ಮೇಲೆ—ಮೇಲೆ . . . . ತುಂಬಾ ಮೇಲೆ.

ಅಂತವಂತ ಇಮೆ ದೇಹಾ ನಿತ್ಯಸ್ಯೋಕ್ತಾ ಶರೀರಿಣಃ
ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ !

(ನಾಶವಾಗುವ ಈ ದೇಹದಲ್ಲಿ ವಾಸಮಾಡುವ ಆತ್ಮ ನಾಶವಿಲ್ಲದವನು, ಎಣೆಯಿಲ್ಲದವನು; ಆದ್ದರಿಂದ ಹೇ ಅರ್ಜುನ, ನೀನು ಯುದ್ಧಮಾಡು.)

ಕತ್ತಲೆಯಲ್ಲಿ ಒಂದು ಮಹಾ ಪ್ರಕಾಶ . . . . ಕಮಲೆಯ ಕಣ್ಣನ್ನು ಕುಕ್ಕುತ್ತಿದೆ. ಮಹಾತ್ಮಾಜೀ ಕಿಲಕಿಲನೆ ನಗುತ್ತಿದ್ದಾರೆ "ಯಾಕೆ ಅಳುತ್ತೀಯಮ್ಮ? . . . . ಅಳಬೇಡಮ್ಮ."

"ಅಳಬೇಡ ಮಗೂ" ತಾಯಿ ಸಮಾಧಾನಪಡಿಸಿದಳು. "ಅಳಬೇಡ ಮಗೂ." ಒಮ್ಮೆಲೇ ಅವಳಿಗೆ ಡಾಕ್ಟರ್ ನೆನಪು ಬಂತು. ಡಾಕ್ಟರ್ . . . . ಈಗ ಡಾಕ್ಟರಿಗೆ ಧೈರ್ಯ ಹೇಳುವವರು ಯಾರು? ಅಳಬೇಡಿ ಡಾಕ್ಟರ್, ಅಳಬೇಡಿ.

ಕಮಲಾ ರೇಡಿಯೋದ ಧ್ವನಿಯನ್ನು ಮತ್ತಷ್ಟು ಹೆಚ್ಚಿಸಿದಳು . . . .

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ
ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ
ಸಂಯಾತಿ ನವಾನಿ ದೇಹೀ
ನೈನಂ ಛಿಂದಂತಿ ಶಸ್ತ್ರಾಣಿ
ನೈನಂ ದಹತಿ ಪಾವಕಃ . . . .

(ಬಟ್ಟೆ ಹಳೆಯದಾದರೆ ಮನುಷ್ಯ ಅದನ್ನು ತೆಗೆದುಹಾಕಿ ಹೊಸ ಬಟ್ಟೆ ತೊಡುವಂತೆ, ಶರೀರ ನಶಿಸಿಹೋದಾಗ ಜೀವಾತ್ಮ ಹೊಸ ಶರೀರಗಳನ್ನು ಪಡೆಯುತ್ತಾನೆ. ಈ ಆತ್ಮವನ್ನು ಶಸ್ತ್ರಗಳು ಕತ್ತರಿಸಲಾರವು, ಬೆಂಕಿ ಸುಡಲಾರದು.)

## 19

"ಜೋಯಿಸ ಚಿಕ್ಕಪ್ಪನ ಮನೆಯ ಮುಂದೆ ದೊಡ್ಡ ಗುಂಪೇ ಸೇರಿದೆ."

. . . . ಜೋಯಿಸ ಚಿಕ್ಕಪ್ಪ ಸರಿಯಾಗೇ ಹೇಳಿದ್ದರು. 'ಈಗಲೇ ಏನು ಆಗಿದ್ದು. ಇನ್ನೂ ಬೇಕಾದಷ್ಟು ಆಗಬೇಕಾಗಿದೆ!' ಅವರಾಡಿದ ಅಕ್ಷರ ಅಕ್ಷರವೂ ಸರಿಯಾಯಿತು . . . ! ಅಂಥ ಜ್ಞಾನಿಯ ಮಾತನ್ನು ಮೀರಿದ್ದರ ಫಲವನ್ನು ಇಡೀ ಹಳ್ಳಿಯೇ ಅನುಭವಿಸುತ್ತಿದೆ.

ಕಾಡಿನ ಬೇರು–ಸೊಪ್ಪಿನಿಂದಲೇ ಜೋಯಿಸ ಚಿಕ್ಕಪ್ಪ ಚೇತರಿಸಿಕೊಂಡರು. ಸ್ವತಃ ಎದ್ದು ನಿಲ್ಲಲಾರರು. ಮುಖ ಸೊಟ್ಟಗೆ ಮಾಡಿಕೊಂಡು ಎಳೆದೂ ಎಳೆದೂ ಮಾತನಾಡುತ್ತಾರೆ . . . . "ಸರ್ವನಾಶ, ಸರ್ವನಾಶ; ಹೌದು, ಸರ್ವನಾಶ ಆಗುತ್ತದೆ."

"ಜೋಯಿಸ ಚಿಕ್ಕಪ್ಪ ಈವತ್ತೆಲ್ಲಾ ಉಪವಾಸ ಇದ್ದು ಸಂಜೆ ಕಮಲಾ ನದಿಯ ತೀರದಲ್ಲಿ ಜಲತರ್ಪಣ ಕೊಡಬೇಕಂತೆ. ಬೇಲಾವನ ಯಾದವ ಈಗ ಜೋಯಿಸರ ಮಾತನ್ನು ಚಾಚೂ ತಪ್ಪುವುದಿಲ್ಲ . . . . ಹದಿನೆಂಟನೆಯ ವಯಸ್ಸಿ

ನಲ್ಲಿ ಸಕಲದೀಪನಿಗೆ ಮಾತಾ–ಪಿತೃ ವಿಯೋಗವಾಗುತ್ತದೆ ಎಂದು ಅವರು ಹೇಳಿದ್ದರು····ಆ ಮಾತು ಪೂರ್ಣ ನಿಜವಾಯಿತು. ಸಕಲದೀಪ, ಎರಡು ತಿಂಗಳು ಬೆಕ್ಕಿನ ಹಾಗೆ ಕಲಕತ್ತೆಯಲ್ಲಿ ಸುತ್ತಾಡುತ್ತಿದ್ದ. ····ಮಾವ ಹಿಡಿದು ಕೊಂಡು ಬಂದಿದಾನೆ. ಅವನಿಗೂ ಪ್ರಾಯಶ್ಚಿತ್ತ ಮಾಡಿಸಬೇಕು····ಹೋಟೆಲಿ ನಲ್ಲಿ ಪಾತ್ರೆ ತೊಳೆಯುತ್ತಿದ್ದನಂತೆ····ಜೋಯಿಸರು ಸಂಜ್ಞೆ ಮಾಡಿ ತಿಳಿಸಿದರು : "ಬೇಡ, ಖಂಡಿತ ಬೇಡ, ಅಂಥ ಕೆಲಸ ಮಾಡಬೇಡಿ."

ಜೋಯಿಸ ಚಿಕ್ಕಪ್ಪ ಏನು ಹೇಳಿದರು? ಗಾಂಧೀಜಿ ಯಾಕೆ ಸತ್ತ ರಂತೆ?....ಏನಂದರು? ಸತ್ತಿದ್ದೇ ಒಳ್ಳೇಯದಾಯಿತಂತಾ? ಥತ್, ಅವರಿ ಗೆಲ್ಲೋ ತಲೆ ಸರಿಯಾಗಿಲ್ಲ····

ಎರಡನೆಯ ಜಾವ ಮೆರವಣಿಗೆ ಹೊರಟಿತು. ಬೊಂಬಿನಿಂದ ಒಂದು ಪಲ್ಲಕ್ಕಿಯನ್ನು ಮಾಡಿ ಅದನ್ನು ಅಲಂಕರಿಸಿದ್ದರು····ಹಸಿರು, ಕೆಂಪು, ಹಳದಿ ಕಾಗದಗಳನ್ನು ಅಂಟಿಸಿದ್ದರು. ಒಂದು ಕಡೆ ಬಾಲದೇವ, ಇನ್ನೊಂದು ಕಡೆ ಸುಮರಿತದಾಸ, ಬಸ್ವೇಸ್ವರ ಮೋಚಿ ಮತ್ತು ಸಕಲದೀಪ ಪಲ್ಲಕ್ಕಿಯನ್ನು ಭುಜದ ಮೇಲೆ ಹೊತ್ತಿದ್ದರು····ಖೇಲಾವನ ಯಾದವ ಬಂದಿರಲಿಲ್ಲ. ಸಕಲದೀಪನಿಗೂ ಅವನು ಬೇಕಾದಷ್ಟು ಬುದ್ಧಿ ಹೇಳಿದ್ದ, ಬೈದು ಹೇಳಿದ್ದ. ಆದರೆ ಸಕಲದೀಪ ಬಂದು ಪಲ್ಲಕ್ಕಿಗೆ ಭುಜಕೊಟ್ಟಿದ್ದ.

ಟನ್ ಟನಾಂಗ್—ಗಡಿಯಾರದ ಗಂಟೆ ಬಾರಿಸಿತು.

ತಿನ್ನ ತಿಕಕಿಟ ತಿನ್ನಾ ಧಿನ್ನಾ ಧಾ ಧಾ ಧಿನ್ನಾ

ಹಳ್ಳಿಯ ಭಜನ ಮಂಡಳಿಯವರು ಹಾಡನ್ನು ಪ್ರಾರಂಭಿಸಿದರು. ಹಾಡಿನ ಮೊದಲನೆಯ ಸಾಲೇ ಕೇಳುವವರನ್ನು ರೋಮಾಂಚನಗೊಳಿಸುತ್ತಿತ್ತು. ಎಲ್ಲರ ಹೃದಯ ಕರಗಿತು. ಕಣ್ಣುಗಳಲ್ಲಿ ನೀರು ತುಂಬಿತು.

ಅರೆ ಕಾಂಚ್ ಹಿ ಬಾಸ್ ಕೆ ಖಾಟ್ ರೆ ಖಟೋಲನ
ಆಖೈರ ಮೂಂಚ್ ಕೇ ರಹೆ ಡೋರ್
ಹಾಂ ರೇ ವೋರೀ ರೇ ಏ ಏ ಏ ಅಂ ಅಂ
ರಾಮ ರಾಮ
ಚಾರ್ ಸಮಾಜೀ ಮಲೀ ಡೋಲಿಯಾ ಉಠಾಓಲ್
ಲಯೀ ಚಲಲ್ ಜಮುನಾ ಕೇಓರ್
ಹಾಂ ರೇ ವೋರೀ ರೇ ಏ····

(ಗಾಜಿನಿಂದ ಮಾಡಿದ್ದ ಮಂಚ. ದರ್ಭೆಯ ಹಗ್ಗ. ನಾಲ್ಕು ಜನ ಸೇರಿ ಡೋಲಿಯನ್ನು ಎತ್ತಿಕೊಂಡು ಯಮುನೆಯ ಕಡೆ ಹೊರಟರು.)

ಈಗ ಯಾರಿಗೂ ತಡೆದುಕೊಳ್ಳುವುದಕ್ಕಾಗಲಿಲ್ಲ. ಎಲ್ಲರೂ ಬಿಕ್ಕಿ ಬಿಕ್ಕಿ ಅತ್ತರು. ಮೆರವಣಿಗೆ ಮುಂದುವರಿಯಿತು. ನಿಧಾನವಾಗಿ ಎಲ್ಲರೂ ಮೆರವಣಿಗೆಗೆ ಬಂದು ಸೇರಿದರು. ಮುದುಕರು, ಮಕ್ಕಳು, ಯುವಕರು, ಹೆಂಗಸರು ಎಲ್ಲರೂ ಅಳುತ್ತಿದ್ದರು····ಸಕಲದೀಪನ ಯುವ ಹೆಂಡತಿ ಹೊಸಲಿನಲ್ಲಿ ನಿಂತು ನೋಡುತ್ತಿದ್ದಳು. ಮಧ್ಯೆ ಮಧ್ಯೆ ನಡುಗುತ್ತಿದ್ದಳು. ಅವಳಿಗೆ ಸುಮ್ಮನೆ ನಿಂತಿರುವುದು ಸಾಧ್ಯವಾಗಲಿಲ್ಲ. ಕೊನೆಗೆ ಅವಳೂ ಮೆರವಣಿಗೆಯ ಹಿಂದೆ ಓಡಿದಳು. ಖೇಲಾವನ ಸಿಂಹ ಕೂಗಿಕೊಂಡ: "ಕನಿಯಾ, ಕನಿಯಾ:"

ಹಾ ಅಂ ರಿ ಗೋಡ್ ತೋರಾ ಲಾಗ್ಂ
ಹಮ್ ಭೈಯ್ಯಾ ರೇ ರಹರಿವಾ ಸೇ
ಘಡೀ ಭರ್ ಡೋಲೀ ಬಿಲಮಾನ್
ಮಾಯೀ ಜೇ ರೋನಯ್····

(ನಿಮ್ಮ ಕಾಲಿಗೆ ಬೀಳುತ್ತೇನೆ. ಒಂದು ಕ್ಷಣ ಡೋಲಿಯನ್ನು ನಿಲ್ಲಿಸಿ. ತಾಯಿ ಅಳುತ್ತಿದ್ದಾಳೆ.)

"ಮಾಯೀ ಜೇ ರೋನಯ್." ಹೌದು ಭಾರತಮಾತೆ ಅಳುತ್ತಿದ್ದಾಳೆ.

ರಾಮದಾಸ ಕೈಯ್ಯಲ್ಲಿ ಖಂಜರ ಹಿಡಿದು ನೀರವವಾಗಿ ಅಳುತ್ತಿದ್ದಾನೆ. ಅವನ ಪಾಪದಿಂದಲೇ ಮಹಾತ್ಮಾಜೀ ಕೊಲೆಯಾದರು. ಅವನು, ಸಾಧುವಿನ ಅಂಗಳವನ್ನು ಭ್ರಷ್ಟಗೊಳಿಸಿದ····ಮೊನ್ನೆ ರಾಮಪಿಯರಿಯ ತಾಯಿ ಹಳ್ಳಿಯಿಂದ ಮೀನಿನ ಮಾಂಸ ತಂದಿದ್ದಳು. ರಾಮಪಿಯರಿಯ ರಾತ್ರಿ ಎದ್ದು ಕದ್ದು ತಿನ್ನಲು ಯತ್ನಿಸಿದಳು. ಮಹಂತ ರಾಮದಾಸ ಮಾಲು ಸಹಿತ ಕಳ್ಳನನ್ನು ಪತ್ತೆಮಾಡಿದ್ದ.

ರಮಜೂದಾಸನ ಹೆಂಡತಿ ಎದೆ ಬಡಿದುಕೊಂಡು ಅಳುತ್ತಿದ್ದಳು····ಶಿಠರಾ ಚಮ್ಮಾರನ ಹನ್ನೆರಡು ವರ್ಷದ ಮಗಳೂ ಅಳುತ್ತಿದ್ದಳು····"ಬಾ ಬಾ" "ಬಾ ಬಾ."

"ಬಾಪೂ"

····ಕಮಲಾ ರೇಡಿಯೋ ತಿರುಗಿಸಿಕೊಂಡು ಕುಳಿತಿದ್ದಳು. ಅವಳ ಕಣ್ಣುಗಳಿಂದ ನೀರು ತೊಟ್ಟಿಕ್ಕುತ್ತಿತ್ತು. ತಾಯಿ ಸೆರಗಿನಿಂದ ಮಗಳ ಕಣ್ಣೀರು

ಒರೆಸುತ್ತಿದ್ದಳು. ಜೊತೆಗೆ ತಾನೂ ಅಳುತ್ತಿದ್ದಳು. "ಅವರು ನರರೂಪ ಧರಿಸಿ ಬಂದಿದ್ದರು····ಲೀಲೆ ತೋರಿಸಿ ಹೊರಟುಹೋದರು."

ರೇಡಿಯೋದಿಂದ ಪ್ರತ್ಯಕ್ಷವರದಿ ಪ್ರಸಾರವಾಗುತ್ತಿತ್ತು. "ಈಗ.... ಈಗ....ಚಂದನದ ಚಿತೆ ಸಿದ್ಧವಾಗಿದೆ····ಇನ್ನು ಕೆಲವೇ ಕ್ಷಣಗಳಲ್ಲಿ···· ನೋಡಿ, ಪಂಡಿತ ನೆಹರೂ ಅವರು ದೇವದಾಸ ಗಾಂಧಿಯವರಿಗೆ, ಅಂದರೆ, ಮಹಾತ್ಮರ ಸುಪುತ್ರರೊಂದಿಗೆ ಏನೋ ಹೇಳುತ್ತಿದ್ದಾರೆ. ····ಎಲ್ಲೆಲ್ಲೂ ಮನುಷ್ಯರ ತಲೆಗಳು....ಮನುಷ್ಯರ ತಲೆಗಳು····ಒಂದು ಎಳ್ಳುಕಾಳನ್ನು ಇಡಲೂ ಜಾಗವಿಲ್ಲ····(ಕೋಲಾಹಲದಿಂದ ಶಬ್ದ ಕ್ರಮೇಣ ಹೆಚ್ಚಾಗುತ್ತದೆ: ಜಯ····ಜಯವಾಗಲಿ:)···· ಅಪಾರವಾಗಿದ್ದ ಜನ ಸಮುದ್ರದಲ್ಲಿ ಅಲೆಗಳು ಎದ್ದಂತೆ ಕಾಣಿಸುತ್ತಿದೆ····ಎಲ್ಲರೂ ಒಂದು ಬಾರಿ, ಕೊನೆಯ ಬಾರಿಗೆ ಒಂದು ಸಲ ಆ ಮಹಾ ಮಾನವನ ಪವಿತ್ರ ಶರೀರವನ್ನು ನೋಡಲು ಪ್ರಯತ್ನಿಸುತ್ತಿದ್ದಾರೆ···· ಮೂರ್ಛಿತರಾದವರನ್ನು ಆಂಬ್ಯುಲೆನ್ಸ್ ಗಾಡಿಗಳಲ್ಲಿ ಹಾಕಿ ಕಳುಹಿಸುತ್ತಿದ್ದಾರೆ····ಓಹ್····ಈಗ ಪಶ್ಚಿಮ ಆಕಾಶದಲ್ಲಿ ಸೂರ್ಯ ತನ್ನ ಕೆಂಪನ್ನು ಚೆಲ್ಲಿ ಅಸ್ತವಾಗುತ್ತಿದ್ದಾನೆ....ಈ ಕಡೆ ಮಹಾಮಾನವನ ಚಿತೆಗೆ ಅಗ್ನಿಶಿಖೆ ತಗುಲಿದೆ....ಭೂಮಿಯ ಸೂರ್ಯ ಅಸ್ತವಾಗುತ್ತಿದ್ದಾನೆ....ಕ್ಷಿತಿ, ಜಲ, ಅಗ್ನಿ....ಮುಂತಾದ ಐದು ತತ್ವಗಳ ಬೊಂಬೆ....

(ಗೀತಾವಾಣಿ ಕೇಳಿಸುತ್ತದೆ.)

"ಜನ್ಮ ಬಂಧವಿನಿರ್ಮುಕ್ತಾ ಪದಂ
ಗಚ್ಛಂತ್ಯನಾಮಯಮ್...."

(ಜನ್ಮಬಂಧನಗಳಿಂದ ಮುಕ್ತವಾದ ನಿರ್ದೋಷಯುಕ್ತವಾದ ಪದವಿಯನ್ನು ಪಡೆಯುತ್ತಾನೆ.)

"ಅಮ್ಮಾ.....ಅಮ್ಮಾ"

"ಅಮ್ಮಾ ಅಮ್ಮಾ," ಕಮಲೆಗೆ ಸ್ಪಷ್ಟವಾಗಿ ಕೇಳಿಸುತ್ತಿದೆ. ಯಾರೋ ಅವಳನ್ನು ಕೂಗುತ್ತಿದ್ದಾರೆ? ಅವಳನ್ನು 'ಅಮ್ಮ' ಎನ್ನುವವರು ಯಾರು?

"ಏನಾಯಿತು ಮಗು?" ತಾಯಿ ಓಡಿ ಬಂದಳು.

"ನನ್ನ ಮಗು—ನನ್ನ ಮಗು...."

"ಓಂ ಶಾಂತಿಃ ಶಾಂತಿಃ...."

# 20

"ಸೀತಾರಾಮ್ ಸೀತಾರಾಮ್"

"ಓ ಬಾವನದಾಸ, ಬನ್ನಿ ಬನ್ನಿ." ಲಕ್ಷ್ಮಿ ಕುಳಿತುಕೊಳ್ಳಲು 'ಮೋಡ' ಕೊಟ್ಟಳು.

"ಬಾಲದೇವ ಎಲ್ಲಿ?"

"ಬನ್ನಿ ಸಾಹೇಬ ಬಂದಗೀ, ಜೈಹಿಂದ್." ಬಾಲದೇವ ಬಂದ.

"ಜೈಹಿಂದ್"

ಬಾವನದಾಸನನ್ನು ನೋಡಿದರೇ ಭಯವಾಗುವಂತಿದೆ. ಅವನು ಒಣಗಿ ಕಡ್ಡಿಯಂತಾಗಿದ್ದ....ಕೂದಲು ಒಮ್ಮೆಲೇ ಇಷ್ಟೊಂದು ಬೆಳ್ಳಗೆ ಹೇಗಾಯಿತು? ....ಓ ಈವತ್ತು ಟೋಪಿ ಹಾಕಿಕೊಂಡಿಲ್ಲ, ಅದಕ್ಕೆ ಹಾಗನ್ನಿಸುತ್ತಿದೆ. ಧ್ವನಿಯೂ ಬದಲಾಗಿ ಹೋಗಿದೆ. ಬಾಲದೇವ ಹೇಳಿದ. "ನೀವಂತೂ ಈಗ ಇಲ್ಲಿ ಇರುವುದೇ ಇಲ್ಲ....ಆದಿನ ರೇಡಿಯೋದಲ್ಲಿ ಸುದ್ದಿ ಕೇಳಿದಾಗಿನಿಂದ ಮಾರನೆಯ ದಿನವೇ ಜಲತರ್ಪಣ ಕೊಡುವವರೆಗೆ ಎಲ್ಲಾ ಕೆಲಸಗಳನ್ನು ಮಾಡಿದೆವು. ಹೇಗೋ ನಡೆಸಿದ್ದಾಯಿತು. ಶ್ರಾದ್ಧದ ದಿನ ತಹಸೀಲ್ದಾರರು ಊಟ ಹಾಕಿಸುತ್ತಾರಂತೆ. ಬ್ರಾಹ್ಮಣರು, ರಾಜಪೂತರು, ಯಾದವರು, ಹರಿಜನರು ಎಲ್ಲರಿಗೂ ಒಂದೇ ಪಂಕ್ತಿಯಲ್ಲಿ ಊಟ ಹಾಕುತ್ತಾರೆ. ನೀವೂ ಬಂದದ್ದು ಒಳ್ಳೆಯದೇ ಆಯಿತು. ಇಲ್ಲದಿದ್ದರೆ ನಾನೊಬ್ಬನೇ"....

"ಇಲ್ಲ ಬಾಲದೇವ, ನಾನು ಇರುವುದಿಲ್ಲ. ನನಗೆ ತುಂಬಾ ಕೆಲಸ ಇದೆ. ನಿಮ್ಮನ್ನು ಒಂದು ಸಲ ನೋಡಿಕೊಂಡು ಹೋಗೋಣಾ ಅಂತ ಬಂದೆ. ನಾನು ತಕ್ಷಣ....ಈಗಲೇ ಹೋಗಬೇಕು."

"ಒಳ್ಳೇದು ಅಲ್ಲಿನ ಸಮಾಚಾರ ಏನು? ಅದಾದರೂ ಹೇಳಿ."

"ಸಮಾಚಾರ ಏನಿದೆ? ಇನ್ನು ಹೇಳುವುದು–ಕೇಳುವುದು ಒಂದೂ ಉಳಿದಿಲ್ಲ. ರಾಮಕೃಷ್ಣ ಆಶ್ರಮದಲ್ಲಿ ಹರಿಜನರಿಗೆ ಊಟ ಹಾಕುತ್ತಾರೆ.... ಬ್ಲಾಕ್‌ಪ್ರಿನ್ಸ್ ನಿನ್ನೆ ಸತ್ತುಹೋಯಿತು....ಪಾಟ್ನಾದಿಂದ ಶಿವನಾಥ ಬಾಬು ಬಂದಿದಾರೆ....ಶಶಾಂತ ಪ್ರಾಂತ್ಯದ ಅಧ್ಯಕ್ಷರಾಗಿದಾರೆ. ಅವರೂ ಇನ್ನು

ಮೇಲೆ ಪಾರ್ಟ್ಬಾದಲ್ಲೇ ಇರುತ್ತಾರೆ....ಇನ್ನುಮೇಲೆ ಎಲ್ಲರೂ ಪಾರ್ಟ್ಬಾದಲ್ಲೇ ಇರುತ್ತಾರೆ....ಎಲ್.ಎ. ಗಳಂತೂ ಸದಾ ಅಲ್ಲೇ ಇರುತ್ತಾರೆ....ಸ್ವರಾಜ್ಯ ಸಿಕ್ಕಿಬಿಟ್ಟಿದೆ, ಇನ್ನೇನು ಆಗಬೇಕಾಗಿದೆ, ಹೇಳಿ?....ಥೋಟನ್ ಬಾಬುವಿನದೇ ರಾಜ್ಯ. ಅವರು ಅಪ್ರಾಮಾಣಿಕರು, ಬ್ಲಾಕ್ ಮಾರ್ಕೆಟ್ಟಿನ ಜನಗಳ ಜೊತೆ ಸದಾ ಓಡಾಡುತ್ತಿರುತ್ತಾನೆ. ಅಧಿಕಾರಿಗಳ ಮುಂದೆ ಹಲ್ಲು ಗಿಂಜುತ್ತಿರುತ್ತಾನೆ. ಎಲ್ಲಾ ನಾಶವಾಯಿತು.'' ಬಾವನದಾಸ ಮಾತನಾಡುತ್ತಾ ಮಧ್ಯದಲ್ಲೇ ತಡೆದ.

''ಥೋಟನ್ ಬಾಬು ವಿಚಾರ ಹಾಗಿರಲಿ, ಈಗಂತೂ ಪ್ರತಿ ಮನೆಯವರೂ ಕಾಂಗ್ರೆಸ್ಸಿಗೆ ಸೇರಿಬಿಟ್ಟಿದ್ದಾರೆ.''

''ಇಲ್ಲ, ಬಾಲದೇವ. ಇದು ಥೋಟನ್ ಬಾಬು ಒಬ್ಬನ ವಿಚಾರವಲ್ಲ....ಈ ರೋಗ ಮೇಲಿನಿಂದ ಬಂದಿದೆ....ಇದು ಪಟ್ಟಣದಿಂದ ಹರಡುತ್ತಿರುವ ರೋಗ....ಮುಂದೆ ಇನ್ನೂ ವೈಭವ ಕಾದಿದೆ ..ರೈತರು, ರಾಜಪೂತರು, ಕ್ಷತ್ರಿಯರು, ಯಾದವರು, ಹರಿಜನರು ಎಲ್ಲಾ ಕೊಡೆದಾಡುತ್ತಿದ್ದಾರೆ....ಮುಂದಿನ ಚುನಾವಣೆಯಲ್ಲಿ ಇನ್ನಷ್ಟು ದೊಡ್ಡ ಸಂತೆಯೇ ಸೇರುತ್ತದೆ. ಯಾವ ಜಾತಿಯವನು ಚುನಾಯಿತನಾಗುತ್ತಾನೆ ಎನ್ನುವುದಕ್ಕೇ ಹೋರಾಟ....ರಾಜಪೂತರವನು ಚುನಾಯಿತನಾದರೆ ಎಲ್ಲರಿಗಿಂತ ದೊಡ್ಡ ಮಂತ್ರಿ ರಾಜಪೂತನೇ ಆಗುತ್ತಾನೆ....ಮೊನ್ನೆ ಆಶ್ರಮದಲ್ಲಿ ಮಾತು–ಕಥೆ ನಡೆಯುತ್ತಿತ್ತು. ಶಶಾಂಕಜೀ ಗಾಂಧೀಜಿಯ ಭಸ್ಮ ತೆಗೆದುಕೊಂಡು ಆಶ್ರಮಕ್ಕೆ ಬರುತ್ತಾರಂತೆ. ಅದಕ್ಕೆ ಥೋಟನ್ ಬಾಬು ಕೇಳುತ್ತಿದ್ದ. 'ಜಿಲ್ಲಾ ಸಭಾಪತಿಯೇ ಭಸ್ಮ ತರಬೇಕು. ಶಶಾಂಕಜೀ ಯಾಕೆ ತರುತ್ತಿದ್ದಾರೆ. ಇದರಲ್ಲೇನೋ ರಹಸ್ಯ ಇರಬೇಕು.' ಅಂತ ''ಹ ಹ ಹ ಹ ಹಾ''....ಬಾವನದಾಸ ವಿಚಿತ್ರವಾಗಿ ನಕ್ಕ. ಇಂಥ ನಗುವನ್ನು ಬಾಲದೇವ ಹಿಂದೆಂದೂ ಕಂಡಿರಲಿಲ್ಲ.

''ಯಾಕೆ? ಯಾಕೆ ನಗುತ್ತಿದ್ದೀರಿ ದಾಸಜೀ?''

''ಅದೇ ಮೊನ್ನೆ ವಿಚಾರ....ಥೋಟನ್ ಬಾಬುವಿನ ಮಾತು ಕೇಳಿದ ಕೂಡಲೇ ಅಮೀನ ಬಾಬು ಸರಿಯಾಗಿ ಎದ್ದು ಕುಳಿತರು. ಇಷ್ಟು ಹೊತ್ತಿಗೆ ರೈಲು ಹೊರಟುಹೋಗಿರುತ್ತೆ. ಕಟಿಹಾರ್‌ಕ್ಕೆ ಹೋದರೆ ಸಿಗಬಹುದು. ತಕ್ಷಣ ಕಾರು ಸ್ಟಾರ್ಟ್ ಮಾಡಿಕೊಂಡು ಹೊರಟೇ ಬಿಟ್ಟರು. ಅಧ್ಯಕ್ಷರು....ಕಾರ್ಯದರ್ಶಿ....ರಾಮ ರಾಮ....ದೇವರೂ ಒಳ್ಳೇ ಜೋಡಿಯನ್ನು ಸೇರಿಸಿದಾನೆ....ಇಬ್ಬರೂ ಹೊರಟರು ಭಸ್ಮ ತರುವುದಕ್ಕೆ....ಹೋ ಹೋ

.... ಇವರೆಲ್ಲಾ ಸೇರಿ ದೇಶವನ್ನು ಭಸ್ಮ ಮಾಡಿಬಿಡುತ್ತಾರೆ! .... ಹಾ ಹಾ ಹಾ ಹಾ—ಭಸ್ಮ ತರುವುದಕ್ಕೆ ಹೋದರು.... ಈ ಜನ ದೇಶವನ್ನು ಭಸ್ಮ ಮಾಡಿಬಿಡುತ್ತಾರೆ .... ಭಸ್ಮಾಸುರರು.''

"ದಾಸಜೀ, ಯಾರೋ ಸೋಷಲಿಸ್ಟ್ ಪಾರ್ಟಿ ಮನುಷ್ಯ ನಿಮಗೆ ಏನೋ ಹೇಳಿಕೊಟ್ಟಿರಬೇಕು ....''

"ಸೋಷಲಿಸ್ಟ್, ಸೋಷಲಿಸ್ಟ್? ಯಾವ ಸೋಷಲಿಸ್ಟ್ ನಮಗೆ ಏನು ಹೇಳಬಲ್ಲ?—ಎಲ್ಲಾ ಪಾರ್ಟಿಯವರೂ ಒಂದೇ ಸಮ. ಆ ಪಾರ್ಟಿಯಲ್ಲಿದ್ದ ದೊಡ್ಡ ದೊಡ್ಡ ನಾಯಕರೂ ಮಂತ್ರಿಗಳಾಗುವುದಕ್ಕೆ ಬಡಿದಾಡುತ್ತಿದ್ದಾರೆ, ಎಲ್ಲರಿಗೂ ಮಂತ್ರಿಗಳಾಗುವ ಹುಚ್ಚು ಹತ್ತಿಬಿಟ್ಟಿದೆ. ಬಾಲದೇವ .... ದೇಶದ ಸೇವೆ, ಬಡವರ ಸೇವೆ, ಕಾರ್ಮಿಕರ ಸೇವೆ ಯಾವುದನ್ನೇ ಮಾಡುತ್ತಿರಲಿ, ಎಲ್ಲರೂ ಅದನ್ನು ಮಾಡುತ್ತಿರುವುದು ಒಂದೇ ಲೋಭದಿಂದ .... ಆ ಪಾರ್ಟಿಯಲ್ಲಿ ನಿಜವಾದ ಒಳ್ಳೆಯವರು ಜೈಪ್ರಕಾಶ ನಾರಾಯಣ್ ಒಬ್ಬರಿದಾರೆ, ಹಾ ಹಾ ಹಾ ಹಾ .... ಅವರಿಗೂ ಯಾರಾದರೂ ಗುಂಡು ಹೊಡೆದುಬಿಡುತ್ತಾರೆ... ಆಮೇಲೆ ಅವರ ಭಸ್ಮ ತೆಗೆದುಕೊಂಡು ಬರುವುದಕ್ಕೂ ಅಧ್ಯಕ್ಷರೂ, ಕಾರ್ಯದರ್ಶಿಗಳೂ ಒಟ್ಟು ಒಟ್ಟಿಗೆ ಹೋಗುತ್ತಾರೆ.....''

ಹೊಸ ಅವಲಕ್ಕಿ, ಹೊಸ ಬೆಲ್ಲವನ್ನು ಒಂದು ತಟ್ಟೆಯಲ್ಲಿಟ್ಟುಕೊಂಡು ತಂದಳು ಲಕ್ಷ್ಮಿ. "ಸ್ವಲ್ಪ ಉಪಾಹಾರ ತೆಗೆದುಕೊಳ್ಳಿ .... ಸ್ವಲ್ಪಾನೇ ಇದೆ .... ಹಾಲು ಮೊಸರನ್ನು ಊಟಕ್ಕೋಸ್ಕರ ತೆಗೆದಿಟ್ಟಿದೀನಿ.''

ಬಾವನದಾಸ ಬಗಲಿನಲ್ಲಿದ್ದ ಚೀಲವನ್ನು ಮುಂದೆ ಹಿಡಿದ. ಲಕ್ಷ್ಮಿ ಕೇಳಿದಳು: "ಇದೇನು? .... ಉಪಾಹಾರ ತೆಗೆದುಕೊಳ್ಳಿ .... ಚೀಲ ಯಾಕೆ ಮುಂದೆ ಹಿಡೀತಿದೀರಿ? ....''

ಲಕ್ಷ್ಮಿಯ ಕಣ್ಣುಗಳಲ್ಲಿ ನೀರು ತುಂಬಿತು.... ಇಷ್ಟು ದಿನಗಳ ನಂತರ ವೈಷ್ಣವನೊಬ್ಬ ಮನೆಗೆ ಬಂದಿದ್ದಾನೆ.... ಅವನು ಎಲೆಯನ್ನು ಎಂಜಲು ಮಾಡದೇ ಹೋಗುವುದೇ? .... ಇಲ್ಲ ಹಾಗಾಗಬಾರದು.

"ಇಲ್ಲ, ನೀವು ಇದನ್ನು ತಿನ್ನಲೇಬೇಕು ....'' ಲಕ್ಷ್ಮಿ ಬಲವಂತದಿಂದ ಹೇಳಿದಳು: "ದಾಸಜೀ, ನಿಮ್ಮನ್ನು ಬೇಡಿಕೊಳ್ತಿದೀನಿ .....''

ಬಾಲದೇವನಿಗನ್ನಿಸಿತು: ಬಾವನದಾಸನಿಗೆ ಏನೋ ಆಗಿಹೋಗಿದೆ..... ಬಾಯಿಗೆ ಬಂದದ್ದೇ ಮಾತನಾಡುತ್ತಿದಾನೆ.... ಮುಖವೂ ಬದಲಾಗಿ ಹೋಗಿದೆ,

ಕಣ್ಣುಗಳು ಕೆಂಪಗಾಗಿವೆ, ಬಟ್ಟೆ ಎಷ್ಟೊಂದು ಕೊಳಕಾಗಿದೆ. ಎಷ್ಟು ಭಯಂಕರವಾಗಿ ನಗುತ್ತಾನೆ.... ಅಲ್ಯುಮಿನಿಯಂ ಪಾತ್ರೆ ಮತ್ತು ಬಟ್ಟೆಲುಗಳನ್ನು ಸದಾ ಜೊತೆಯಲ್ಲೇ ಇಟ್ಟುಕೊಂಡಿರುತ್ತಾನೆ.

ತಿಂಡಿ ತಿಂದು ಕೈ ತೊಳದುಕೊಳ್ಳುತ್ತಾ ಬಾವನದಾಸ ಹೇಳಿದ, "ಬಾಲದೇವ, ಇನ್ನು ನಾನು ಹೊರಡುತ್ತೇನೆ. ಪೂರ್ಣಿಯಾಗೆ ಹೋಗುವ ರೈಲನ್ನು ಕೋದಲಿಯಾ ಸ್ಟೇಷನ್ನಿನಲ್ಲಿ ಹಿಡಿಯುತ್ತೀನಿ.... ಈಗ ನಿಮ್ಮಿಂದ ಒಂದು ಕೆಲಸ ಆಗಬೇಕಾಗಿತ್ತು."

ಬಾವನದಾಸ ಚೀಲದಿಂದ ಕೆಂಪು ಬಣ್ಣದ ಒಂದು ಬಟ್ಟೆಯ ಗಂಟನ್ನು ತೆಗೆದ. ಗಂಟನ್ನು ಬಿಚ್ಚಿ ಕಾಗದದ ಒಂದು ಕಟ್ಟನ್ನು ಹೊರತೆಗೆದ.

"ಬಾಲದೇವ—ಇವೆಲ್ಲಾ, ಮಹಾತ್ಮಾ ಗಾಂಧಿಯವರು ನನಗೆ ಬರೆದ ಪತ್ರಗಳು. 'ಅವಶ್ಯಕತೆ ಬಿದ್ದರೆ ಇವನ್ನೆಲ್ಲಾ ನನಗೆ ಕೊಡಿ' ಅಂತ ಗಂಗೂಲಿ ಒಂದು ಸಲ ನನಗೆ ಹೇಳಿದ್ದರು. ಹೊರಡುವಾಗ ಜ್ಞಾಪಕವೇ ಬರಲಿಲ್ಲ. ನೀವು ಪೂರ್ಣಿಯಾಗೆ ಯಾವಾಗ ಹೋಗುತ್ತೀರಿ?.... ಐದಾರು ದಿನಗಳ ನಂತರವೇ? .... ಹಾಗಾದರೆ ಸರಿ, ನೀವೇ ಇವನ್ನು ಇಟ್ಟುಕೊಂಡಿರಿ. ಗಂಗೂಲಿಗೆ ಕೊಟ್ಟುಬಿಡಿ.... ಖಂಡಿತ."

ಪರಮ ಶ್ರದ್ಧಾಭಕ್ತಿಗಳಿಂದ ಜೋಡಿಸಿಟ್ಟಿದ್ದ ಪವಿತ್ರ ಕಾಗದಗಳನ್ನು ಬಾವನದಾಸ ರೆಪ್ಪೆ ಮಿಟುಕಿಸದೆ ನೋಡಿದ.... ಅನಂತರ ಒಂದೊಂದರ ಮೇಲೂ ಬೇರೆ ಬೇರೆಯಾಗಿ ದೃಷ್ಟಿಯಾಡಿಸಿದ. ಗಾಳಿಗೆ ಒಂದು ಕಾಗದ ಹಾರಿ ಕೆಳಗೆ ಬಿತ್ತು. ಬಾವನದಾಸ ತಟಕ್ಕನೇ ಅದನ್ನೆತ್ತಿ ತಲೆಗೆ ತಗುಲಿಸಿಕೊಂಡ.... ಅವನಿಗೆ ಒಂದು ಅಕ್ಷರವೂ ಓದುವುದಕ್ಕೆ ಬರುತ್ತಿರಲಿಲ್ಲ. ಆದರೂ ಅವನು, ಪ್ರತಿ ಕಾಗದದ ಪ್ರತಿ ಅಕ್ಷರದ ಮೇಲೂ ಕಣ್ಣಾಡಿಸುವುದನ್ನು ನೋಡಿದರೆ ನಿಜವಾಗಿ ಓದುತ್ತಿದ್ದಾನೇನೋ ಎನ್ನಿಸುವಂತಿತ್ತು. ಕೊನೆಯ ಕಾಗದ ನೋಡಿದ ನಂತರ ಅವನು ಒಮ್ಮೆ ದೀರ್ಘವಾಗಿ ಉಸಿರೆಳೆದುಕೊಂಡ.

ಬಟ್ಟೆಯ ಗಂಟನ್ನು ಕೈಗೆ ತೆಗೆದುಕೊಂಡು ಬಾವನದಾಸ ಸ್ವಲ್ಪ ಹೊತ್ತು ಅದರ ದಾರವನ್ನು ಕಟ್ಟುವುದು, ಬಿಚ್ಚುವುದು ಮಾಡುತ್ತಿದ್ದ.... ಮತ್ತೊಮ್ಮೆ ನಿಟ್ಟುಸಿರುಬಿಟ್ಟು ತಟಕ್ಕನೇ ಎದ್ದುನಿಂತ. "ತೆಗೆದುಕೊಳ್ಳಿ, ಬರ್ತೀನಿ.... ಸೀತಾರಾಮ್ ಸೀತಾರಾಮ್."

ಬಾಲದೇವ ಗಂಟನ್ನು ಲಕ್ಷ್ಮಿಯ ಕೈಗೆ ಕೊಡುತ್ತಾ ಹೇಳಿದ: "ಕಬ್ಬಿಣದ ಪೆಟ್ಟಿಗೆಯಲ್ಲಿ ಇಡು."

ಲಕ್ಷ್ಮಿ ಬಟ್ಟೆಯ ಗಂಟನ್ನು ಕೈಗೆ ತೆಗೆದುಕೊಂಡು ತಲೆಗೆ ಮುಟ್ಟಿಸಿಕೊಂಡಳು. ನಂತರ ಎದೆಗೆ ಒತ್ತಿಕೊಂಡಳು. ಅವಳು ಒಂದೇ ಸಮನೆ ಬಾವನದಾಸನನ್ನೇ ನಿಟ್ಟಿಸುತ್ತಿದ್ದಳು. ····ಈ ಹರಕಲು ಖದ್ದರ ಅಂಗಿಯನ್ನು ತೊಟ್ಟು ಬಾವನದಾಸ ಚಳಿಗಾಲವನ್ನು ಹೇಗೆ ಕಳೆಯುತ್ತಾನೆ?

"ದಾಸಜೀ····ಈ ಖದ್ದರಿನಿಂದ ಚಳಿ ಸಹಿಸುವುದು ಹೇಗೆ?····ಸ್ವಲ್ಪ ಇರಿ, ಒಂದು ಹಳೆಯ ಕಂಬಳಿ ಇದೆ ತೆಗೆದುಕೊಳ್ಳಿ····" ಲಕ್ಷ್ಮಿಯು ವಿನಯದಿಂದ ಕೇಳಿಕೊಂಡಳು.

"ಬೇಡಮ್ಮಾ" ಬಾವನದಾಸ ಚೀಲವನ್ನು ಭುಜಕ್ಕೆ ತೂಗುಹಾಕಿಕೊಂಡು ಹೇಳಿದ, "ಬೇಡ, ಕಂಬಳಿಯ ಅವಶ್ಯಕತೆಯೇನೂ ಇಲ್ಲ."

ಲಕ್ಷ್ಮಿ ಸುಮ್ಮನಾದಳು····ಬಾವನದಾಸನಿಗೆ ಇನ್ನು ಕಂಬಳಿಯ ಅವಶ್ಯಕತೆ ಇಲ್ಲ. ಇನ್ನು ಅವನಿಗೆ ಯಾವುದರ ಅವಶ್ಯಕತೆಯೂ ಇಲ್ಲ···· ಲಕ್ಷ್ಮಿಗೆ ಎಲ್ಲಾ ಅರ್ಥವಾದಂತೆ ಅನ್ನಿಸಿತು.

ಧರತೀ ಫಾಟೆ ಮೇಘ ಜಲ
ಕಪಡಾ ಫಾಟೆ ಡೋರ್
ತನ ಫಾಟೆ ಕೀ ಔಖದೀ
ಮನ ಫಾಟೆ ನಹಿಂ ಠೌರ್

(ಭೂಮಿ ಬೆಂದರೆ, ಮೇಘದ ಮಳೆಯಿಂದ ಸರಿಹೋಗುತ್ತದೆ. ಬಟ್ಟೆ ಹರಿದರೆ ದಾರದಿಂದ ಹೊಲಿಯಬಹುದು. ದೇಹ ಕೆಟ್ಟರೆ, ಔಷಧಿ ತೆಗೆದುಕೊಳ್ಳಬಹುದು. ಮನಸ್ಸು ಮುರಿದರೆ ಯಾವ ಉಪಾಯವೂ ಇಲ್ಲ.)

"ಒಳ್ಳೇದು ಜೈಹಿಂದ್."

"ಜೈ ಹಿಂದ್."

ಬಾವನದಾಸ ಉರುಳುತ್ತಿರುವಂತೆ ನಡೆದು ಹೋಗುತ್ತಿದ್ದಾನೆ···· ನಾಯಿಗಳು ಬೊಗಳುತ್ತಾ ಅವನನ್ನು ಹಿಂಬಾಲಿಸುತ್ತಿವೆ. ಆದರೆ ಬಾವನದಾಸನಿಗೆ ಇದು ಯಾವುದರ ಕಡೆಯೂ ಗಮನವೇ ಇಲ್ಲ····ನಾಯಿಯೂ ಬಹುಶಃ ಆಶ್ಚರ್ಯದಿಂದ ಸುಮ್ಮನಾಗುತ್ತಿದೆ. ಸ್ವಲ್ಪವೂ ಗದರಿಸಿಕೊಳ್ಳಲೂ ಇಲ್ಲ····

ಇವನೆಂತಹ ಮನುಷ್ಯ? ನಾಯಿ ಬಾವನದಾಸನ ಹಿಂದೆಯೇ ಬಾಲ ಅಲ್ಲಾಡಿಸುತ್ತಾ, ನೆಲ ಮೂಸುತ್ತಾ ಸ್ವಲ್ಪ ದೂರ ಹೋಗುತ್ತದೆ.

ಲಕ್ಷ್ಮಿ ಹೇಳಿದಳು: ''ಬಾವನದಾಸರ ಮನಸ್ಸೇ ಒಡೆದು ಹೋಗಿದೆ.'' ಬಾಲದೇವ ನುಡಿದ: ''ಮನಸ್ಸು ಒಡೆಯೋದೇನು ಬಂತು····ಸ್ವಲ್ಪ ಬೂಟಾಟಿಕೇನೂ ಹೆಚ್ಚು····ಗಂಗೂಲಿ ಕಾಗದಗಳನ್ನು ತೊಗೊಂಡು ಏನು ಮಾಡುತ್ತಾರೆ?····ಬೇರೆಯವರ ಕಾಗದವನ್ನು ಸಭ್ಯರು ಓದುವುದೇ ಇಲ್ಲ. ಅದು ದೋಷವಾಗುತ್ತದೆ····''

ಕೋದರಿಯ ಸ್ಟೇಷನ್ನಿನಲ್ಲಿ ರೈಲಿನಲ್ಲಿ ಕುಳಿತುಕೊಂಡ ಬಾವನದಾಸನಿಗೆ, ತಾನು ತೀರ್ಥಯಾತ್ರೆಗೆ ಹೊರಟಿರುವಂತೆ ಅನ್ನಿಸಿತು····ಜಗನ್ನಾಥಕ್ಕೆ ಹೋಗಬೇಕೆಂದು ಅವನಿಗೆ ಬಹಳ ದಿನಗಳಿಂದ ಆಕಾಂಕ್ಷೆಯಿತ್ತು. ಕೇದಾರನಾಥ್, ಬದರೀನಾಥ್‌ಗಳನ್ನು ಅವನು ನೋಡಿ ಬಂದಿದ್ದ. ಅವನ ಕಣ್ಣುಮುಂದೆ ಛತ್ರಿ ಮತ್ತು ಛಡಿ ಹಿಡಿದು ಹಿಂತಿರುಗುತ್ತಿರುವ ಬಾವನದಾಸನ ಚಿತ್ರ ನಿಂತಿತು

ಜಗರನಥಿಯಾ ತೌ ಭಾಯ್,
ಬಾಬಾ ತೌ ಬಿರಾಜ್ ಉಡಿಯಾ ದೇಸಮೇಂ

(ಒರಿಸ್ಸಾದೇಶದಲ್ಲಿ 'ಜಗನ್ನಾಥ,' ಪ್ರಕಾಶಿಸುತ್ತಿದೆ).

ಒಬ್ಬ ಪ್ರಯಾಣಿಕ ಕೇಳಿದ: ''ಈ ಮಾಘ ಮಾಸದಲ್ಲಿ ಜಗನ್ನಾಥದಿಂದ ಬರುತ್ತಿರುವವರು ಯಾರಣ್ಣಾ?'' ಎರಡನೆಯವ ಹೇಳಿದ: ''ಸ್ವಲ್ಪ ಗಟ್ಟಿಯಾಗಿ ಹಾಡು ಹೇಳಪ್ಪಾ.''

ಬಾವನದಾಸ ಕಿಟಕಿಯಿಂದ ಹೊರಗಡೆ ನೋಡಿದ. ಗದ್ದೆಗಳಲ್ಲಿ ಜನ ಭತ್ತ ಕುಯ್ಯುತ್ತಿದ್ದಾರೆ····ಕಲಕತ್ತಾ ಕಾಂಗ್ರೆಸ್, ಲಕ್ನೋ ಕಾಂಗ್ರೆಸ್, ಬೆಜವಾಡ ಸಾಬರಮತಿ ಆಶ್ರಮ, ಮಹಾತ್ಮಾ ಗಾಂಧೀಜಿಯ ಜನ್ಮಭೂಮಿ ಕಾಠಿಯವಾಡ, ಬೊಂಬಾಯಿ····ರೈಲ್ವೇ ಲೈನಿನಲ್ಲಿ ಕೆಲಸ ಮಾಡುತ್ತಿರುವ ಜನರ ಮುಖ ವಿಭಿನ್ನ ಪ್ರದೇಶದ ಜನಗಳ ಮುಖ—ಅವನ ಕಣ್ಣುಮುಂದೆ ಗುಂಪಾಗಿ ನಿಂತವು···· ಖಗಡಾ ಸ್ಟೇಷನ್ನಿನಲ್ಲಿ ಇಳಿದು ಒಂದುಬಾರಿ ನಾಥಬಾಬುವಿನ ಹತ್ತಿರ ಹೋಗುವ ಆಲೋಚನೆಯಿತ್ತು. ಆದರೆ ನಾಥಬಾಬು ಕಲಕತ್ತೆಗೆ ಹೋಗಿದ್ದಾರೆ. ಖೋಖೀ ಅಕ್ಕ ಮತ್ತು ಚಿಕ್ಕಮ್ಮನೂ ಅವರ ಜೊತೆ ಹೋಗಿದ್ದಾರೆ····ಖೋಖೀ ಅಕ್ಕ ಒಂದು ಸಲ ಬಾವನದಾಸನ ಚಿತ್ರ ಬರೆದಿದ್ದಳು····''ನೀವು ಸುಮ್ಮನೆ

ಕುಳಿತಿರಿ” ಎಂದು ಹೇಳಿ ಕಾಗದ ತೆಗೆದುಕೊಂಡು ಪೆನ್ಸಿಲ್ಲಿನಿಂದ ಚಿತ್ರ ಬರೆದಿದ್ದಳು. ಚಿಕ್ಕಮ್ಮ, ಮಾಯೀಜಿಯಂತೆಯೇ ಮಾತನಾಡುತ್ತಿದ್ದಳು···· ನಾಥಬಾಬು ಇದ್ದರೆ ಬಾವನದಾಸನಿಗೆ ಇಂದು ಅವರಿಂದ ದೊಡ್ಡ ಸಹಾಯ ಸಿಗುತ್ತಿತ್ತು. ಅವರು ತುಂಬಾ ಕಠಿಣ ಮನುಷ್ಯರು. ಸಿಟ್ಟು ಬಂದರಂತೂ ಅವರು ಯಾರನ್ನೂ ಲಕ್ಷಿಸುತ್ತಿರಲಿಲ್ಲ. 'ಕಂಫ್' ಜೈಲಿನ ಸಾಹೇಬರಿಗಂತೂ ಜೀವನಪೂರ್ತಿ ಅವರ ನೆನಪಿರುತ್ತದೆ····ಆದಿನ, ನಾಥಬಾಬುವಿನ ಮುಖ ಮುತ್ತುಗದ ಹೂವಿನಂತೆ ಕೆಂಪಗಾಗಿತ್ತು····ಕಳೆದ ವರ್ಷ ನಾಥಬಾಬು ಮತ್ತು ಚೌಧರಿ, ಬೊಂಬಾಯಿಗೆ ಹೋಗುತ್ತಿದ್ದರು. ಬಾವನದಾಸನೂ ಜೊತೆಗಿದ್ದ····ಮೊಗಲ ಸರಾಯನಲ್ಲಿದ್ದ ಜನರ ಗುಂಪನ್ನು ನೋಡಿ ಜ್ಞಾನ ತಪ್ಪುವಂತಾಯಿತು. ಈ ಕಡೆಯಿಂದ ಆ ಕಡೆಯವರೆಗೆ ಓಡಾಡಿದರೂ ಯಾವ ಡಬ್ಬಿಯೊಳಗೂ ಹೆಜ್ಜೆ ಇಡಲೂ ಜಾಗವಿರಲಿಲ್ಲ. ಗಾಡಿ ಹೊರಡುವುದರಲ್ಲಿ, ಚೌಧರಿ, ನಾಥಬಾಬೂ ಹಾಗೂ ಹೀಗೂ ಒಂದು ಡಬ್ಬಿಯ ಹ್ಯಾಂಡಲ್ ಹಿಡಿದುಕೊಂಡ ಕೂಡಲೇ ಒಳಗಿದ್ದ ಮನುಷ್ಯನೊಬ್ಬ ಸಿಟ್ಟಿನಿಂದ ಗದರಿಸಿದ. “ಬೋರ್ಡ್ ಕಾಣಿಸುತ್ತಿಲ್ಲವೇನು? ಬಂಗಾಳದ ಸದಸ್ಯರಿಗೆ ಇದು ರಿಜರ್ವ ಆಗಿದೆ.”

ನಾಥಬಾಬುವಿಗೂ ಸಿಟ್ಟು ಬಂತು. ಅವರೆಂದರು, “ಚೆನ್ನಾಗೂ ಕಾಣಿಸುತ್ತೆ····ಬಂಗಾಳದಲ್ಲಿ ಈಗ ನಿಮ್ಮಂತಹ ಜನ ಹೆಚ್ಚಾಗುತ್ತಾ ಇದ್ದಾರೆ ಎನ್ನುವುದೂ ಕಾಣಿಸುತ್ತಿದೆ. ನಾವು ಎ.ಐ.ಸಿ.ಸಿ.ಯ ಸದಸ್ಯರು, ನೀವೂ ಎ.ಐ.ಸಿ.ಸಿ.ಯ ಸದಸ್ಯರು····ಆದರೆ ಮನುಷ್ಯತ್ವ····” ಒಳಗಿದ್ದ ಇನ್ನೊಬ್ಬ ಮನುಷ್ಯ ಬಂಗಾಳಿಯಲ್ಲಿ ಹೇಳಿದ, “ದಯವಿಟ್ಟು ಮನುಷ್ಯತ್ವದ ಪ್ರಶ್ನೆ ಎತ್ತಬೇಡಿ ಮಹಾಶಯರೇ. ಕುಳಿತುಕೊಳ್ಳಿ. ನಮಗೆ ಒಂದೇ ಸಲಕ್ಕೆ ತ್ರಿಮೂರ್ತಿಗಳ ದರ್ಶನ ಲಭಿಸುತ್ತಿದೆ····”

ಮಾತಿನ ರೀತಿ ನಗಿಸುವಂತೆಯೇ ಇತ್ತು. ಆದ್ದರಿಂದಲೇ ಎಲ್ಲರೂ ನಕ್ಕರು. ಚೌಧರೀ, ನಾಥಬಾಬು ಮತ್ತು ರೈಲಿನಲ್ಲಿದ್ದ ಎಲ್ಲ ಸದಸ್ಯರೂ ಗಟ್ಟಿಯಾಗಿ ನಕ್ಕಿದ್ದರು····ಮಾತು ನಗುವ ಹಾಗೆಯೇ ಇತ್ತು····ಚೌಧರಿಯವರು ತುಂಬಾ ಉದ್ದವಾಗಿದ್ದರು....ಎಷ್ಟು ಉದ್ದವೆಂದರೆ, ಸಾಮಾನ್ಯವಾಗಿ, ಎತ್ತರದವರು ಎಂದು ಹೇಳಿಸಿಕೊಳ್ಳುವ ಮನುಷ್ಯನೂ ಅವರ ಭುಜಕ್ಕೆ ಬರುತ್ತಿದ್ದ. ನಾಥಬಾಬು ಕುಳ್ಳ ಮನುಷ್ಯರು. ಗುಂಡು ಮುಖ, ಮುಖದ ಮೇಲೆ ಸದಾ ನಲಿದಾಡುವ ತೆಳು ಮುಗುಳ್ನಗೆ; ಇನ್ನು ಮೂರನೆಯ ಮನುಷ್ಯ

ನಂತೂ ಸೇವಕ ಬಾವನದಾಸ. ಯೋಚನೆ ಮಾಡಿ····ನಗುವ ವಿಚಾರವೇ ಅಲ್ಲವೇ?····ಚೌಧರೀ ಮೇಲೆ ಹಾಸಿಗೆಯನ್ನು ಹಾಸಿದ್ದರು. ನಾಥಬಾಬು ಮತ್ತು ಬಾವನದಾಸ ಕೆಳಗಡೆ ಮಲಗಿದ್ದರು····

"ಅಂ? ಖಗಡಾ ಬಂದುಬಿಟ್ಟಿತೇನು? ಸೀತಾರಾಮ್ ಸೀತಾರಾಮ್."

ಖಗಡಾ ಸ್ಟೇಷನ್ನಿನಲ್ಲಿ ಇಳಿದು, ಬಾವನದಾಸ ಒಮ್ಮೆ ಆಕಾಶದ ಕಡೆ ನೋಡಿದ....ಸಂಜೆಯ ಒಳಗೆ ಅವನು ಊರು ತಲುಪಿಬಿಡುತ್ತಾನೆ.... ನಾಥಬಾಬುವಿನ ಭೇಟಿಯಾಗುವುದು ಸಾಧ್ಯವಿಲ್ಲ ಎಂದ ಮೇಲೆ ಅವನು ಇಲ್ಲಿ ಇನ್ಯಾರನ್ನು ಭೇಟಿಯಾಗಲು ಹೋಗಬೇಕು?

ಕಲೀಮುದ್ದೀಪುರದ ಕಡೆಗೆ ನಡೆದ ಬಾವನದಾಸ....ಕಲೀಮುದ್ದೀಪುರ ಪಾಕಿಸ್ತಾನಕ್ಕೆ ಸೇರಬೇಕಾಗಿದ್ದುದು ಹೇಗೋ ಭಾರತದಲ್ಲೇ ಉಳಿದು ಕೊಂಡಿತ್ತು. ಒಂದು ಬಾರಿ ಆ ಹಳ್ಳಿ ಹಿಂದೂಸ್ತಾನದಲ್ಲೇ ಇರಬೇಕೆಂದು ಗಲಾಟೆಯಾಯಿತು....ಮತ್ತೊಮ್ಮೆ ಪಾಕೀಸ್ತಾನದಲ್ಲಿ ಇರಬೇಕೆಂದು ಗಲಾಟೆಯಾಯಿತು....ಹಳ್ಳಿಯ ಹೆಸರೇ ಮುಸಲ್ಮಾನರದ್ದು, ಆದ್ದರಿಂದ ಅದು ಪಾಕಿಸ್ತಾನಕ್ಕೆ ಸೇರಬೇಕು; ಎನ್ನುತ್ತಾರಂತೆ ಪಾಕಿಸ್ತಾನದವರು.... ಒಳ್ಳೇ ಮಕ್ಕಳ ಜಗಳವಾಯಿತು....'ಸೀತಾರಾಮ್ ಸೀತಾರಾಮ್' ಬಾವನ ದಾಸ ಬೇಗ ಬೇಗ ಹೆಜ್ಜೆ ಹಾಕಿದ....ಇಂದು ಏನಾದರೂ ಮಾಡಿ ಸಂಜೆ ಯೊಳಗೆ ಒಂದು ಜಾಗವನ್ನು ತಲುಪಿಯೇ ಬಿಡಬೇಕು. ಆ ಜಾಗದ ಹೆಸರನ್ನು ಈಗವನು ತನ್ನ ಮನಸ್ಸಿನಲ್ಲಿ ತರಲೂ ಇಷ್ಟಪಡುತ್ತಿರಲಿಲ್ಲ....

ನಡೆಯುತ್ತಾ ನಡೆಯುತ್ತಾ ಅವನು ಮಧ್ಯೆ ಮಧ್ಯೆ ನಿಂತು ಉಸಿರೆಳೆದು ಕೊಳ್ಳುತ್ತಿದ್ದ. ತುಂಬಾ ಹೊತ್ತು ಅತ್ತಮೇಲೆ ಮಕ್ಕಳು ಉಸಿರೆಳೆದುಕೊಳ್ಳುತ್ತಾ ರಲ್ಲಾ ಹಾಗೆಯೇ. ಬಾವನನ ಚೀಲದಲ್ಲಿ ಖಂಜರ ಇತ್ತು. ಖಂಜರಕ್ಕೆ ತಗುಲಿಸಿದ್ದ ಸಣ್ಣ ಗೆಜ್ಜೆಗಳು, ಅವನು ನಡೆದಾಗಲೆಲ್ಲಾ ಶಬ್ದ ಮಾಡುತ್ತಾ ಅವನ ನಡಿಗೆಗೆ ಲಯ ಹೊಂದಿಸಿತ್ತು. ಗದ್ದೆಯ ಬದುವಿನ ಮೇಲೆ, ಮೈದಾನ ದಲ್ಲಿ, ರಸ್ತೆಗಳಲ್ಲಿ, ಎತ್ತರ—ತಗ್ಗಿನ ರಸ್ತೆಗಳಲ್ಲಿ ಅವನ ಹೆಜ್ಜೆಗಳು ಮುಂದು ವರಿಯುತ್ತಿದ್ದವು. ಗುರಿ ಹತ್ತಿರವಿದೆ. ಇನ್ನು ಸ್ವಲ್ಪ ದೂರ ಮಾತ್ರ···· ಅರ್ಧ ಹರಿದಾರಿ, ಅಷ್ಟೆ····

····ಜೈ ಮಹಾತ್ಮಾಜೀ, ಜೈ ಬಾಪೂ····ಅಮ್ಮಾ, ಅಮ್ಮಾ···· ಧನ್ಯನಾದೆ ಪ್ರಭು····ಒಂದು ಪರೀಕ್ಷೆಯನ್ನು ದಾಟಿಸಿ ಬಿಟ್ಟೆ····ಇಲ್ಲೇ····

ಇದೇ ಗುಡ್ಡದ ಕೆಳಗೇ ಇದೇ ಹಸಿ ರಸ್ತೆಯ ಹತ್ತಿರ,····ಕಂಠ ಒಗೆದು ಬಿಡು ಮನಸ್ಸೇ.

····ನಾಗರದ ನದಿಯ ದಡ. ನಾಗರ ನದಿಯನ್ನು ಎರಡು ದೇಶದವರೂ ದೊಡ್ಡ ಸಾಕ್ಷಿಯನ್ನಾಗಿ ಮಾಡಿಕೊಂಡಿದ್ದರು. ನಾಗರ ನದಿಯೇ ಸೀಮಾ ರೇಖೆ····ನದಿಯ ಒಂದು ದಡದಲ್ಲಿ ಹಿಂದೂಸ್ತಾನ, ಇನ್ನೊಂದು ದಡದಲ್ಲಿ ಪಾಕೀಸ್ತಾನ. ನಾಗರ ನದಿ, ಹನ್ನೆರಡು ತಿಂಗಳೂ ತುಂಬಿ ಹರಿಯುತ್ತದೆ, ಒಣಗುವುದೇ ಇಲ್ಲ. ಬಹುಶಃ ಆದ್ದರಿಂದಲೇ ಇರಬೇಕು····ನಕ್ಷತ್ರಪುಂಜ ಮೇಲೆ ಬಂದಿತು.

ಮಾಘ ಮಾಸದ ನಡುಕ ಹುಟ್ಟಿಸುತ್ತಿದ್ದ ಚಳಿ.... ಪಶ್ಚಿಮದ ಗಾಳಿಯೂ ಬೀಸುತ್ತಿತ್ತು. ಇಂದಿನ ರಾತ್ರಿ ಬದರೀನಾಥದಂತೆ ಇಲ್ಲಿಯೂ ಹಿಮ ಸುರಿಯುತ್ತ ದೇನೋ! ನಕ್ಷತ್ರ ಪುಂಜ ತಲೆಯ ಮೇಲೆ ಬಂದಿತ್ತು.... ಆದರೆ ಬಾವನದಾಸ ನಿರಾಶನಾಗಲಾರ. ಸೂರ್ಯ ಹುಟ್ಟುವವರೆಗೂ ಅವನು ನಿಲ್ಲುವುದಿಲ್ಲ. ಈ ರಸ್ತೆ ಯಲ್ಲಿ ಗಾಡಿ ಬರುವುದಿಲ್ಲ.... ಅವನಿಗೆ ದೂರದ ತುಂಬಾ ದೂರದ ಹಳ್ಳಿಯಲ್ಲಿ ಬೆಳಕು ಕಂಡಿತು.... ಬಾವನದಾಸ ಎರಡು ಕೈಗಳನ್ನು ಉಜ್ಜಿಕೊಂಡು ಬಿಸಿಮಾಡಿ ಕೊಂಡ, ಹೌದು....ಗಾಡಿಗಳು ಬರುತ್ತಿವೆ, ಐವತ್ತು ಅರವತ್ತು ಗಾಡಿಗಳು ಬರುತ್ತಿವೆ....ಬಟ್ಟೆ, ಸಕ್ಕರೆ ಮತ್ತು ಸೀಮೆಂಟ್ ತುಂಬಿದ ಗಾಡಿಗಳು.... ಈ ಸುದ್ದಿ ತಿಳಿಸಿದವನ ಹೆಸರನ್ನು, ಅವರು ಪ್ರಾಣ ಹೋದರೂ ಹೇಳಲಾರರು. ಬಾವನ ಗಾಂಧೀಜಿಯ ಮೇಲೆ ಆಣೆ ಇಟ್ಟಿದ್ದಾನೆ. ಬಡಪಾಯಿ....ಆಮೇಲೆ ಅವನ ಕೆಲಸ ಹೋಗಿಬಿಡುತ್ತದೆ.....ಕಟಿಹಾರದ ದುಲಾರಚಂದ್ ಕಾಪರಾ ಜೂಜಿನ ಕಂಪನಿಯವನು. ಅವನ ಅಂಗಡಿಯ ಮುಂದೆಯೇ, ನೇವಿಲಾಲ್ ಛೋಲಾಬಾಬು ಮತ್ತು ಬಾವನದಾಸ ಫಾರಬಿಸ್‌ಗಂಜಿನ ಜಾತ್ರೆಯಲ್ಲಿ ಹಿಂದೆ ಪಿಕೆಟಿಂಗ್ ಮಾಡಿದ್ದರು. ಬರೀ ಅವನು ಜೂಜು ಆಡಿಸುತ್ತಿದ್ದುದು ಮಾತ್ರವಲ್ಲ, ಪಿಕ್‌ಪಾಕೆಟ್ ಮಾಡಿಸುತ್ತಿದ್ದ. ಅಷ್ಟೇ ಅಲ್ಲ, ಮೋರಂಗಿಯ ಹುಡುಗಿಯರ, ಮೋರಂಗಿಯ ಮದ್ಯ–ಅಫೀಮುಗಳ ವ್ಯಾಪಾರವನ್ನು ಮಾಡುತ್ತಿದ್ದ....ಅವನು ಈವತ್ತು ಕಟಿಹಾರ ಜಿಲ್ಲೆಯ ಕಾಂಗ್ರೆಸ್ ಕಾರ್ಯದರ್ಶಿ.... ಈಗ ಬರಬೇಕಾಗಿರು ವುದು ಅವನ ಗಾಡಿಗಳೇ. ಸಪ್ಲೈ ಇನ್ಸ್‌ಪೆಕ್ಟರ್ ಕಟಿಹಾರ ಸ್ಟೇಷನ್ನಿನ ಪೋಲೀಸ್ ಇನ್ಸ್‌ಪೆಕ್ಟರ್ ಮತ್ತು ಈ ಕಡೆ ಕಲೀಮುದ್ದೀಪುರದ ಹವಾಲ್ದಾರ್ ಇವರೆಲ್ಲರಿಗೂ ಎಂಟಾಣೆ ಭಾಗ ಮತ್ತು ದುಲಾರಚಂದ ಕಾಪಾರಾನಿಗೆ ಎಂಟಾಣೆ ಭಾಗ ಎಂದು ನಿಶ್ಚಯವಾಗಿತ್ತು. ಗಾಡಿಗಳು ಸರಿಯಾದ ಮಾರ್ಗದಲ್ಲಿ ಬರುವುದಿಲ್ಲ.

ಕಳ್ಳಮಾರ್ಗದಲ್ಲಿ ಬರುತ್ತಿವೆ. ಅನಂತರ ಅತ್ತ ಕಡೆಯ ವ್ಯಾಪಾರಿಗಳಿಗೆ ಸಾಮಾನುಗಳನ್ನು ತಲುಪಿಸುತ್ತಾರೆ. ಆ ಕಡೆಯ ಅಧಿಕಾರಿಗಳಿಗೂ ಇದೇ ರೀತಿ ಭಾಗ ಸಿಗುತ್ತದೆ. ಲಕ್ಷಾಂತರ ರೂಪಾಯಿಗಳ ವ್ಯವಹಾರ—ಗಾಡಿಗಳು ಬಂದವು. ಹೌದು ಗಾಡಿಗಳೇ....ಏರು ತಗ್ಗಿನ ರಸ್ತೆಯಲ್ಲಿ ಚಕ್ರಗಳ ಶಬ್ದ ಕೇಳಿಸುತ್ತಿವೆ....ಹೌದು....

'ಜೈ ಭಗವಾನ್, ಜೈ ಸೀತಾರಾಮ್ ಸೀತಾರಾಮ್ ಸೀತಾರಾಮ್....ಶಕ್ತಿಕೊಡು ಪ್ರಭು. ಪರೀಕ್ಷೆಯಲ್ಲಿ ಯಶಸ್ವಿಯಾಗುವಂತೆ ಅನುಗ್ರಹಿಸು ಬಾಪೂ; ಬಾಪೂ,....ಅಮ್ಮ, ಅಮ್ಮ' ಚೀಲದ ಒಳಗೆ ಬಾವನದಾಸ ಏನನ್ನೋ ಹುಡುಕಿದ.

ಅವನು ಚೀಲವನ್ನು ಭುಜಕ್ಕೆ ತಗುಲಿ ಹಾಕಿಕೊಂಡು ಎದ್ದು ನಿಂತ....ನದಿಯ ತೀರದಲ್ಲಿ ಯಾವುದೋ ಪಕ್ಷಿ ಚಿಲಿಪಿಲಿಗುಟ್ಟಿತು....ಖಂಜರಿಯ ಗೆಜ್ಜೆ ಕೊಂಚ ಶಬ್ದ ಮಾಡಿತು.

"ಭಗವಂತ ಮಹಾತ್ಮಾಜೀ....ಬಾಪೂ, ಅಮ್ಮಾ, ನನ್ನ ನಿನ್ನ ಹತ್ತಿರ ಕರೆದುಕೋ ತಂದೆ, ಇನ್ನು ಈ ಪ್ರಪಂಚದಲ್ಲಿ ಇದ್ದು ಏನು ಮಾಡಲಿ?....ಧರ್ಮ ನಾಶವಾಗಿ ಹೋಗಿದೆ...."

ಗಾಡಿಗಳು ಬಂದವು, ತುಂಬಾ ಹತ್ತಿರ ಬಂದವು.

"ಅಯ್ಯೋ ಅಯ್ಯೋ....ಭೂತ...." ಮುಂದಿನ ಗಾಡಿಯವನು ಹೆದರಿ, ಮೆಲ್ಲನೆ ಧ್ವನಿಯಲ್ಲಿ ಪಕ್ಕದವನಿಗೆ ಹೇಳಿದ: "ಭೂತ."

ಎತ್ತುಗಳು ಬೆದರಿದವು. ಕಟ ಕಟ ಶಬ್ದ ಮಾಡುತ್ತಾ ಎಲ್ಲಾ ಗಾಡಿಗಳು ನಿಂತವು.

"ಸೀತಾರಾಮ್ ಸೀತಾರಾಮ್."

ಕಲೀಮದ್ದೀಪುರದ ಸಿಪಾಯಿ ಮುಂದೆ ಬರುತ್ತಿದ್ದ. ಅವನು ಗಂಟಲು ಸರಿಪಡಿಸಿಕೊಂಡು ಕೇಳಿದ: "ಯಾರು?" ಪಕ್ಕದ ಪೊದೆಯಿಂದ ಹೊರಗಡೆ ಬಂದು ನಿಂತು ಬಾವನದಾಸ ಉತ್ತರ ಕೊಟ್ಟ. "ನಾನು, ಸೇವಕ ಬಾವನದಾಸ್."

"ಬಾವನದಾಸ್" ಸಿಪಾಯಿಯ ಬಾಯಿ ತೆರೆದದ್ದು ತೆರೆದುಕೊಂಡೇ ಉಳಿಯಿತು....ಈ ಮನುಷ್ಯನನ್ನು ಅವನು ಮೂವತ್ತನೆಯ ಇಸವಿಯಿಂದಲೇ ಬಲ್ಲ....

ಸಿಪಾಯಿ ತಲೆಗೆ ರುಮಾಲಿನ ಅಂಚಿನಿಂದ ಮುಖ ಮುಚ್ಚಿಕೊಂಡ— ಬಾವನದಾಸ ನಕ್ಕು ನುಡಿದ: "ಮುಖ ಯಾಕೆ ಮುಚ್ಚಿ ಕೊಳ್ಳುತ್ತೀರಿ? ರಾಮ ಬುಝಾವನಸಿಂಹ. ಈವತ್ತು ಗುಟ್ಟಿಲ್ಲದೆ ಆಟ ನಡೆದು ಹೋಗಲಿ ಮುಖ ಮುಚ್ಚಿಕೊಳ್ಳಬೇಡಿ."

"ದಾಸಜೀ. ನಮ್ಮದೇನು ತಪ್ಪು? ನಿಮಗೆ ಗೊತ್ತೇ ಇದೆ...."

"ಸಿಂಘಜೀ ಈಗ ಮಾತು-ಕಥೆ ಏನೂ ಬೇಡ. ಗಾಡಿಗಳೆಲ್ಲಾ ಖಗಡಾಗೇ ಹಿಂತಿರುಗಲಿ....ಹಿಂತಿರುಗಿಸಿ...."

"ಗಾಡಿ ಹಿಂತಿರುಗುವುದಿಲ್ಲ."

"ಹಾಗಾದರೆ ನಾನಿಲ್ಲೇ ನಿಂತಿರುತ್ತೇನಿ...."

ಎರಡೂವರೆ ಸಾವಿರ ರೂಪಾಯಿಗಳು ಸಿಕ್ಕಿವೆ! ರಾಮುಬುಝಾವನಸಿಂಹ ಈಗ ಏನು ಮಾಡುವುದು?

"ದಾಸಜೀ, ಸ್ವಲ್ಪ ನಿಂತಿರಿ....ನಾನು ತಕ್ಷಣ ಬರುತ್ತೇನೆ...."

"ಒಳ್ಳೇದು ಪರದೆಯ ಹಿಂದಿರುವ ಜನರನ್ನೆಲ್ಲಾ ಕರೆದುಕೊಂಡು ಬನ್ನಿ... ಹೋಗಿ...."

ಕಲೀಮದ್ದೀಪುರದಲ್ಲಿ ಇಳಿದುಕೊಳ್ಳಲು ಒಂದು ಬಂಗಲೆಯಿದೆ. ಅಧಿಕಾರಿಗಳೆಲ್ಲಾ ಇಳಿದುಕೊಳ್ಳುತ್ತಿದ್ದುದು ಅಲ್ಲೇ. ಅದು ಬೊಂಬು ಹುಲ್ಲಿನ ದೊಡ್ಡ ಮನೆ. ಹಳ್ಳಿಯ ಹೊರಗಡೆ ಇದೆ.

ಆ ಬಂಗಲೆಯಲ್ಲಿ ಸಪ್ಲೈ ಇನ್ಸ್‌ಪೆಕ್ಟರ್, ದುಲಾರಚಂದ್ ಕಾಪರಾ ಮತ್ತು ಕಲೀಮದ್ದೀಪುರದ ಹವಾಲ್ದಾರರು ಟೇಬಲ್ಲಿನ ಸುತ್ತ ಕೂತು ಮೋರಂಗಿಯ ಮದ್ಯ ಸೇವಿಸುತ್ತಿದ್ದರು....ಕಲೀಮದ್ದೀಪುರ ಬಂಗಲೆಯ ಅಡಿಗೆಯವನ ಕೈಯಿಂದ ಕೋಳಿಯ ಅಡಿಗೆಯನ್ನು ತಿಂದವನು ಅವನಿಗೆ ಮನಸ್ಸು ಬಿಚ್ಚಿ ಭಕ್ಷೀಸ್ ಕೊಡದೆ ಹೋಗಲಾರ!

ಸಪ್ಲೈ ಇನ್ಸ್‌ಪೆಕ್ಟರ್ ಸಾಹೇಬರು ಲೋಟದಲ್ಲಿ ಮದ್ಯ ಸುರಿದುಕೊಳ್ಳುತ್ತಾ ನಕ್ಕರು: "ಥತ್ ಈ ಕೋಳಿ ಮಾಂಸ ತಿಂದರೆ ಶಾಖ ಬರೋದೇ ಇಲ್ಲ;···· ಹವಾಲ್ದಾರ ಸಾಹೇಬರೇ····ಯಾವುದಾದರೂ ಎರಡು ಜಡೆಯ ಕೋಳಿ····"

"ಏನು ಹೇಳಲಿ? ಮಹಾತ್ಮಾಜೀಯ ಶ್ರಾದ್ಧದ ಊಟ ಮಾಡೋದಕ್ಕೆ ಎಲ್ಲರೂ ಹೋಗಿಬಿಟ್ಟಿದ್ದಾರೆ."

ದುಲಾರಚಂದ್ ಕಾಪರಾ ಹೇಳಿದ, "ಹೂಂ.... ಹೀಗೆ ಅಂತ ತಿಳಿದಿದ್ದಿದ್ರೆ ಕಟಿಹಾರದಿಂದಲೇ ಇಬ್ಬರು ನಿರಾಶ್ರಿತೆಯರನ್ನು ಹಿಡಿದುಕೊಂಡು ಬರಬಹುದಾಗಿತ್ತು. ಎಲ್ಲಾ ಮಜಾ ಹಾಳಾಯಿತು...."

ಸಪ್ಲೈ ಇನ್ಸ್‌ಪೆಕ್ಟರ್ ಚತುರಾನಂದಸಿಂಹ ಕೋಳಿಯ ಕಾಲನ್ನು ಬಾಯಿಗೆ ಹಾಕಿಕೊಂಡು ಅಗಿದ. ಹೊರಗಡೆ ಸೈಕಲ್ಲಿನ ಶಬ್ದವಾಯಿತು.

"ಯಾರು?"

"ಸಲಾಂ, ನಾನು ರಾಮಬುಝಾವನಸಿಂಹ."

"ಏನು ಸಮಾಚಾರ?"

"ಎಲ್ಲಾ ನಾಶವಾಯಿತು.—ಬಾವನದಾಸ...."

"ಏನಂದಿರಿ? ಬಾವನದಾಸನೇ? ಎಲ್ಲಿ?...."

....ಎಲ್ಲರೂ ಮೌನವಾದರು. ಅಡಿಗೆಯವನು ಸಂಜ್ಞೆಯ ಮೂಲಕ ಹವಾಲ್ದಾರನಿಗೆ ತಿಳಿಸಿದ: "ಸಿಗುತ್ತಾರೆ ಜಡೆಯ ಕೋಳಿಗಳು....ಆದರೆ...." ತಡೆದು ಎರಡು ಕೈಗಳಿಂದಲೂ ಬೆರಳುಗಳನ್ನು ತೋರಿಸಿದ.

ಹವಾಲ್ದಾರರು ಹೇಳಿದರು: "ಸ್ವಲ್ಪ ಇರು, ಈಗ ನೀನು ಹೊರಗಡೆ ಹೋಗು."

"ಈಗ ಏನಂತೆ?" ಎಲ್ಲರೂ ಒಟ್ಟಿಗೆ ಕೇಳಿದರು.

"ಒಬ್ಬನೇ ಇದಾನೋ, ಅಥವಾ...."

"ಒಬ್ಬನೇ ಒಬ್ಬ."

"ಹಾಗಾದರೆ ಇದರ ಅರ್ಥ ತಿಳೀತೇನು?"

"ದುಲಾರಚಂದ್‌ಜೀ....ಕಾಪರಾಜೀ...."

ಎಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ದುಲಾರಚಂದ ಶೀಷೆಯಿಂದ ಪಾತ್ರೆಗೆ ಮದ್ಯ ಸುರಿದುಕೊಂಡು ಗಟಗಟನೇ ಕುಡಿದ. ಎಲ್ಲರೂ ಅವರ ಕಡೆಗೆ ಆಶೆ ತುಂಬಿದ ಕಣ್ಣುಗಳಿಂದ ನೋಡಿದರು...."ನಾನು ಪಂಜಾಬಿ....ಆದರೆ ಮುಂದೆ ನೀವೇ ಜವಾಬ್ದಾರರು....ನಾನು ನನ್ನ ಕೆಲಸ ಮಾಡಿ ಮುಗಿಸಿ ಬಿಡುತ್ತೇನೆ...."

....ಸೀ ಎನ್ನುತ್ತಾ ಪಶ್ಚಿಮದ ಗಾಳಿ ಬೀಸುತ್ತಿತ್ತು. ಹವಾಲ್ದಾರ ಸೈಕಲ್ಲಿನ ಘಡಲು ತುಳಿಯುತ್ತಾ ಹೇಳಿದ. "ಅಕ್ಕಪಕ್ಕದ ಹಳ್ಳಿಯವರ ವಿಚಾರ ಏನೂ ಚಿಂತೆ ಮಾಡಬೇಡಿ....ಸರಹದ್ದಿನ ಆ ಕಡೆ ಈ ಕಡೆ ರಾತ್ರಿಯ ಹೊತ್ತಿನಲ್ಲಿ ಯಾರಾದರೂ ಹೋದರೆ ಅವರ ಮೇಲೆ ಗುಂಡು ಹಾರಿಸುತ್ತೇವೆಂದು ಮೊದಲೆ ಘೋಷಣೆ ಮಾಡಿ ಆಗಿದೆ...."

ಬಾವನದಾಸ ಮಧ್ಯ ರಸ್ತೆಯಲ್ಲಿ ಕಲ್ಲಿನ ವಿಗ್ರಹದಂತೆ ನಿಂತಿದ್ದ.

ದುಲಾರಚಂದ ಕಾಪರ ನೋಡಿದ. "ಹೌದು ಬಾವನದಾಸನೇ."

"ಯಾರು" ಕಾಪರಾಜೀ ಗಾಡಿಯ ಹಿಂದಿನಿಂದ ಯಾಕೆ ಇಣಕಿ ನೋಡುತ್ತಿದ್ದೀರಿ? ಎದುರಿಗೆ ಬನ್ನಿ...." ಬಾವನದಾಸ ನಕ್ಕ.

"ಬಾವನದಾಸ ರಸ್ತೆ ಬಿಟ್ಟುಬಿಡು. ಗಾಡಿ ಹೋಗುವುದಕ್ಕೆ ಬಿಡು."

"ಮೊದಲು ನೀವು ಎದುರಿಗೆ ಬನ್ನಿ. ಗಾಡಿಯನ್ನು ದಾಟಿಸಿ. ನೀವೂ ಕಾಂಗ್ರೆಸ್ಸಿನ ಸದಸ್ಯರು, ನಾನೂ ಸದಸ್ಯ. ಲೆಕ್ಕದ ಪುಸ್ತಕ ತೆರೆದಿದೆ. ನಮ್ಮ ನಮ್ಮ ಲೆಕ್ಕ ತೀರಿಸಿಬಿಡೋಣ....ಇಂದಿನಿಂದ ಈ ಪವಿತ್ರ ದಿನಕ್ಕೆ ಕಳಂಕ ತಗಲುವುದಕ್ಕೆ ನಾನು ಆಸ್ಪದ ಕೊಡುವುದಿಲ್ಲ."

ಇವನೊಂದಿಗೆ ತಲೆ ಚಚ್ಚಿಕೊಳ್ಳುವುದು ನಿಷ್ಪ್ರಯೋಜಕ ಎಂದು ಕಾಪರಾಗೆ ಗೊತ್ತೇ ಇತ್ತು. ಅವನು ಹವಾಲ್ದಾರನ ಕಿವಿಯಲ್ಲಿ ಏನೋ ಹೇಳಿದ. ನಂತರ ಗಟ್ಟಿಯಾಗಿ ಕೂಗಿದ: "ಇಸ್ಪರಿಂಗ್ ಖಾನ್ ಇಲ್ಲಿ ಬಾ...."

ಈ ಇಸ್ಪರಿಂಗ್ ಖಾನ್ ಕಾಪರಾನ ಸ್ವಂತ ಮನುಷ್ಯ. ಒಳ್ಳೇ ಕರ್ತವ್ಯಶೀಲ ವ್ಯಕ್ತಿ....ಒಂದು ಗಾಡಿಯಿಂದ ಇಳಿದು ಬಂದು, ಮುಂದಿನ ಗಾಡಿಯಲ್ಲಿ ಮಾತಿಲ್ಲದೆ ಕುಳಿತ.

"ಬಾವನ ದಾಸ.... ನನ್ನ ಮಾತು ಒಪ್ಪಿಕೋ...."

"......"

"ಗಾಡಿ ಬಿಡಯ್ಯಾ ಖಾನ್."

ಗಾಡಿಗೆ ಕಟ್ಟಿದ್ದ ಎರಡು ಎತ್ತುಗಳು ಆಶ್ಚರ್ಯದಿಂದ ಬೆಚ್ಚಿದವು. ಬೆದರಿದವು. ಮೂಗಿನಿಂದ ಶಬ್ದಮಾಡಿ ಮುಂದೆ ಹೋಗಲು ಅಸಮ್ಮತಿಯನ್ನು ಸೂಚಿಸಿದವು....ಕಾಪರಾ ಒಂದು ಎತ್ತಿನ ಬಾಲ ಹಿಡಿದು ತಿರುಚಿದ. ಮೂಳೆಯ

ಮೇಲೆ ಬಿಗಿದ . . . . ಆದರೆ ಎತ್ತುಗಳು ರಸ್ತೆ ಬಿಟ್ಟು, ಪಕ್ಕದಿಂದ ಗಾಡಿಯನ್ನು ಎಳೆದುಕೊಂಡು ಓಡಿದವು.

ಎರಡನೆಯ ಗಾಡಿ . . . . ಒಂದು ಎತ್ತನ್ನು ಹವಾಲ್ದಾರ, ಇನ್ನೊಂದನ್ನು ಕಾಪರಾ ಬಾಲತಿರುಚಿ ಮುಂದೆ ಬಿಡುತ್ತಿದ್ದರು. ಗಾಡಿಯವನು ಅವಾಕ್ಕಾಗಿ ಕೈಯ್ಯಲ್ಲಿ ಹಗ್ಗ ಹಿಡಿದು ಕುಳಿತಿದ್ದ . . . . ಇದೇನು ನಡೆಯುತ್ತಿದೆ ?

ಎತ್ತಿನ ಗಾಡಿ ಮುಂದೆ ಹೊರಟು ಹೋಯಿತು. ದಾಟಿ ಹೋಯಿತು. ಬಾವನದಾಸ ಮಧ್ಯ ರಸ್ತೆಯಲ್ಲಿ ನಿಂತಿದ್ದ, ಗಾಡಿಗಳು ಅವನ ಅಕ್ಕ ಪಕ್ಕ ಹೋರಟು ಹೋದವು. ಎತ್ತುಗಳು ಬೆದರಿದವು ನಿಜ . . . . ಆದರೆ? . . . .

ಮೂರು—ನಾಲ್ಕು—ನಾಲ್ಕು ಗಾಡಿಗಳು.

ಈಗ ಬಾವನದಾಸ ಎತ್ತಿನ ಮುಂದೆ ಸರಿಯಾಗಿ ಹೋಗಿ ನಿಂತ. ಎತ್ತು ಅವನನ್ನು ತಳ್ಳಿ ಮುಂದೆ ಹೋಯಿತು. ಅವನು ರಸ್ತೆಯ ಮೇಲೆ ಉರಳಿದ . . . . ಸರಿಯಾಗಿ ಚಕ್ರದ ಕೆಳಗೆ ಉರುಳಿದ . . . .

. . . . ಬಾಪೂ—ಅಮ್ಮಾ . . . .

ಗಾಡಿ ದಾಟಿತು. ಕಟ್—ಕರ್‍ರ್‍ಟ್—ಕಟ್ !

ಗಾಡಿಗಳು ದಾಟಿ ಹೋದವು : ಐವತ್ತು ಗಾಡಿಗಳು.

ಕೊನೆಯ ಗಾಡಿ ಮುಂದೆ ಹೊರಟುಹೋದ ಮೇಲೆ ಹವಾಲ್ದಾರ ಮತ್ತು ರಾಮಬುಝಾವನಸಿಂಹರಿಬ್ಬರೂ ಸೇರಿ ಬಾವನನ ಚೂರುಚೂರಾಗಿದ್ದ, ರಕ್ತದ ಕೊಚ್ಚೆಯಲ್ಲಿ ತೋಯ್ದು ಹೋಗಿದ್ದ ಹೆಣವನ್ನು ಹೊತ್ತುಕೊಂಡು ನಡೆದರು. . . . ನಾಗರ ನದಿಯ ಆ ಕಡೆ, ಪಾಕೀಸ್ತಾನದಲ್ಲಿ ಎಸೆಯಬೇಕು. ಈ ಕಡೆ ಬೇಡ. . . ಖಂಡಿತ ಬೇಡ. . . . .

ದುಲಾರಚಂದ ಕಾಪರಾ ಬಾವನನ ಚೀಲ ಹೊತ್ತುಕೊಂಡು ಅವರ ಹಿಂದೆ ಹಿಂದೆ ನಡೆದ.

ನಾಗರ ನದಿಯನ್ನು ದಾಟುವಾಗ ಬಾವನನ ಕೊರಳಿನಲ್ಲಿದ್ದ ತುಳಸೀಮಾಲೆ ನದಿಯ ಹರಿಯುತ್ತಿದ್ದ ಪ್ರವಾಹದಲ್ಲಿ ಬಿದ್ದುಬಿಟ್ಟಿತು. ಸೀತಾರಾಮ್ !

ಬೆಳಗಿನ ಜಾವ ನಾಲ್ಕು ಗಂಟೆಯ ಸಮಯದಲ್ಲಿ ಪಾಕೀಸ್ತಾನಿ ಸೈನಿಕರು ಗಸ್ತು ತಿರುಗುತ್ತಾ ಬಂದಾಗ ನೋಡಿದರು—ಹೆಣ !

"ಅರೆ ಇದು ಆ ಕಡೆಯವರಿಗೆ ಸೇರಿದ ಕುಳ್ಳನ ಹೆಣ. ಇಲ್ಲಿಗೆ ಹೇಗೆ ಬಂತು?...ಸರಿ ಸರಿ. ತಿಳಿಯಿತು...ಎತ್ತಿಕೊಳ್ಳಯ್ಯಾ ಹನೀಫ್, ಜುಮ್ಮಾನ್ ಇದನ್ನು ಆ ಕಡೆ ಸಾಗಿಸು."

ಬಾವನನ ತಣ್ಣನೆಯ ಹೆಣ ಕೈಚೀಲದ ಜೊತೆಗೆ ಮತ್ತೆ ಮೇಲೆದ್ದಿತು.

ಬಾವನ ಎರಡು ಸ್ವತಂತ್ರ ರಾಷ್ಟ್ರಗಳ, ಹಿಂದೂಸ್ತಾನ ಮತ್ತು ಪಾಕೀಸ್ತಾನ ಗಳ, ಪ್ರಾಮಾಣಿಕತೆ, ಮನುಷ್ಯತ್ವಗಳನ್ನು ಎರಡು ಹೆಜ್ಜೆಗಳಲ್ಲೇ ಅಳೆದುಬಿಟ್ಟ.

ನಾಗರ ನದಿಯು ಮಧ್ಯೆ ಬಂದಾಗ ಪಾಕೀಸ್ತಾನದ ಪೋಲೀಸ್ ಆಫೀಸರ್ ಹೇಳಿದ: "ನದಿಯಲ್ಲೇ ಹಾಕಿಬಿಡಿ. ಇವನ ಚೀಲಮಾತ್ರ ಆ ದಂಡೆಯ ಮೇಲಿನ ಮರಕ್ಕೆ ತೂಗುಹಾಕಿ. ಬೇಗ...."

ನಾಗರ ನದಿಯ ಪ್ರವಾಹ ತಟಕ್ಕನೆ ಚಂಚಲವಾಯಿತು. ಸಿಪಾಹಿ ಖಂಜರಿ ಯನ್ನು ಎಸೆಯುತ್ತಾ ಹೇಳಿದ. "ಖಂಜರ ಬಾರಿಸುತ್ತಾ ರಘುಪತಿ ರಾಘವ ಹಾಡುತ್ತಾ ಇರಪ್ಪಾ."....

## 21

ಮೋರೀಗಂಜ್ ಗ್ರಾಮದ ಮಾಲೀಕ, ಏಕಮಾತ್ರ ಜಮೀನ್ದಾರ, ತಹಸೀಲ್ದಾರ ವಿಶ್ವನಾಥ ಪ್ರಸಾದರ ಕಣಜವನ್ನು ನೋಡಿ.....ಯಾವ ಜಾಗ ದಲ್ಲಿ, ಗಾಂಧೀಜಿಯ ಶ್ರಾದ್ಧದ ದಿನ, ಹರಿಜನರೊಂದಿಗೆ ಸಹಪಂಕ್ತಿಭೋಜನ ಮಾಡಿದ ಸ್ಥಳವಷ್ಟರಲ್ಲೂ ಕಣಜವನ್ನು ಮಾಡಿದ್ದರು ತಹಸೀಲ್ದಾರರು ಹತ್ತು ಬೀಘಗಳಷ್ಟು ಪ್ರದೇಶ!

ರಾಮಕೃಪಾಲಸಿಂಹ, ತಮ್ಮ ಹತ್ತಿರ ಅಳಿದುಳಿದಿದ್ದ ಜಮೀನನ್ನು, ಫಸಲಿನ ಸಮೇತ, ತಹಸೀಲ್ದಾರರ ಬಳಿ ಬಡ್ಡಿಗೆ ಅಡವಿಟ್ಟು ತೀರ್ಥ ಯಾತ್ರೆ ಮಾಡಲು ಹೊರಡುತ್ತಿದ್ದಾರೆ—ಕಾಶಿ, ಕೇದಾರ ಎಲ್ಲಿಯವರೆಗೆ ಸಾಧ್ಯವಾದರೆ ಅಲ್ಲಿಯವರೆಗೆ ಹೋಗುವುದು. ತಹಸೀಲ್ದಾರರು ಹೇಳಿದರು. "ಬಾಕಿ ಹಣವನ್ನು ಯಾವ ಊರಿನಿಂದ ಕಾಗದ ಬರೆದರೆ, ಅಲ್ಲಿಗೆ ಕಳುಹಿಸಿ ಕೊಡುತ್ತೇನೆ."

ಬಾಕಿ ಖರ್ಚು, ಮನೆಯ ಖರ್ಚು, ಚಳಿಗಾಲಕ್ಕೆ ಬಟ್ಟೆಗೆ, ಸಕಲದೀಪನಿಗೆ ಪ್ರಾಯಶ್ಚಿತ್ತ ಮಾಡಿಸುವುದಕ್ಕೆ ಮತ್ತು ಸತ್ಯನಾರಾಯಣನ ಪೂಜೆಗೆಂದು ಖೇಲಾವನಸಿಂಹ ಇನ್ನೂರು ರೂಪಾಯಿಗಳನ್ನು ಕೇಳಲು ತಹಸೀಲ್ದಾರರ ಹತ್ತಿರ ಹೋದ. ತಹಸೀಲ್ದಾರರು ಕೈಯ್ಯಲ್ಲಿ ಒಂದು ಕಾಸೂ ಇಲ್ಲವೆಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಭತ್ತ, ಹಿಂದುಗಡೆಯಿದ್ದ ಕುಯ್ಲಿಗೆ ಸಿದ್ಧವಾಗಿದ್ದ ಮನೆಯ ಜಮೀನನ್ನು ಬರೆದು ಕೊಟ್ಟ ಮೇಲೆ ಮುನ್ನೂರು ರೂಪಾಯಿಗಳನ್ನು ಕೊಟ್ಟರು.

ಒಟ್ಟನಲ್ಲಿ ಎಲ್ಲಾ ಸೇರಿ, ಕಡಮೆಯೆಂದರೂ ಐದು ಸಾವಿರ ಮಣ ಭತ್ತ ವಾಗುತ್ತದೆ!

ತಂತ್ರಿಮಾಕ್ಷತ್ರಿಯ, ಕುರ್ಮಕ್ಷತ್ರಿಯ, ಕುಶವಾಹಕ್ಷತ್ರಿಯ, ಗಹಲೋರ ಕ್ಷತ್ರಿಯ ಸಂಗಡದವರೆಲ್ಲಾ ಕೂಲಿಗಾರರ ಹಟ್ಟಿಯನ್ನು ಮಾಘಮಾಸದಲ್ಲೇ ಕಟ್ಟಿಕೊಂಡುಬಿಟ್ಟಿದ್ದಾರೆ.....ಕಣಜದಲ್ಲಿ ಭಾಗ ಸಿಗುವ ಭತ್ತದಲ್ಲಿ ನಾಲ್ಕನೆಯ ಒಂದು ಭಾಗ, ಸಾಲಕ್ಕೆ ಹೋಗುತ್ತದೆ....ಎಲ್ಲಾ ಹಿಡಿದುಕೊಂಡೇ ಕೊಡುವುದು. ....ಈ ವರ್ಷ ಹಳ್ಳಿಯಲ್ಲಿ ಜೀವನ ಸಾಗಿಸುವುದು ಕಷ್ಟವಾಗುತ್ತದೆಂದು ಅನ್ನಿಸುತ್ತಿದೆ. ಪ್ರತಿವರ್ಷ ಖೇಲಾವನಸಿಂಹ ಯಾದವ, ಐದು ನೇಗಿಲುಗಳನ್ನು ಹೂಡುತ್ತಿದ್ದ. ಈ ವರ್ಷ ಒಂದೇ ನೇಗಿಲು ಹೂಡುತ್ತಾನೆ, ರಾಮಕೃಪಾಲ ಸಿಂಹರಂತೂ ಬೇಸಾಯವನ್ನು ಬಿಟ್ಟೇ ಬಿಟ್ಟರು. ಮುದುಕಿಯನ್ನು ಕರೆದುಕೊಂಡು ತೀರ್ಥಯಾತ್ರೆ ಮಾಡಲು ಹೊರಟು ಹೋದರು. ಶಿವಶಂಕರ ಸಿಂಹ ಎರಡು ನೇಗಿಲು ಹೂಡುತ್ತಾರೆ.....ತಹಸೀಲ್ದಾರರು ಈ ವರ್ಷ ಟ್ರಾಕ್ಟರ್ ತೆಗೆದುಕೊಳ್ಳುತ್ತಾರೆ. ವೈರಲೆಸ್ ಹೇಳುತ್ತಿದ್ದ. "ಅದರಲ್ಲೇ ಎಲ್ಲಾ ಇರುತ್ತದೆ, ನೇಗಿಲು, ಭೂಮಿ ಉತ್ತೋದು, ಬೀಜ ಬಿತ್ತೋದು ಧಾನ್ಯ ಕತ್ತರಿಸೋದು—ಈ ಎಲ್ಲಾ ಯಂತ್ರ ಗಳನ್ನೂ ಅದಕ್ಕೇ ಜೋಡಿಸಿರುತ್ತಾರೆ. ಇನ್ನು ಮನುಷ್ಯನ ಸಹಾಯದ ಆವಶ್ಯಕತೆ ಯಾದರೂ ಏಕೆ? ನೀರಿನಪಂಪ್ ಬರುತ್ತದೆ. ಇಂದ್ರ ದೇವನನ್ನು ಬೇಡಿಕೊಳ್ಳುವ ಆವಶ್ಯಕತೆಯೂ ಇಲ್ಲ. ಕಮಲಾನದಿಗೆ ಪಂಪ್ ಹಾಕಿಸಿಬಿಡುತ್ತಾರೆ. ಮಿಷನ್ ಸ್ಟಾರ್ಟ್ ಮಾಡಿಬಿಟ್ಟರೆ ಅದು ನೀರನ್ನು ತುಂಬಿ ಗದ್ದೆಗೆ ಸುರಿಯುಬಿಡುತ್ತೆ!.... ತಹಸೀಲ್ದಾರರಿಗೆ ಇಂದ್ರದೇವನ ಲಕ್ಷ್ಯವೇ ಇಲ್ಲ ಅಂದ ಮೇಲೆ ಇನ್ನು ಮನುಷ್ಯರಿಗೆ ಅವರು ಏನು ಬೆಲೆ ಕೊಡುತ್ತಾರೆ? ಕಟಹಾರದಲ್ಲಿ ಇನ್ನೊಂದು ಸೆಣಬಿನ ಕಾರ್ಖಾನೆ ತೆರೆದಿದೆ. ಮೂರು ಸೆಣಬಿನ ಕಾರ್ಖಾನೆಗಳು!....ನಡಿ, ದಿನಕ್ಕೆ ಎರಡು ರೂಪಾಯಿ ಕೂಲಿ ಸಿಗುತ್ತದೆ. ಇನ್ನು ಈ ಹಳ್ಳಿಯಲ್ಲಿ ಏನು ಉಳಿದಿದೆ?"

ಮಹಾತ್ಮಾ ಗಾಂಧಿಯೊಬ್ಬರ ಮೇಲೆ ನಂಬಿಕೆ ಇತ್ತು. ಅವರನ್ನೂ ಕೊಂದು ಹಾಕಿಬಿಟ್ಟರು .... ಬಾಲದೇವನನ್ನು ಕೇಳಬೇಕು....ಮಹಾತ್ಮಾಜಿಯವರ ಸ್ಥಾನಕ್ಕೆ ಈಗ ಯಾರು ಬರುತ್ತಾರೋ? ಜವಾಹರಲಾಲ್? ಆದರೆ ಮಹಾತ್ಮಾಜಿ ಸದಾ ಒಂದು ತುಂಡು ಪಂಚೆ ಉಟ್ಟಕೊಂಡು ಇರುತ್ತಿದ್ದರು····

ವಿರಂಜಿ ಹೇಳಿದ: "ಎಲ್ಲಾ ಜಾತಿಯವರೂ ನಾಲ್ಕು ವರ್ಣದವರೂ. ಉಚ್ಚ ನೀಚ ಜಾತಿಯವರೂ ಒಟ್ಟಿಗೆ ಊಟ ಮಾಡುತ್ತಾರೋ ಆ ಕಣಜ ಸಮೃದ್ಧಿಯಾಗುತ್ತದೆಯಂತೆ····ತಹಸೀಲ್ದಾರರು ಹೇಳುತ್ತಿದ್ದರು, ಈ ಬಾರಿ ಎಲ್ಲರಿಗೂ ಅವರವರ ಯೋಗ್ಯತೆಗೆ ಅನುಸಾರವಾಗಿ ಐದು ಸೇರು, ಎರಡೂವರೆ ಸೇರು, ಒಂದು ಸೇರು, ಅರ್ಧಸೇರು ಭತ್ತ ಕೊಡುತ್ತಾರಂತೆ.... ಮಹಾತ್ಮಾಜಿಯ ಚಂದಾ ಬೇರೆ ವಸೂಲು ಮಾಡುತ್ತಿದ್ದಾರೆ····"

"ಮಹಾತ್ಮಾಜಿಯ ಚಂದಾ? ಹಾಗಂದರೇನು? ಅವರ ಶ್ರಾದ್ಧ ಆಗಿಹೋಯಿತು...."

"ಅದಲ್ಲ....ರಹುವಾದ ಗುರುಬಂಸೀ ಬಾಬು ಡಿಲ್ಲಿಗೆ ಹೋಗಿ ಒಂದು ಕೋಟಿ, ಊಹೂಂ, ಒಂದು ಲಕ್ಷ....ಅಲ್ಲ, ಒಂದು ಸಾವಿರ—ಅದೆಷ್ಟೋ ಜ್ಞಾಪಕ ಇಲ್ಲ, ಅಂತೂ ತುಂಬಾ ದುಡ್ಡು ತೆಗೆದುಕೊಂಡು ಹೋಗಿ ಜವಾಹರಲಾಲ್ ನೆಹರೂ ಅವರಿಗೆ ಕೊಟ್ಟಿದಾರೆ....ಮಹಾತ್ಮಾಜಿಯ ಚಂದಾ. ಇನ್ನೂ ಕೊಡುತ್ತಾರಂತೆ."

"....ಅಲ್ಲಿ ಕೇಳು, ಅದೇನದು ಗಲಾಟೆ?"

"ಯಾರ ಧ್ವನಿ ಅದು? ರಾಮಪಿಯರಿಯ ಅಲ್ಲವಾ?"

ರಾಮಪಿಯರಿಯ ಮತ್ತು ಅವಳ ತಾಯಿಯ ಗಂಟಲ ಧ್ವನಿ ಕೇಳು ತ್ತಿತ್ತು....ಮಠದಲ್ಲಿ ಜಗಳ ಆಗುತ್ತಿದೆ. ಈವತ್ತು ಹೊಡೆದಾಟ—ಬಡಿದಾಟ ಜೋರಾಗಿದೆ ಅಂತ ಕಾಣುತ್ತಿದೆ.

"ರಾಮದಾಸ ಮಹಂತ ಈಗೀಗ ದಿನವೆಲ್ಲಾ ಗಾಂಜಾ ಕುಡಿಯುತ್ತಿರು ತ್ತಾನೆ. ಒಂದಲ್ಲ ಒಂದು ದಿನ ಅವನೂ ಕೊಲೆ ಮಾಡಿ ಬಿಡುತ್ತಾನೆ."

"ಸುಡುಗಾಡು ಈ ಜನರಿಂದಲೇ ಭೂಮಿ ಅಲ್ಲಾಡುತ್ತಿದೆ····ಭ್ರಷ್ಟ ಮಾಡಿಬಿಟ್ಟರು····ಈಗ ಮಠವೇನು, ಲಾಲ್‌ಬಾಗ್ ಸಂತೆಯ ಮೀನಾ ಬಜಾರ್

ಆಗಿಬಿಟ್ಟಿದೆ!····ಹಳ್ಳಿ ಹಳ್ಳಿಯ ಲುಚ್ಛಾಗಳು–ಲಫಂಗರು ಇಲ್ಲಿ ಬಂದು ಬಿದ್ದು ಕೊಂಡಿರುತ್ತಾರೆ."

ಈ ನಡುವೆ ತಹಸೀಲ್ದಾರ ಸಾಹೇಬರು, ರಾತ್ರಿ, ಮೇಲಿನ ಮಾಳಿಗೆಯಲ್ಲಿ ಸುಮರಿತದಾಸನೊಂದಿಗೆ ಕಾಗದ–ಪತ್ರ ನೋಡುತ್ತಿರುತ್ತಾರೆ. ಒಂದೊಂದು ದಿನ ಸುಮರಿತದಾಸ ಮೆಟ್ಟಿಲುಗಳಿಂದ ಉರುಳಿ ಬಿದ್ದುದೂ ಉಂಟು. ಸಂಥಾಲರ ಮನೆಯಲ್ಲಿ ತಂರೂರು ಮಾಡಿದ ಹಿಪ್ಪೆಯ ಮದ್ಯ ತುಂಬಾ ತೀಕ್ಷ್ಣವಾಗಿರುತ್ತದೆ. ಗಂಗಾ ಅಂಬಿಗ ಪ್ರತಿದಿನ ದೊಡ್ಡ ಗಾಜಿನ ಪಾತ್ರೆಯಲ್ಲಿ ಅರ್ಧದಷ್ಟು ಮದ್ಯ ತಂದು ಕೊಡುತ್ತಾನೆ. ಒಂದೊಂದು ಸಲ ತಹಸೀಲ್ದಾರರು ಕೆಳಗಿಳಿದು ಬಂದು ದೊಡ್ಡ ಗಲಾಟೆಯನ್ನೇ ಎಬ್ಬಿಸುತ್ತಾರೆ. ಕಮಲೆಯ ತಾಯಿಯನ್ನು, ಕಮಲೆ ಯನ್ನು, ಮುದುಕಿ ಸೇಬಿಯಾಳನ್ನು····ಎಲ್ಲರಿಗೂ ಗುಂಡುಹೊಡೆದು ಕೊಂದು ಹಾಕುತ್ತೇನೆಂದು ಬೆದರಿಸುತ್ತಾರೆ.

"····ಒಂದು ರಾತ್ರಿಯಂತೂ ಎಷ್ಟು ಗಲಾಟೆ ಮಾಡಿದರೆಂದರೆ ಕಮಲೆಯ ತಾಯಿ ಹೆದರಿಕೆಯಿಂದ ಎದೆ ಬಡಿದುಕೊಳ್ಳಲಾರಂಭಿಸಿದಳು····ಜೀವನದಲ್ಲಿ ಹಿಂದೆಂದೂ ಆಡದಿದ್ದ ಕೆಟ್ಟ ಕೆಟ್ಟ ಬೈಗಳು ತಹಸೀಲ್ದಾರರ ಬಾಯಿಂದ ಬರ ತೊಡಗಿದವು ಕಮಲ ಇದ್ದ ಕೊಠಡಿಯ ಬಾಗಿಲಿನ ಹತ್ತಿರ ಬಂದು ಗಟ್ಟಿಯಾಗಿ ಬಾಯಿಗೆ ಬಂದಂತೆ ಒದರಲಾರಂಭಿಸಿದರು. ಕಮಲಾ ಬಾಗಿಲು ತೆಗೆದುಕೊಂಡು ಹೊರಗಡೆ ಬಂದು ಹೇಳಿದಳು: "ಅಪ್ಪ ನನಗೆ ಏನು ಬೇಕಾದರೂ ಶಿಕ್ಷೆ ಕೊಡಿ. ಅಮ್ಮನನ್ನು ಮಾತ್ರ ಬೈಯ್ಯಬೇಡಿ. ಅವಳೇನು ತಪ್ಪು ಮಾಡಿದ್ದಾಳೆ?"

ಕಮಲೆಯನ್ನು ನೋಡಿದ ಕೂಡಲೇ ತಹಸೀಲ್ದಾರರ ತಲೆಗೇರಿದ್ದ ಅಮಲು ಇಳಿದು ಹೋಯಿತು. ಅವರು ಮಹಡಿಗೆ ಓಡಿದರು.

ಆ ದಿನದಿಂದ ಕಮಲೆಯ ತಾಯಿ ಅವಳನ್ನು ಒಂದು ನಿಮಿಷವೂ ಒಂಟಿಯಾಗಿ ಬಿಡುತ್ತಿರಲಿಲ್ಲ. ಕಾಡು ಬೆಕ್ಕನ್ನು ಕಂಡರೆ ಮರಿಗಳನ್ನು ಹಾಕಿರುವ ಹೆಣ್ಣು ಬೆಕ್ಕಿನ ಕಣ್ಣುಗಳು ಮಿಂಚುತ್ತವೆ! ತಹಸೀಲ್ದಾರರು ಎಂದಾದರೂ ಯಾವುದಾದರೂ ಭಯಂಕರ ಪ್ರಕರಣ ಮಾಡಿಯೇ ಬಿಡುತ್ತಾರೆಂದು ಕಮಲೆಯ ತಾಯಿಗೆ ಭಯ ····ಒಂದು ವಾರದ ಹಿಂದೆ ಶರಾಬಿಗೆ ಒಂದು ಔಷಧಿ ಹಾಕಿ ಕೊಟ್ಟು ಅವರು ಹೇಳಿದ್ದರು. "ಕಮಲೆಗೆ ಕುಡಿಸಿ ಬಿಡು. ಒಂದೇ ಸಲಕ್ಕೆ ಎಲ್ಲಾ ಮುಗಿದು ಹೋಗುತ್ತದೆ.····ತುಂಬಾ ಕಷ್ಟದಿಂದ ಇದನ್ನು ಸಂಪಾದಿಸಿ ತಂದಿದೀನಿ."

ಇಂತಹವರ ಮೇಲೆ ನಂಬಿಕೆ ಇಡುವುದು ಹೇಗೆ? ಯಾವಾಗ ಏನು ಮಾಡಿ ಬಿಡುತ್ತಾರೋ ಹಳ್ಳಿಯ ಮನೆ ಮನೆಯಲ್ಲೂ "ಅಯ್ಯೋ ದೇವರೇ" ಎನ್ನುವ ಕೂಗು ಎದ್ದಿದೆ. ಬೆಳಗ್ಗಿನಿಂದ ಸಂಜೆಯವರೆಗೆ ದುಡಿದ ಮೇಲೆ ಸಿಗುವ ಕೂಲಿಯನ್ನು, ಕೊಡಬೇಕಾದ ಸಾಲಕ್ಕೆಂದು ಅಲ್ಲೇ ಹಿಡಿದುಕೊಂಡು ಬಿಡುತ್ತಾರೆ. ಅಗಸ–ಹಜಾಮ, ಚಮ್ಮಾರರಿಗೂ ಈ ಬಾರಿ ಹಣ ಸಿಗುವಂತಿಲ್ಲ.... ಕಟಿಹಾರಕ್ಕೆ ನಡೆಯಿರಿ.... ಮಿಲ್ಲಿನ ಸೈರನ್ ಪ್ರತಿದಿನ ಕೂಗುತ್ತದೆ, ಕೇಳಿಸುವುದಿಲ್ಲವೇನು? ನಮ್ಮನ್ನು ಕರೆಯತ್ತಿದೆ. "ಬನ್ನೀ...."

ರಾತ್ರಿಯ ನೀರವತೆಯಲ್ಲಿ ಜೋಯಿಸ ಚಿಕ್ಕಪ್ಪನ ಕೆಮ್ಮು ಭಯಂಕರವಾಗಿ ಕೇಳಿಸುತ್ತಿದೆ. ಮಧ್ಯಾಹ್ನದ ಹೊತ್ತು ಅಮಟಿ ಮರದ ಮೇಲೆ ಕುಳಿತುಕೊಂಡು ಕಾಗೆ ಅರಚಿಕೊಳ್ಳುತ್ತದಲ್ಲಾ, ಅದೇ ರೀತಿ!

....ತಿನ್ನುತ್ತಾಳೆ ಎಲ್ಲರನ್ನೂ ತಿಂದು ಬಿಡುತ್ತಾಳೆ. ಪಿಂಗಲ ವರ್ಣದ ದೇವಿ ಕ್ರಮೇಣ ಮುಂದೆ ಮುಂದೆ ಬರುತ್ತಿದ್ದಾಳೆ. ಅವಳ ಸಾವಿರಾರು ಗಣಗಳು ಹಲ್ಲು ಕಡಿಯುತ್ತಿವೆ, ನಾಲಿಗೆ ಚಾಚಿವೆ....ತಿಂದು ಬಿಡುತ್ತಾರೆ....ಎಲ್ಲರನ್ನೂ ನುಂಗಿ ನೀರು ಕುಡಿಯುತ್ತಾರೆ....ಭಯಗ್ರಸ್ತ ಶಿಶುವಿನಂತೆ ಇಡೀ ಹಳ್ಳಿ ಮಬ್ಬಿನಲ್ಲಿ ಮುಳಗಿ ಥರ ಥರ ನಡುಗುತ್ತಿದೆ.

"ಹುಶಾರ್:....ಹುಶಾರ್...."

ತಹಸೀಲ್ದಾರರು ಕಣಜವನ್ನು ಕಾಯಲು ಮೂರು ಜನ ಸಂಥಾಲರನ್ನೂ, ಬಾಗಿಲಿನಲ್ಲಿ ಗುಡ್ಡ ಗಾಡಿನ ಸಿಪಾಯಿಗಳನ್ನೂ, ಕಾವಲು ಇಟ್ಟಿದ್ದಾರೆ. ಮತ್ತೊಂದು ಬಂದೂಕಿಗೆ ಲೈಸೆನ್ಸ್ ತೆಗೆದುಕೊಂಡಿದ್ದಾರೆ....ಚಲಿತ್ತರ ಕರ್ಮಕಾರ ಸೆರೆ ಸಿಕ್ಕುವವರೆಗೆ ಶ್ರೀಮಂತರಿಗೆ ರಾತ್ರಿ—ನಿದ್ದೆ ಬರುವುದಿಲ್ಲ ...ಕಾವಲು ಕಾಯು ವವರ ಮಾತೂ ಭಯಂಕರವಾಗಿಯೇ ಇದೆ. ಈಚೀಚೆಗೆ ಕೋಠಿಯ ಕಾಡಿನಲ್ಲಿ ಸಂಜೆಯ ಹೊತ್ತಿಗೇ ಒಂದು ಬೆಳಕು ಕಾಣಿಸುತ್ತದೆ. ತುಂಬಾ ಪ್ರಖರವಾದ ಬೆಳಕು. ಮತ್ತೆ ರಾತ್ರಿ—ಇನ್ನೊಮ್ಮೆ ಬೆಳಗಿನ ಜಾವ....

ಬಾಲದೇವ ಎಚ್ಚರವಾಗಿಯೇ ಇದ್ದ. ಸಂಜೆ ತಾನೇ ಪೂರ್ಣಿಯಾದಿಂದ ಹಿಂತಿರುಗಿಬಂದಿದ್ದ....ಅವನಿಗೆ ನಿದ್ದೆಯೇ ಬರುತ್ತಿಲ್ಲ....ಪೂರ್ಣಿಯಾಗೆ ಹೊರಡುವಾಗ ಲಕ್ಷ್ಮಿ ಬಾವನದಾಸನ ಬಟ್ಟೆಯ ಗಂಟನ್ನು—ಗಾಂಧೀಜಿಯ ಕಾಗದ ಗಳಿದ್ದ ಗಂಟು—ಅವನ ಕೈಗೆ ಕೊಟ್ಟಿದ್ದಳು. ಗಂಗೂಲಿಯನ್ನು ಭೇಟಿಯಾಗಲು

ಅವನು ಹೋಗಿದ್ದ....ಗಂಗೂಲಿಯವರೇ ಅವನನ್ನು ಕೇಳಿದ್ದರು. "ಬಾವನ ದಾಸ, ನಿಮ್ಮ ಕೈಯ್ಯಲ್ಲಿ ಏನಾದರೂ ಕೊಟ್ಟಿದ್ದರೇನು?"

"ಅಂ....ಇಲ್ಲ....ಏನೂ ಕೊಡಲಿಲ್ಲ...." ಆ ಚಳಿಯಲ್ಲೂ ಬಾಲ ದೇವನ ಮೈಯ್ಯೆಲ್ಲಾ ಬೆವರಿತ್ತು

ಅದು ಯಾಕೋ ಗಂಗೂಲಿಯ ಮುಖ ಒಮ್ಮೆಲೇ ಉದಾಸೀನವಾಗಿತ್ತು.

....ಬಾಲದೇವ ಪ್ರಾಣ ಇರುವವರೆಗೂ ಈ ಕಾಗದಗಳನ್ನು ಕೊಡಲಾರ. ಈ ಕಾಗದಗಳನ್ನು ನೋಡಿದ ಕೂಡಲೇ, ಜವಹರಲಾಲ್ ನೆಹರೂ ಬಾವನ ದಾಸನನ್ನು ಮಂತ್ರಿಯನ್ನಾಗಿ ಮಾಡಿಬಿಡುತ್ತಾರೆ. ಕಡೆಯಪಕ್ಷ ಡೆಲ್ಲಿಗಂತೂ ಖಂಡಿತ ಕರೆಸಿಕೊಳ್ಳುತ್ತಾರೆ. .... ಇದುವರೆಗೆ ಬಂದ ನಾಯಕರೆಲ್ಲಾ ಬಾವನ ದಾಸನೊಂದಿಗೇ ನಗು ನಗುತ್ತಾ ಮಾತನಾಡುತ್ತಿದ್ದುದು.

....ಹಿಂದೆ ಒಂದು ಸಲ ಮಂತ್ರಿಗಳು ಬಂದಿದ್ದರೂ ದೊಡ್ಡ ದೊಡ್ಡ ಲೀಡರುಗಳು, ಮಾರ್ವಾಡಿಗಳು, ವಕೀಲರು, ಜಮೀನ್ದಾರರು ಸಹಿಮಾಡಿ ಒಪ್ಪಿಗೆ ಸೂಚಿಸಿದ್ದರು. "ಸರ್ಕಾರಿ ವಕೀಲ ಭಗವತೀ ಬಾಬುವನ್ನು ಕಾಂಗ್ರೆಸ್ ಸದಸ್ಯರಾಗಿ ಮುಂದುವರಿಸಬೇಕು" ಎಂದು. ಆದರೆ ಮಂತ್ರಿಗಳು ಬಾವನದಾಸನನ್ನು ಕುರಿತು "ನೀವೇನು ಅನ್ನುತ್ತೀರಿ ಬಾವನದಾಸ?" ಎಂದು ಕೇಳಿದ್ದರು. ಭಗವತೀ ಬಾಬು ಸದಸ್ಯರಾಗಿ ಮುಂದುವರಿಯಲಿಲ್ಲ. ಕೊನೆಗೆ ಬಾವನನ ಮಾತೇ ನಡೆಯಿತು .. ಭಗವತೀ ಬಾಬು ಸ್ವಾತಂತ್ರ್ಯದ ಚಳುವಳಿಗಾರರನ್ನು ಗಲ್ಲಿಗೇರಿಸಬೇಕೆಂದು ವಿಲಾಯತಿಯಲ್ಲಿ ವಾದ ಮಾಡಿದ್ದರು...."

ಇನ್ನು ಈ ಕಾಗದಗಳು ...ಇಲ್ಲ, ಇವುಗಳನ್ನು ಅವನು ಖಂಡಿತ ಕೊಡ ಲಾರ....ಲಕ್ಷ್ಮಿಗೆ ಅದೇನು ಆಗಿಹೋಗಿದೆಯೋ ಆ ಕಾಗದಗಳ ಕಟ್ಟು ಸಿಕ್ಕಿದ ದಿನದಿಂದ, ಎರಡು ಹೊತ್ತೂ 'ಸತ್ಸಂಗ'ದ ಸಮಯದಲ್ಲಿ ಅದನ್ನು ಕಣ್ಣಿಗೆ ಒತ್ತಿಕೊಳ್ಳುತ್ತಾಳೆ. ದಿನಾ ಅದಕ್ಕೆ ಗಂಧ ಪುಷ್ಪಗಳನ್ನು ಇಡುತ್ತಾಳೆ. ಒಂದೊಂದು ಸಲ ಕಾಗದಗಳನ್ನು ತೆಗೆದು ಓದುತ್ತಿರುತ್ತಾಳೆ. ಓದಿ ಅಳುತ್ತಾಳೆ. ಪೂರ್ಣಿಯಾದಿಂದ ಹಿಂತಿರುಗಿದ ಮೇಲೆ ಅವನ ಯೋಗಕ್ಷೇಮ ವಿಚಾರಿಸು ವುದಕ್ಕೂ ಮೊದಲು ಕೇಳಿದ್ದಳು. "ಗಂಗೂಲಿಗೆ ಅದನ್ನು ಕೊಟ್ಟರೇನು?"

ಅವನು ಹೇಳಿದ: "ಹೂಂ....ಹೂಂ....ಕೊಟ್ಟು ಬಂದೆ. ಅಷ್ಟು ನಂಬಿಕೆ ಇಲ್ಲದಿದ್ದಮೇಲೆ ನನ್ನ ಕೈಗೆ ಯಾಕೆ ಕೊಟ್ಟೆ?"

ಬಾಲದೇವನಿಗೆ ನಿದ್ದೆಯೇ ಬರಲಿಲ್ಲ. ಎತ್ತಿನ ಗಾಡಿಯಲ್ಲಿ ಚಕ್ರದ ಕೆಳಗೆ ಬಟ್ಟೆಯ ಕಟ್ಟನ್ನು ಬಚ್ಚಿಟ್ಟಿದ್ದ. ಬೆಂಕಿ ಉರಿಯುತ್ತಲೇ ಇತ್ತು.

ಬಾಲದೇವ ಮೇಲೆದ್ದು ಹೊರಗಡೆ ನಡೆದ. ಪಹರೆಯವನ ಧ್ವನಿ ಕೇಳಿಸುತ್ತಿತ್ತು: "ಎಚ್ಚರಿಕೇ ಎಚ್ಚರಿಕೆ"

ಬಾಲದೇವ ಬೆಂಕಿಯ ಹತ್ತಿರ ಕುಳಿತುಕೊಂಡು ಕಟ್ಟಿಗೆಗಳನ್ನು ಸರಿಪಡಿಸಿದ. ಓರೆಗಣ್ಣಿನಿಂದ ಲಕ್ಷ್ಮಿ ಮಲಗಿರುವ ಕಡೆ ನೋಡಿದ. ನಿಧಾನವಾಗಿ ಕಟ್ಟನ್ನು ಬಿಚ್ಚಿದ. ಅವನ ದೇಹವೆಲ್ಲಾ ಕಂಪಿಸುತ್ತಿತ್ತು····ನಾಲಿಗೆ ಒಣಗಿ ಮರವಾಗಿತ್ತು. ಗಂಟಲಿನಲ್ಲಿ ತೇವದ ಅಂಶವೂ ಇರಲಿಲ್ಲ....ಬೆಂಕಿ ಲಕಲಕನೆ ಉರಿಯುತ್ತಿತ್ತು. ಕಟ್ಟಿಗೆಗಳು ಚಿಟ ಚಿಟ ಶಬ್ದ ಮಾಡುತ್ತಿದ್ದವು....ಬಾಲದೇವ ಒಂದು ಕಾಗದ ತೆಗೆದ····

"ಏ ಬಾ, ಬಾ, ಗಾಂಧಿಜೀಯ ಮೇಲಾಣೆ" ಲಕ್ಷ್ಮಿಯು ಹಾಸಿಗೆಯ ಮೇಲೆ ಕುಳಿತುಕೊಂಡೇ ಕೂಗಿಕೊಂಡಳು:···· "ಗೋಸಾಯೀ, ಇದೇನು ಮಾಡ್ತಿದೀರಿ? ಛೇ ಛೇ····ಸದ್ಗುರು. ಕ್ಷಮಿಸಿ ಬಾಲದೇವ····ನೀವು ಪಾಪಿಗಳು, ಕೊಲೆಗಡುಕರು."

ಬೆಂಕಿ ಲಕ್ಷ್ಮಿಯ ಬಟ್ಟೆಗೇ ಹತ್ತಿಕೊಂಡಿತು. ಬಟ್ಟೆ ಹತ್ತಿಕೊಂಡರೆ ಹತ್ತಿಕೊಳ್ಳಲಿ. ಮೊದಲು ನಿಮ್ಮ ಕೈ ಬಿಡಿ····ಗಂಟನ್ನು ನನ್ನ ಕೈಗೆ ಕೊಟ್ಟು ಬಿಡಿ. ನಾನು ಸುಟ್ಟು ಸತ್ತುಹೋಗುತ್ತೇನೆ····ಆದರೆ····"

ಬಾಲದೇವನ ಬಿಗಿದುಕೊಂಡಿದ್ದ ಮುಷ್ಠಿ ಸಡಿಲವಾಯಿತು. ಲಕ್ಷ್ಮಿ ಕಟ್ಟನ್ನು ಎದೆಗೆ ಅವಿಚಿಕೊಂಡಳು. ಸೊಂಟಕ್ಕೆ ಕಟ್ಟಿಕೊಂಡಿದ್ದ ಬಟ್ಟೆ ಬೆಂಕಿ ಹತ್ತಿ ತಾನಾಗಿಯೇ ಬಿದ್ದುಹೋಯಿತು. ಬಾಲದೇವ ಪಾತ್ರೆಯಿಂದ ನೀರು ತೆಗೆದು ಚಿಮುಕಿಸಿದ.

"ಅಯ್ಯೋ ದೇವರೇ ಸದ್ಗುರು ಜೈ ಗಾಂಧಿಜೀ····ಜೈ ಬಾವನ ದಾಸ····ಅಯ್ಯೋ····" ಲಕ್ಷ್ಮಿ ಅತ್ತಳು.

ವಸ್ತ್ರಹೀನಳಾಗಿದ್ದ ಲಕ್ಷ್ಮಿ ಅಳುತ್ತಾ ನಿಂತಿದ್ದಳು. ಲಕ್ಷ್ಮಿಯ ಕೈ—ಕಾಲುಗಳು ಸುಟ್ಟಿದ್ದವು, ದೊಡ್ಡ ದೊಡ್ಡ ಬೊಬ್ಬೆ ಬಂದಿತ್ತು.

ಬಾಲದೇವ ತನ್ನ ಕೊಠಡಿಯೊಳಗೆ ಬಂದು ಮುಖ ಮುಚ್ಚಿಕೊಂಡ. ಹಾಸಿಗೆಯ ಮೇಲೆ ಉರುಳಿಕೊಂಡು ಯೋಚಿಸಿದ. ಇನ್ನು ಇಲ್ಲಿರುವುದು

ಒಳ್ಳೆಯದಲ್ಲ. ಯಾವ ಮುಖ ಇಟ್ಟುಕೊಂಡು ಇಲ್ಲಿ ಇರಬೇಕು? ಇನ್ನು ಕಣ್ಣೆತ್ತಿ ಲಕ್ಷ್ಮಿಯ ಮುಖವನ್ನು ನೋಡುವುದಾದರೂ ಹೇಗೆ?····ಅವನು ಪೂರ್ಣೆಯಾಗಿ ಹೊರಟುಹೋಗುತ್ತಾನೆ....ಅಲ್ಲಿಂದ ಚನ್ನಪಟ್ಟಗೆ ಹೋಗುತ್ತಾನೆ....ಮುಂದೆ ತನ್ನ ಊರಿನಲ್ಲೇ ಇರುತ್ತಾನೆ····ತನ್ನ ಜಾತಿಯಲ್ಲಿ, ತನ್ನ ಸಮಾಜದಲ್ಲಿ ಇರುತ್ತಾನೆ····ಜಾತಿ ಎನ್ನುವುದು ತುಂಬಾ ದೊಡ್ಡ ಶಕ್ತಿ. ದೊಡ್ಡ ದೊಡ್ಡ ನಾಯಕರೂ ತಮ್ಮ ತಮ್ಮ ಜಾತಿಯ ಪಾರ್ಟಿಗಳಲ್ಲೇ ಇದ್ದಾರೆ····ಇದೇ ರಾಜನೀತಿ····ಆದರೆ ಲಕ್ಷ್ಮಿ ಏನು ತಿಳಿದುಕೊಳ್ಳುತ್ತಾಳೆ? ····ಕಾಶಿಯ ಬ್ರಹ್ಮಚಾರಿ ಇಲ್ಲೇ ನೆಲೆಸುವಂತೆ ಕಾಣುತ್ತಿದೆ....ಸರಿ.... ಇಲ್ಲ, ಹೋಗುವಾಗ ಲಕ್ಷ್ಮಿಯ ಮೇಲೆ ಕಳಂಕ ಹೊರಿಸಿ ಹೋಗುವುದು ಸರಿಯಲ್ಲ—ಅವನು....

"ಗೋಸಾಯಿಗಳೇ ಏಳಿ 'ಸತ್ಸಂಗ'ದ ಸಮಯವಾಯಿತು." ಲಕ್ಷ್ಮಿ ನರಳುತ್ತಲೇ ಎದ್ದಳು. ಅವಳ ಇಡೀ ಶರೀರ ಸುಟ್ಟು ಹೋಗಿತ್ತು.

ಪ್ರತಿದಿನದಂತೆ ಲಕ್ಷ್ಮಿ ಎದ್ದಳು. ಬಾಲದೇವನ ಹಾಸಿಗೆಯ ಹತ್ತಿರ ಬಂದಳು. ಕಂಬಳಿಯನ್ನು ತೆಗೆದು ಬಾಲದೇವನ ಕೈಯ ಉಂಗುರವನ್ನು ಕೈಗೊತ್ತಿಕೊಂಡು ಹೇಳಿದಳು: "ಸಾಹೇಬ್ ಬಂದಗೀ" ಬಾಲದೇವ ಅಳಲಾರಂಭಿಸಿದ....ಬಿಕ್ಕಿ ಬಿಕ್ಕಿ ಅತ್ತ

"ಲ····ಕ್ಷ್ಮಿ····"

"ಏಳಿ."

## 22

ಮೂರು ತಿಂಗಳನಂತರ

1948 ನೇ ಇಸವಿ ಏಪ್ರಿಲ್ ತಿಂಗಳ ಒಂದು ಬೆಳಗ್ಗೆ—

ಈ ಪ್ರಾಂತ್ಯದಲ್ಲಿ ಸೆಣಬನ್ನು ಬೆಳೆಸುವ ರೈತರು ಸೂರ್ಯ ಹುಟ್ಟುವುದಕ್ಕೆ ಮುಂಚೆಯೇ ಗದ್ದೆಗೆ ಹೊರಟು ಹೋಗಿರಬೇಕು. ಶುಕ್ರ ನಕ್ಷತ್ರ ಮಿನುಗುಟ್ಟುತ್ತಿತ್ತು. ಕಮಲಾ ನದಿಯಲ್ಲಿ ಅದರ ಪ್ರತಿಬಿಂಬ ಹೊಳೆಯುತ್ತಿತ್ತು. ನೋಡಿದರೆ ನೀಲ ಕಮಲ ಅರಳಿರುವಂತೆ ತೋರುತ್ತಿತ್ತು.

ಭುಜದ ಮೇಲೆ ನೇಗಿಲು ಹೊತ್ತುಕೊಂಡು, ಬಡಕಲಾದ ಎತ್ತುಗಳನ್ನು ಮುಂದಿಟ್ಟುಕೊಂಡು ವಿರಂಚಿ ಹೋಗುತ್ತಿದ್ದ.... ಕೋಯರಿ ಪಂಗಡದ ಸೋಬರನ್ನನ ಮೂರು ಬೀಘಾ ಗದ್ದೆಯನ್ನು ಉಳುತ್ತಿದ್ದ.... ಆದರೆ ಈ ಸಲ ತುಂಬಾ ತಾಪತ್ರಯವಾಗಿದೆ. ಅವನ ಶರೀರವೇ ಸುಟ್ಟ ಬದನೇಕಾಯಿಯಂತಾಗಿದೆ.... ತೆಳ್ಳಗೆ, ಕಪ್ಪಗೆ, ಸೊಂಟಬಗ್ಗಿದೆ....

ಖೇಲಾವನ ಈಗ ಸ್ವತಃ ತಾನೇ ಎಮ್ಮೆ ಮೇಯಿಸುತ್ತಾನೆ. ಮಧ್ಯರಾತ್ರಿಯಲ್ಲಿ ಎಮ್ಮೆ ಹುಲ್ಲು ಮೇಯುವ ಹಾಗೆ ಹಗಲಿನಲ್ಲಿ ಮೇಯುವುದಿಲ್ಲ. ಈಗ ಅವನಿಗೆ ತನ್ನದಾದ ಒಂದು ಹುಲ್ಲುಗಾವಲೂ ಇಲ್ಲ. ಆದ್ದರಿಂದಲೇ ಊರ ಹೊರಗಡೆ ಕರೆದುಕೊಂಡು ಹೋಗುತ್ತಾನೆ. ಯಾದವ ಪಂಗಡದ ಮುಖಂಡನಾಗಿದ್ದ ಖೇಲಾವನ ಎಮ್ಮೆ ಮೇಯಿಸಿಕೊಂಡು ಬರುತ್ತಿದ್ದಾನೆ.

ಆಕಾಶ ಸ್ವಚ್ಛವಾಗುತ್ತಿದೆ. ಎಲ್ಲರ ಮುಖಗಳ ಮೇಲೂ ಬೆಳಗಿನ ಪ್ರಕಾಶ ಬೀಳುತ್ತಿದೆ. ಸುಟ್ಟ ಇಟ್ಟಿಗೆಯಂತಹ ಮುಖಗಳು.

ತಹಸೀಲ್ದಾರರ ಟ್ರಾಕ್ಟರ್ ತೆಗೆದುಕೊಂಡು ಡ್ರೈವರ್ ಹೊರಟಿದ್ದ.... ಭಟ್ ಭಟ್ ಭಟ್ ಭಟ್.

ತಹಸೀಲ್ದಾರರು ತಮ್ಮ ಮಹಡಿಯ ಮೇಲೆ ಕೈಗಳನ್ನು ಹಿಂದಕ್ಕೆ ಕಟ್ಟಿಕೊಂಡು ಓಡಾಡುತ್ತಿದ್ದರು. ಟ್ರಾಕ್ಟರ್‌ನ ಭಡ್ ಭಡ್ ಶಬ್ದಕ್ಕೆ ಮೇಲ್ಛಾವಣಿಯೇ ಅಲ್ಲಾಡುತ್ತಿರುವಂತೆ ಭಾಸವಾಗುತ್ತಿತ್ತು. ಅದರ ತಾಳಕ್ಕೆ ಅನುಸಾರವಾಗಿ ಅವರ ಎದೆಯೂ ಬಡಿದುಕೊಳ್ಳುತ್ತಿತ್ತು.... ಇದ್ಯಾರು ಬರುತ್ತಿರುವುದು? ಯಾರು? ಸೇವಿಯಾ?

"ಏನು?" ತಹಸೀಲ್ದಾರರು ಪ್ರಶ್ನಿಸಿದರು.

"ಮಗೂ, ಮೊಮ್ಮಗು ಹುಟ್ಟಿದೆ."

ಸೇವಿಯೂ ನಕ್ಕಳು.

"ಸುಮ್ಮನಿರು. ಬದುಕಿದೆಯೋ...."

"ಹೌದು, ಚೆನ್ನಾಗಿದೆ ಮುದ್ದಾಗಿದೆ."

"ಓಹ್ ಭಗವಂತ!" ತಹಸೀಲ್ದಾರರು ಥರ ಥರ ನಡುಗಿದರು.

ಕಮಲಾ ನದಿಯ ಆ ದಡದಲ್ಲಿ ಅರ್ಧ ಫಲಿಸಿದ್ದ ಹಿಂಗಾರು ಬೆಳೆಯ ಗದ್ದೆಗೂ ಆ ಕಡೆ, ಸೇಮಲ ವಾಡಿಯ ಕಾಡಿನ ಆ ಭಾಗದಲ್ಲಿ ಆಕಾಶ ಕೆಂಪಗಾಗಿತ್ತು. ....ಕೋಠಿಯ ತೋಟದಲ್ಲಿ ಗುಲ್‌ಮೊಹರ್ ಹೂವುಗಳು ರೆಂಬೆಗಳ ತುಂಬಿ ತುಂಬಿ ಹೊಳೆಯುತ್ತಿದ್ದವು.

ಮನೆಯ ಆಚೆ ಮಗುವಿನ ಅಳು ಕೇಳಬಾರದು. ಅದಕ್ಕೆ ಏರ್ಪಾಡು ನಡೆಯುತ್ತಿದೆ.... ಯಾವುದಾದರೂ ವ್ಯವಸ್ಥೆ ಮಾಡಲೇಬೇಕು.... 'ಒಂದು ವೇಳೆ ಮಗು ತುಂಬಾ ಜೋರಾಗಿ ಅತ್ತರೆ, ಕುತ್ತಿಗೆ ಹಿಚುಕಿ ಹಾಕಿಬಿಡು, ಕೊಂದುಹಾಕಿ ಬಿಡು.'

ದೆಹಲಿ ರಾಜಘಾಟನಲ್ಲಿ ಬಾಪುವಿನ ಸಮಾಧಿಯ ಮೇಲೆ ಪ್ರತಿದಿನ ಶ್ರದ್ಧಾಂಜಲಿಯನ್ನು ಅರ್ಪಿಸಲಾಗುತ್ತಿತ್ತು. ಪ್ರಪಂಚದ ಯಾವ ಮೂಲೆಯಿಂದ ಯಾವ ದೇಶದ ಮನುಷ್ಯ ಬಂದರೂ, ಅಲ್ಲಿಗೆ ಹೋದರೆ ತನ್ನ ಜೀವನ ಸಾರ್ಥಕ ವಾಯಿತೆಂದು ಭಾವಿಸುತ್ತಿದ್ದ.

ಕಲೀಮದ್ದೀಪುರದಲ್ಲಿ, ನಾಗರ ನದಿಯ ತೀರದಲ್ಲಿ, ಕಳ್ಳ ತೀರದ ಹತ್ತಿರ ಮರದ ಕೊಂಬೆಗೆ ತಗುಲಿ ಹಾಕಿದ್ದ ಖದ್ದರಿನ ಚೀಲವನ್ನು ಯಾರೋ ತೆಗೆದುಬಿಟ್ಟಿದ್ದಾರೆ.... ಇನ್ನ್ಯಾರು ತೆಗೆಯುತ್ತಾರೆ? ದುಲಾರ್‌ಚಂದ ಕಾಪರಾನೇ ಒಂದು ತಿಂಗಳ ನಂತರ ನೋಡಿದಾಗ, ಚೀಲ ರೆಂಬೆಯಲ್ಲಿ ತೂಗಾಡುತ್ತಿತ್ತು. ಜಿಲ್ಲಾ ಕಾಂಗ್ರೆಸ್ಸಿನ ಯಾರೂ ನೋಡಿದರೂ, ಅದು ಬಾವನದಾಸನದೇ ಎಂದು ಗುರುತಿಸಿ ಬಿಡುತ್ತಾರೆ. ಚೀಲವನ್ನು ಕಾಪರಾ ತೆಗೆದುಬಿಟ್ಟ. ಆದರೆ ಚೀಲದ ದಾರ ಕೊಂಬೆಯಿಂದ ನೇತಾಡುತ್ತಲೇ ಇತ್ತು.

ಅದನ್ನು ನೋಡಿದ ದುಃಖಿನಿಯೊಬ್ಬಳು ಆ ಮರವನ್ನು 'ಚಿಂದಿ ಪೀರ' ನೆಂದು ಭಾವಿಸಿ ಹರಕೆ ಹೊತ್ತುಕೊಂಡಳು. ತನ್ನ ಸೀರೆಯಿಂದ ಒಂದು ಚೂರು

ಹರಿದು ರೆಂಬೆಗೆ ಕಟ್ಟಿದಳು: "ಮನೋಕಾಮನೆ ಪೂರ್ತಿಯಾದರೆ ಹೊಸ ಬಟ್ಟೆ ಕಟ್ಟುತ್ತೇನೆ." ದೊಡ್ಡ ಆಶೆ, ನಂಬಿಕೆಗಳಿಂದ ಅವಳು ಬಟ್ಟೆಯ ಚೂರನ್ನು ಕಟ್ಟುತ್ತಿದ್ದಳು····ಎರಡು ಹರಕಲು ಬಟ್ಟೆಯಚೂರುಗಳು.

ಪೂರ್ಣಿಯಾ ಜೈಲಿನ ಎದುರುಗಡೆ ಹಳೆಯದೊಂದು ವಟವೃಕ್ಷವಿತ್ತು. ಅದರ ಕೆಳಗೆ ಒಣಗಿದ ಎಲೆಗಳು ಈ ಕಡೆಯಿಂದ ಆ ಕಡೆಗೆ ಹಾರಾಡುತ್ತಿದ್ದವು. ಮರಕ್ಕೆ ಸೇರಿದ ಹಾಗೆ ಹಾಕಿದ್ದ ಬೆಂಚಿನ ಹತ್ತಿರ ಯುವತಿಯೊಬ್ಬಳು ನಿಂತಿದ್ದಳು····ಜೊತೆಯಲ್ಲಿ ಪ್ಯಾರುವೂ ಇದ್ದ. ಬರೀ ಚಡ್ಡಿಯನ್ನು ಹಾಕಿಕೊಂಡು, ಭುಜದ ವಸ್ತ್ರವನ್ನು ಮಾತ್ರ ಹೊದ್ದಿದ್ದ ವಾರ್ಡರ್ ಒಬ್ಬ ಪದೇ ಪದೇ ಹೊರಗಡೆ ಬಂದು ಯುವತಿಯನ್ನು ನೋಡುತ್ತಾ ಗುಣಗುಣಿಸುತ್ತಿದ್ದ: "ತೋರೀ ಪತರೀ ಕಮರಿಯಾ" (ನಿನ್ನ ತೆಳು ನಡು) ಕೊನೆಗೊಮ್ಮೆ ಕೇಳಿಯೇ ಬಿಟ್ಟ: "ನೀವು ಡಾಕ್ಟರ ಸಾಹೇಬರ ಹೆಂಡತಿಯೇನು?"

ಯುವತಿ ತಲೆ ಆಡಿಸಿ ಉತ್ತರಕೊಟ್ಟಳು: "ಅಲ್ಲ."

ವಾರ್ಡರ್ ಪ್ಯಾರುವಿನ ಕಡೆ ನೋಡಿದ. ಪ್ಯಾರುವಿಗೆ ಈ ವಾರ್ಡರನ ಪರಿಚಯವಿತ್ತು. ಅವನೊಬ್ಬ ಶತಮೂರ್ಖ. ಸದಾ ಕೆಟ್ಟ ಕೆಟ್ಟ ಮಾತುಗಳನ್ನಾಡುತ್ತಾ ತಿರುಗುತ್ತಿರುವುದೇ ಅವನ ಕೆಲಸ. ಪ್ಯಾರು ಮುಖ ತಿರುಗಿಸಿಕೊಂಡ.

ಜೈಲಿನ ಕಬ್ಬಿಣದ ಬಾಗಿಲು ಝುಣ ಝುಣ ಶಬ್ದ ಮಾಡುತ್ತಾ ತೆರೆದುಕೊಂಡಿತು. ಯುವತಿಯ ಮುಖದಲ್ಲಿ ಮೂಡಿದ್ದ ಪ್ರತೀಕ್ಷೆಯ ಬೇಸರ ದೂರ ಸರಿಯಿತು. ಇದುವರೆಗೆ ಸಣ್ಣ ಸಣ್ಣ ಸುಕ್ಕುಗಳು ಕಟ್ಟಿದ್ದ ಮುಖ ಕ್ರಮೇಣ ಅರಳಿತು.

ಡಾಕ್ಟರ್ ಲ್ಯಾಬರೇಟರಿಯಿಂದ ಬರುತ್ತಿರುವವರಂತೆ ಮುಗುಳುನಗೆ ಬೀರುತ್ತಾ ಕೈಯ್ಯಲ್ಲೊಂದು ಚಿಕ್ಕ ಬ್ಯಾಗನ್ನು ಹಿಡಿದುಕೊಂಡು, ನಡೆದು ಬಂದರು.

ಈಗ ಪ್ಯಾರುವಿನ ಮುಖ ನೋಡುವಂತಿತ್ತು. ತನ್ನ ಮನಸ್ಸಿನಲ್ಲೇಳುತ್ತಿದ್ದ ಆವೇಗವನ್ನು ಅದುಮಿಡಲು ಅವನು ಪ್ರಯತ್ನಿಸುತ್ತಿದ್ದ. ಅವನ ಮುಖ ಅಸ್ವಾಭಾವಿಕವಾಗಿ ಅರಳಿತ್ತು.

"ನೀನು ಯಾವುದಾದರೂ ಜೈಲಿನಲ್ಲಿದ್ದೆಯೇನು?"

"ಇಲ್ಲಪ್ಪಾ. ಅಂಥ ಅದೃಷ್ಟ ನನಗೆಲ್ಲಿ ಬರಬೇಕು?....ತಲೆ ಬಗ್ಗಿಸು. ಕಾಶೀ ವಿಶ್ವನಾಥನ ಪ್ರಸಾದ." ಯುವತಿ ಒಣಗಿದ ಬಿಲ್ವಪತ್ರೆಗಳನ್ನು ಡಾಕ್ಟರ್ ಪ್ರಶಾಂತನ ತಲೆಯ ಮೇಲೆ ಹಾಕಿದಳು.

"ಪ್ಯಾರೂ....ಏನ್ಸಮಾಚಾರ? ಮಮತಾ, ಪ್ಯಾರುವನ್ನು ಮಾತಾಡಿಸಿದೆ ತಾನೇ?"

"ಬೆಳಗ್ಗಿನಿಂದ ನಾನು ಮಾಡುತ್ತಿರುವುದಾದರೂ ಮತ್ತೇನೂ ಅಂದುಕೊಂಡೆ?" ಮಮತಾ ನಕ್ಕಳು: "ಕುದುರೆ ಗಾಡಿ ಕರೆಯಿರಿ, ಪ್ಯಾರೂ ಸಾಹೇಬರೇ."

"ಪ್ಯಾರು ನಗುತ್ತಾ—ಹಾರುತ್ತಾ ರಸ್ತೆಯ ಕಡೆ ಹೊರಟ."

"ರಾತ್ರಿ ಮೂರು ಗಂಟೆಗೆ ಪೂರ್ಣಿಯಾಗೆ ಬಂದೆ....ಜ್ಯೋತಿ ಅಕ್ಕ ಈಗ ಇಲ್ಲೇ ಇದಾಳೆ. ಅವಳ ಮನೆಗೆ ಹೋದೆ. ಬೆಳಗ್ಗೆ ಎದ್ದು ಕಲೆಕ್ಟರ್ ಬಂಗಲೆಗೆ ಹೋಗಿದ್ದೆ. ನಿನ್ನ ಬಿಡುಗಡೆಯ ಪತ್ರ ಜೊತೆಯಲ್ಲೇ ಇತ್ತು. "ಕಲೆಕ್ಟರ್ ಟೂರ್ ಹೊರಟು ಹೋದರೆ ಮತ್ತೆ ಬರುವುದು ತಡವಾಗುತ್ತದೆ ಅಂತ ಜ್ಯೋತಿ ಅಕ್ಕ ಹೇಳಿದಳು....ಹೂಂ....ಈಗ ಎಲ್ಲಿಗೆ ಹೋಗಬೇಕು." ಮಮತಾ ನಕ್ಕಳು.

"ನೀನು ಮೇರೀಗಂಜಿಗೆ ಬರುವುದಿಲ್ಲವೆ?"

"ಬರದೇ ಏನು?....ಅದಕ್ಕೆ ಹದಿನೈದು ದಿನ ರಜಾ ತೊಗೊಂಡಿದೀನಿ."

ಎಸ್.ಪಿ. ಸಾಹೇಬರು ನೌಕರ ಕಾಗದ ತಂದುಕೊಟ್ಟ. ಎಸ್.ಪಿ. ಸಾಹೇಬರು, ಡಾಕ್ಟರನ್ನು ತಮ್ಮ ಮನೆಗೆ ಆಮಂತ್ರಿಸಿದ್ದರು.

# 23

ತಹಸೀಲ್ದಾರರು ಈಗ ಕೆಳಗಡೆ ಇಳಿಯುವುದೇ ಇಲ್ಲ. ಮೇಲೇ ಇರುತ್ತಾರೆ. ಹಗಲೆಲ್ಲಾ ಸೇಂದಿ ಕುಡಿದು ಬಿದ್ದಿರುತ್ತಾರೆ, ರಾತ್ರಿಯಾಯಿತೆಂದರೆ ಸಂಥಾಲ ಪಂಗಡದವರು ತಯಾರಿಸುವ ಹಿಪ್ಪೆಯ ಮಧು. ವೈರಲೆಸ್ ಸುಮರಿತದಾಸನನ್ನು ಪ್ರತಿದಿನ ಕೇಳುತ್ತಿದ್ದರು: "ಉಪಾಯ ಯೋಚಿಸಿದೆಯೇನು?"

"ನನ್ನ ತಲೆ ಓಡುತ್ತಾನೇ ಇಲ್ಲ."

ಓಡದೇ ಇದ್ದರೇ, ಇನ್ನೊಂದು ಲೋಟ ಕುಡಿ. ಹುಷಾರ್ ಎಲ್ಲಾದರೂ ಬಾಯಿಬಿಟ್ಟರೆ, ಬಂದೂಕ ತನ್ನ ಕೆಲಸ ಮಾಡಿಬಿಡುತ್ತೆ. ತಿಳೀತೇನು?"

ಕಮಲೆ ತಾಯಿ ಬಾಗಿಲನ್ನು ತೆರೆಯುವುದೇ ಇಲ್ಲ. ಬಾವಿಯ ಕಡೆ ಇದ್ದ ಬಾಗಿಲೊಂದು ಮಾತ್ರ ಆಗಾಗ ತೆರೆಯುತ್ತದೆ....ಕೊಠಡಿಯ ಅಂಧಕಾರದಲ್ಲಿ, ಒಂದು ಮೂಲೆಯಲ್ಲಿ ಚಿಕ್ಕದೊಂದು ದೀಪ ಮಿಣುಗುಟ್ಟುತ್ತಿತ್ತು. ಕಮಲೆಯ ತೊಡೆಯ ಮೇಲೆ, ಬಟ್ಟೆಯಲ್ಲಿ ಸುತ್ತಿದ್ದ ಅವಳ ಶಿಶು ನಿದ್ರೆ ಮಾಡುತ್ತಿತ್ತು.... ಕಮಲಾ ಕಾಡಿಗೆಯ ಡಬ್ಬಿಯಲ್ಲಿ ಕಾಡಿಗೆ ತೆಗೆದಿಡುತ್ತಿದ್ದಳು.

ಭರ್ರೆಂದು ಶಬ್ದ ಮಾಡುತ್ತಾ ಸ್ಟೇಷನ್ ವ್ಯಾನೊಂದು ಪೂರ್ಣಿಯಾ ಮೇರೀಗಂಜ್ ರಸ್ತೆಯಲ್ಲಿ ಓಡಿ ಬರುತ್ತಿತ್ತು.

ಹೊರಡುವ ಸಮಯದಲ್ಲಿ ಮಮತೆಯ ಕಣ್ಣು ತಪ್ಪಿಸಿ ಪ್ಯಾರು, ಡಾಕ್ಟರರ ಕೈಗೆ ಒಂದು ಲಕ್ಕೋಟೆಯನ್ನು ಕೊಟ್ಟಿದ್ದ. ಮುಂದೆ ಡ್ರೈವರನ ಪಕ್ಕ ಕುಳಿತಿದ್ದ ಪ್ಯಾರು ಕತ್ತು ತಿರುಗಿಸಿ ಹಿಂತಿರುಗಿ ನೋಡುತ್ತಿದ್ದ, ಡಾಕ್ಟರ್ ಪತ್ರ ಓದುತ್ತಿದ್ದರು.

"ಪ್ರಾಣನಾಥ್"

ಕಮಲೆಯ ಕಾಗದ—ಒಂದು ವಾರದ ಹಿಂದೆ ಬರೆದಿದ್ದ ಕಾಗದ.

"ಪ್ರಾಣನಾಥ್"

ಸಮಯಕ್ಕೆ ಸರಿಯಾಗಿ ನಿಮಗೆ ಈ ಕಾಗದ ತಲುಪುತ್ತದೋ ಇಲ್ಲವೋ ಗೊತ್ತಿಲ್ಲ. ನಿಧಾನವಾಗಿಯಾದರೂ ಈ ಕಾಗದ ನಿಮಗೆ ತಲುಪಿಯೇ ತಲುಪುತ್ತದೆಂದು, ನನಗೆ ಪೂರ್ಣ ವಿಶ್ವಾಸವಿದೆ. ನೀವು ನನ್ನ ಹತ್ತಿರ ಓಡಿಬರುವಿರಿ.... ನಿಮಗೆ ಗೊತ್ತೇನು, ಈಗ ನನಗೆ ಭಯವಾಗುತ್ತಿದೆ; ನಿಮ್ಮ...ನಿಮ್ಮ....

ಹೇಗೆ ಬರೆಯಲಿ? ಅಮ್ಮ ಹೇಳುತ್ತಾಳೆ, ನೀವು ಹೇಗಾದರೂ ಮಾಡಿ ನನ್ನ ಮಗು ವಿನ ತಂದೆ ನೀವೆಂದು ತಂದೆಗೆ ಬರೆದರೆ ಅಥವಾ ತಿಳಿಸಿದರೆ ನಾನು ಬದುಕಬಹುದು. ತಂದೆ ಈಗ ಹುಚ್ಚರಂತೆಯೇ ಆಗಿಬಿಟ್ಟಿದ್ದಾರೆ. ಯಾವಾಗ ಏನಾಗುತ್ತದೆಯೊ ಹೇಳುವುದಕ್ಕಾಗುವುದಿಲ್ಲ····ನಿಮ್ಮ ಪುಸ್ತಕಗಳು ನನಗೆ ತುಂಬಾ ಪಾಠ ಕಲಿಸಿವೆ. ಅವು ನನಗೆ ದೊಡ್ಡ ಆಧಾರವಾಗಿದ್ದವು. ಆದರೆ ಈಗ ನನಗೆ ಹೊಸದೊಂದು ಪುಸ್ತಕ ಬೇಕಾಗಿದೆ: ಅದರ ಪುಟ ಪುಟದಲ್ಲೂ ಬರೆದಿರಬೇಕು: "ಕಮಲಾ ನಂಬಿಕೆ ಇಡು, ಹೆದರಬೇಡ. ಏನೇ ಆದರೂ ಮಂಗಳವೇ ಆಗುತ್ತದೆ" ಎಂದು.

ಡಾಕ್ಟರ್ ಒಂದೇ ಉಸಿರಿಗೆ ಇಷ್ಟನ್ನು ಓದಿ ಮುಗಿಸಿದರು. ಅನಂತರ ಅವರು ಮಮತೆಯ ಕಡೆ ನೋಡಿದರು. ರಾತ್ರಿಯೆಲ್ಲಾ ನಿದ್ದೆಗೆಟ್ಟಿದ್ದ ಮಮತಾ ಮೆಲ್ಲನೆ ತೂಕಡಿಸುತ್ತಿದ್ದಳು....ತಲೆಗೆ ತಗುಲಿದರೆ?····

"ಇನ್ನೂ ಎಷ್ಟು ದೂರವಿದೆ? ಮಮತಾ ಎಚ್ಚರಗೊಂಡು ಕೇಳಿದಳು."

"ಇನ್ನೊಂದು ಗಂಟೆಯ ಪ್ರಯಾಣ" ಪ್ಯಾರೂ ಉತ್ತರ ಕೊಟ್ಟ.

ಡಾಕ್ಟರ್ ಮುಂದೆ ಓದಿದರು: "ಅಪ್ಪಾ ನಿಮ್ಮ ಮಗುವನ್ನು ಕೊಂದು ಹಾಕಿ ಬಿಡುತ್ತಾರೆ."

"ಇಲ್ಲ, ಇಲ್ಲ." ಡಾಕ್ಟರ್ ಗಟ್ಟಿಯಾಗಿ ಹೇಳಿದರು.

"ಏನಾಯಿತು?" ಮಮತಾ ಕೇಳಿದಳು.

ಡಾಕ್ಟರ್ ಮಮತೆಯ ಕೈಗೆ ಕಾಗದ ಕೊಟ್ಟು ಹೊರಗಡೆ ನೋಡಲಾರಂಭಿಸಿದರು. ಪ್ಯಾರೂ ಕತ್ತು ತಿರುಗಿಸಿ ತಿರುಗಿಸಿ ಡಾಕ್ಟರನ್ನೇ ನೋಡುತ್ತಿದ್ದ.

ಮಮತಾ ಕಣ್ಣು ಉಜ್ಜಿಕೊಂಡು ಕಾಗದ ಓದಿದಳು: "ಪ್ರಾಣನಾಥ್ ····ಯಾರ ಕಾಗದ ಇದು ಕಮಲೆಯದೇನು?"

ಮಮತಾ ಓದಿದಳು. ಡಾಕ್ಟರ್ ಒಮ್ಮೆ ಮಮತೆಯ ಕಡೆ ನೋಡಿದರು. ನಿದ್ರೆಯಿಂದ ಜಡವಾಗಿದ್ದ ಮಮತೆಯ ಕಣ್ಣು ಒಮ್ಮೆ ಮಿಂಚಿತು. ಪತ್ರ ಮುಗಿಸಿ ಅವಳು ಮತ್ತೆ ಪ್ರಶ್ನಿಸಿದಳು. "ಇನ್ನೆಷ್ಟು ದೂರ?"

"ಇನ್ನೊಂದು ಗಂಟೆ ಹೋಗಬೇಕು ರಸ್ತೆ ಚೆನ್ನಾಗಿಲ್ಲ."

"ಆ ಗಣೇಶ ಈಗ ಎಲ್ಲಿದಾನೆ?"

"ಅವನದೊಂದು ದೊಡ್ಡ ಕಥೆ. ಬ್ರಹ್ಮಸಮಾಜದಲ್ಲಿ ಅವನನ್ನು ಇಟ್ಟಿದ್ದೆ. ಅದೆಲ್ಲಿದ್ದನೋ ಅವನ ಚಿಕ್ಕಪ್ಪನೊಬ್ಬ ಧುಮಿಕಿದ. ದೊಡ್ಡ ಗಲಾಟೆ ನಡೆಯಿತು. ಜಾತಿ, ಧರ್ಮ ಎಂದೆಲ್ಲಾ ಚರ್ಚೆ ಮಾಡಿದ. ನಾನೂ 'ಕರೆದುಕೊಂಡು ಹೋಗಿ' ಎಂದುಬಿಟ್ಟೆ."

"ಈಗ ಅವನ ಹತ್ತಿರ ಎಮ್ಮೆ ಮೇಯಿಸಿಕೊಂಡಿದ್ದಾನಂತೆ" ಪ್ಯಾರು ಹೇಳಿದ. "ಅವನ ಹಳ್ಳಿಯ ಮನುಷ್ಯನೊಬ್ಬ ಕಛೇರಿಗೆ ಬರುತ್ತಿದ್ದನಲ್ಲಾ, ಅವನು ಹೇಳಿದ."

"ನಾನು ಮೆಡಿಕಲ್ ಗೆಜೆಟ್ಟಿಗೆ ನಿನ್ನೆ ರಿಪೋರ್ಟ್ ಕೊಟ್ಟೆ. ಒಂದು ಸಂಕ್ಷಿಪ್ತವರದಿ. 'ಬಂಗಾಳೀ ಬೇರು ಸೊಪ್ಪುಗಳು ಮತ್ತು ಹಳ್ಳಿಯಲ್ಲಿ ಪ್ರಚಲಿತ ವಿರುವ ಮಂತ್ರ ಮಾಟಗಳು' ಎನ್ನುವುದು ವಿಷಯ. ನಿನ್ನ ಕಾಗದಗಳಲ್ಲಿದ್ದ ವಿಷಯಗಳನ್ನು ಸಂಗ್ರಹಿಸಿ ಬರೆದು ಕಳುಹಿಸಿದೆ."

"ಆದರೆ ಸಂಶೋಧನೆ ಸಫಲವಾಗಲಿಲ್ಲವೆಂದು ನಾನಂತೂ ಬರೆದು ಕಳುಹಿಸಿ ಬಿಡುತ್ತೇನೆ."

"ಯಾವ ಸಂಶೋಧನೆಯೂ ಎಂದಿಗೂ ಅಸಫಲ ಆಗುವುದಿಲ್ಲ ಡಾಕ್ಟರ್. ಏನಿಲ್ಲವೆಂದರೂ ನೀವು ಮಣ್ಣಿನ ಗುಣವನ್ನಾದರೂ ಪರೀಕ್ಷಿಸಿದ್ದೀರಲ್ಲಾ :.... ಮಣ್ಣು ಮತ್ತು ಮನುಷ್ಯರ ನಡುವಿನ ಪ್ರೇಮ—ಇದೇನೂ ಚಿಕ್ಕ ವಿಷಯವಲ್ಲ."

ಡಾಕ್ಟರ್ ಮಮತೆಯನ್ನೇ ರೆಪ್ಪೆ ಆಡಿಸದೆ ನೋಡಿದರು. ಮಮತಾ ಹೊರಗಡೆ ನೋಡುತ್ತಿದ್ದಳು. ವಿಶಾಲ ಮೈದಾನ.... ಬಂಜೆ ಭೂಮಿ.... ಇದು ಪ್ರಸಿದ್ಧವಾದ ಮೈದಾನ....ನೇಪಾಳದಿಂದ ಆರಂಭವಾಗಿ ಗಂಗೆಯ ದಡದವರೆಗೆ ಹಬ್ಬಿರುವ ಮರುಗಾಡು, ಮಬ್ಬು ಸೆರಗು ಮೈದಾನದ ಒಣ ಹುಲ್ಲಿಗೆ ದನಗಾಹಿಗಳು ಬೆಂಕಿ ಹಚ್ಚಿಸಿದ್ದಾರೆ....ಅದು ದೂರದಿಂದ ನೋಡುವುದಕ್ಕೆ ಪಂಕ್ತಿಬದ್ಧ ದೀಪಗಳಂತೆ ಕಾಣುತ್ತದೆ....ತಾಳೆ ಮರಗಳಿಂದ ತಾಳೆಯ ಎಲೆಯ ಮೇಲೆ, ಮುಳುಗುತ್ತಿರುವ ಸೂರ್ಯನ ಕೆಂಪು ಕಿರಣಗಳು ಮಬ್ಬು ಬೆಳಕನ್ನು ಹರಡುತ್ತಿವೆ.

"ಸುಮರಿತದಾಸ, ಇನ್ನು ಟ್ರಾಕ್ಟರ್ ಯಾಕೆ ನಡೆಸುತ್ತಿದ್ದಾನೆ? ಎಲ್ಲಿಗೆ ತೆಗೆದುಕೊಂಡು ಹೋಗುತ್ತಿದ್ದಾನೆ? ಡ್ರೈವರನ್ನು ಕೇಳಿ ಬಾ.—ತಹಸೀಲ್ದಾರರು ಮಹಡಿಯ ಮೇಲಿನಿಂದಲೇ ಕೂಗಿಕೊಂಡರು.

"ಟ್ರಾಕ್ಟರ್ ಅಲ್ಲ, ಕಾರು, ಕಾರು ಬರುತ್ತಿದೆ."

"ಕಾರು ಬರುತ್ತಿದೆಯೇ?....ಯಾರದ್ದು?"

"ಡಾಕ್ಟರ್ ಬರುತ್ತಿದ್ದಾರೆ."

"ಯಾವ ಡಾಕ್ಟರ್?"

ಸುಮರಿತದಾಸ ಮಹಡಿಯ ಮೇಲೆ ಓಡಿಬಂದ: "ನಮ್ಮ ಡಾಕ್ಟರ್ ಜೊತೆಯಲ್ಲಿ ಒಬ್ಬ ಹೆಂಗಸೂ ಇದ್ದಾಳೆ....ಪ್ಯಾರುವೂ ಇದ್ದಾನೆ."

ತಹಸೀಲ್ದಾರರು ಕೈಗೆ ಬಂದೂಕವನ್ನು ಎತ್ತಿಕೊಂಡರು. ಸುಮರಿತದಾಸ ಥರ ಥರ ನಡುಗುತ್ತಾ ಹೇಳಿದ: "ನನ್ನ ಮೇಲಾಣೆ, ಇಂಥ ಕೆಲಸ ಮಾಡಬೇಡಿ."

"ಇಂಥ ಕೆಲಸ ಮಾಡಬಾರದೇ?....ಮತ್ತೆ ಇನ್ನೇನು ಮಾಡಲಿ?"

ಪ್ಯಾರೂ ಕೂಗಿದ: "ಚಿಕ್ಕಮ್ಮಾ....ಚಿಕ್ಕಮ್ಮಾ...."

"ಯಾರು? ಪ್ಯಾರೂ?" ಕಮಲೆಯ ತಾಯಿ ಬಾಗಿಲಿನ ಸಂದಿಯಿಂದಲೇ ಇಣುಕಿ ನೋಡಿ ಕೇಳಿದಳು: "ಏನು?"

"ಡಾಕ್ಟರ್ ಬಂದಿದಾರೆ."

ಪ್ರಸೂತಿ ಗೃಹದಲ್ಲಿದ್ದ ಕಮಲೆಯ ಪುಟ್ಟಕಂದ ಅಳಲಾರಂಭಿಸಿದ.

ಮಮತಾ ಬೇಗೆ ಬೇಗ ಬಾಗಿಲಿನ ಹತ್ತಿರ ಬಂದು ಹೇಳಿದಳು: "ಬೇಗ ಬಾಗಿಲು ತೆಗಿ ಚಿಕ್ಕಮ್ಮ"....ನಾನು ಮಮತಾ, ಮೊದಲು ಬಾಗಿಲು ತೆಗಿ.

ಬಾಗಿಲಿನ ಚಿಲಕ ತೆರೆಯಿತು. ಮಮತಾ ನೇರವಾಗಿ ಪ್ರಸೂತಿ ಗೃಹಕ್ಕೆ ಹೋದಳು.

....ಡಾಕ್ಟರ್ ಒಂಟಿಯಾಗಿ, ಮೌನವಾಗಿ ನಿಂತಿದ್ದರು. ಮೆಟ್ಟಲುಗಳ ಮೇಲೆ ಚಪ್ಪಲಿಯ ಭಾರಿ ಶಬ್ದ ಕೇಳಿಸಿತು. ಜೋರು ಜೋರಾಗಿ ಕಾಲಪ್ಪಳಿಸುತ್ತಾ ತಹಸೀಲ್ದಾರರು ಇಳಿದು ಬಂದರು.

"ಯಾರು? ಡಾಕ್ಟರ್?" ತಹಸೀಲ್ದಾರರು ಕಿರುಚಿದರು.

"ಬನ್ನಿ, ಡಾಕ್ಟರ್ ಬಾಬೂ, ಕುಳಿತುಕೊಳ್ಳಿ." ಸುಮರಿತದಾಸ ಒಸಡನ್ನು ತೋರಿಸುತ್ತಾ ಹೇಳಿದ. "ಬನ್ನಿ...."

"ಇಲ್ಲ, ಸುಮರಿತದಾಸ....ಇವನನ್ನು ಕೇಳು. ಎಲ್ಲಿಗೆ ಬಂದಿದಾನಂತೆ? ಯಾರ ಮನೆಗೆ ಬಂದಿದಾನಂತೆ? ಏನು ಮಾಡೋದಕ್ಕೆ ಬಂದಿದಾನಂತೆ? ಏನು ತೆಗೆದುಕೊಂಡು ಹೋಗೋದಕ್ಕೆ ಬಂದಿದಾನಂತೆ? ಕೇಳು...."

ವೈರಲೆಸ್ ಸುಮರಿತದಾಸ ಡಾಕ್ಟರ್ ಹತ್ತಿರ ಬಂದು ಕಣ್ಣಿನ ಕೊನೆಯಿಂದ ಸಂಜ್ಞೆಯ ಮೂಲಕ ತಿಳಿಸಿದ. "ಈ ನಡುವೆ ಸ್ವಲ್ಪ ಜಾಸ್ತಿ ಕುಡಿಯುವುದಕ್ಕೆ ಆರಂಭಿಸಿದಾರಲ್ಲಾ....ಅದಕ್ಕೇ...."

ಪ್ರಸೂತಿ ಗೃಹದ ಬಾಗಿಲಿನಿಂದ ಇಣುಕಿ ನೋಡಿ ಕಮಲೆಯ ತಾಯಿ ಹೇಳಿದಳು: "ನೀವೆಂತಹ ಮನುಷ್ಯರು ಅಳಿಯನನ್ನು...."

"ಎಂಥ ಅಳಿಯ! ನಿನ್ನ ಅಳಿಯನಿಗೇ ಯಾಕೆ ಹೇಳೋದಿಲ್ಲ. ಅವನು ನನ್ನ ಕಾಲು ಮುಟ್ಟಿ ನಮಸ್ಕಾರ ಕೂಡ ಮಾಡಲಿಲ್ಲ."

ಡಾಕ್ಟರ್, ತಹಸೀಲ್ದಾರರ ಪಾದಧೂಳಿ ತೆಗೆದು ಹಚ್ಚಿಕೊಂಡರು.

ತಹಸೀಲ್ದಾರರು ತಟಕ್ಕನೇ ಅತ್ತುಬಿಟ್ಟರು. ಡಾಕ್ಟರನ್ನು ತೋಳುಗಳಿಂದ ತಬ್ಬಿಕೊಂಡು ಅತ್ತರು: "ನನ್ನ ಮಗು ಬಾಬೂ....ನನ್ನ ಮಗೂ."

ವೈರಲೆಸ್ ಸುಮರಿತದಾಸ ರಾತ್ರಿಯೇ ಮನೆ ಮನೆಗೂ ಹೋಗಿ ಸುದ್ದಿ ಪ್ರಸಾರ ಮಾಡಿಬಂದ...."ಕಮಲೆಯ ಮದುವೆ ಹಿಂದೆಯೇ ಡಾಕ್ಟರೊಂದಿಗೆ ಆಗಿಹೋಗಿತ್ತು....ನಿಮಗೆಲ್ಲಾ ಗೊತ್ತೇ ಇದೆ....ಹಿಂದೆ ಹಿರಿಯರ ಮುಂದೆ ಮದುವೆ ನಿಶ್ಚಯವಾದಾಗಲೆಲ್ಲಾ, ಒಂದಲ್ಲ ಒಂದು ವಿಘ್ನ ಬಂದು ಮದುವೆ ನಿಂತುಹೋಯಿತು. ಆದ್ದರಿಂದ ಕಾಶಿಯ ಪಂಡಿತರು ಗಾಂಧರ್ವ ವಿವಾಹ ಮಾಡುವಂತೆ ತಿಳಿಸಿದರು. ಗಾಂಧರ್ವ ವಿವಾಹ ವಿಚಾರ ಯಾರಿಗೂ ತಿಳಿಯ ಬಾರದು. ಮಗುವಾದರೆ ಎಲ್ಲರಿಗಿಂತ ಮೊದಲು ತಂದೆ ಅದನ್ನು ನೋಡಬೇಕು. ಅನಂತರ ಮಿಕ್ಕವರು ನೋಡಬೇಕು....ಈಗ ಡಾಕ್ಟರ್ ಬಂದಿದಾರೆ.... ನಿಮ್ಮೆಲ್ಲರನ್ನೂ ಮಗುವಿನ ನಾಮಕರಣದ ಊಟಕ್ಕೆ ಕರೆಯುವುದಕ್ಕೆ ನಾನೀಗ ಬಂದಿದೀನಿ. ನಾಳೆ ಬೆಳಗ್ಗೆಯೇ ನಾಮಕರಣ...."

"ಇದು ಒಳ್ಳೆಯ ಕಥೆ ಹಾಗೆ ಆಗಿಬಿಟ್ಟಿದೆಯಲ್ಲಾ! ಒಬ್ಬರಿಗೂ ಸುಳಿವೂ ಸಹ ಸಿಗಲಿಲ್ಲ."

ಬ್ರಾಹ್ಮಣ ಸಂಗಡದ ಪುರೋಹಿತ ದೇವಾನನ ಜನರಿಗೆ ಹೇಳಿದ. "ಇಂಗ್ಲೀಷ್ ಕಲಿತವರು ಏನು ಮಾಡಿದರೂ ಎಲ್ಲಾ ಸರೀನೇ."

ಜೋಯಿಸರ ಕಿವಿಗೂ ಸುದ್ದಿ ಮುಟ್ಟಿತು....ಅವರು ತಿರಸ್ಕಾರದಿಂದ ಮುಖ ತಿರುಗಿಸಿಕೊಂಡರು.

ಶೇಲಾವನ ಯಾದವ ಹೇಳಿದ: "ಹಣ ಇರುವವರು ಅಧರ್ಮ ಮಾಡಿದರೂ ಅದು ಧರ್ಮವೇ ಆಗಿಬಿಡುತ್ತದೆ."

ಆದರೆ ಔತಣ ತಿರಸ್ಕರಿಸುವ ಧೈರ್ಯ ಯಾರಿಗೂ ಇರಲಿಲ್ಲ.

ಬೆಳಿಗ್ಗೆ ಹಳ್ಳಿಯ ಚಮ್ಮಾರರು ಕುಣಿಯುತ್ತಾ ಡೋಲು ಬಡಿಯುವುದಕ್ಕೆ ಆರಂಭಿಸಿದರು. ಹೆಂಗಸರು ಗುಂಪು ಗುಂಪಾಗಿ ಮಂಗಳದ ಹಾಡುಗಳನ್ನು ಹಾಡುತ್ತಾ ಬಂದರು. ಆದರೆ ಎಲ್ಲರ ಮುಖದಲ್ಲೂ ಉದಾಸೀನತೆಯ ಕಪ್ಪು ನೆರಳು ಹರಡಿತ್ತು.. ಮನಸ್ಸಿನಲ್ಲಿ ಉತ್ಸಾಹವಿರಲಿಲ್ಲ.

ತಹಸೀಲ್ದಾರರು ಬಹಳ ಹೊತ್ತಿನವರೆಗೆ ತಮ್ಮ ಕೋಣೆಯಲ್ಲೇ ಮೌನವಾಗಿ ಕುಳಿತು ಏನನ್ನೋ ಯೋಚಿಸುತ್ತಿದ್ದರು. ಅನಂತರ ಹೊರಗಡೆ ಬಂದು ಹೇಳಿದರು: "ಸುಮರಿತದಾಸ, ಜನರಿಗೆ ಹೇಳಿಬಿಡು. ಪ್ರತಿ ಕುಟುಂಬಕ್ಕೂ ಐದು ಬೀಘಾ ಲೆಕ್ಕದಲ್ಲಿ ನಾನು ಜಮೀನನ್ನು ಕೊಟ್ಟುಬಿಡುತ್ತೇನೆ. ಸಂಜೆಯಾಗುವ ಹೊತ್ತಿಗೆ ಕಾಗದ ಪತ್ರಗಳನ್ನು ಸಿದ್ಧಮಾಡಿ ಬಿಡುತ್ತೇನೆ....ಸಂಥಾಲ ಸಂಗಡದವರ ಮನೆಗೂ ಹೋಗಿ ಹೇಳು ಅವರೂ ಬಂದು ರಸೀತಿ ತೆಗೆದುಕೊಳ್ಳಲಿ.... ಅಯ್ಯೋ ನಾನು ಕೊಡೋದೇನಯ್ಯಾ? ಕೊಡುತ್ತಿರುವವನು ಹೊಸ ಮಾಲೀಕ! ....ಮಾಲೀಕನ ಅಪ್ಪಣೆ....ಕೇಳಿಸುತ್ತಿಲ್ಲವೇನು? ಆಳುತ್ತಿದ್ದಾನಲ್ಲಾ ಅವನೇ ಅಪ್ಪಣೆ ಮಾಡುತ್ತಿದ್ದಾನೆ. "ಹಿಂತಿರುಗಿಸು." ಎಂದು! ಶೇಲಾವನ್ನನಿಗೂ ಅವನ ಭೂಮಿಯನ್ನೆಲ್ಲಾ ವಾಪಸ್ಸು ಕೊಟ್ಟುಬಿಡು.. "

ಡಾಕ್ಟರ್ ಪ್ರಶಾಂತ ಮತ್ತು ಮಮತೆ ಒಬ್ಬರನ್ನೊಬ್ಬರು ನೋಡಿದರು.

"ಮುಖ ಯಾಕೆ ನೋಡುತ್ತಿದ್ದೀ? ನನಗೆ ಹುಚ್ಚು ಹಿಡಿಯಿತು ಅಂದು ಕೊಂಡೆಯೇನು? ಸರಿಯೋ, ಹುಚ್ಚನೆಂದೇ ತಿಳಿದುಕೋ....ಯೋಗೇಶ್ವರ ಕೃಷ್ಣ ತನ್ನ ವಿದ್ಯಾ ಬುದ್ಧಿಯನ್ನೆಲ್ಲಾ ಖರ್ಚು ಮಾಡಿ ಪ್ರಯತ್ನಪಟ್ಟ, ಆದರೆ ದುರ್ಯೋಧನ ಸ್ಪಷ್ಟವಾಗಿ ಹೇಳಿಬಿಟ್ಟ: "ನಾನು ಸೂಜಿಯ ಮೊನೆಯಷ್ಟು ಭೂಮಿಯನ್ನೂ ಕೊಡುವುದಿಲ್ಲ" ಎಂದು....ಭೂಮಿ....ಜಮೀನು:.... ಒಂದು ಅಂಗುಲ ಜಮೀನಿಗಾಗಿ ಹೈಕೋರ್ಟಿನವರೆಗೆ ಮೊಕದ್ದಮೆ ಹೂಡುತ್ತಾರೆ ಜನ. ಆದರೆ ನಾನು ನೂರು ಬೀಘಾ ಜಮೀನನ್ನು ವಾಪಸ್ಸು ಕೊಡುತ್ತಿದ್ದೇನೆ.

....ಆದರೆ, ನೀವು ಹುಚ್ಚರು, ಆ ಜಮೀನು ರೈತರಿಗೇ ಸೇರಿದು , ಹರಾಜಿನಲ್ಲಿ, ಜಪ್ತಿಯಲ್ಲಿ ಕೊಂಡದ್ದು. ಅದನ್ನು ಅವರಿಗೇ ವಾಪಸ್ಸು ಕೊಡುತ್ತಿದ್ದೇನೆ.... ಘೋಷಣೆ ಮಾಡಿಬಿಡು.... ನನ್ನ ಮಾಲೀಕ ಅಪ್ಪಣೆ ಮಾಡುತ್ತಿದ್ದಾನೆ."

"ಜೈ ಜೈ.... ಜಯವಾಗಲಿ"

ಎಲ್ಲರೂ ಹೇಳಿ: "ಮಹಾತ್ಮ ಗಾಂಧೀಗೆ ಜಯವಾಗಲಿ."

ಡಿಗ್ ಡಿಗ್ ಡಿಡಿಗ್
ರಿಂಗ್ ರಿಂಗ್ ತಾ ಥನ್ ತಾ
ಡಾ ಡಿಗ್ಗಾ ಡಾ ಡಿಗ್ಗಾ
ಝುಮರ್ ಝುಮರ್....

....ಸರಿ....ಈಗ ಸರಿಯಾಗಿದೆ. ಈಗ ನೋಡು, ಎಲ್ಲರ ಒಣಗಿದ ಚರ್ಮದಲ್ಲೂ ಕೆಂಪು ಹಿಂತಿರುಗುತ್ತಿದೆ. ನೂರಾರು ಜೊತೆ ಕಣ್ಣುಗಳು ಆನಂದ ದಿಂದ ಮಿಂಚುತ್ತಿವೆ....

ದೀಪ ಬೆಳಗಿದಂತೆ ಬೆಳಗುತ್ತಿವೆ....

ಕುಮಾರ ನೀಲೋತ್ಫಲನಿಗೆ ಇಂದು ನಾಮಕರಣ!

ಹೌದು, ಮಮತ ಕಮಲೆಯ ಮಗನಿಗೆ 'ಕುಮಾರ ನೀಲೋತ್ಫಲ' ಎನ್ನುವ ಹೆಸರಿಟ್ಟಿದ್ದಾಳೆ. ಡಾಕ್ಟರ್ ಇಂದು ಮೊದಲ ಬಾರಿಗೆ ತಮ್ಮ ಮಗುವನ್ನು ನೋಡಿದರು, ಕೈಗೆ ಎತ್ತಿಕೊಂಡರು....ತೆಳ್ಳಗಿನ ಹಳದೀ ಬಣ್ಣದ ಮಾಂಸದ ಮುದ್ದೆ. ಮಮತಾ ಹೇಳಿದಳು: "ಪಾಟ್ನಾಗೆ ಕರೆದುಕೊಂಡು ಬಾ. ಒಂದು ತಿಂಗಳಲ್ಲಿ ನಿನ್ನ ಮಗ ಕೆಂಪಗೆ ಆಗಿಬಿಡುತ್ತಾನೆ." ಡಾಕ್ಟರ್ ನೂರಾರು ಹೆರಿಗೆ ಕೇಸುಗಳನ್ನು ಮಾಡಿದ್ದಾರೆ. ಆದರೆ ಕುಮಾರ ನೀಲೋತ್ಫಲ? ಕಮಲೆಯ ಹಳದಿ ಮುಖ ನಾಚಿಕೆಯಿಂದ ಕೆಂಪಾಗಿತ್ತು. ಡಾಕ್ಟರ್ ಕೈಗೆ ಮಗುವನ್ನು ಕೊಡುವಾಗ ಅವಳ ದೊಡ್ಡ ದೊಡ್ಡ ಕಣ್ಣುಗಳ ರೆಪ್ಪೆ ಬಾಗಿದ್ದವು....ಅವಳ ಹಣೆಯಲ್ಲಿ ಸಿಂಧೂರದ ಬಿಂದು ಹೊಳೆಯುತ್ತಿತ್ತು....ಕತ್ತಲೆಯಲ್ಲಿ ನಿಂತಿದ್ದ ಕಮಲಾ, ಚಿತ್ರದಂತೆ ಕಾಣುತ್ತಿದ್ದಳು. ಡಾಕ್ಟರ್ ತಮ್ಮ ಎಡಗೈಯಿಂದ ಬೆರಳು ಗಳಿಂದ ನೀಲೋತ್ಫಲನ ಎದೆಯ ಬಡಿತವನ್ನು ಪರೀಕ್ಷಿಸಿದರು: "ಓಹ್ ಪುಟ್ಟ ಹೃದಯ ಥಕ್ ಥಕ್ ಎನ್ನುತ್ತಿದೆ."

ಪ್ರಸೂತಿ ಗೃಹದಲ್ಲಿ, ಹನ್ನೆರಡು ದಿನಗಳ ಶಿಶುವಿಗೆ ದೀರ್ಘಾಯಸ್ಸು, ಸೌಂದರ್ಯ, ಆರೋಗ್ಯ ವಿದ್ಯಾ ಬುದ್ಧಿ ಧನ—ಸಂಪತ್ತುಗಳು ದೊರೆಯಲೆಂದು ಮಹಿಳೆಯರು ಮಂಗಳ ಗೀತೆಗಳನ್ನು ಹಾಡುತ್ತಿದ್ದರು. ಡಾಕ್ಟರ್ ಎಚ್ಚರ ಗೊಂಡಿದ್ದರು....ಅವರ ರಿಸರ್ಚ್? ಮಮತಾ ಹೇಳಿದ್ದಳು: "ಅಸಫಲ ಆಗುವುದಿಲ್ಲ....ಮಣ್ಣು ಮತ್ತು ಮನುಷ್ಯರ ನಡುವೆ ಇರುವ ಇಷ್ಟು ಘನಿಷ್ಟ ವಾದ ಪ್ರೇಮವನ್ನು ಯಾವುದಾದರೊಂದು ಲ್ಯಾಬರೇಟರಿಯಲ್ಲಿ ಕಂಡುಹಿಡಿಯು ವುದು ಸಾಧ್ಯವಿಲ್ಲ."

ಲ್ಯಾಬರೇಟರಿ····ವಿಶಾಲವಾದ ಪ್ರಯೋಗ ಶಾಲೆ. ಸುತ್ತಲೂ ಎತ್ತರ ವಾದ ಗೋಡೆಗಳಿಂದ ಆವೃತವಾದ ಪ್ರಯೋಗಶಾಲೆ....ಸಾಮ್ರಾಜ್ಯ ಲೋಭಿ ಶಾಸಕರ ಕಾಠಿಣ್ಯದ ನೆರಳಿನಲ್ಲಿ ವಿಜ್ಞಾನಿಗಳ ಗುಂಪು, ಹುಡುಕುತ್ತಿದ್ದಾರೆ, ಪ್ರಯೋಗ ಮಾಡುತ್ತಿದ್ದಾರೆ.....ಬಕ್ಕತಲೆಗಳ ಮೇಲೆ ಕೆಂಪು-ಹಸಿರು ಬೆಳಕು ಬೀಳುತ್ತಿದೆ....ಸಂಹಾರಾತ್ಮಕ, ವಿಧ್ವಂಸಕ, ಮತ್ತು ಸರ್ವನಾಶಿ ಶಕ್ತಿಗಳ ಸಮ್ಮಿಶ್ರಣದಿಂದ ಒಂದು ಬಾಂಬಿನ ಸೃಷ್ಟಿಯಾಗುತ್ತಿದೆ....ಅದನ್ನು ಪ್ರಯೋಗಿ ಸಿದರೆ ಇಡೀ ವಿಶ್ವವೇ ಗಾಳಿಯಂತೆ ಪರಿವರ್ತಿತವಾಗುತ್ತದೆ....ಜೇಡನ ಬಲೆಯಂತೆ ವಿಶ್ವವನ್ನು ಆವರಿಸಿಬಿಡುತ್ತದೆ....ಸುತ್ತಲೂ ಒಂದು ಮಹಾ ಅಂಧಕಾರ. ಎಲ್ಲಾ ಆದಿ ಪ್ರಕೃತಿ ಪುರುಷ, ಅಂಡ-ಪಿಂಡ, ಮಣ್ಣು ಮತ್ತು ಮನುಷ್ಯರ ಹಿತಚಿಂತಕರ ಸಣ್ಣ ಗುಂಪೊಂದು ಕತ್ತಲೆಯಲ್ಲಿ ಹುಡುಕಾಡುತ್ತಿದೆ....ಕತ್ತಲೆ ಯಲ್ಲಿ ಒಬ್ಬರಿಗೊಬ್ಬರು ಢಿಕ್ಕಿ ಹೊಡೆಯುತ್ತಿದ್ದಾರೆ....ವೇದಾಂತ....ಭೌತಿಕ ವಾದ····ಸಾಪೇಕ್ಷವಾದ....ಮಾನವತಾವಾದ....ಹಿಂಸೆಯಿಂದ ಜರ್ಜರಿತ ಳಾದ ಪ್ರಕೃತಿ ಅಳುತ್ತಿದ್ದಾಳೆ. ವ್ಯಾಧನ ಬಾಣದಿಂದ ಗಾಯಗೊಂಡ ಜಿಂಕೆಯ ಮರಿಯಂತಿರುವ ಮಾನವತೆಗೆ ಆಶ್ರಯ ಎಲ್ಲಿ ಸಿಗಬೇಕು? .... ಅಟ್ಟಹಾಸ. ವ್ಯಾಧರ ಅಟ್ಟಹಾಸದಿಂದ ಆಕಾಶ ನಡುಗುತ್ತಿದೆ .... ಚಿಕ್ಕ ಮಗುವಿನಂತಹ ಜಿಂಕೆ ಏದುಬ್ಬಸ ಪಡುತ್ತಿದೆ. ಚಿಕ್ಕ ಶ್ವಾಸಕೋಶದ ವೇಗವಾದ 'ಧಕ್ ಧಕ್' ಬಡಿತ .... ನೀಲೋತ್ಪಲ, ಇಲ್ಲ, ಇಲ್ಲ .... ಈ ಕತ್ತಲೆ ಹೀಗೇ ಉಳಿದಿರು ವುದಿಲ್ಲ. ಮಾನವತೆಯ ಪೂಜಾರಿಗಳ ಸಮ್ಮಿಳಿತ ಸ್ವರ ಪ್ರತಿಧ್ವನಿಸುತ್ತಿದೆ— ಪವಿತ್ರ ಸ್ವರ—ಅವರಿಗೆ ಪ್ರಕಾಶ ಸಿಕ್ಕಿದೆ. ತೇಜೋಮಯವಾದ ಪ್ರಕಾಶ; ಕ್ಷತ —ವಿಕ್ಷತವಾಗಿರುವ ಪೃಥ್ವಿಯ ಗಾಯಕ್ಕೆ ಶೀತಲ ಚಂದನವನ್ನು ಲೇಪಿಸುತ್ತಿದೆ. ಪ್ರೇಮ ಮತ್ತು ಅಹಿಂಸೆಗಳ ಸಾಧನೆ ಸಫಲವಾಗಿದೆ. ಮತ್ತೆ ಇನ್ನೆಂತಹ ಭಯ? ವಿಧಾತನ ಸದೃಷ್ಟಿಯಲ್ಲಿ ಮಾನವನೇ ಎಲ್ಲರಿಗಿಂತ ಶಕ್ತಿಶಾಲಿ.

ಅವನನ್ನು ಪರಾಜಿತನನ್ನಾಗಿ ಮಾಡುವುದು ಅಸಂಭವ . . . . ಪ್ರಚಂಡ ಶಕ್ತಿಶಾಲಿ ಬಾಂಬುಗಳಿಂದಲೂ ಅದು ಸಾಧ್ಯವಿಲ್ಲ. . . . ಹುಚ್ಚರೀ . . . . ಮನುಷ್ಯ, ಮನುಷ್ಯನೇ! ಅವನು ಹಂದಿಯಲ್ಲ. . . . ಸಬರೀ ಊಪರ್ ಮನುಸ ಸತ್ಯ (ಮನುಷ್ಯನ ಸತ್ಯ ಎಲ್ಲದಕ್ಕಿಂತ ಹೆಚ್ಚಿನದು.)

ಅನೇಕ ವಕ್ತ್ರನಯನ ಮನೇಕಾಧ್ಬುತ ದರ್ಶನಮ್
ಅನೇಕ ದಿವ್ಯಾಭರಣ ದಿವ್ಯಾನೇಕೋದ್ಯತಾಯುಧಮ್
ದಿವಿ ಸೂರ್ಯ ಸಹಸ್ರ. . . .

(ಅನೇಕ ಮುಖ ಮತ್ತು ಕಣ್ಣುಗಳಿಂದ ಅನೇಕ ಅದ್ಭುತ ದರ್ಶನಗಳಿಂದ ಅನೇಕ ದಿವ್ಯಾಭರಣ ಭೂಷಿತನಾಗಿ ಅನೇಕ ಆಯುಧಗಳಿಂದ ಕೂಡಿ ಸಹಸ್ರ ಸೂರ್ಯರ ಕಾಂತಿಯಿಂದ ಯುಕ್ತನಾಗಿದ್ದಾನೆ ಭಗವಂತ.)

. . . .ಮಮತಾ ಹಾಡುತ್ತಿದ್ದಾಳೆ. ಬೆಳಗ್ಗೆ ಆಗಿದೆ. ಪಕ್ಕದ ಕೊಠಡಿಯಲ್ಲಿ ತಹಸೀಲ್ದಾರರು ಗೊರಕೆ ಹೊಡೆಯುತ್ತಿದ್ದಾರೆ. ಡಾಕ್ಟರ್ ಎದ್ದು ಕಿಟಕಿಗಳನ್ನು ತೆರೆದರು ಧೂಳು ತುಂಬಿದ ಕೋಠಿಯ ತೋಟ ಯಾರನ್ನೋ ನಿರೀಕ್ಷಿಸುತ್ತಿರುವಂತಿದೆ. ಗುಲ್ ಮೊಹರ್, ಅಮಲತಾಸ್ ಮತ್ತು ಯೋಜನಗಂಧಿ ಪುಷ್ಪಗಳ ಮೊಗ್ಗು ನಗಲು ಸಿದ್ಧವಾಗುತ್ತಿವೆ. . . .

ನಾಂತಂನ ಮಧ್ಯಂನ ಪುನಸ್ತವಾದಿ· · · ·

"ಪ್ರಶಾಂತ," ಮಮತಾ ಮಂದಹಾಸ ಬೀರುತ್ತಾ ಕೊಠಡಿಯೊಳಗೆ ಪ್ರವೇಶಿಸಿದಳು. ಬೆಳಗ್ಗಿಯ ಹೊತ್ತು ನಿಧಾನವಾಗಿ ಬೀಸುವ ಗಾಳಿಯಂತೆ. ಆಗತಾನೇ ಸ್ನಾನ ಮಾಡಿದ್ದರಿಂದ ಒದ್ದೆಯಾಗಿದ್ದ ಅವಳ ತಲೆಗೂದಲನ್ನು ಡಾಕ್ಟರ್ ಮುಟ್ಟಿದರು.

"ಥತ್, ಹೆಂಗಸರ ಒದ್ದೆ ಕೂದಲನ್ನು ಮುಟ್ಟಬಾರದು. ದೋಷ ತಗಲುತ್ತೆ· · · ·ಚಹಾ ಕುಡೀತೀಯಾ ಅಂತ ಕೇಳೋದಕ್ಕೆ ಬಂದೆ. ಮಗುವಿಗೆ ಹಾಲು ಬೆಚ್ಚಗಾಗುತ್ತಿದೆ· · · ·ನಿನ್ನ ಮುಖ ನೋಡಿದರೆ ರಾತ್ರಿಯೆಲ್ಲಾ ನಿದ್ದೆ ಮಾಡಿದ ಹಾಗೆ ಕಾಣೋದಿಲ್ಲ· · · ·ಹೂಂ· · · ·ಮುಖ ತೊಳೆದುಕೋ. ನಾನು ಚಹ ತರುತ್ತೇನೆ· · · ·" ಮಮತಾ ನಗುತ್ತಾ ಹೊರಟು ಹೋದಳು.

ಬಡಪಾಯಿ ಮಮತೆಯ ಜೀವನದ ಏಕ ಮಾತ್ರ ವಿಲಾಸ—"ಚಹ"! ಶೀಲಾ ಹೇಳುತ್ತಿದ್ದಳು : " ಮಮತಾ ಅಕ್ಕ ಚಹ ಕುಡಿಯೋದಕ್ಕೆ ಏನಾದರೊಂದು

ನೆವ ಹುಡುಕುತ್ತಿರುತ್ತಾಳೆ. ಒಂದು ದಿನಕ್ಕೆ ಹದಿನೈದು, ಇಪ್ಪತ್ತು ಬಟ್ಟಲು ಚಹ····"

ಚಹಾದ ಬಟ್ಟಲನ್ನು ಪ್ರಶಾಂತನ ಕೈಗೆ ಕೊಡುತ್ತಾ ಮಮತಾ ಕೇಳಿದಳು: "ಓದಿದೆಯೇನು? ····ಮಹಾತ್ಮಾಜಿಯವರ ಕೊನೆಯ ಆಸೆ—ನನಗನ್ನಿಸುತ್ತೆ. ಅವರೊಂದು ಮಹಾ ಪ್ರಕಾಶ, ಆ ಪ್ರಕಾಶದ ಬೆಳಕಿನಲ್ಲಿ ಪ್ರಪಂಚ ನಿರ್ಭಯವಾಗಿ ಸಾವಿರಾರು ವರ್ಷಗಳವರೆಗೆ ಪ್ರಯಾಣ ಮಾಡುತ್ತಿರಬಹುದು····"

"ಮಮತಾ, ನಾನು ಮತ್ತೆ ಕೆಲಸ ಪ್ರಾರಂಭಿಸುತ್ತೇನೆ····ಇಲ್ಲೇ ಇದೇ ಹಳ್ಳಿಯಲ್ಲಿ ನಾನು ಪ್ರೀತಿಯ ವ್ಯವಸಾಯ ಮಾಡಬೇಕೆಂದಿದ್ದೇನೆ. ಕಣ್ಣೀರಿನಿಂದ ತೋಯ್ದ ಭೂಮಿಯ ಮೇಲೆ ಪ್ರೀತಿಯ ಗಿಡಗಳು ಹುಟ್ಟುತ್ತವೆ. ನಾನು ಸಾಧನೆ ಮಾಡುತ್ತೇನೆ····ಗ್ರಾಮವಾಸಿನೀ ಭಾರತಮಾತೆಯ ಮಾಸಿದ ಸೆರಗಿನ ಮರೆಯಲ್ಲಿ ಸಾಧನೆ ಮಾಡುತ್ತೇನೆ. ಕೊನೆಯಪಕ್ಷ ಒಂದು ಹಳ್ಳಿಯ ಒಣಗಿದ ತುಟಿಗಳ ಮೇಲಿನ ನಗೆಯನ್ನಾದರೂ ಹಿಂತಿರುಗಿ ಕೊಡುವುದು ಸಾಧ್ಯವಾದರೆ, ಅವರ ಹೃದಯಗಳಲ್ಲಿ ಆಶೆಯನ್ನು, ನಂಬಿಕೆಯನ್ನು ಮೂಡಿಸುವುದು ಸಾಧ್ಯವಾದರೆ····"

ಮಮತಾ ನಕ್ಕಳು: "ಮನಸ್ಸಿಗೆ ಅನ್ನಿಸುತ್ತಿದೆ. ಸೆರಗನ್ನು ಹರಡಿ 'ನೀನು ಸಫಲನಾಗು' ಎಂದು ಆಶೀರ್ವಾದ ಮಾಡಬೇಕೆಂದು ಅನ್ನಿಸುತ್ತಿದೆ····ಮುಂದೆ ನಿಂತಿರುವ ಕರ್ಮಯೋಗಿಯ ಪಾದಧೂಳಿಯನ್ನು ತಲೆಗಿಟ್ಟುಕೊಳ್ಳೆಂದು ಮನಸ್ಸು ಹೇಳುತ್ತಿದೆ····" ಮಮತಾ ಪ್ರಶಾಂತನ ಕಾಲಿನ ಕಡೆ ಕೈ ನೀಡಿದಳು····

"ಮಮತಾ!"

"ಮಮತಾ ಅಕ್ಕ····ಇವನನ್ನು ಕರೆದುಕೋ ಹಾಲು ಎಸೀತಾನೆ." ಕಮಲಾ ತನ್ನ ಮಗುವನ್ನು ಮಡಲಿನಲ್ಲಿ ಎತ್ತಿಕೊಂಡು ನಗುತ್ತಾ ಒಳಗೆ ಬಂದಳು.

"ಇಲ್ಲಿ ಕೊಡು. ಅದು ಹ್ಯಾಗೆ ಎಸೀತಾನೋ ನಾನು ನೋಡ್ತೀನಿ····ಶಿಕ್ಷೆ ಕೊಡು." ಮಮತಾ ಪದ್ಮಾಸನ ಹಾಕಿಕೊಂಡು ನೆಲದ ಮೇಲೆ ಕುಳಿತಳು. ಮಗುವನ್ನು ಮಡಲಿನಲ್ಲಿ ಮಲಗಿಸಿಕೊಂಡಳು.

"ನೀನು ಮಾತ್ರೆ ತೊಗೊಂಡ್ಯಾ—ಕಮಲಾ ತಕ್ಷಣ ತೊಗೋ."

